# ಸ್ವಾತಂತ್ರ್ಯದ ಹೋರಾಟ

ಬಿಪನ್ ಚಂದ್ರ
ಅಮಲೇಶ ತ್ರಿಪಾಠಿ
ಬರುನ್ ಡೇ

ಅನುವಾದ:
ಆರ್.ಎಲ್. ಅನಂತರಾಮಯ್ಯ

ಸ್ವಾತಂತ್ರ್ಯದ ಹೋರಾಟ

ಸ್ವಾತಂತ್ರ್ಯದ ಹೋರಾಟ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-3463-8

ಮೊದಲ ಮುದ್ರಣ: 1974 (ಶಕ 1895)

ಮೂರನೆಯ ಮುದ್ರಣ: 2001 (ಶಕ 1922)



Freedom Struggle (*Kannada*)

ರೂ. **55.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಎ-5, ಗ್ರೀನ್‌ಪಾರ್ಕ್, ಹೊಸದಿಲ್ಲಿ-110016 ಇವರಿಂದ ಪ್ರಕಟಿತ.

# ಪರಿವಿಡಿ

# ಮುನ್ನುಡಿ

ಈ ವರ್ಷ ನಾವು ಭಾರತ ಸ್ವಾತಂತ್ರ್ಯದ ಇಪ್ಪತ್ತೈದನೆಯ ಜಯಂತಿಯನ್ನು ಆಚರಿಸುತ್ತಿದ್ದೇವೆ. ಈಗ ನಾವು ಸವಿಯುತ್ತಿರುವ ಸ್ವಾತಂತ್ರ್ಯವನ್ನು ಗಳಿಸುವುದಕ್ಕಾಗಿ ಭಾರತದ ಜನ ನಡೆಸಿದ ಹೋರಾಟದ ಇತಿಹಾಸವನ್ನು ಪರಿಶೀಲಿಸುವುದಕ್ಕೆ ಇದು ಸೂಕ್ತವಾದ ಸಂದರ್ಭ. ಸ್ವತಂತ್ರ ಭಾರತದಲ್ಲಿ ಬದುಕುತ್ತಿರುವ ನಾವು ಅದರ ರಚನೆಗೆ ವ್ಯಯವಾದ ಅಗಾಧ ಶ್ರಮ ಮತ್ತು ಬಲಿದಾನಗಳನ್ನು ತಿಳಿದುಕೊಳ್ಳಬೇಕು. ನಮ್ಮ ಸ್ವಾತಂತ್ರ್ಯಕ್ಕಾಗಿ ತ್ಯಾಗಮಾಡಿದ ಲಕ್ಷಾಂತರ ಜನ ಹಾಗೂ ಅವರ ನಾಯಕರಿಗೆ ಗೌರವಪೂರ್ವಕವಾದ ಸ್ಮೃತಿಕಾಣಿಕೆಯಾಗಲೆಂದು ಈ ಪುಸ್ತಕವನ್ನು ರೂಪಿಸಲಾಗಿದೆ.

ಆದರೆ ಈ ಕೆಲಸ ಸುಲಭವಾಗಲಿಲ್ಲ. ನಮ್ಮ ಸ್ವಾತಂತ್ರ್ಯ ಹೋರಾಟದ ರೂಪು ರೇಖೆಗಳು ಸುಪ್ರಸಿದ್ಧವಾಗಿರುವುದೇನೋ ನಿಜ. ಆದರೆ ಆ ಹೋರಾಟವನ್ನು ಆಳವಾಗಿ, ಸೂಕ್ಷ್ಮ ವ್ಯತ್ಯಾಸಗಳನ್ನು ಗಮನಿಸಿ ಅಡಕವಾದ ರೂಪದಲ್ಲಿ ಚಿತ್ರಿಸಬೇಕಾದರೆ ಹೆಚ್ಚಿನ ಎಚ್ಚರ, ತಿಳುವಳಿಕೆ ಹಾಗೂ ಜಾಣ್ಮೆ ಅವಶ್ಯಕ. ಇದು ವಿದ್ವಾಂಸರಿಗೆ ಉಪಯುಕ್ತವಾಗುವ ಸಂಶೋಧನ ಕೃತಿಯಾಗದೆ ಸಾಮಾನ್ಯ ಜನತೆಗೆ, ವಿಶೇಷವಾಗಿ ಯುವಕ ಪೀಳಿಗೆಗೆ, ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ರಚಿಸಬೇಕೆಂದು ನಿರ್ಧರಿಸಲಾಯಿತು. ಇದು ಕೆಲಸದ ಶ್ರಮವನ್ನು ಇನ್ನೂ ಹೆಚ್ಚಿಸಿತು.

ಇದಕ್ಕಾಗಿ ನಮ್ಮ ಕೆಲವು ಸುಪ್ರಸಿದ್ಧ ಇತಿಹಾಸಕಾರರನ್ನು ಆಹ್ವಾನಿಸಿ ಈ ಪುಸ್ತಕವನ್ನು ರೂಪಿಸಬೇಕು ಎಂದು ಕೇಳಿಕೊಂಡೆ. ಡಾ. ಎಸ್. ಗೋಪಾಲ್ ಈ ಸಮಿತಿಯ ಅಧ್ಯಕ್ಷರಾದರು. ಸದಸ್ಯರು ಡಾ. ಸತೀಶಚಂದ್ರ, ಡಾ. ಅಮಲೇಶ ತ್ರಿಪಾಠಿ, ಡಾ. ಬಿಪನ್ ಚಂದ್ರ, ಡಾ. ಬರುನ್ ಡೆ, ಡಾ. ಷೇಕ್ ಅಲಿ ಮತ್ತು ಡಾ. ಎಸ್.ಆರ್. ಮೆಹ್ರೋತ್ರ. ಈ ವಿದ್ವಾಂಸರು ಪುಸ್ತಕದ ಚೌಕಟ್ಟನ್ನು ಅಂಗೀಕರಿಸಿದರು. ಡಾ. ಬಿಪನ್ ಚಂದ್ರರನ್ನು ಮೊದಲನೆಯ ಮತ್ತು ಎರಡನೆಯ ಅಧ್ಯಾಯಗಳನ್ನು ಬರೆಯಲು ಪ್ರಾರ್ಥಿಸಿಕೊಂಡರು. ಡಾ. ತ್ರಿಪಾಠಿ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳನ್ನು ಬರೆದರು. ಡಾ. ಬರುನ್ ಡೇ ಐದು ಮತ್ತು ಆರನೆಯ ಅಧ್ಯಾಯಗಳನ್ನು ಬರೆದರು. ಹೀಗೆ ರಚಿತವಾದ ಕರಡು ಪ್ರತಿಯನ್ನು ಸಮಿತಿ ಪರಿಶೀಲಿಸಿತು. ಸಮಿತಿ ಸೂಚಿಸಿದ ಹಲವು ಸೂಚನೆಗಳ ಪ್ರಕಾರ ನ್ಯಾಷನಲ್ ಬುಕ್ ಟ್ರಸ್ಟಿನ ಶ್ರೀ ಕೆ.ಪಿ. ರಂಗಾಚಾರಿ ಅವರು ಇಡೀ ಪುಸ್ತಕವನ್ನು ಸಂಪಾದಿಸಿದ್ದಾರೆ. ಈ ಕೆಲಸವನ್ನು ಕೈಕೊಳ್ಳಲು ಒಪ್ಪಿ, ಆಗಮಾಡಿಕೊಟ್ಟ ಇವರೆಲ್ಲರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆ.

ಅಂತಿಮವಾಗಿ ಪುಸ್ತಕದ ಪಾಠವನ್ನು ಸಮಿತಿ ಅಂಗೀಕರಿಸಿದೆ. ಆದ್ದರಿಂದ ಈ ಪುಸ್ತಕ, ಚಿಕ್ಕದಾದರೂ ಅಧಿಕೃತವಾಗಿರುತ್ತದೆ, ವ್ಯಾಪಕವಾಗಿ ಜನ ಇದನ್ನು ಓದುತ್ತಾರೆ

ಎಂದು ನಾನು ಆಶಿಸುತ್ತೇನೆ. ಎಲ್ಲಾ ಮುಖ್ಯ ಭಾರತೀಯ ಭಾಷೆಗಳಲ್ಲೂ ಇದರ ಭಾಷಾಂತರಗಳನ್ನು ನ್ಯಾಷನಲ್ ಬುಕ್ ಟ್ರಸ್ಟ್ ಪ್ರಕಟಿಸಲಿದೆ. ಇದು ವಿಶೇಷವಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಯ ಉಪಾಧ್ಯಾಯರಿಗೂ ನಮ್ಮ ಉನ್ನತ ಪ್ರೌಢಶಾಲೆ ಹಾಗೂ ಪ್ರೀ-ಯೂನಿವರ್ಸಿಟಿ ತರಗತಿ ವಿದ್ಯಾರ್ಥಿಗಳಿಗೂ ಉಪಯುಕ್ತವಾಗುತ್ತದೆ ಎಂದು ಭಾವಿಸಿದ್ದೇನೆ.

ಎಸ್. ನೂರುಲ್ ಹಸನ್
ಶಿಕ್ಷಣ, ಸಮಾಜಕಲ್ಯಾಣ ಮತ್ತು ಸಂಸ್ಕೃತಿ
ಶಾಖೆಯ ಸಚಿವರು

ಹೊಸ ದೆಹಲಿ
ಆಗಸ್ಟ್ 2, 1972

# I

# ಬ್ರಿಟಿಷ್ ಆಳ್ವಿಕೆಯ ಸಂಘಟ್ಟನೆ

*"ಅನೇಕ ವರ್ಷಗಳ ಹಿಂದೆ ವಿಧಿಯೊಂದಿಗೆ ನಾವು ಒಂದು ಒಪ್ಪಂದ ಮಾಡಿಕೊಂಡೆವು. ಅಂದಿನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುವ ಕಾಲ ಈಗ ಬಂದಿದೆ. ಇದು ಇಡಿಯಾಗಿರದಿದ್ದರೂ ಪೂರ್ಣ ಪ್ರಮಾಣದಲ್ಲಿ ಇರದಿದ್ದರೂ ಮೂಲಭೂತವಾಗಿದೆ. ಇಡೀ ವಿಶ್ವವೇ ನಿದ್ರಿಸುತ್ತಿರುವ ಮಧ್ಯರಾತ್ರಿಯಲ್ಲಿ ಭಾರತವು ಹೊಸ ಚೇತನದಿಂದ ಸ್ವಾತಂತ್ರ್ಯದೆಡೆಗೆ ಎಚ್ಚರಗೊಂಡಿದೆ."*

ಜವಾಹರಲಾಲ್ ನೆಹರೂ ಅವರು 1947 ನೆಯ ಆಗಸ್ಟ್ 15 ರಂದು ರಾಜ್ಯಾಂಗ ಸಭೆಯನ್ನೂ ಭಾರತ ರಾಷ್ಟ್ರವನ್ನೂ ಉದ್ದೇಶಿಸಿ ಮಾತನಾಡುತ್ತಾ ಹೀಗೆ ನುಡಿದರು. ನೆಹರೂ ಸ್ವತಂತ್ರ ಭಾರತದ ಪ್ರಧಾನ ಮಂತ್ರಿಯಾಗಿ ಮಾತನಾಡುತ್ತಿದ್ದರು. ಅಂದು ಹೋರಾಟ ಮುಗಿದು ಭಾರತ ಸ್ವತಂತ್ರವಾಗಿತ್ತು.

ಆದರೆ ನೆಹರೂ ಹೇಳಿದ ವಿಧಿಯೊಂದಿಗೆ ಮಾಡಿಕೊಂಡಿದ್ದ ಒಪ್ಪಂದವಾದರೂ ಏನು ?

ಭಾರತ ಸ್ವತಂತ್ರವಾಗುವುದಕ್ಕೆ ಹದಿನೇಳು ವರ್ಷಗಳ ಹಿಂದೆ, ಅಂದರೆ 1929 ರ ಡಿಸೆಂಬರ್ 31 ರಂದು ಮಧ್ಯರಾತ್ರಿ ಗಂಟೆ ದನಿಯು ನೂತನ ವರ್ಷದ ಆಗಮನವನ್ನು ಮೊಳಗಿ ಸಾರುತ್ತಿರುವಾಗ ಭಾರತ ರಾಷ್ಟ್ರೀಯ ಕಾಂಗ್ರೆಸಿನ ಅಧ್ಯಕ್ಷರಾಗಿ ನೆಹರೂ, ರಾವೀ ನದಿಯ ದಡದಲ್ಲಿ ತ್ರಿವರ್ಣಧ್ವಜವನ್ನು ಹಾರಿಸಿದರು. ಅಪಾರ ಜನಸಮೂಹದೆದುರಿಗೆ ಸ್ವಾತಂತ್ರ್ಯ ಚಳುವಳಿಯ ಗುರಿ, ಪೂರ್ಣ ಸ್ವರಾಜ್ಯ, ಸಂಪೂರ್ಣವಾದ ಸ್ವಾತಂತ್ರ್ಯ ಎಂದು ಘೋಷಿಸಿದರು. ಒಂದು ಪ್ರತಿಜ್ಞೆಯನ್ನು ರೂಪಿಸಿ ಅಂಗೀಕರಿಸಲಾಯಿತು. 1930 ರ ಜನವರಿ 26 ರಂದು ಭಾರತದ ಸಮಸ್ತ ಜನತೆ ಈ ಪ್ರತಿಜ್ಞೆಯನ್ನು ಸಾರ್ವಜನಿಕ ಸಭೆಗಳಲ್ಲಿ ಬಹಿರಂಗವಾಗಿ ಸ್ವೀಕರಿಸಬೇಕು ಎಂದು ನಿರ್ಧರಿಸಲಾಯಿತು. ತಮ್ಮ ಸ್ವಾತಂತ್ರ್ಯಕ್ಕಾಗಿ ಜನ ಹೋರಾಡಲು ಸಂಕಲ್ಪ ಮಾಡಿದ್ದಾರೆನ್ನುವುದನ್ನು ಪ್ರಕಟಪಡಿಸುವ ಸಲುವಾಗಿ ಈ ಪ್ರಮಾಣವಚನ ಸ್ವೀಕಾರ. ಆ ದಿನವನ್ನು ಸ್ವಾತಂತ್ರ್ಯ ದಿನ ಎಂದು ಘೋಷಿಸಲಾಯಿತು. ಈ ಚಾರಿತ್ರಿಕ ಮಹತ್ವದಿಂದಾಗಿಯೇ ಮುಂದೆ 1950 ರಲ್ಲಿ ಭಾರತದ ನೂತನ ಗಣರಾಜ್ಯ ಸಂವಿಧಾನವು ಸಿದ್ಧವಾದಾಗ ಅದನ್ನು ಜನವರಿ 26 ರಂದು ಕಾರ್ಯರೂಪಕ್ಕೆ ತಂದು, ಅಂದಿನಿಂದ ಪ್ರತಿವರ್ಷವೂ ಆ ದಿನವನ್ನು ಭಾರತದಲ್ಲಿ ಗಣರಾಜ್ಯ ದಿನಾಚರಣೆ ಎಂದು ಆಚರಿಸಲಾಗುತ್ತಿದೆ.

ವಿಧಿಯೊಂದಿಗೆ ನಾವು ಮಾಡಿಕೊಂಡ ಒಪ್ಪಂದದ ವಿಷಯವಾಗಿ

ಮಾತಾಡುತ್ತಿದ್ದಾಗ ನೆಹರೂ ಸೂಚಿಸುತ್ತಿದ್ದುದು 1929-30 ರ ಘಟನೆಗಳನ್ನು. ಅಂದು ಕೈಗೊಂಡ ಪ್ರತಿಜ್ಞೆಯನ್ನು 1947 ರ ಆಗಸ್ಟ್ 15 ರಂದು ಭಾರತ ಸ್ವತಂತ್ರವಾದಾಗ ನೆರವೇರಿಸಿಕೊಂಡಂತಾಯಿತು.

ಆದರೆ ಭಾರತವು ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ ಪ್ರಾರಂಭವಾದದ್ದು 1929 ರಲ್ಲಿ ಅಲ್ಲ. ಅದಕ್ಕಿಂತ ಎಷ್ಟೋ ದಶಕಗಳ ಹಿಂದೆಯೇ ಆ ಹೋರಾಟ ಪ್ರಾರಂಭವಾಯಿತು. ಈ ಪುಸ್ತಕವು ಭಾರತದ ಸ್ವಾತಂತ್ರ್ಯ ಮತ್ತು ಬಿಡುಗಡೆಗಾಗಿ ನಡೆಸಿದ ಈ ಚಾರಿತ್ರಿಕ ಹೋರಾಟದ ಕಥೆಯನ್ನು ನಿಮಗೆ ಹೇಳುತ್ತದೆ.

ಭಾರತದ ಇತಿಹಾಸವು ಕ್ರಿಸ್ತಶಕಕ್ಕಿಂತಲೂ ಅನೇಕ ಶತಮಾನಗಳಷ್ಟು ಹಿಂದಕ್ಕೆ ಹೋಗುತ್ತದೆ. ಈ ದೀರ್ಘ ಇತಿಹಾಸದ ಗತಿಯು ಸಮವಾಗಿ ಮತ್ತು ಏಕರೂಪದ್ದಾಗಿ ಇಲ್ಲದಿರುವುದು ಆಶ್ಚರ್ಯವೇನಲ್ಲ. ಬಹಳಕಾಲ ಭಾರತ ಅನೇಕ ಸಂಸ್ಥಾನಗಳಿಂದ ಕೂಡಿದ ದೇಶವಾಗಿತ್ತೇ ಹೊರತು ಒಂದು ರಾಷ್ಟ್ರವಾಗಿರಲಿಲ್ಲ. ಈ ಉಪಖಂಡದ ವಿಸ್ತಾರವಾದ ಭಾಗಗಳು ಒಂದು ಚಕ್ರಾಧಿಪತ್ಯದ ಆಡಳಿತದ ಕೆಳಗೆ ಬಂದ ಸಂದರ್ಭಗಳುಂಟು. ವಿದೇಶೀಯರು ಅನೇಕಸಾರಿ ಈ ರಾಷ್ಟ್ರದ ಮೇಲೆ ಆಕ್ರಮಣಗಳನ್ನು ನಡೆಸಿದ್ದಾರೆ. ಅವರಲ್ಲಿ ಕೆಲವರು ಇಲ್ಲಿಯೇ ನೆಲಸಿದರು, ಭಾರತೀಯರಾದರು, ರಾಜರಾಗಿ ಚಕ್ರವರ್ತಿಗಳಾಗಿ ಈ ನೆಲವನ್ನು ಆಳಿದರು. ಮತ್ತೆ ಕೆಲವರು ರಾಷ್ಟ್ರವನ್ನು ದೋಚಿ ಕೊಳ್ಳೆಹೊಡೆದು ತಮಗೆ ಸಂಗ್ರಹಿಸಲು ಸಾಧ್ಯವಾದಷ್ಟು ಸಂಪತ್ತನ್ನು ಹೊತ್ತುಕೊಂಡು ಹಿಂತಿರುಗಿ ಹೋದರು. ಮಹತ್ಕಾರ್ಯಗಳನ್ನು ಸಾಧಿಸಿದ ಕಾಲಗಳೂ ಈ ಇತಿಹಾಸದಲ್ಲಿ ಉಂಟು. ಹಾಗೆಯೇ ಜಡತೆ ದುರವಸ್ಥೆಗಳ ಕಾಲಗಳೂ ಉಂಟು. ಆದರೆ ಭಾರತದ ಸ್ವಾತಂತ್ರ್ಯ ಹೋರಾಟದ ವಿಷಯವಾಗಿ ನಾವು ಮಾತಾಡುವಾಗ, ಬ್ರಿಟಿಷರು ಭಾರತವನ್ನು ಆಳುತ್ತಿದ್ದ, ಭಾರತದ ಜನತೆ ಆ ವಿದೇಶೀ ಪ್ರಭುತ್ವವನ್ನು ಕಿತ್ತೊಗೆದು ಸ್ವತಂತ್ರರಾಗಲು ಹೋರಾಡುತ್ತಿದ್ದ ಭಾರತ ಇತಿಹಾಸದ ಇತ್ತೀಚಿನ ಕಾಲವನ್ನು ಸೂಚಿಸುತ್ತೇವೆ.

ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸೈನ್ಯಗಳು 1757 ರ ಪ್ಲಾಸೀ ಕದನದಲ್ಲಿ ಬಂಗಾಳದ ನವಾಬ ಸಿರಾಜುದ್ದೌಲನನ್ನು ಸೋಲಿಸಿದಾಗ ಭಾರತದಲ್ಲಿ ಬ್ರಿಟಿಷರ ಆಡಳಿತ ಪ್ರಾರಂಭವಾಯಿತು ಎಂದು ಹೇಳಬಹುದು. ಆದರೆ ಬ್ರಿಟಿಷ್ ಪ್ರಭುತ್ವಕ್ಕೆದುರಾಗಿ ಶಕ್ತಿಯುತವಾದ ರಾಷ್ಟ್ರೀಯ ಹೋರಾಟ ಭಾರತದಲ್ಲಿ ಬೆಳೆದದ್ದು 19 ನೆಯ ಶತಮಾನದ ಉತ್ತರಾರ್ಧ ಹಾಗೂ 20 ನೆಯ ಶತಮಾನದ ಪೂರ್ವಾರ್ಧಗಳಲ್ಲಿ. ಭಾರತದ ಜನತೆಯ ಹಾಗೂ ಬ್ರಿಟಿಷ್ ಆಡಳಿತಗಾರರ ಹಿತಾಸಕ್ತಿಗಳ ನಡುವೆ ಉಂಟಾದ ಘರ್ಷಣೆಗಳ ಫಲ ಈ ಹೋರಾಟ. ಹಿತಾಸಕ್ತಿಗಳ ನಡುವಣ ಈ ಘರ್ಷಣೆಯನ್ನು ಅರ್ಥಮಾಡಿಕೊಳ್ಳಬೇಕಾದರೆ, ಭಾರತದಲ್ಲಿ ಬ್ರಿಟಿಷ್ ಆಡಳಿತದ ಮೂಲ ಲಕ್ಷಣ ಮತ್ತು ಭಾರತೀಯ ಸಮಾಜದ ಮೇಲೆ ಆದ ಅದರ ಪರಿಣಾಮಗಳನ್ನು ಅಧ್ಯಯನ ಮಾಡಬೇಕು. ವಿದೇಶೀ ಆಡಳಿತದ ಸ್ವರೂಪವೇ ಭಾರತದ ಜನರಲ್ಲಿ ರಾಷ್ಟ್ರೀಯತೆಯ ಭಾವನೆಗಳು ಮೂಡುವುದಕ್ಕೆ ಕಾರಣವಾಯಿತು. ಪ್ರಬಲವಾದ ಒಂದು ರಾಷ್ಟ್ರೀಯ ಚಳುವಳಿಯ ಉಗಮ ಮತ್ತು

ವಿಕಾಸಕ್ಕೆ ತಕ್ಕ ಭೌತಿಕ, ನೈತಿಕ, ಬೌದ್ಧಿಕ ಹಾಗೂ ರಾಜಕೀಯ ಪರಿಸ್ಥಿತಿಗಳನ್ನು ಮೂಡಿಸಿತು.

## ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಹಂತಗಳು

1757 ರಿಂದ ಬ್ರಿಟಿಷರು ತಮ್ಮ ಹಿತಾಸಕ್ತಿಗಳನ್ನು ನೋಡಿಕೊಳ್ಳುವುದಕ್ಕಾಗಿಯೇ ಭಾರತದ ಮೇಲೆ ತಮ್ಮ ನಿಯಂತ್ರಣವನ್ನು ಇಟ್ಟುಕೊಂಡಿದ್ದರು. ಆದರೆ ಅವರ ಆಳ್ವಿಕೆಯ ಮೂಲ ಲಕ್ಷಣ ಉದ್ದಕ್ಕೂ ಹಾಗೆಯೇ ಉಳಿಯಿತೆಂದು ಯೋಚಿಸುವುದು ತಪ್ಪಾಗುತ್ತದೆ. ಸುಮಾರು 200 ವರ್ಷಗಳಷ್ಟು ದೀರ್ಘವಾದ ಚರಿತ್ರೆಯಲ್ಲಿ ಅದು ಅನೇಕ ಹಂತಗಳನ್ನು ಹಾಯ್ದು ಬಂದಿತು. ಬ್ರಿಟನ್ನಿನ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಯ ಸ್ವರೂಪದಲ್ಲಿ ಉಂಟಾದ ವ್ಯತ್ಯಾಸಗಳನ್ನೇ ಅನುಸರಿಸಿ ಇಲ್ಲಿನ ಬ್ರಿಟಿಷ್ ಆಳಿಕೆ, ಪ್ರಭುತ್ವ, ಹಾಗೆಯೇ ಅದರ ನೀತಿಗಳು ಮತ್ತು ಪರಿಣಾಮ ನಾವು ಬದಲಾದುವು.

ಪ್ರಾರಂಭಕ್ಕೆ, ಅಂದರೆ 1757 ಕ್ಕಿಂತಲೂ ಮುಂಚೆ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಗೆ ಇದ್ದ ಆಸಕ್ತಿಗಳು ಎರಡೇ. ಭಾರತ ಹಾಗೂ ಪ್ರಾಚ್ಯ ದೇಶಗಳ ವ್ಯಾಪಾರದ ಏಕಸ್ವಾಮ್ಯ ತನಗಿರಬೇಕೆಂದು ಅದು ಅಪೇಕ್ಷಿಸಿತ್ತು. ಬೇರೆ ಯಾವುದೇ ಇಂಗ್ಲಿಷ್ ಅಥವಾ ಯೂರೋಪಿಯನ್ ವ್ಯಾಪಾರಿಗಳು ಅಥವಾ ವಾಣಿಜ್ಯ ಕಂಪನಿಗಳು ತನ್ನೊಂದಿಗೆ ಸ್ಪರ್ಧೆ ನಡೆಸಬಾರದೆಂಬುದು ಅದರ ಇಚ್ಛೆ. ಭಾರತದಲ್ಲಿ ಕೊಂಡು ಕೊಳ್ಳುವ ಹಾಗೂ ಭಾರತದ ಉತ್ಪನ್ನಗಳನ್ನು ವಿದೇಶಗಳಲ್ಲಿ ಮಾರಾಟ ಮಾಡುವ ವಿಚಾರದಲ್ಲಿ ಭಾರತೀಯ ವರ್ತಕರು ತಮ್ಮೊಂದಿಗೆ ಸ್ಪರ್ಧಿಸುವುದೂ ಕಂಪನಿಗೆ ಬೇಡವಾಗಿತ್ತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ತನ್ನ ವಸ್ತುಗಳನ್ನು ಎಷ್ಟು ಹೆಚ್ಚು ಬೆಲೆಗೆ ಸಾಧ್ಯವೋ ಅಷ್ಟಕ್ಕೆ ಮಾರಿ, ಎಷ್ಟು ಅಗ್ಗವಾಗಿ ಸಾಧ್ಯವೋ ಅಷ್ಟು ಅಗ್ಗವಾಗಿ ಭಾರತೀಯ ವಸ್ತುಗಳನ್ನು ಕೊಂಡು, ಅತ್ಯಂತ ಅಧಿಕ ಪ್ರಮಾಣದ ಲಾಭವನ್ನು ಗಳಿಸುವ ಉದ್ದೇಶ ಕಂಪನಿಗೆ ಇತ್ತು. ಅನೇಕ ಕಂಪನಿಗಳೂ ವ್ಯಕ್ತಿಗಳೂ ಸ್ಪರ್ಧಿಸುವ ಸಾಮಾನ್ಯ ವಾಣಿಜ್ಯ ವ್ಯವಸ್ಥೆಯಲ್ಲಿ ಇದು ಸಾಧ್ಯವಾಗುತ್ತಿರಲಿಲ್ಲ. ಲಂಚ ರುಷುವತ್ತುಗಳಿಂದಲೂ, ಇತರ ಅನೇಕ ಆರ್ಥಿಕ ಹಾಗೂ ರಾಜಕೀಯ ವಿಧಾನಗಳಿಂದ ಬ್ರಿಟಿಷ್ ಸರ್ಕಾರವನ್ನು ಒಲಿಸಿಕೊಂಡು, ಭಾರತ ಹಾಗೂ ಪ್ರಾಚ್ಯದೇಶಗಳೊಂದಿಗಿನ ವಾಣಿಜ್ಯದ ಸಂಪೂರ್ಣ ಹಕ್ಕನ್ನು ತನಗೆ ಮಾತ್ರ ನೀಡುವಂತೆ ಮಾಡಿಕೊಳ್ಳುವುದರಿಂದಲೂ, ಇಂಗ್ಲಿಷಿನವರೇ ಆದ ಸ್ಪರ್ಧಿಗಳನ್ನು ದೂರವಿಡುವುದು ಸುಲಭವಾಗಿತ್ತು. ಆದರೆ ಬ್ರಿಟಿಷ್ ಕಾನೂನುಗಳು ಇತರ ಯೂರೋಪಿಯನ್ ರಾಷ್ಟ್ರಗಳ ವರ್ತಕರನ್ನಾಗಲಿ ವಾಣಿಜ್ಯ ಸಂಸ್ಥೆಗಳನ್ನಾಗಲಿ ಅಡ್ಡಿಪಡಿಸುವುದು ಸಾಧ್ಯವಿರಲಿಲ್ಲವಷ್ಟೆ. ಆದ್ದರಿಂದ ಈಸ್ಟ್ ಇಂಡಿಯಾ ಕಂಪನಿಯು ತನ್ನ ಉದ್ದೇಶವನ್ನು ಸಾಧಿಸಿಕೊಳ್ಳಲು ದೀರ್ಘವೂ ಉಗ್ರವೂ ಆದ ಯುದ್ಧಗಳನ್ನೇ ನಡೆಸಬೇಕಾಯಿತು. ವಾಣಿಜ್ಯ ಪ್ರದೇಶಗಳು ಬಹಳ ದೂರದಲ್ಲಿ ಸಾಗರಗಳಾಚೆ ಇದ್ದುದರಿಂದ ಕಂಪನಿಯು ಬಲಿಷ್ಠವಾದ ನೌಕಾಪಡೆಯನ್ನು ಇಟ್ಟುಕೊಳ್ಳುವುದು ಅಗತ್ಯವಾಗಿತ್ತು.

ಭಾರತೀಯ ವರ್ತಕರ ಸ್ಪರ್ಧೆಯನ್ನು ನಿವಾರಿಸುವುದೂ ಸುಲಭವಾಗಿರಲಿಲ್ಲ. ಏಕೆಂದರೆ, ಅವರಿಗೆ ಪ್ರಬಲವಾದ ಮೊಗಲ್ ಚಕ್ರಾಧಿಪತ್ಯದ ರಕ್ಷಣೆಯಿತ್ತು. ವಾಸ್ತವವಾಗಿ 17 ನೆಯ ಶತಮಾನದಲ್ಲಿ ಮತ್ತು 18 ನೆಯ ಶತಮಾನದ ಮೊದಲ ಭಾಗದಲ್ಲಿ, ಭಾರತದೊಳಗೆ ವ್ಯಾಪಾರಮಾಡುವ ಹಕ್ಕು ಪಡೆದುಕೊಳ್ಳಬೇಕಾದರೆ, ಮೊಗಲ್ ಚಕ್ರವರ್ತಿಗೆ ಮತ್ತು ಅವರ ಪ್ರಾಂತೀಯ ಗವರ್ನರರಿಗೆ ವಿನಯಪೂರ್ವಕವಾಗಿ ಅರ್ಜಿ ಹಾಕಿಕೊಂಡು ಪ್ರಾರ್ಥಿಸಿಕೊಳ್ಳಬೇಕಾಗಿತ್ತು. ಆದರೆ 18 ನೆಯ ಶತಮಾನದ ಪ್ರಾರಂಭಿಕ ವರ್ಷಗಳಲ್ಲಿ ಮೊಗಲ್ ಸಾಮ್ರಾಜ್ಯವು ದುರ್ಬಲವಾಯಿತು. ದೂರದಲ್ಲಿದ್ದ ಕರಾವಳಿ ಪ್ರದೇಶಗಳು ಹತೋಟಿ ತಪ್ಪಿಹೋಗತೊಡಗಿದುವು. ಆದ್ದರಿಂದ ಕಂಪೆನಿಯು ಭಾರತದ ಕರಾವಳಿಯಲ್ಲಿ ವಾಣಿಜ್ಯದ ಹಕ್ಕನ್ನು ಉಳಿಸಿಕೊಳ್ಳುವುದಕ್ಕೆ ಭಾರತೀಯ ವರ್ತಕರನ್ನು ಕರಾವಳಿಯ ಹಾಗೂ ವಿದೇಶೀಯ ವ್ಯಾಪಾರದಿಂದ ವಿಮುಖರನ್ನಾಗಿಸುವುದಕ್ಕೆ ತನ್ನ ಉನ್ನತಮಟ್ಟದ ನೌಕಾಶಕ್ತಿಯನ್ನು ಹೆಚ್ಚುಹೆಚ್ಚಾಗಿ ಉಪಯೋಗಿಸಿತು.

ಇನ್ನೊಂದು ಬಹಳ ಮುಖ್ಯವಾದ ವಿಚಾರವಿತ್ತು. ಭಾರತದಲ್ಲಿ ಹಾಗೂ ಸಮುದ್ರಾಂತರ ಪ್ರದೇಶಗಳಲ್ಲಿ ಯುದ್ಧಗಳನ್ನು ನಡೆಸಲು ಮತ್ತು ನೌಕಾಪಡೆಗಳು, ಸೈನ್ಯಗಳು, ಕೋಠಿಗಳು ಹಾಗೂ ವ್ಯಾಪಾರ ಮಳಿಗೆಗಳನ್ನು ರಕ್ಷಿಸಲು ಭಾರೀ ಮೊತ್ತದ ಹಣ ಕಂಪೆನಿಗೆ ಅಗತ್ಯವಾಗಿತ್ತು. ಬ್ರಿಟಿಷ್ ಸರಕಾರಕ್ಕಾಗಲಿ, ಈಸ್ಟ್ ಇಂಡಿಯಾ ಕಂಪೆನಿಗಾಗಲಿ ಅದನ್ನು ಪೂರೈಸುವಷ್ಟು ಸಂಪನ್ಮೂಲಗಳಿರಲಿಲ್ಲ. ಆದ್ದರಿಂದ ಹಣವನ್ನು ಭಾರತದಲ್ಲೇ ಸಂಗ್ರಹಿಸಬೇಕಾಗಿತ್ತು. ಕಲ್ಕತ್ತಾ, ಮದರಾಸು, ಬೊಂಬಾಯಿ ಮೊದಲಾದ ತೀರ ಪ್ರದೇಶದ ಕೋಠಿ ನಗರಗಳಲ್ಲಿ ಸ್ಥಳೀಯ ತೆರಿಗೆಗಳನ್ನು ಹಾಕುವುದರ ಮೂಲಕ ಕಂಪೆನಿಯು ಇದನ್ನು ಸಾಧಿಸಿತು. ಕ್ರಮಕ್ರಮೇಣ ತಮ್ಮ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚುಪಡಿಸಿಕೊಳ್ಳುವುದಕ್ಕಾಗಿ ಹೆಚ್ಚು ಹೆಚ್ಚು ತೆರಿಗೆಗಳನ್ನು ವಿಧಿಸುವುದು, ಅದಕ್ಕಾಗಿ ಭಾರತದಲ್ಲಿ ತನ್ನ ವಶದಲ್ಲಿದ್ದ ಪ್ರದೇಶಗಳನ್ನು ವಿಸ್ತರಿಸುವುದು ಅತ್ಯಾವಶ್ಯಕವಾಯಿತು.

ಸುಮಾರಾಗಿ ಇದೇ ಸಮಯಕ್ಕೆ ಬ್ರಿಟಿಷ್ ಬಂಡವಾಳಶಾಹಿಯೂ ಕೂಡ ತನ್ನ ಬೆಳವಣಿಗೆಯ ಅತ್ಯಂತ ತೀವ್ರವಾದ ಹಂತವನ್ನು ಮುಟ್ಟಿತು. ಹೆಚ್ಚು ಹೆಚ್ಚು ಅಭಿವೃದ್ಧಿಯಾಗಲು ಅಪಾರವಾದ ಬಂಡವಾಳವನ್ನು ಕೈಗಾರಿಕೆ, ವಾಣಿಜ್ಯ ಹಾಗೂ ಕೃಷಿರಂಗಗಳಲ್ಲಿ ಹೂಡುವುದು ಆವಶ್ಯಕವಾಗಿತ್ತು. ಅಂತಹ ಹೂಡಿಕೆಗಳಿಗೆ ಸಂಪನ್ಮೂಲಗಳು ಬ್ರಿಟನ್ನಿನಲ್ಲಿ ಮಿತವಾಗಿದ್ದುದರಿಂದ, ಬ್ರಿಟಿಷ್ ಬಂಡವಾಳಶಾಹಿಯ ಅಭಿವೃದ್ಧಿಗೆ ಅಗತ್ಯವಾದ ಬಂಡವಾಳವನ್ನು ಹುಡುಕಲು ಬ್ರಿಟಿಷ್ ಬಂಡವಾಳಗಾರರು ಅನ್ಯರಾಷ್ಟ್ರಗಳನ್ನು ಲೂಟಿಮಾಡುವ ವಿಚಾರ ನಡೆಸಿದರು. ಭಾರತ ಸಮೃದ್ಧವಾದ ಸಂಪದ್ಭರಿತವಾದ ದೇಶವೆಂದು ಹೆಸರಾಗಿತ್ತು. ಆದ್ದರಿಂದ ಈ ನಿಟ್ಟಿನಲ್ಲಿ ಭಾರತ ಮುಖ್ಯ ಪಾತ್ರ ವಹಿಸಬೇಕಾಯಿತು.

ಎರಡೂ ಉದ್ದೇಶಗಳು-ವಾಣಿಜ್ಯದ ಏಕಸ್ವಾಮ್ಯ ಹಾಗೂ ಆರ್ಥಿಕ ಸಂಪನ್ಮೂಲಗಳ ನಿಯಂತ್ರಣ-ಬಹು ವೇಗವಾಗಿ ಈಸ್ಟ್ ಇಂಡಿಯಾ ಕಂಪೆನಿಯ ಡೈರೆಕ್ಟರುಗಳ ಕಲ್ಪನೆಯನ್ನೂ ಮೀರಿಸಿದ ಪ್ರಮಾಣದಲ್ಲಿ ನೆರವೇರಿದುವು. ಕ್ಷಿಪ್ರದಲ್ಲೇ ಅಂದರೆ,

1750 ಮತ್ತು 1760 ರ ದಶಕಗಳಲ್ಲಿ ಬಂಗಾಳವೂ ದಕ್ಷಿಣ ಭಾರತವೂ ಕಂಪೆನಿಯ ರಾಜಕೀಯ ನಿಯಂತ್ರಣಕ್ಕೆ ಸಿಕ್ಕಿಬಿದ್ದುವು.

ಈಸ್ಟ್ ಇಂಡಿಯಾ ಕಂಪೆನಿಯು ಈಗ ತಾನು ಗೆದ್ದ ಪ್ರದೇಶಗಳಲ್ಲಿ ದೇಶದ ಕಂದಾಯದ ಮೇಲೆ ನೇರವಾದ ಹತೋಟಿಯನ್ನು ಗಳಿಸಿಕೊಂಡಿತ್ತು. ಸ್ಥಳೀಯ ಅರಸರು, ದೊಡ್ಡಮನುಷ್ಯರು ಮತ್ತು ಜಮೀನ್ದಾರರು ಸಂಗ್ರಹಿಸಿಟ್ಟ ಸಂಪತ್ತನ್ನು ಸೆಳೆದು ದೋಚಿಕೊಳ್ಳುವ ಸ್ಥಿತಿಗೆ ಬಂದಿತ್ತು. ಈ ಸಂಪತ್ತನ್ನೂ ದೇಶದ ಕಂದಾಯ ರೂಪದ ವರಮಾನವನ್ನೂ ತನ್ನ ಮತ್ತು ತನ್ನ ನೌಕರರ ಲಾಭಕ್ಕಾಗಿಯೂ, ತನ್ನ ಆಧಿಪತ್ಯವನ್ನು ಭಾರತದಲ್ಲಿ ಇನ್ನೂ ವಿಸ್ತರಿಸುವುದಕ್ಕಾಗಿಯೂ ಬಳಸಿತು. ಉದಾಹರಣೆಗೆ, 1765 ರಿಂದ 1770 ರ ವರೆಗೆ ಕಂಪೆನಿಯು ಬಂಗಾಳದಿಂದ ಅದರ ನಿವ್ವಳ ವರಮಾನದ ಜೊತೆಗೆ 33 ಪ್ರತಿಶತವನ್ನು ವಸ್ತುಗಳ ರೂಪದಲ್ಲಿ ಹೊರಕ್ಕೆ ಕಳುಹಿಸಿತು. ಭಾರತೀಯ ವರ್ತಕರು, ಅಧಿಕಾರಿಗಳು ಮತ್ತು ಜಮೀನ್ದಾರರುಗಳಿಂದ ಕಿತ್ತುಕೊಂಡ ಅಕ್ರಮ ವರಮಾನದ ಭಾರೀ ಮೊತ್ತದ ಹಣವನ್ನು ಕಂಪೆನಿಯ ಅಧಿಕಾರಿಗಳು ಹೊರಕ್ಕೆ ಕಳುಹಿಸುತ್ತಿದ್ದರು. ಭಾರತದಿಂದ ಹೊರಕ್ಕೆ ಹರಿದುಹೋದ ಸಂಪತ್ತು ಬ್ರಿಟನ್ನಿನ ಬಂಡವಾಳಶಾಹೀ ಅಭಿವೃದ್ಧಿಗೆ ಹಣ ಒದಗಿಸುವುದರಲ್ಲಿ ಬಹು ಮುಖ್ಯ ಪಾತ್ರ ವಹಿಸಿತು. ಅದು ಅಂದಿನ ಬ್ರಿಟನ್ನಿನ ರಾಷ್ಟ್ರೀಯ ವರಮಾನದ ಶೇಕಡಾ ಎರಡರಷ್ಟಿದ್ದಿತೆಂದು ಅಂದಾಜುಮಾಡಲಾಗಿದೆ.

ಅದೇ ಸಮಯದಲ್ಲಿ ಕಂಪೆನಿಯು ಭಾರತೀಯ ವಾಣಿಜ್ಯ ಮತ್ತು ಉತ್ಪಾದನೆಯ ಮೇಲೆ ಏಕಸ್ವಾಮ್ಯ ನಿಯಂತ್ರಣವನ್ನು ಗಳಿಸಿಕೊಳ್ಳಲು ತನ್ನ ರಾಜಕೀಯ ಅಧಿಕಾರವನ್ನು ಉಪಯೋಗಿಸಿಕೊಂಡಿತು. ಭಾರತೀಯ ವರ್ತಕರನ್ನು ಕ್ರಮೇಣ ಸುಲಿಗೆ ಮಾಡಲಾಯಿತು. ನೇಕಾರರು ಮತ್ತು ಇತರ ಕುಶಲಕರ್ಮಿಗಳನ್ನು, ತಾವು ಉತ್ಪಾದಿಸಿದ ವಸ್ತುಗಳನ್ನು ತೀರಾ ನಷ್ಟದ ಬೆಲೆಗೆ ಮಾರುವಂತೆ, ಅಥವಾ ಕಂಪೆನಿಯಲ್ಲಿ ತುಂಬ ಕಡಮೆ ಸಂಬಳಕ್ಕೆ ದುಡಿಯುವಂತೆ ಬಲಾತ್ಕಾರ ಮಾಡಲಾಯಿತು. ಈ ಮೊದಲನೆಯ ಹಂತದ ಬ್ರಿಟಿಷ್ ಆಳ್ವಿಕೆಯ ಅತ್ಯಂತ ಮುಖ್ಯವಾದ ಒಂದು ಲಕ್ಷಣವೆಂದರೆ, ಆಡಳಿತದಲ್ಲಿಯಾಗಲಿ, ನ್ಯಾಯಾಂಗ ವ್ಯವಸ್ಥೆ, ಸಾರಿಗೆ-ಸಂಪರ್ಕ, ಕೃಷಿ ಹಾಗೂ ಕೈಗಾರಿಕಾ ಉತ್ಪಾದನಾ ವಿಧಾನಗಳು, ವ್ಯವಹಾರ ನಿರ್ವಹಣೆಗಳಲ್ಲಿ ಅಥವಾ ಶೈಕ್ಷಣಿಕ ಹಾಗೂ ಬೌದ್ಧಿಕ ಕ್ಷೇತ್ರಗಳಲ್ಲಿಯಾಗಲಿ ಆಧಾರಭೂತವಾದ ಬದಲಾವಣೆಗಳೇನೂ ಕಂಡುಬರಲಿಲ್ಲ. ಪ್ರಾಚೀನ ಸಾಮ್ರಾಜ್ಯಗಳೂ ಹೀಗೆಯೇ ತಮಗೆ ಸೇರಿದ ಹೊರಗಿನ ವಸಾಹತುಗಳಿಂದ ಕಪ್ಪಕಾಣಿಕೆಗಳನ್ನು ಸಂಗ್ರಹಿಸುತ್ತಿದ್ದುವು. ಅವುಗಳಿಗಿಂತ ಸ್ವಲ್ಪ ಹೆಚ್ಚು ಸಮರ್ಪಕವಾಗಿ ಕಲಸ ಮಾಡುತ್ತಿದ್ದರೂ ಬ್ರಿಟಿಷ್ ಆಳ್ವಿಕೆ ಈ ಹಂತದಲ್ಲಿ ಅದಕ್ಕಿಂತ ತುಂಬ ಭಿನ್ನವಾದುದಾಗಿರಲಿಲ್ಲ.

ಬ್ರಿಟಿಷರು ತಮ್ಮ ಹಿಂದಿನವರ ಹಾದಿಯನ್ನೇ ಅನುಸರಿಸಿ, ತಮ್ಮ ಆರ್ಥಿಕ ಪರಿಸ್ಥಿತಿ ಉತ್ತಮ ಮಟ್ಟದಲ್ಲಿರುವವರೆಗೆ ಗ್ರಾಮಾಂತರ ಪ್ರದೇಶಗಳ ಪ್ರವೇಶ ಬೇಕಿಲ್ಲವೆಂದು ಅರಿತು, ಪರಂಪರಾಗತವಾಗಿ ಬಂದ ಕಂದಾಯ ವಸೂಲಿ ಪದ್ಧತಿಯನ್ನೇ ಅನುಸರಿಸಿದರು. ಪರಿಣಾಮವಾಗಿ, ಯಾವುದೇ ಆಡಳಿತ ಬದಲಾವಣೆಗಳನ್ನು ಮಾಡಿದರೂ ಅವು ಕಂದಾಯ ವಸೂಲಿ ವ್ಯವಸ್ಥೆಯ ಮೇಲಿನ ಹಂತಕ್ಕೆ ಮಾತ್ರ

ಅನ್ವಯಿಸಿದುವು. ವರಮಾನವನ್ನು ಹೆಚ್ಚು ಸಮರ್ಪಕವಾಗಿ ವಸೂಲು ಮಾಡುವುದೊಂದೇ ಆ ಎಲ್ಲ ಬದಲಾವಣೆಗಳ ಗುರಿಯಾಗಿತ್ತು.

ಬೌದ್ಧಿಕ ಕ್ಷೇತ್ರದಲ್ಲಿ ಪಶ್ಚಿಮ ರಾಷ್ಟ್ರಗಳಲ್ಲಿನ ಜೀವನ ವಿಧಾನವನ್ನೇ ಬದಲಾಯಿಸುತ್ತಿದ್ದ ಆಧುನಿಕ ಭಾವನೆಗಳನ್ನು ಹರಡಲು ಯಾವ ಪ್ರಯತ್ನವೂ ನಡೆಯಲಿಲ್ಲ. ಹದಿನೆಂಟನೆಯ ಶತಮಾನದ ದ್ವಿತೀಯಾರ್ಧದಲ್ಲಿ ಎರಡೇ ಎರಡು ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯಲಾಯಿತು. ಒಂದು ಕಲ್ಕತ್ತದಲ್ಲಿ, ಇನ್ನೊಂದು ವಾರಣಾಸಿಯಲ್ಲಿ. ಎರಡೂ ಪರಂಪರಾಗತ ಪರ್ಷಿಯನ್ ಮತ್ತು ಸಂಸ್ಕೃತಗಳ ಕಲಿಕೆಯ ಕೇಂದ್ರಗಳಾಗಿದ್ದುವು. ಕ್ರೈಸ್ತ ಮಿಷನರಿಗಳನ್ನೂ ಸಹ ಕಂಪನಿಯ ವಲಯದಿಂದ ಹೊರಗಿರಿಸಲಾಯಿತು.

ಭಾರತವನ್ನು ಈಸ್ಟ್ ಇಂಡಿಯಾ ಕಂಪೆನಿಯು ಸ್ವಾಧೀನಪಡಿಸಿಕೊಂಡುದು ಬ್ರಿಟನ್ನಿನಲ್ಲಿ ಭಾರೀ ವಾಣಿಜ್ಯ ಮಂಡಲಿಗಳ ಯುಗವು ಮುಗಿದುಹೋಗಿದ್ದ ಕಾಲದಲ್ಲಿ ಎಂಬುದನ್ನೂ ನನಪಿನಲ್ಲಿಡಬೇಕು. ಬ್ರಿಟಿಷ್ ಸಮಾಜದೊಳಗಾದರೋ ಕಂಪೆನಿಯು ಆಗಲೇ ಅಳಿಯುತ್ತಿದ್ದ ಸಾಮಾಜಿಕ ಶಕ್ತಿಗಳನ್ನು ಪ್ರತಿನಿಧಿಸುತ್ತಿತ್ತೇ ಹೊರತು ಉದಯೋನ್ಮುಖವಾದುವನ್ನಲ್ಲ.

## *ಕೈಗಾರಿಕಾ ಬಂಡವಾಳಶಾಹಿ ಮತ್ತು ಅನಿರ್ಬಂಧಿತ ವ್ಯಾಪಾರದ ಯುಗ*

ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಒಂದು ಸಾಮ್ರಾಜ್ಯಶಾಹೀ ಶಕ್ತಿಯಾದೊಡನೆಯೇ ನೂತನವಾಗಿ ಸಂಪಾದಿಸಿದ ರಾಜ್ಯವು ಯಾರ ಹಿತವನ್ನು ಪೂರೈಸಬೇಕು ಎಂಬುದರ ಬಗಗೆ ಬ್ರಿಟನ್ನಿನಲ್ಲಿ ತೀವ್ರ ಹೋರಾಟವೇ ಉಂಟಾಯಿತು. ವರ್ಷಗಳು ಕಳೆದಂತೆ ಬ್ರಿಟನ್ನಿನಲ್ಲಿ ಕಂಪೆನಿಯು ಬೇರೆ ವಾಣಿಜ್ಯ ಹಾಗೂ ಕೈಗಾರಿಕಾ ಸಂಸ್ಥೆಗಳಿಗೆ ಸ್ಥಳ ಬಿಟ್ಟುಕೊಡಬೇಕಾಗಿ ಬಂದಿತು. 1813 ರ ವೇಳೆಗೆ ಭಾರತದಲ್ಲಿ ಅದಕ್ಕಿದ್ದುದು ಆರ್ಥಿಕ ಹಾಗೂ ರಾಜಕೀಯ ಶಕ್ತಿಯ ಕೇವಲ ಛಾಯೆ ಮಾತ್ರ. ನಿಜವಾದ ಶಕ್ತಿಯನ್ನು ಬ್ರಿಟಿಷ್ ಸರಕಾರ ಗಳಿಸಿಕೊಂಡಿತ್ತು. ಒಟ್ಟಿನಲ್ಲಿ ಅದರ ಹಿನ್ನಲೆಯಲ್ಲಿದ್ದುದು ಬ್ರಿಟಿಷ್ ಬಂಡವಾಳಶಾಹೀವರ್ಗದ ಹಿತರಕ್ಷಣೆ.

ಈ ಮಧ್ಯೆ ಬ್ರಿಟನ್ನಿನಲ್ಲಿ ಕೈಗಾರಿಕಾ ಕ್ರಾಂತಿ ಎದ್ದಿತ್ತು. ಇದರಿಂದಾಗಿ ಅದು ಜಗತ್ತಿನಲ್ಲೇ ಅತ್ಯಂತ ಮುಖ್ಯವಾದ ಉತ್ಪಾದಕ ಹಾಗೂ ರಫ್ತುಗಾರ ರಾಷ್ಟ್ರವಾಯಿತು. ಈ ಕೈಗಾರಿಕಾ ಕ್ರಾಂತಿ ಬ್ರಿಟನ್ನಿನೊಳಗೇ ಒಂದು ಭಾರೀ ಬದಲಾವಣೆಗೆ ಕಾರಣವಾಯಿತು. ಕೈಗಾರಿಕಾ ಬಂಡವಾಳಗಾರರು ಕಾಲಕ್ರಮದಲ್ಲಿ ಪ್ರಬಲವಾದ ರಾಜಕೀಯ ಪ್ರಭಾವದಿಂದ ಕೂಡಿ ಬ್ರಿಟಿಷ್ ಅರ್ಥ ವ್ಯವಸ್ಥೆಯಲ್ಲಿ ಪ್ರಧಾನ ಸ್ಥಾನ ಪಡೆದರು. ವಸಾಹತು ಆಡಳಿತ ಮತ್ತು ಭಾರತದಲ್ಲಿನ ನೀತಿಗಳನ್ನು ಈಗ ಅವರ ಹಿತಾಸಕ್ತಿಗಳಿಗೆ ತಕ್ಕಂತೆ ಬದಲಾಯಿಸುವುದು ಅತ್ಯಗತ್ಯವಾಯಿತು. ಸಾಮ್ರಾಜ್ಯದಲ್ಲಿ ಅವರಿಗ ಆಸಕ್ತಿಯಿದ್ದುದು ಕೇವಲ ಒಂದು ವ್ಯಾಪಾರೀ ಸಂಸ್ಥೆಯಾಗಿದ್ದ ಈಸ್ಟ್ ಇಂಡಿಯಾ ಕಂಪೆನಿಗೆ ಇದ್ದುದಕ್ಕಿಂತ ಬೇರೆಯೇ. ಪರಿಣಾಮವಾಗಿ ಭಾರತದಲ್ಲಿ ಬ್ರಿಟಿಷ್ ಆಳ್ವಿಕೆ ತನ್ನ ಎರಡನೆಯ ಹಂತವನ್ನು ಪ್ರವೇಶಿಸಿತು.

ಬ್ರಿಟಿಷ್ ಕೈಗಾರಿಕೋದ್ಯಮಿಗಳಿಗೆ ಭಾರತೀಯ ಕುಶಲ ವಸ್ತುಗಳ ರಫ್ತಿನ

ಏಕಸ್ವಾಮ್ಯದಿಂದ ಅಥವಾ ಭಾರತದ ಕಂದಾಯ ರೂಪದ ಪರಮಾನವನ್ನು ನೇರವಾಗಿ ಬಳಸಿಕೊಳ್ಳುವುದರಿಂದ ಅಷ್ಟಾಗಿ ಲಾಭವಿರಲಿಲ್ಲ. ಅದಕ್ಕೆ ಬದಲಾಗಿ ಅವರಿಗೆ, ದಿನೇ ದಿನೇ ಹೆಚ್ಚುತ್ತಿದ್ದ ತಮ್ಮ ಕೈಗಾರಿಕೆಗಳ ಉತ್ಪನ್ನ ವಸ್ತುಗಳಿಗ ವಿದೇಶೀ ಮಾರುಕಟ್ಟೆಗಳು ಬೇಕಾಗಿದ್ದುವು. ಬಹು ವಿಶಾಲವೂ ದಟ್ಟ ಜನಸಂಖ್ಯೆಯುಳ್ಳದ್ದೂ ಆಗಿದ್ದ ಭಾರತ ಅವರಿಗೆ ಸ್ಥಿರವಾದ ಆಕರ್ಷಣೆಯಾಗಿತ್ತು. ಬ್ರಿಟಿಷ್ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳ ಅಗತ್ಯ, ಬ್ರಿಟಿಷ್ ಕಾರ್ಮಿಕರಿಗೆ ಆಹಾರ ವಸ್ತುಗಳ ಅಗತ್ಯ ಇದ್ದುವು. ಇವುಗಳನ್ನು ಅವರು ಆಮದುಮಾಡಿಕೊಳ್ಳಬೇಕಾಗಿತ್ತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಭಾರತವು ಅಧೀನ ವಾಣಿಜ್ಯ ಭಾಗಸ್ಥನಾಗಿರಬೇಕೆಂದೂ, ಧಾರಾಳವಾಗಿ ಸುಲಿಗೆಮಾಡಬಹುದಾದ ಮಾರುಕಟ್ಟೆಯಾಗಬೇಕೆಂದೂ ಬ್ರಿಟನ್ನಿಗೆ ಆವಶ್ಯಕವಾಗಿದ್ದ ಕಚ್ಚಾವಸ್ತುಗಳನ್ನೂ ಆಹಾರ ಪದಾರ್ಥಗಳನ್ನೂ ಉತ್ಪಾದಿಸಿ ಒದಗಿಸುವ ಅಧೀನ ವಸಾಹತಾಗಿ ಇರಬೇಕೆಂದೂ ಬ್ರಿಟನ್ ಅಪೇಕ್ಷಿಸಿತು.

ಆದರೆ ಅಲ್ಲೊಂದು ಸಮಸ್ಯೆಯೂ ಇತ್ತು. ಆಮದು ಮಾಡಿಕೊಂಡ ವಸ್ತುಗಳಿಗೆ ಭಾರತ ಹಣ ತರಬೇಕಾಗಿತ್ತು. ಕಂಪೆನಿಯ ಷೇರುದಾರರಿಗೆ ಲಾಭಾಂಶವನ್ನೂ, ಬ್ರಿಟಿಷ್ ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳಿಗೆ ನಿವೃತ್ತಿ ವೇತನವನ್ನೂ ಕೊಡಲು ಭಾರೀ ಪ್ರಮಾಣದ ಸಂಪತ್ತನ್ನು ಭಾರತ ರಫ್ತು ಮಾಡಬೇಕಾಗಿತ್ತು. ಈ ಅಧಿಕಾರಿಗಳು ತಮ್ಮ ನಾಡಿಗೆ ಹಿಂದಿರುಗುವಾಗ ತಾವು ಕೂಡಿಟ್ಟುಕೊಂಡಿದ್ದ ಸಂಪತ್ತೆಲ್ಲವನ್ನೂ ಕೊಂಡುಹೋಗಲೂ ಅವಕಾಶ ಕೊಡಬೇಕಾಗಿತ್ತು. ಬ್ರಿಟಿಷ್ ವರ್ತಕರು ಮತ್ತು ಪ್ಲಾಂಟರುಗಳ ಲಾಭವೂ ಈ ದೇಶದಿಂದ ಹೊರಗೆ ಹರಿಯುತ್ತಿತ್ತು. ಅಲ್ಲದೆ ಇಲ್ಲಿ ಹೂಡಿದ ಬ್ರಿಟಿಷ್ ಬಂಡವಾಳಕ್ಕೆ ಬಡ್ಡಿಯನ್ನೂ, ಲಾಭಾಂಶವನ್ನೂ ಭಾರತವೇ ಕೊಡಬೇಕಾಗಿತ್ತು. ಇವುಗಳಿಗಾಗಿ, ಭಾರತವು ಬ್ರಿಟನ್ ಮತ್ತು ಇತರ ರಾಷ್ಟ್ರಗಳಿಗೆ ಕೆಲವು ವಸ್ತುಗಳನ್ನು ರಫ್ತುಮಾಡಬೇಕಾಗಿತ್ತು. ಆದರೆ ಕಂಪೆನಿಯ ಸುಲಿಗೆಯ ನೀತಿಯಿಂದಾಗಿ ಇಲ್ಲಿನ ಪರಂಪರಾಗತ ಕುಶಲ ಕಲಾವಸ್ತುಗಳ ರಫ್ತು ಮಾತ್ರ ಪೂರ್ತಿ ನಿಂತೇ ಹೋಯಿತು. ಇದಕ್ಕಿಂತಲೂ ಮುಖ್ಯವಾಗಿದ್ದ ವಿಚಾರವೆಂದರೆ, ಬ್ರಿಟನ್ನಿನ ಗೃಹಕೈಗಾರಿಕಗಳ ಮೇಲ-ಉದಾ. ಬಟ್ಟೆ ತಯಾರಿಕೆ-ಸ್ಪರ್ಧಿಸುವಂತಿದ್ದ ಯಾವ ವಸ್ತುಗಳನ್ನೂ ರಫ್ತು ಮಾಡುವಂತಿರಲಿಲ್ಲ. ಆದ್ದರಿಂದ ವ್ಯವಸಾಯಕ್ಕ ಸಂಬಂಧಿಸಿದ ಕಚ್ಚಾವಸ್ತುಗಳು ಮತ್ತಿತರ ತಯಾರಿಸಿರದ ವಸ್ತುಗಳನ್ನು ಮಾತ್ರ ರಫ್ತು ಮಾಡಲಾಗುತ್ತಿತ್ತು. ಚೈನಾ ನಿರ್ಬಂಧ ಹೇರಿದ್ದರೂ, ಅಲ್ಲಿಗೆ ಇನ್ನೂ ಹೆಚ್ಚು ಪ್ರಮಾಣದಲ್ಲಿ ಅಫೀಮಿನ ರಫ್ತು ಮತ್ತು ಅದರ ಉತ್ಪಾದನೆಯನ್ನು ಬಿಟ್ಟರೆ, ಭಾರತ ಸರಕಾರವು ಈಗ ಹತ್ತಿ, ಸೆಣಬು, ರೇಷ್ಮೆ, ಎಣ್ಣೆಬೀಜಗಳು, ಗೋಧಿ, ತೊಗಲು, ನೀಲಿ ಮತ್ತು ಟೀ-ಇವುಗಳ ರಫ್ತನ್ನು ಹೆಚ್ಚುಮಾಡಿತು. ಹೀಗ ಭಾರತದ ವಿದೇಶೀ ವ್ಯಾಪಾರ ನಾಟಕೀಯವಾದ ಬದಲಾವಣೆ ಹೊಂದಿತು. ಆದರೆ ಅದು ಒಳ್ಳೆಯದಕ್ಕಾಗಿರಲಿಲ್ಲ. ಶತಮಾನಗಳ ಕಾಲದಿಂದ ಹತ್ತಿಬಟ್ಟೆಗಳು ಮತ್ತು ಇತರ ಕುಶಲ ಕಲಾವಸ್ತುಗಳ ರಫ್ತುಗಾರ ರಾಷ್ಟ್ರವಾಗಿದ್ದ ಭಾರತ 19ನೆಯ ಶತಮಾನದಲ್ಲಿ ಹತ್ತಿಬಟ್ಟೆಗಳನ್ನು ಆಮದುಮಾಡಿಕೊಳ್ಳುವ, ಕಚ್ಚಾ ಹತ್ತಿ ಮತ್ತಿತರ ಕಚ್ಚಾ ವಸ್ತುಗಳನ್ನು ರಫ್ತು ಮಾಡುವ ರಾಷ್ಟ್ರವಾಯಿತು.

ಆಗ ಇದ್ದ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಭಾರತ ತನ್ನ ನೂತನ ಕರ್ತವ್ಯಗಳನ್ನು ಸರಿಯಾಗಿ ಪಾಲಿಸಲು ಅಸಮರ್ಥವಾಯಿತು. ಬ್ರಿಟಿಷ್ ಅರ್ಥವ್ಯವಸ್ಥೆಯ ಬೆಳವಣಿಗೆಗೆ ತಕ್ಕಂತೆ ತನ್ನ ನೂತನ ಪಾತ್ರ ನಿರ್ವಹಿಸಲು ಅದು ಪರಿವರ್ತಿತವಾಗಬೇಕಿತ್ತು. ಪರಂಪರೆಯಿಂದ ಬಂದ ಬಂಡವಾಳಶಾಹಿಯಲ್ಲದ ಆರ್ಥಿಕ ರಚನೆ ಈಗ ವ್ಯತ್ಯಾಸಗೊಳ್ಳುವುದು ಅಗತ್ಯವಾಗಿತ್ತು. 1813ರ ನಂತರ ಭಾರತದಲ್ಲಿನ ಬ್ರಿಟಿಷ್ ಸರಕಾರವು ಇಲ್ಲಿನ ಆಡಳಿತ, ಅರ್ಥವ್ಯವಸ್ಥೆ ಮತ್ತು ಸಮಾಜ ಪರಿಸ್ಥಿತಿಗಳನ್ನು, ತನ್ನ ಮೇಲ್ಕಂಡ ಗುರಿಗಳನ್ನು ಸಾಧಿಸುವ ಉದ್ದೇಶಕ್ಕೆ ತಕ್ಕಂತೆ ಪರಿವರ್ತನ ಮಾಡಲು ಉದ್ಯುಕ್ತವಾಯಿತು.

ಆರ್ಥಿಕ ರಂಗದಲ್ಲಿ ಬ್ರಿಟಿಷ್ ಬಂಡವಾಳಗಾರರಿಗೆ ಭಾರತಕ್ಕೆ ಬರಲು ಧಾರಾಳ ವಾದ ಸ್ವಾತಂತ್ರ್ಯ ಕೊಡಲಾಯಿತು. ತಮಗೆ ಇಷ್ಟಬಂದಂತೆ ಇಲ್ಲಿ ಅವರು ತಮ್ಮ ಆರ್ಥಿಕ ಚಟುವಟಿಕೆಗಳನ್ನು ನಡೆಸಲು ಅವಕಾಶವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಸುಂಕರಹಿತ ವ್ಯಾಪಾರವನ್ನು ಪ್ರವೇಶಗೊಳಿಸಿ ಭಾರತ ಬಂದರುಗಳು ಮತ್ತು ಮಾರುಕಟ್ಟೆಗಳನ್ನು ಬ್ರಿಟಿಷ್ ಉತ್ಪಾದಕರಿಗ ಅನಿರ್ಬಂಧಿತವಾಗಿ ತೆರೆದಿಡಲಾಯಿತು. ಭಾರತ ಬ್ರಿಟಿಷ್ ವಸ್ತುಗಳನ್ನು ಉಚಿತವಾಗಿ ಅಥವಾ ನಾಮಕಾವಸ್ಥೆಯ ದರಗಳಲ್ಲಿ ಸುಂಕಪಡೆದು ಒಳಕ್ಕೆ ಬರಮಾಡಿಕೊಳ್ಳಬೇಕಾಗಿತ್ತು. ಆಡಳಿತ ಹೆಚ್ಚು ವಿವರ ಣಾತ್ಮಕವೂ ಸಮಗ್ರವೂ ಆಗಿ, ತೆರಿಗೆ ವಸೂಲಿ, ಕಾನೂನು ಶಾಂತಿ ಸುವ್ಯವಸ್ಥೆಗಳನ್ನು ಕಾಪಾಡುವುದು ಮುಂತಾದುವುಗಳ ಜೊತೆಗೆ ಅನೇಕ ಇತರ ಚಟುವಟಿಕಗಳನ್ನು ಒಳಗೊಂಡಿತು. ಅದು ವ್ಯಾಪ್ತಿಯಲ್ಲೂ ಹಿರಿದಾಯಿತು, ಗ್ರಾಮಗಳನ್ನೂ ಮುಟ್ಟಿತು. ಬ್ರಿಟಿಷ್ ವಸ್ತುಗಳು ಚಿಕ್ಕ ಪಟ್ಟಣಗಳು ಮತ್ತು ಹಳ್ಳಿಗಳನ್ನೂ ಪ್ರವೇಶಿಸುವಂತಾಗಿ, ರಫ್ತು ಮಾಡುವುದಕ್ಕೆ ಅಲ್ಲಿಂದ ಕೃಷಿ ವಸ್ತುಗಳನ್ನು ಸಂಗ್ರಹಿಸಲು ಅವಕಾಶವಾಯಿತು. ಹೀಗೆ 19 ನೆಯ ಶತಮಾನದಲ್ಲಿ ಭಾರತದ ಬ್ರಿಟಿಷ್ ಆಡಳಿತ ಬಹುವಾಗಿ ಮತ್ತು ಕ್ಷಿಪ್ರವಾಗಿ ಬದಲಾವಣೆ ಹೊಂದಿತು.

ಅಲ್ಲದೆ, ಭಾರತೀಯ ಸಮಾಜವನ್ನು ಬಂಡವಾಳಶಾಹೀ ಸ್ವರೂಪದ ವಾಣಿಜ್ಯ ಸಂಬಂಧಗಳ ಮೇಲ ಆಧಾರಗೊಳಿಸಬೇಕಾಗಿತ್ತು. ಉದಾಹರಣೆಗೆ ಹೇಳುವುದಾದರೆ, ಆಮದು ರಫ್ತು ಕಾರ್ಯವು ಊರ್ಜಿತವಾಗಲು ಆವಶ್ಯಕವಾಗಿದ್ದ ಲಕ್ಷಾಂತರ ಆರ್ಥಿಕ ವ್ಯವಹಾರಗಳು ಸಜೀವವಾಗಿರಬೇಕಾದರೆ, ಕರಾರಿನ ಪಾವಿತ್ರ್ಯವು ಈ ನೆಲದ ಮೂಲ ಶಾಸನ ಮತ್ತು ನೀತಿ ಆಗಿರಬೇಕಾಗಿತ್ತು. ಹೀಗಾಗಿ ನೂತನ ಕಾನೂನುಗಳು, ಶಾಸನ ಸಂಹಿತಗಳ ಆಧಾರಗಳ ಮೇಲ ರೂಪಿಸಲಾದ ಇಂಡಿಯನ್ ಪೀನಲ್ ಕೋಡ್ ಮತ್ತು ಸಿವಿಲ್ ಪ್ರೊಸೀಜರ್ ಕೋಡ್ ಇವೇ ಮುಂತಾದ ನೂತನ ನ್ಯಾಯಾಂಗ ವ್ಯವಸ್ಥೆ ಮೂಡಿಬಂದಿತು.

ದೇಶದ ವಿಸ್ತಾರವಾದ ಆಡಳಿತ ಮತ್ತು ನ್ಯಾಯಾಂಗ ವ್ಯವಸ್ಥೆಯನ್ನು ಹಾಗೂ ಬ್ರಿಟಿಷ್ ವ್ಯವಹಾರ ಸಂಸ್ಥೆಗಳಲ್ಲಿನ ಕೆಳಮಟ್ಟದ ಅಧಿಕಾರಸ್ಥಾನಗಳನ್ನು ನಿರ್ವಹಿಸಲು ತಕ್ಕ ಜನರನ್ನು ಒದಗಿಸಬೇಕಾಯಿತು. ಈ ಉದ್ದೇಶಕ್ಕೆ ಅಗತ್ಯವಾಗಿದ್ದಷ್ಟು ಮನುಷ್ಯ ಶಕ್ತಿ ಬ್ರಿಟನ್ನಿನಲ್ಲಿ ಇರಲಿಲ್ಲ. ಈ ಎಲ್ಲ ಉದ್ಯೋಗಗಳಿಗೂ ಇಂಗ್ಲಿಷ್ ಜನರನ್ನೇ ಆಕರ್ಷಿಸಲು ಸಾಧ್ಯವಿರಲಿಲ್ಲ. ಅವರಿಗೆ ಭಾರೀ ವೇತನಗಳನ್ನು ಕೊಡಬೇಕಾಗುತ್ತಿತ್ತು.

ತಮ್ಮ ನಾಡಿನಿಂದ ಬಹುದೂರದ ಭಾರತಕ್ಕೆ ಬಂದು, ಇಲ್ಲಿನ ಅನನುಕೂಲ ವಾಯುಗುಣದಲ್ಲಿ ಇದ್ದುಕೊಂಡು ಕೆಲಸಮಾಡಲು ಅವರನ್ನು ಆಕರ್ಷಿಸುವುದು ಕಷ್ಟವೂ ಆಗುತ್ತಿತ್ತು. ಆದ್ದರಿಂದ ಬ್ರಿಟಿಷರು 1813 ರ ನಂತರ ಪ್ರಾರಂಭಿಸಿದ್ದ ಆಧುನಿಕ ಶಿಕ್ಷಣ ವಿಧಾನವನ್ನು 1833 ರ ನಂತರ ಇನ್ನೂ ವಿಸ್ತರಿಸಿದರು.

ಬಹುಪ್ರಮಾಣದ ಆಮದು, ಅದಕ್ಕಿಂತಲೂ ಅಗಾಧ ಪ್ರಮಾಣದ ರಫ್ತುಗಳಿಗಾಗಿ ಅಗ್ಗವೂ ಸುಲಭವೂ ಆದ ಸಾರಿಗೆ ವ್ಯವಸ್ಥೆ ಆವಶ್ಯಕವಾಯಿತು. ಆದ್ದರಿಂದ ಸರಕಾರವು ನದಿಗಳ ಮೇಲೆ ಉಗಿಪಡಗುಗಳ ಸಂಚಾರವನ್ನು ಪ್ರಾರಂಭಿಸಿತು. ರಸ್ತೆಗಳನ್ನು ದುರಸ್ತಿಪಡಿಸಿತು. ಎಲ್ಲಕ್ಕಿಂತ ಮಿಗಿಲಾಗಿ, 1853 ರ ನಂತರ ದೇಶದ ಮುಖ್ಯ ನಗರಗಳನ್ನೂ ಮಾರುಕಟ್ಟೆಗಳನ್ನೂ ಬಂದರುಗಳೊಂದಿಗೆ ಒಂದುಗೂಡಿಸುವ ರೈಲ್ವೆಮಾರ್ಗಗಳ ಜಾಲವನ್ನು ನಿರ್ಮಿಸಿದರು. 1905 ರ ವೇಳೆಗೆ ಸುಮಾರು 250 ಕೋಟಿ ರೂಪಾಯಿಗಳ ವೆಚ್ಚದಲ್ಲಿ ಸುಮಾರಾಗಿ 28,000 ಮೈಲಿಗಳಷ್ಟು ರೈಲು ಮಾರ್ಗಗಳನ್ನು ಹಾಕಲಾಗಿತ್ತು. ಅದೇ ರೀತಿ ಆಧುನಿಕ ಅಂಚೆ ಮತ್ತು ತಂತಿ ವ್ಯವಸ್ಥೆಯನ್ನು ಪ್ರಾರಂಭಮಾಡಲಾಯಿತು. ಇದು ವ್ಯವಹಾರವನ್ನು ಸರಾಗಗೊಳಿಸಿತು.

ಇದೇ ಕಾಲದಲ್ಲಿಯೇ ಬ್ರಿಟಿಷ್ ರಾಜನೀತಿಜ್ಞರು ಮತ್ತು ಭಾರತದಲ್ಲಿನ ಬ್ರಿಟಿಷ್ ಆಡಳಿತಾಧಿಕಾರಿಗಳಲ್ಲಿ ಉದಾತ್ತ ಮನೋಭಾವದ ಸಾಮ್ರಾಜ್ಯಶಾಹೀ ವಾದ ಕಾಣಿಸಿಕೊಂಡಿತು. ಎಲ್ಲಿಯವರೆಗೆ ಮುಕ್ತ ವ್ಯಾಪಾರಪದ್ಧತಿ ಜಾರಿಯಲ್ಲಿರುವುದೋ ಅಲ್ಲಿಯವರೆಗೆ ಬ್ರಿಟನ್, ತನ್ನ ಪ್ರತ್ಯಕ್ಷ ಅಥವಾ ಪರೋಕ್ಷ ಹತೋಟಿಯಿಂದ, ಭಾರತ ಹಾಗೂ ಇತರ ದೇಶಗಳ ಆರ್ಥಿಕ ಸುಲಿಗೆಯನ್ನು ಜಯಪ್ರದವಾಗಿ ನಡೆಸುವುದು ಸ್ಪಷ್ಟವಾಯಿತು. ಉತ್ಪಾದನಾ ಕ್ಷೇತ್ರದಲ್ಲಿ ಬ್ರಿಟನ್ ಏಕಸ್ವಾಮ್ಯವನ್ನು ಪಡೆದಿತ್ತು ಮತ್ತು ಸಮುದ್ರದ ಮೇಲೆ ಒಳ್ಳೆಯ ಹತೋಟಿ ಪಡೆದಿತ್ತು. 19 ನೆಯ ಶತಮಾನದ ಪೂರ್ವಾರ್ಧದ ವೇಳೆಗೆ ಆ ರಾಷ್ಟ್ರ ಏಕೈಕ ಕೈಗಾರಿಕಾ ರಾಷ್ಟ್ರವಾಗಿದ್ದು ಜಗತ್ತಿನ ಕಾರ್ಯಾಗಾರ ಎಂಬ ಹೆಸರು ಗಳಿಸಿತ್ತು. ಆದ್ದರಿಂದ ಅವರು ಸ್ವಯಮಾಡಳಿತದ ಕಲೆಯಲ್ಲಿ ಭಾರತೀಯರಿಗೆ ಶಿಕ್ಷಣ ಕೊಡುವ ಹಾಗೂ ಕಾಲಕ್ರಮದಲ್ಲಿ ಅವರ ಕೈಗೆ ರಾಜಕೀಯ ಅಧಿಕಾರವನ್ನು ವರ್ಗಾಯಿಸುವ ಮಾತುಗಳನ್ನು ಆಡತೊಡಗಿದರು. ಈ ಹೇಳಿಕೆಗಳನ್ನು ಮುಂದೆ, ಭಾರತೀಯ ರಾಷ್ಟ್ರೀಯವಾದಿಗಳು ತಮ್ಮ ರಾಜಕೀಯ ಚಳುವಳಿಯಲ್ಲಿ ಧಾರಾಳವಾಗಿ ಉಪಯೋಗಿಸಿಕೊಳ್ಳುವುದಿತ್ತು.

ಬ್ರಿಟಿಷ್ ಆಳಿಕೆಯ ಎರಡನೆಯ ಹಂತದಲ್ಲಿ ಆರ್ಥಿಕ ಸುಲಿಗೆಯ ಹೊಸ ಮಾದರಿಗಳನ್ನು ಪ್ರವೇಶಗೊಳಿಸಿದುದರಿಂದ, ಹಳೆಯ ಮಾದರಿಗಳು ಮುಕ್ತಾಯಗೊಂಡುವೆಂದು ಅರ್ಥವಲ್ಲ. ಭಾರತದ ಉಳಿದ ಭಾಗವನ್ನು ಗೆಲ್ಲುವುದಕ್ಕೆ ಮತ್ತು ಬ್ರಿಟಿಷ್ ಆಳಿಕೆಯನ್ನು ಸಮಗ್ರಗೊಳಿಸುವುದಕ್ಕೆ ಭಾರತ ಸಂಪತ್ತಿನ ಆವಶ್ಯಕತೆ ಇದ್ದೇ ಇತ್ತು. ಹಾಗೆಯೇ, ಮೇಲುಮಟ್ಟದ ಆಡಳಿತಾಧಿಕಾರಿಗಳು ಮತ್ತು ಮಿಲಿಟರಿ ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದ ಇಂಗ್ಲಿಷ್ ಜನರಿಗೆ ವೇತನ ಕೊಡುವುದಕ್ಕೂ ಅದರ ಆವಶ್ಯಕತೆ ಇತ್ತು. ಅಂದಿನ ಸಾಮಾನ್ಯ ಮಟ್ಟಗಳ ದೃಷ್ಟಿಯಿಂದ ನೋಡಿದರೆ ಆ ವೇತನಗಳು ಅಪಾರವಾಗಿದ್ದುವು. ವಸಾಹತುಶಾಹಿಯು ಭಾರತದ ಒಳನಾಡುಗಳಿಗೂ ವ್ಯಾಪಿಸುವಂತ ಮಾಡುವುದಕ್ಕೆ ಅಗತ್ಯವಾದ ಆರ್ಥಿಕ ಹಾಗೂ ಆಡಳಿತ

ಬದಲಾವಣೆಗಳ ವೆಚ್ಚವನ್ನು ನಿರ್ವಹಿಸುವುದಕ್ಕೆ ಕೂಡ ಅವರಿಗೆ ಆ ವರಮಾನ ಆವಶ್ಯಕವಾಗಿತ್ತು. ಪರಿಣಾಮವಾಗಿ ಬ್ರಿಟಿಷ್ ಆಳಿಕೆಯ ಈ ಹೊಸ ಮುಖವು ಭಾರತೀಯ ರೈತನ ಮೇಲೆ ಭಾರೀ ಪ್ರಮಾಣದ ತೆರಿಗೆಯ ಹೊರೆ ಹೇರುವುದರಲ್ಲಿ ಪರ್ಯವಸಾನಗೊಂಡಿತು.

ಅದೇ ಸಮಯದಲ್ಲಿ ಬ್ರಿಟಿಷ್ ಉತ್ಪಾದನೆಗಳೊಂದಿಗೆ ಸ್ಪರ್ಧೆಗೆ ನಿಲ್ಲದ ಭಾರತೀಯ ಉತ್ಪಾದನಾ ಅಂಶಗಳನ್ನು (ಉದಾಹರಣೆಗೆ ನೀಲಿ, ಅಫೀಮು ಮತ್ತು ಟೀ) ಅಭಿವೃದ್ಧಿಪಡಿಸಲಾಯಿತು. ಆದರೆ ಸರಕಾರ ಅಥವಾ ಭಾರತದಲ್ಲಿನ ಬ್ರಿಟಿಷ್ ಬಂಡವಾಳಗಾರರ ಕಟ್ಟುನಿಟ್ಟಾದ ನಿಯಂತ್ರಣಕ್ಕೆ ಅವುಗಳನ್ನು ಒಳಪಡಿಸಲಾಯಿತು. ಅಲ್ಲದೆ ಭಾರತದ ಮೇಲೆ ವಿಧಿಸಿದ ಅನಿರ್ಬಂಧಿತ ವ್ಯಾಪಾರ ವ್ಯವಸ್ಥೆ ಕೂಡ ಏಕಪಕ್ಷೀಯವಾಗಿತ್ತು. ತಾಂತ್ರಿಕವಾಗಿ ಮೇಲುಮಟ್ಟದ್ದಾಗಿದ್ದ ಬ್ರಿಟಿಷ್ ಅಥವಾ ಬ್ರಿಟಿಷ್ ನಿಯಂತ್ರಿತ ವಸಾಹತು ಉತ್ಪಾದನೆಗಳೊಂದಿಗೆ ಇನ್ನೂ ಸ್ಪರ್ಧಿಸುವ ಯೋಗ್ಯತೆಯನ್ನು ಹೊಂದಿದ್ದ ಭಾರತದ ಉತ್ಪನ್ನವಸ್ತುಗಳ ಮೇಲೆ ಬ್ರಿಟನ್ನಿನಲ್ಲಿ ಭಾರಿ ಪ್ರಮಾಣದ ಆಮದು ಸುಂಕ ವಿಧಿಸಲಾಗುತ್ತಿತ್ತು. ಉದಾಹರಣೆಗೆ 1824 ರಲ್ಲಿ ಭಾರತೀಯ ವಸ್ತುಗಳು ಶೇ. 30ರಿಂದ 70ರ ವರೆಗೆ ಸುಂಕಗಳನ್ನು ಕೊಡುತ್ತಿದ್ದುವು. ಭಾರತದ ಸಕ್ಕರೆ ತನ್ನ ಬೆಲೆಗಿಂತ ಮೂರುಪಟ್ಟು ಹೆಚ್ಚಿನ ತೆರಿಗೆಯನ್ನು ಕೊಡಬೇಕಿತ್ತು. ಕೆಲವು ಸಂದರ್ಭಗಳಲ್ಲಿ ಬ್ರಿಟನ್ನಿನಲ್ಲಿ ಈ ಸುಂಕಗಳು ಶೇ. 400 ರಷ್ಟು ಮಟ್ಟಿಗೆ ಅಧಿಕವಾಗಿರುತ್ತಿದ್ದುವು. ಅಂತಹ ಉತ್ಪನ್ನಗಳ ಮೇಲಿನ ಆಮದು ಸುಂಕಗಳನ್ನು ತೆಗೆದುಹಾಕಿದ್ದು, ಬ್ರಿಟನ್ನಿಗೆ ಅವುಗಳ ರಫ್ತು ಸಂಪೂರ್ಣವಾಗಿ ನಿಂತು ಹೋದಮೇಲೆಯೇ. ಅಲ್ಲದೆ ಸರಕಾರವು ಒಂದು ವ್ಯಾಪಕವಾದ ಆಂತರಿಕ ಸುಂಕ ನೀಡಿಕೆಯ ವ್ಯವಸ್ಥೆಯನ್ನು ರಚಿಸಲು ತೀರ್ಮಾನ ಕೈಕೊಂಡಿತು. ಆದರೆ ಅದರ ಪ್ರಯೋಜನವನ್ನು ಪಡೆದುಕೊಂಡು ಭಾರತಾದ್ಯಂತ ಮಾರುಕಟ್ಟೆ ಗಳಿಸಲು ಭಾರತೀಯ ಉತ್ಪಾದಕರಿಗೆ ಅವಕಾಶವಿರಲಿಲ್ಲ. ಹೀಗೆ ಭಾರತವು ತನ್ನದೇ ಉತ್ಪಾದನೆಗಳಿಗೆ ತಾನೇ ಸುಂಕ ತೆರುವ, ಅದೇ ಸಮಯದಲ್ಲಿ ವಿದೇಶೀ ವಸ್ತುಗಳನ್ನು ಸುಂಕವಿಲ್ಲದೆ ಧಾರಾಳವಾಗಿ ಹರಿಯಲು ಬಿಡುವ ವಿಚಿತ್ರ ವಿಡಂಬನೆಯ ಸ್ಥಿತಿಯಲ್ಲಿ ನಿಂತಿತು. ಈ ಆಂತರಿಕ ಸುಂಕವನ್ನು ತೆಗೆದುಹಾಕಿದುದು 1840ರ ದಶಕದಲ್ಲಿ. ಆ ವೇಳೆಗೆ ಬ್ರಿಟಿಷ್ ಉತ್ಪನ್ನಗಳು ಭಾರತೀಯ ಕುಶಲಕಲಾವಸ್ತುಗಳಿಗಿಂತ ಮೇಲಾದ ಸ್ಥಾನವನ್ನು ಭಾರತದ ಮಾರುಕಟ್ಟೆಯಲ್ಲೇ ಖಚಿತಪಡಿಸಿಕೊಂಡಾಗಿತ್ತು.

## *ವಿದೇಶೀ ಹಣಹೂಡಿಕೆ ಮತ್ತು ವಸಾಹತುಗಳಿಗಾಗಿ ಅಂತರರಾಷ್ಟ್ರೀಯ ಸ್ಪರ್ಧೆಯ ಯುಗ*

ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಮೂರನೆಯ ಹಂತವು 1860ರ ಸುಮಾರಿನಿಂದ ಪ್ರಾರಂಭವಾಯಿತು. ಎಂದು ಹೇಳಬಹುದು. ಜಗತ್ತಿನ ಆರ್ಥಿಕ ಪರಿಸ್ಥಿತಿಯಲ್ಲಿ ಉಂಟಾದ ಮೂರು ಪ್ರಧಾನ ವ್ಯತ್ಯಾಸಗಳ ಫಲ ಅದು. ಪಶ್ಚಿಮ ಯೂರೋಪಿನ ಇತರ ರಾಷ್ಟ್ರಗಳು ಮತ್ತು ಉತ್ತರ ಅಮೆರಿಕಾ ಕ್ರಮೇಣ ಕೈಗಾರಿಕೀಕರಣವನ್ನು ಸಾಧಿಸಿದುವು. ಇದರಿಂದಾಗಿ ಬ್ರಿಟನ್ನಿನ ಉತ್ಪಾದಕ ಹಾಗೂ ಆರ್ಥಿಕ ಪಾರಮ್ಯ

ಕೊನೆಗೊಂಡಿತು. ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ಅಮೆರಿಕಾ ಸಂಯುಕ್ತ ಸಂಸ್ಥಾನ, ರಷ್ಯಾ, ನಂತರ ಜಪಾನ್ ಸಮರ್ಥವಾದ ಕೈಗಾರಿಕೆಗಳನ್ನು ಸ್ಥಾಪಿಸಿದುವು. ತಮ್ಮ ಉತ್ಪಾದನೆಗಳಿಗೆ ವಿದೇಶೀ ಮಾರುಕಟ್ಟೆಗಳನ್ನು ಹುಡುಕತೊಡಗಿದುವು. ಮಾರುಕಟ್ಟೆ ಗಳಿಗಾಗಿ ವಿಶ್ವದಾದ್ಯಂತ ಸ್ಪರ್ಧೆ ಈಗ ಪ್ರಾರಂಭವಾಯಿತು.

ಎರಡನೆಯದಾಗಿ, ವೈಜ್ಞಾನಿಕ ಜ್ಞಾನವನ್ನು ಕೈಗಾರಿಕೆಗೆ ಅನ್ವಯಿಸಿದುದರ ಫಲವಾಗಿ 19 ನೆಯ ಶತಮಾನದ ಕೊನೆಯ ಭಾಗದಲ್ಲಿ ಅನೇಕ ಪ್ರಧಾನವಾದ ತಾಂತ್ರಿಕ ಬೆಳವಣಿಗೆಗಳು ಸಂಭವಿಸಿದುವು. ಆಧುನಿಕ ಉಕ್ಕು ಕೈಗಾರಿಕೆ ಈ ಅವಧಿಯ ಉತ್ಪಾದನೆ. 1850 ರಲ್ಲಿ ಪ್ರಪಂಚದ ಒಟ್ಟು ಉಕ್ಕು ಉತ್ಪಾದನೆ ಕೇವಲ 80,000 ಟನ್ನುಗಳು. 1870 ರಲ್ಲಿ ಕೂಡ ಅದು 7,00,000 ಟನ್ನುಗಳಿಗಿಂತ ಕಡಮೆಯಿತ್ತು. 1900 ರಲ್ಲಿ ಅದು 28 ದಶಲಕ್ಷ ಟನ್ನುಗಳಿಗೆ ಏರಿತ್ತು. ಆಧುನಿಕ ರಾಸಾಯನಿಕ ಕೈಗಾರಿಕೆಗಳು, ಅಂತರ್ದಹನ ಯಂತ್ರಗಳಿಗೆ ಇಂಧನವಾಗಿ ಪೆಟ್ರೋಲಿಯಂ ಬಳಕೆ, ಕೈಗಾರಿಕಾ ಉದ್ದೇಶಗಳಿಗಾಗಿ ವಿದ್ಯುಚ್ಛಕ್ತಿಯ ಬಳಕೆ-ಇವೂ ಹೆಚ್ಚಾದುವು. ಇದರರ್ಥ ಇಷ್ಟೆ. ಒಂದು ಕಡೆ ಕೈಗಾರಿಕೋದ್ಯಮದ ಅಭಿವೃದ್ಧಿ ವೇಗತರವಾಯಿತು; ಇನ್ನೊಂದು ಕಡೆ ಈ ನೂತನ ಕೈಗಾರಿಕೆಗಳು ಭಾರೀ ಪ್ರಮಾಣದ ಕಚ್ಚಾವಸ್ತುಗಳನ್ನು ಬಳಸ ತೊಡಗಿದುವು. ಅವಿಲ್ಲದೆ ಇಡೀ ಕೈಗಾರಿಕೋದ್ಯಮದ ರಚನೆಯೇ ಸ್ಥಗಿತವಾಗಿ ಬಿಡುತ್ತಿತ್ತು. ಹೀಗೆ ವೇಗವಾಗಿ ಬೆಳೆದ ಕೈಗಾರಿಕೋದ್ಯಮದಿಂದಾಗಿ ನಗರಗಳ ಜನತೆಯಿಂದ ಆಹಾರದ ಬೇಡಿಕೆಯೂ ಹೆಚ್ಚಾಗುತ್ತಾ ಹೋಯಿತು. ನೂತನ ಹಾಗೂ ಖಚಿತವಾದ ಕಚ್ಚಾವಸ್ತುಗಳ ಮೂಲಗಳನ್ನೂ ಆಹಾರವಸ್ತುಗಳನ್ನೂ ಅನ್ವೇಷಿಸುವ ಕೆಲಸ ವ್ಯಾಪಕವಾಗಿ ನಡೆಯಿತು. ಅನ್ವೇಷಣೆ ಇಡೀ ಜಗತ್ತನ್ನೇ ವ್ಯಾಪಿಸಿತ್ತು. ಆಫ್ರಿಕಾ, ಏಷ್ಯಾ ಮತ್ತು ಲ್ಯಾಟಿನ್ ಅಮೆರಿಕಾಗಳಲ್ಲಿನ ಕೃಷಿ ಹಾಗೂ ಖನಿಜ ಕಚ್ಚಾವಸ್ತುಗಳ ಸಮೃದ್ಧ ಸಂಪನ್ಮೂಲಗಳ ಸಂಪೂರ್ಣ ನಿಯಂತ್ರಣ ಪಡೆಯಲು ರಾಷ್ಟ್ರಗಳು ಪರಸ್ಪರ ಸೆಣಸಿದುವು.

ಮೂರನೆಯದಾಗಿ, ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿ ಹಾಗೂ ವಸಾಹತು ಗಳು ಮತ್ತು ವಸಾಹತು ಮಾರುಕಟ್ಟಗಳ ಅಧಿಕತರ ಸುಲಿಗೆ ಅಭಿವೃದ್ಧಿ ಹೊಂದಿದ ಬಂಡವಾಳಶಾಹೀ ರಾಷ್ಟ್ರಗಳಿಗೆ ಮಿತಿಯಿಲ್ಲದ ಪ್ರಮಾಣದಲ್ಲಿ ಧನ ಒದಗಿಸಿಕೊಟ್ಟಿತು. ಸಾಲದುದಕ್ಕ ಈ ಅಪಾರವಾದ ಹಣವು ಕೆಲವೇ ಕೆಲವು ಬ್ಯಾಂಕುಗಳಲ್ಲಿ, ಕಾರ್ಪೊರೇಷನ್ನುಗಳಲ್ಲಿ ಮತ್ತು ಸಂಘ ಸಂಸ್ಥೆಗಳಲ್ಲಿ ಹೆಚ್ಚು ಹೆಚ್ಚಾಗಿ ಸೇರಿತು. ಈ ಬಂಡವಾಳವನ್ನು ಹೂಡಲು ದಾರಿಗಳನ್ನು ಹುಡುಕಬೇಕಾಯಿತು. ಸಂಬಂಧಪಟ್ಟ ರಾಷ್ಟ್ರಗಳಲ್ಲೇ ಹಣವನ್ನು ವೆಚ್ಚಮಾಡಲು ಬೇಕಾದಷ್ಟು ಅವಕಾಶಗಳಿದ್ದುವು. ಏಕೆಂದರ, ಅಲ್ಲಿ ಕೂಡ ಬಹುಸಂಖ್ಯಾತ ಜನತೆ ಬಡತನದಲ್ಲಿಯೇ ಜೀವಿಸುತ್ತಿದ್ದರು. ಆದರ ಈ ದೇಶಗಳಲ್ಲಿನ ಕಾರ್ಮಿಕ ವರ್ಗ ವ್ಯವಸ್ಥಿತವಾಗತೊಡಗಿತ್ತು. ಯಾವುದೇ ರೀತಿಯಲ್ಲಿ ಭಾರೀ ಪ್ರಮಾಣದ ಹಣ ಹೂಡಿಕೆಯಿಂದ ಆ ವರ್ಗದ ಬೇಡಿಕ ಹೆಚ್ಚಿ ಪ್ರಸ್ತುತ ಇದ್ದ ಕೈಗಾರಿಕೆಗಳಲ್ಲಿ ಕೂಡ ಲಾಭಾಂಶ ಕಡಮೆಯಾಗುವ ಸಂಭವ ಇತ್ತು. ಇದು ಒಂದು ಕಡೆಯಾದರೆ, ಇನ್ನೊಂದು ಕಡೆ ಹಣವನ್ನು ಖನಿಜ ಹಾಗೂ ಕೃಷಿಗೆ ಸಂಬಂಧಿಸಿದ ಕಚ್ಚಾ ವಸ್ತುಗಳ ಉತ್ಪಾದನೆಗೆಂದು ವಿದೇಶಗಳಲ್ಲಿ ಹೂಡಿದ್ದೇ ಆದರೆ,

ಒಂದು ಕಲ್ಲಿನಿಂದ ಹಲವು ಹಕ್ಕಿಗಳನ್ನು ಹೊಡದಂತಾಗುತ್ತಿತ್ತು. ಅಧಿಕ ಬಂಡವಾಳಕ್ಕೆ ಹೊರದಾರಿಯೊಂದು ಕಂಡದ್ದೇ ಅಲ್ಲದೆ, ಈ ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಕೂಲಿಯ ದರ ಕಡಮೆಯಾಗಿದ್ದುದರಿಂದ ಅಧಿಕ ಲಾಭ ಖಚಿತವಾಗಿರುತ್ತಿತ್ತು. ಆದರೂ ತಮ್ಮ ದೇಶದಲ್ಲಿನ ಕೈಗಾರಿಕೆಗಳಿಗೆ ಅಗತ್ಯವಾದ ಕಚ್ಚಾ ಪದಾರ್ಥಗಳ ಸರಬರಾಜು ಮಾತ್ರ ಮುಂದುವರೆಯುತ್ತಿತ್ತು. ಆದ್ದರಿಂದ ಮತ್ತೆ ಅಭಿವೃದ್ಧಿ ಹೊಂದಿದ ಬಂಡವಾಳಗಾರ ರಾಷ್ಟ್ರಗಳು ತಮ್ಮಲ್ಲಿನ ಅಧಿಕ ಸಂಪತ್ತನ್ನು ಸರಿಯಾಗಿ ಹೂಡಲು ಸೂಕ್ತವಾದ ಪ್ರದೇಶಗಳನ್ನು ಹುಡುಕತೊಡಗಿದುವು.

ಈ ಹಂತದಲ್ಲಿ ಚಕ್ರವರ್ತಿ ಪ್ರಭುತ್ವ ಮತ್ತು ಸಾಮ್ರಾಜ್ಯ ವಿಸ್ತರಣೆಗಳು ಅಂತಹ ರಾಷ್ಟ್ರಗಳಲ್ಲಿ ಒಂದು ಮುಖ್ಯವಾದ ಭಾವರೂಪದ ಮತ್ತು ರಾಜಕೀಯವಾದ ಉದ್ದೇಶವನ್ನೂ ನೇರವೇರಿಸಿದುವು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ದಲ್ಲಿ, ಹೆಚ್ಚು ಕಡಮೆ ಪಶ್ಚಿಮ ಯೂರೋಪಿನ ಎಲ್ಲ ರಾಷ್ಟ್ರಗಳಲ್ಲಿಯೂ ಅಮೆರಿಕಾದಲ್ಲಿಯೂ ಜನತೆಯಲ್ಲಿ ಪ್ರಜಾಪ್ರಭುತ್ವದ ಭಾವನೆಗಳು ಬಲವಾಗಿ ಕಾಣಿಸಿಕೊಂಡುದನ್ನು ಗಮನಿಸಬಹುದು. ಈ ರಾಷ್ಟ್ರಗಳ ಆಳುವ ಮೇಲು ವರ್ಗದ ಜನರಿಗೆ, ಕಾರ್ಮಿಕರು ಮತ್ತು ಕೃಷಿಕವರ್ಗದವರು ತಮ್ಮದೇ ಹಿತಾಸಕ್ತಿಗಳನ್ನು ಉತ್ತಮಪಡಿಸಿಕೊಳ್ಳುವುದಕ್ಕಾಗಿ ಈ ಹಕ್ಕನ್ನು ಉಪಯೋಗಿಸಿಕೊಳ್ಳಬಹುದೆಂದೂ, ಸಮಾಜದಲ್ಲಿ ಮೇಲು ವರ್ಗದವರು ರಾಜಕೀಯ ಮತ್ತು ಆರ್ಥಿಕ ಪ್ರಭುತ್ವ ನಡೆಸುವ ದಿನಗಳು ಕೊನೆಗೊಳ್ಳುತ್ತಾ ಬಂದುವೆಂದೂ ಭೀತಿಯುಂಟಾಯಿತು. ಸಾಮ್ರಾಜ್ಯಶಾಹಿ ಇದಕ್ಕೆ ಒಂದು ದಾರಿ ತೋರಿಸಿತು. ಬಾಹ್ಯ ವೈಭವದ ಕಡೆಗೆ ಜನತೆಯ ಗಮನವನ್ನು ಆಕರ್ಷಿಸಿ, ಅತಿರೇಕದ ರಾಷ್ಟ್ರೀಯತೆಯ ರಾಷ್ಟ್ರಪ್ರೇಮದ, ಆತ್ಮಪ್ರಶಂಸೆಯ ಭಾವನೆಗಳನ್ನು ಅವರಲ್ಲಿ ಹರಡಿ, ಆ ಮೂಲಕ ಮತ್ತೊಮ್ಮೆ ತಮ್ಮ ಸಮಾಜಗಳನ್ನು ಬಂಡವಾಳಶಾಹಿಯ ಸುತ್ತ ಅಂಟಿಕೊಳ್ಳುವಂತೆ ಮಾಡಲು ಅದನ್ನು ಉಪಯೋಗಿಸಿಕೊಳ್ಳಬಹುದಾಯಿತು. "ಬ್ರಿಟಿಷ್ ಸಾಮ್ರಾಜ್ಯದಲ್ಲಿ ಎಂದೂ ಸೂರ್ಯಾಸ್ತವಿಲ್ಲ" ಎಂಬ ಘೋಷಣೆಯನ್ನು ಬ್ರಿಟಿಷರು ಕೂಗಿದರು. ವಾಸ್ತವ ಜೀವನದಲ್ಲಿ ಸೂರ್ಯನ ಬೆಳಕು ಎಂದೂ ಕಾಣದಿದ್ದ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿದ್ದ ಕಾರ್ಮಿಕ ಜನರಲ್ಲಿ ತೃಪ್ತಿಯ ಮತ್ತು ಹೆಮ್ಮೆಯ ಭಾವನೆಯನ್ನು ಹರಡಲು ಈ ಘೋಷಣೆಯನ್ನು ಅವರು ಬಳಸಿದರು. "ಜಗತ್ತಿನಲ್ಲಿ ಒಂದು ನೆಲೆ" ಎಂಬ ಬೇಡಿಕೆಯಿಂದ ಜರ್ಮನರು ಚೇತರಿಸಿಕೊಂಡರು. ಫ್ರೆಂಚರಿಗೆ "ನಾಗರಿಕಗೊಳಿ ಸುವ ಪವಿತ್ರಕಾರ್ಯ"ದಲ್ಲಿ ತಮ್ಮದೇ ಆದ ಶ್ರದ್ಧೆ ಇತ್ತು. ಜಪಾನು ಬಹುಬೇಗ ತಾನು ವಿಶ್ವದ ರಕ್ಷಕ ಎಂದು ಹೇಳಿಕೊಂಡಿತು. ರಷ್ಯವು ಸ್ಲಾವ್ ಜನರ ರಕ್ಷಕನೆಂದುಕೊಂಡಿತು. ಉತ್ತರ ಅಮೆರಿಕನ್ನರು ಲ್ಯಾಟಿನ್ ಅಮೆರಿಕವು ತಮ್ಮ ಧರ್ಮದರ್ಶಿತ್ವದಲ್ಲಿದೆ, ಅಲ್ಲಿ ತಮ್ಮ "ದೈವದತ್ತ ಕಾರ್ಯವಿದೆ" ಎಂದು ಹೇಳಿ ಕೊಂಡರು. ಅವರು ಇನ್ನೇನು, ಇಪ್ಪತ್ತನೆಯ ಶತಮಾನವು "ಅಮೆರಿಕದ ಶತಮಾನ" ಎಂದು ನಂಬಲು ತೊಡಗುವವರಿದ್ದರು. ಸಾಮ್ರಾಜ್ಯ ವಿಸ್ತರಣೆ, ಚಕ್ರವರ್ತಿ ಪ್ರಭುತ್ವ, ರಾಷ್ಟ್ರೀಯ ಮಹತ್ವ ಮುಂತಾದ ಭಾವನೆಗಳು ಮೂಡಿ, ಜನರು ತಮಗೆ ಮತ ಚಲಾಯಿಸಲು ಹಕ್ಕು ಬರುವ ಮೊದಲು ಯಾವ ಬಗೆಯ ಸರಕಾರಗಳಿದ್ದುವೋ

ಅವೇ ಬಗೆಯ ಸರಕಾರಗಳಿಗೆ ಮತ ಹಾಕಿ ಅಧಿಕಾರಕ್ಕೇರಿಸುವಂತೆ ಮಾಡಿದವು. ಈ ಎಲ್ಲ ಹೊಸ ಅಂಶಗಳು ಮತ್ತು ಶಕ್ತಿಗಳಿಂದಾಗಿ ಸಂಬಂಧಪಟ್ಟ ಸಾರ್ವಭೌಮ ರಾಷ್ಟ್ರವು ಮಾರುಕಟ್ಟೆಗಳು, ಕಚ್ಚಾವಸ್ತುಗಳು ಮತ್ತು ಹಣ ಹೂಡಿಕೆಗಳ ಮೇಲ ಸಂಪೂರ್ಣ ಪ್ರಭುತ್ವ ಚಲಾಯಿಸಿ, ವಸಾಹತುಗಳ, ಅರೆ-ವಸಾಹತುಗಳ ಬೇಟೆ ಮಾಡಲಾರಂಭಿಸಿದುವು. ವಸಾಹತು ಮತ್ತು ಅರೆ-ವಸಾಹತುಗಳಿಗಾಗಿ ಸ್ಪರ್ಧೆ ಹೆಚ್ಚುಹೆಚ್ಚು ಉತ್ಕಟವಾಯಿತು, ಕಠಿಯಾಯಿತು. ವಸಾಹತುಶಾಹಿಗೆ ನೂತನ ಪ್ರದೇಶಗಳು ಸಿಕ್ಕುವುದು ವಿರಳವಾಗುತ್ತ ಹೋದಹಾಗೆ ಈ ಉತ್ಕಟತೆ ಹೆಚ್ಚಿತು. ವಿಶ್ವವನ್ನು ವಸಾಹತುಗಳಾಗಿ ಒಡಯಲು ನಡೆಯುತ್ತಿದ್ದ ಹೋರಾಟ ಈಗ ವಸಾಹತು ಪ್ರಪಂಚವನ್ನೇ ಪುನರ್ವಿಭಾಗಿಸುವುದಕ್ಕಾಗಿ ನಡೆಸುವ ಹೋರಾಟವಾಗಿ ಪರಿವರ್ತಿತವಾಯಿತು.

ಇಡೀ ಯುಗವು ಬ್ರಿಟನ್ನಿಗೆ ಬಹುವಾದ ಪ್ರಯಾಸ ಪರಿಶ್ರಮಗಳ ಯುಗವಾಗಿತ್ತು. ಏಕೆಂದರೆ, ಅಭಿವೃದ್ಧ ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಹೊಸಬರು ವಾಣಿಜ್ಯ ಮತ್ತು ಹಣಹೂಡಿಕೆಯ ಕ್ಷೇತ್ರಗಳಲ್ಲಿನ ಅದರ ಪ್ರಧಾನ ಸ್ಥಾನದ ಮೇಲೆ ಆಕ್ರಮಣ ನಡೆಸಿದರು. ಈಗ ಅದು ತನಗಿದ್ದ ಸಾಮ್ರಾಜ್ಯದ ಮೇಲಿನ ಹತೋಟಿಯನ್ನು ಸಮಗ್ರಗೊಳಿಸಿಕೊಳ್ಳಲು, ಇನ್ನೂ ವಿಸ್ತರಿಸಲು ತೀವ್ರವಾದ ಪ್ರಯತ್ನವನ್ನು ಆರಂಭಿಸಿತು.

ಸಾಮ್ರಾಜ್ಯಶಾಹೀ ನಿಯಂತ್ರಣದ ಹೊಸ ರೂಪ ಬ್ರಿಟಿಷ್ ಆಳಿಕೆಯ ಮೂರನೆ ಹಂತದಲ್ಲಿ ಕಂಡುಬರುತ್ತದೆ. ವೈಸ್‌ರಾಯಿಗಳಾದ ಲಿಟ್ಟನ್ (Lytton), ಡಫರಿನ್ (Dufferin), ಲ್ಯಾನ್ಸ್‌ಡೌನ್ (Lansdowne) ಮತ್ತು ಇವರೆಲ್ಲರಿಗಿಂತ ಮಿಗಿಲಾಗಿ ಕರ್ಜನ್ (Curzon) ಇವರ ಪ್ರಗತಿ ವಿರೋಧಿ ಆಡಳಿತಗಳು ಇದಕ್ಕೆ ಸಾಕ್ಷ್ಯ ನೀಡುತ್ತವೆ. ಜಗತ್ತಿನಾದ್ಯಂತ ತೀವ್ರವಾದ ಸ್ಪರ್ಧೆಯನ್ನು ಎದುರಿಸಿದ ಬ್ರಿಟನ್ ತನ್ನ ಬಂಡವಾಳಕ್ಕೆ ಉತ್ತಮ ಆಶ್ರಯ ಭಾರತದಲ್ಲಿ ದೊರೆಯಬಹುದೆಂದು ಆಶಿಸಿತು.

1850ರ ನಂತರ ಬ್ರಿಟನ್ ರೈಲ್ವೆಯಲ್ಲೂ ಭಾರತ ಸರಕಾರಕ್ಕೆ ಸಾಲ ಕೊಡುವುದರ ಮೂಲಕವೂ ತನ್ನ ಬಂಡವಾಳವನ್ನು ಹಾಕಿತು. ಟೀ ಪ್ಲಾಂಟೇಷನ್ನು, ಕಲ್ಲಿದ್ದಲು ಗಣಿಗಳು, ಸೆಣಬು ಕಾರ್ಖಾನೆಗಳು, ನೌಕೆಗಳು, ವಾಣಿಜ್ಯ ಹಾಗೂ ಬ್ಯಾಂಕಿಂಗ್ ಕ್ಷೇತ್ರಗಳಲ್ಲೂ ಅಲ್ಪಪ್ರಮಾಣದ ಬಂಡವಾಳವನ್ನು ಹೂಡಲಾಯಿತು. ಈ ಬಂಡವಾಳವನ್ನು ಭದ್ರಪಡಿಸಲು ಭಾರತದ ಮೇಲ ಬ್ರಿಟಿಷ್ ಆಡಳಿತವನ್ನು ಇನ್ನೂ ಬಿಗಿಪಡಿಸಬೇಕಾಗಿತ್ತು. ಇದನ್ನು ಸಮಕಾಲೀನ ಬ್ರಿಟಿಷ್ ಅಧಿಕಾರಿಗಳು ಮತ್ತು ರಾಜನೀತಿಜ್ಞರು ಪ್ರಾಮಾಣಿಕವಾಗಿ ಗಮನಕ್ಕೆ ತಂದುಕೊಂಡರು. ಓಗಾಗಿ ಬೊಂಬಾಯಿಯ ಗವರ್ನರ್ ರಿಚರ್ಡ್ ಟಂಪಲ್ (Richard Temple) ಈ ರೀತಿ ಬರೆದನು: "ಬ್ರಿಟನ್ ಭಾರತವನ್ನು ತನ್ನ ವಶದಲ್ಲೇ ಇಟ್ಟುಕೊಳ್ಳಬೇಕು.... ಇದಕ್ಕ ಕಾರಣವಿಷ್ಟೇ: ಬ್ರಿಟನ್ನಿನ ಅಧಿಕಾರ ಈ ದೇಶದ ಮೇಲ ಸಿರಂತರವಾಗಿರುತ್ತದೆ ಎಂಬ ಭರವಸೆಯ ಮೇಲೆ ಬಂಡವಾಳವನ್ನು ಹೇರಳವಾಗಿ ಹೂಡಲಾಗಿದೆ."

ಬ್ರಿಟನ್ನಿನ ಸಾಮ್ರಾಜ್ಯ ನಿರ್ಮಾಣದ ಯೋಜನೆಯಲ್ಲಿ ಭಾರತ ಮತ್ತೊಂದು ಮುಖ್ಯವಾದ ಪಾತ್ರ ವಹಿಸಿತು. ಆಫ್ರಿಕಾ ಮತ್ತು ಏಷ್ಯಾಗಳಲ್ಲಿ ಬ್ರಿಟಿಷ್ ಅಧಿಕಾರದ

ವಿಸ್ತರಣೆ ಮತ್ತು ಸಮಗ್ರತೆಗಳ ಸಾಧನೆಗೆ ಭಾರತೀಯ ಸೈನ್ಯವೇ ಮುಖ್ಯ ಉಪಕರಣವಾಗಿತ್ತು. ಬ್ರಿಟಿಷ್ ಸಾಮ್ರಾಜ್ಯದ ರಕ್ಷಣೆಗೆ ವಿಶ್ವ ಮಟ್ಟದಲ್ಲಿ ಬ್ರಿಟಿಷ್ ನೌಕಾದಳದೊಂದಿಗೆ ಅದೂ ಮುಖ್ಯ ಸಾಧನವಾಗಿ ವರ್ತಿಸಿತ್ತು. ಇದರ ಪರಿಣಾಮ ವಾಗಿ 1904 ರ ಹೊತ್ತಿಗೆ ಭಾರತದ ವರಮಾನದಲ್ಲಿ ಶೇ. 52 ರಷ್ಟನ್ನು ಬಳಸಿ ಕೊಳ್ಳುತ್ತಿದ್ದ ದುಬಾರಿ ಖಾಯಂ ಸೈನ್ಯ ಸಿದ್ಧವಾಗಿತ್ತು.

ಭಾರತೀಯರನ್ನು ಸ್ವಯಮಾಡಳಿತದಲ್ಲಿ ತರಪೇತು ಮಾಡುವ ಮಾತುಗಳೆಲ್ಲ ಈ ಯುಗದಲ್ಲಿ ಅಳಿದುಹೋದುವು. 1918 ರಲ್ಲಿ ಭಾರತ ರಾಷ್ಟ್ರೀಯತಾ ಚಳುವಳಿಯ ಒತ್ತಡದಿಂದಾಗಿ ಮತ್ತೆ ಮೇಲೇಳುವವರೆಗೂ ಅದರ ಸೊಲ್ಲೇ ಇರಲಿಲ್ಲ. ಅದಕ್ಕೆ ಬದಲು ಬ್ರಿಟಿಷ್ ಆಳಿಕೆಯ ಗುರಿ ಶಾಶ್ವತವಾದ "ವಿಶ್ವಸ್ಥತೆ" ಅಥವಾ ಭಾರತದ ಮೇಲೆ "ಪ್ರಜಾಹಿತ್ಯಷಿ ಪ್ರಭುತ್ವ" (Benevolent despotism) ಎಂದು ಘೋಷಿಸಲಾಯಿತು. ಭೌಗೋಳಿಕ, ಜನಾಂಗಿಕ, ಐತಿಹಾಸಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳಿಂದಾಗಿ ಭಾರತದ ಜನತೆ ಸ್ವಯಮಾಡಳಿತಕ್ಕೆ ಶಾಶ್ವತವಾಗಿ ಅನರ್ಹರಾಗಿದ್ದಾರೆ ಎಂದು ಹೇಳಲಾಗುತ್ತಿತ್ತು. ಆದ್ದರಿಂದ ಬ್ರಿಟಿಷರು ಅವರಿಗೆ ಮುಂದೆ ಅನೇಕ ಶತಮಾನಗಳ ಕಾಲ "ನಾಗರಿಕ" ಹಾಗೂ ಪ್ರಜಾಹಿತ್ಯಷಿ ಆಡಳಿತವನ್ನು ಒದಗಿಸಬೇಕಾಗಿದೆ ಎಂದು ಹೇಳುತ್ತಿದ್ದರು.

ಆ ಮೊದಲ ಕಾಲಾವಧಿಯಲ್ಲೇ ಪ್ರಾರಂಭವಾಗಿದ್ದ ಭಾರತದ ಪರಿವರ್ತನೆ ಈ ಮೂರನೆಯ ಹಂತದಲ್ಲೂ ಮುಂದುವರಿಯಿತು. ಬ್ರಿಟಿಷ್ ಆಡಳಿತವು ಭಾರತದ ಪ್ರತಿಯೊಂದು ಸಂದಿಗೊಂದಿಗೂ ಭಾರತೀಯ ಸಮಾಜಕ್ಕೂ ತಲುಪುವುದು ಇನ್ನೂ ಹೆಚ್ಚು ಮುಖ್ಯವಾಗಿತ್ತು. ಭಾರತದ ಪ್ರತಿಯೊಂದು ಬಂದರು, ಪ್ರತಿಯೊಂದು ಪಟ್ಟಣ ಮತ್ತು ಹಳ್ಳಿ ಬ್ರಿಟನ್ನಿನ ಲಾಭಕ್ಕಾಗಿ ವಿಶ್ವದ ಅರ್ಥವ್ಯವಸ್ಥೆಯೊಂದಿಗೆ ಸಂಪರ್ಕ ಪಡೆಯುವುದೂ ಮುಖ್ಯವೆಂದು ಭಾವಿಸಲಾಯಿತು. ಆದರೆ ಮೊದಲಿನಂತೆ, ಈ ಪರಿವರ್ತನೆ ಈಗಲೂ ತೀರಾ ಮಿತವಾಗಿ ಅಥವಾ ಭಾಗಶಃ ಆಗಿ ಉಳಿಯಿತು. ಇದಕ್ಕೆ ಭಾರತದಲ್ಲಿನ ಬ್ರಿಟಿಷ್ ವಸಾಹತುಶಾಹಿಯ ಸ್ವರೂಪದಲ್ಲಿಯೇ ಅಂತರ್ಗತ ವಾಗಿದ್ದ ಕಾರಣಗಳಿದ್ದುವು.

ಮೊದಲನೆಯದಾಗಿ, ಆಡಳಿತ, ಆರ್ಥಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳ ವೆಚ್ಚವನ್ನು ಭಾರತೀಯ ವರಮಾನದಿಂದಲೇ ನಿರ್ವಹಿಸಬೇಕಾಗಿದ್ದುದು. ಮೊದಲು ಬ್ರಿಟಿಷ್ ವಿಜಯದ ವೆಚ್ಚವನ್ನು ಭಾರತದ ವರಮಾನದಿಂದ ನಿರ್ವಹಿಸಿದ ಹಾಗೆಯೇ ಇದೂ ಆಗಬೇಕಾಗಿತ್ತು. ಆದರೆ ಭಾರತ ಬಡದೇಶ, ವಸಾಹತುಶಾಹಿಯು ಅದನ್ನು ಇನ್ನೂ ಬಡವಾಗಿಸಿತ್ತು. ಆರ್ಥಿಕವಾಗಿ ಅಭಿವೃದ್ಧಿಯಾಗುತ್ತಿದ್ದ ರಾಷ್ಟ್ರವು ಅಧಿಕಾಧಿಕ ವರಮಾನವನ್ನು ಒದಗಿಸಬಹುದು. ಭಾರತದಲ್ಲಾದರೆ ಅಧಿಕ ವರಮಾನವು ಅಧಿಕ ತೆರಿಗೆ ವಿಧಿಸುವುದರಿಂದಲೇ ಬರಬೇಕಾಗಿತ್ತು. ಈ ಕ್ರಿಯೆಗೆ ಸ್ಪಷ್ಟವಾದ ರಾಜಕೀಯ ಮಿತಿಗಳಿದ್ದುವು. ಸ್ಥಗಿತ ಅರ್ಥವ್ಯವಸ್ಥೆಯಲ್ಲಿ ಅಧಿಕ ತೆರಿಗೆಯು ತನ್ನೊಂದಿಗೆ ಜನರ ಪ್ರತಿಭಟನೆಯ ದಂಡವನ್ನೂ ಅನಿವಾರ್ಯವಾಗಿ ತಂದೇ ತರುತ್ತದೆ. ಅಲ್ಲದೆ ಭಾರತವು ಏಕಕಾಲದಲ್ಲಿ ದುಬಾರಿಯಾದ ಮಿಲಿಟರಿ ಹಾಗೂ ಆಡಳಿತ ವ್ಯವಸ್ಥೆಗಳಿಗೂ, ಶಿಕ್ಷಣ, ನೀರಾವರಿ, ಸಾರಿಗೆ ವ್ಯವಸ್ಥೆ ಮತ್ತು ಆಧುನಿಕ ಕೈಗಾರಿಕೆಗಳು

ಇವುಗಳ ಅಭಿವೃದ್ಧಿಗೂ ಹಣ ಒದಗಿಸುವ ಸ್ಥಿತಿಯಲ್ಲಿರಲಿಲ್ಲ. ಇದು ವಾಸ್ತವವಾಗಿ ಭಾರತದಲ್ಲಿ ವಸಾಹತುಶಾಹಿಯ ವಿರೋಧಾಭಾಸಗಳಲ್ಲಿ ಒಂದು. ವಸಾಹತು ಸುಲಿಗೆಯನ್ನು ಇನ್ನೂ ವಿಸ್ತರಿಸಬೇಕಾದರೆ ಸ್ವಲ್ಪಮಟ್ಟಿಗೆ ಆಂತರಿಕ ಅಭಿವೃದ್ಧಿ ಅಗತ್ಯವಾಗಿತ್ತು. ಆದರೆ ಆ ಸುಲಿಗೆಯ ಕ್ರಿಯೆಯೇ ಭಾರತವನ್ನು ಹಿಂದುಳಿದ ದೇಶವಾಗಿ ಉಳಿಸಿ ಮುಂದಿನ ವಿಸ್ತರಣೆ ಅಸಾಧ್ಯವಾಗುವಂತೆ ಮಾಡಿತ್ತು.

ಎರಡನೆಯದಾಗಿ, ಆಧುನೀಕರಣದ ಪರಿಣಾಮಗಳನ್ನು ಗಮನಿಸಿದ ಅಧಿಕಾರಿಗಳು, ಅದನ್ನು ತಡೆಯತೊಡಗಿದರು. ಅತ್ಯಲ್ಪ ಪ್ರಮಾಣದ ಬದಲಾವಣೆಯೂ, ಪ್ರಭುತ್ವವನ್ನೂ ಭಾರತದಲ್ಲಿ ಅದು ಸುಲಿಗೆ ಮಾಡುತ್ತಿರುವ ತಂತ್ರವನ್ನೂ ವಿರೋಧಿಸತೊಡಗಿದ ಸಾಮಾಜಿಕ ಶಕ್ತಿಗಳನ್ನು ಉತ್ಪತ್ತಿ ಮಾಡುತ್ತಿತ್ತು. ಇದರಿಂದ ವಸಾಹತು ಅಧಿಕಾರಿಗಳು ಈಗ ಇನ್ನೊಂದು ಇಕ್ಕಟ್ಟಿಗೆ ಸಿಕ್ಕಿಕೊಂಡರು. ಭಾರತವನ್ನು ಸಾಕಷ್ಟು ವರಮಾನ ಕೊಡುವ ವಸಾಹತನ್ನಾಗಿ ಮಾಡಲು ಅಗತ್ಯವಾಗಿದ್ದ ಪರಿವರ್ತನೆಗಳೇ ಅದೇ ಸಮಯದಲ್ಲಿ ವಸಾಹತುಶಾಹಿಯ ವಿರುದ್ಧವಾಗಿ ಹೋರಾಟವನ್ನು ವ್ಯವಸ್ಥೆಗೊಳಿಸುತ್ತಿದ್ದ ಸಾಮಾಜಿಕ ಶಕ್ತಿಗಳನ್ನು ಉತ್ಪತ್ತಿಮಾಡಿ ವಸಾಹತು ಆಳಿಕೆಗೇ ಗಂಡಾಂತರವನ್ನು ತಂದೊಡ್ಡಿತು.

## ಭಾರತದಲ್ಲಿ ವಸಾಹತು ಪದ್ಧತಿಯ ಮೂಲ ಲಕ್ಷಣಗಳು

ಬ್ರಿಟಿಷ್ ಆಳಿಕೆಯ ಫಲವಾಗಿ ಇಪ್ಪತ್ತನೆಯ ಶತಮಾನದ ಕೊನೆಯ ವೇಳೆಗೆ ಭಾರತವು ಒಂದು ಪಕ್ಕಾ ವಸಾಹತಾಗಿ ಪರಿವರ್ತನೆಗೊಂಡಿತು. ಅದು ಬ್ರಿಟಿಷ್ ಉತ್ಪನ್ನ ವಸ್ತುಗಳಿಗೆ ಪ್ರಮುಖವಾದ ಮಾರುಕಟ್ಟೆ, ಕಚ್ಚಾವಸ್ತುಗಳು ಮತ್ತು ಆಹಾರಪದಾರ್ಥಗಳ ಮುಖ್ಯ ಮೂಲ, ಮತ್ತು ಬ್ರಿಟಿಷ್ ಬಂಡವಾಳವನ್ನು ಹೂಡಲು ಮುಖ್ಯವಾದೊಂದು ಕ್ಷೇತ್ರ ಆಗಿತ್ತು. ಪ್ರಭುತ್ವದ ಪ್ರಯೋಜನಗಳಿಗಾಗಿ ಇಲ್ಲಿನ ಕೃಷಿಗೆ ವಿಪರೀತವಾಗಿ ತೆರಿಗೆ ಹಾಕಲಾಗುತ್ತಿತ್ತು. ಬಹುಮಟ್ಟಿನ ಸಾರಿಗೆ ವ್ಯವಸ್ಥೆ, ಆಧುನಿಕ ಗಣಿಗಳು ಮತ್ತು ಕೈಗಾರಿಕೆಗಳು, ವಿದೇಶ ವ್ಯಾಪಾರ, ಕರಾವಳಿ ಮತ್ತು ಅಂತರ ರಾಷ್ಟ್ರೀಯ ಹಡಗು ವ್ಯಾಪಾರ, ಬ್ಯಾಂಕುಗಳು ಮತ್ತು ವಿಮಾ ಕಂಪನಿಗಳು-ಎಲ್ಲವೂ ವಿದೇಶೀ ನಿಯಂತ್ರಣಕ್ಕೆ ಒಳಪಟ್ಟಿದ್ದುವು. ಸಾವಿರಾರು ಸಂಖ್ಯೆಯ ಮಧ್ಯಮವರ್ಗದ ಇಂಗ್ಲಿಷ್ ಜನರಿಗೆ ಭಾರತವು ವೃತ್ತಿಯನ್ನು ಒದಗಿಸಿತ್ತು. ಇಂಗ್ಲಿಷ್ ಜನರ ವೇತನಗಳನ್ನು ಕೊಡುವುದಕ್ಕಾಗಿ ಅದರ ಒಟ್ಟು ವರಮಾನದ ಸುಮಾರು ಮೂರನೇ ಒಂದು ಭಾಗ ವೆಚ್ಚವಾಗುತ್ತಿತ್ತು. ದೂರದಲ್ಲಿದ್ದ ಬ್ರಿಟಿಷ್ ಸಾಮ್ರಾಜ್ಯವನ್ನು ರಕ್ಷಿಸಲು, ಪ್ರಾಚ್ಯ, ದಕ್ಷಿಣ-ಪ್ರಾಚ್ಯ, ಮಧ್ಯ ಹಾಗೂ ಪಶ್ಚಿಮ-ಏಷ್ಯಾ ಮತ್ತು ಉತ್ತರ, ಪೂರ್ವ ಮತ್ತು ದಕ್ಷಿಣ ಆಫ್ರಿಕಾಗಳಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದ ಹಿತರಕ್ಷಣೆ ಮಾಡಲು ಮತ್ತು ಅದನ್ನು ಅಭಿವೃದ್ಧಿಪಡಿಸಲು ಭಾರತೀಯ ಸೈನ್ಯ ಪ್ರಧಾನ ಉಪಕರಣವಾಗಿ ವರ್ತಿಸುತ್ತಿತ್ತು.

ಇವೆಲ್ಲಕ್ಕಿಂತ ಹೆಚ್ಚಾಗಿ ಭಾರತೀಯ ಅರ್ಥವ್ಯವಸ್ಥೆ ಮತ್ತು ಸಾಮಾಜಿಕ ಬೆಳವಣಿಗೆಗಳು ಸಂಪೂರ್ಣವಾಗಿ ಬ್ರಿಟಿಷ್ ಅರ್ಥವ್ಯವಸ್ಥೆ ಮತ್ತು ಸಾಮಾಜಿಕ ಬೆಳವಣಿಗೆಗಳಿಗೆ ಅಧೀನವಾದುವು. ಭಾರತದ ಅರ್ಥವ್ಯವಸ್ಥೆಯೂ ಜಗತ್ತಿನ

ಬಂಡವಾಳಶಾಹೀ ಅರ್ಥವ್ಯವಸ್ಥೆಯೊಂದಿಗೆ, ಒಂದು ಅಧೀನ ನಿಲುವಿನಲ್ಲಿ ಸೇರಿಕೊಂಡಿತ್ತು, ವಿಚಿತ್ರವಾದ ಒಂದು ಅಂತರರಾಷ್ಟ್ರೀಯ ಕಾರ್ಯವಿಭಜನೆಯನ್ನು ಹೊಂದಿತ್ತು. 1760 ರ ನಂತರ ಬ್ರಿಟನ್ನು ಜಗತ್ತಿನಲ್ಲಿ ಪ್ರಮುಖ ಅಭಿವೃದ್ಧ ಬಂಡವಾಳಶಾಹೀ ರಾಷ್ಟ್ರ ಎಂದು ವಿಕಾಸಗೊಳ್ಳುತ್ತಿರುವ ವರ್ಷಗಳಲ್ಲೇ ಭಾರತವು ಆಗಲೇ ಅನಭಿವೃದ್ಧಿವಾಗಿದ್ದುದು, 'ಪ್ರಮುಖ'ವಾದ, ಹಿಂದುಳಿದ ವಸಾಹತು ನಾಡಾಗಿ ಪರಿವರ್ತಿತವಾಗುತ್ತಿತ್ತು. ವಾಸ್ತವವಾಗಿ ಕಾರ್ಯಕಾರಣ ಸಂಬಂಧದಿಂದ ಹೇಳುವುದಾದರೆ ಎರಡೂ ಪ್ರಕ್ರಿಯೆಗಳು ಒಂದನ್ನೊಂದು ಅವಲಂಬಿಸಿದ್ದುವು. ವಾಣಿಜ್ಯ, ಹಣಕಾಸು ಮತ್ತು ತಾಂತ್ರಿಕ ಜ್ಞಾನಗಳನ್ನು ಒಳಗೊಂಡ ಬ್ರಿಟನ್ನು ಮತ್ತು ಭಾರತಗಳ ನಡುವಣ ಆರ್ಥಿಕ ಸಂಬಂಧಗಳ ಇಡೀ ರಚನೆಯೇ ಭಾರತದ ವಸಾಹತು ಅಧೀನತ್ವವನ್ನೂ, ಅನಭಿವೃದ್ಧಿಯನ್ನೂ ಒಂದೇ ಸಮನೆ ಹೆಚ್ಚು ಮಾಡುತ್ತಲೇ ಹೋಯಿತು.

## ಬ್ರಿಟಿಷ್ ಆಳ್ವಿಕೆಯ ಒತ್ತಡ

ಬ್ರಿಟಿಷ್ ಆಡಳಿತ ಮತ್ತು ಭಾರತದ ಮೇಲಿನ ಅದರ ಪ್ರಭಾವ ಪ್ರಬಲವಾದ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯ ಉದಯಕ್ಕೆ ಕಾರಣವಾಯಿತಲ್ಲದೆ ಭಾರತದ ಜನತೆ ಒಂದು ರಾಷ್ಟ್ರವಾಗಿ ಒಂದುಗೂಡುವಲ್ಲಿ ನೆರವಾಯಿತು. ಭಾರತದಲ್ಲಿನ ಬ್ರಿಟಿಷ್ ಆಡಳಿತಗಾರರು ಅನುಸರಿಸಿದ ಸ್ವಾರ್ಥನೀತಿಗಳು ಭಾರತದ ಬೇಸಾಯ, ಕೃಷಿಕ ವರ್ಗ, ಅಲ್ಲಿನ ವಾಣಿಜ್ಯ ಮತ್ತು ಕೈಗಾರಿಕೆಗಳ ಮೇಲೆ ಬಹುವಾಗಿ ದುಷ್ಪರಿಣಾಮ ಬೀರಿದುವು. ಸಾಂಸ್ಕೃತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಕೂಡ ಆ ನೀತಿಗಳ ಪ್ರಭಾವ ಬಹಳ ಪ್ರಬಲವಾಗಿತ್ತು.

ಬ್ರಿಟಿಷರು ಭಾರತದ ಕೃಷಿ ಅರ್ಥವ್ಯವಸ್ಥೆಯಲ್ಲಿ ಅತಿಮುಖ್ಯವಾದ ಒಂದು ಪರಿವರ್ತನೆಯನ್ನು ಉಂಟುಮಾಡಿದರು. ಅದು ಭಾರತದ ಬೇಸಾಯ ಪದ್ಧತಿಯನ್ನು ಉತ್ತಮಪಡಿಸಿ, ಉತ್ಪಾದನೆಯನ್ನು ಹೆಚ್ಚು ಮಾಡಿ, ಅದರಲ್ಲಿ ತೊಡಗಿದ್ದ ಭಾರತೀಯರ ಯೋಗಕ್ಷೇಮ ಮತ್ತು ಅಭಿವೃದ್ಧಿಯನ್ನು ಅಧಿಕಗೊಳಿಸುವ ಉದ್ದೇಶದಿಂದಲ್ಲ, ಆದರೆ ವ್ಯವಸಾಯದಲ್ಲಿ ಅಧಿಕವಾಗಿ ಬಂದುದನ್ನೆಲ್ಲ ಭೂಕಂದಾಯದ ರೂಪದಲ್ಲಿ ವಸೂಲು ಮಾಡುವುದಕ್ಕೆ ಮತ್ತು ಒಂದು ವಸಾಹತು ಅರ್ಥವ್ಯವಸ್ಥೆಯಲ್ಲಿ ತನಗೆ ವಹಿಸಿದ ಪಾತ್ರವನ್ನು ಅದು ನಿರ್ವಹಿಸುವಂತೆ ಮಾಡುವುದಕ್ಕೆ. ಹಳೆಯ ಸಂಬಂಧಗಳು ಮತ್ತು ಸಂಸ್ಥೆಗಳು ನಾಶವಾದುವು, ಹೊಸತಾದುವು ಹುಟ್ಟಿದುವು. ಆದರೆ ಈ ನೂತನ ಲಕ್ಷಣಗಳು ಆಧುನೀಕರಣದತ್ತ ನಡೆದ ಅಥವಾ ಸರಿಯಾದ ದಿಕ್ಕಿನಲ್ಲಿ ನಡೆದ ಬದಲಾವಣೆಯನ್ನು ಸೂಚಿಸಲಿಲ್ಲ.

ಬ್ರಿಟಿಷರು ಎರಡು ಮುಖ್ಯವಾದ ಭೂಕಂದಾಯ ಹಾಗೂ ಭೂಹಿಡುವಳಿ ಪದ್ಧತಿಗಳನ್ನು ಜಾರಿಗೆ ತಂದರು. ಒಂದು ಜಮೀನ್ದಾರೀ ಪದ್ಧತಿ (ಮುಂದೆ ಇದೇ ಜಮೀನ್ದಾರೀ ಪದ್ಧತಿಯ ಸುಧಾರಿತ ರೂಪವನ್ನೇ ಉತ್ತರ ಭಾರತದಲ್ಲಿ ಮಹಲ್‌ವಾರೀ ಪದ್ಧತಿ ಎಂದು ಜಾರಿಗೆ ತರಲಾಯಿತು); ಇನ್ನೊಂದು ರಯತ್ವಾರೀ ಪದ್ಧತಿ (Ryotwari system).

ಜಮೀನ್ದಾರೀ ಪದ್ಧತಿಯಲ್ಲಿ ಹಳೆಯ ತೆರಿಗೆದಾರ ರೈತರು, ಕಂದಾಯ ವಸೂಲು ಮಾಡುವವರು ಮತ್ತು ಜಮೀನ್ದಾರರು ಇವರನ್ನು ಖಾಸಗೀ ಭೂಮಿಯ ಕೆಲವು ಹಕ್ಕುಗಳನ್ನು ಹೊಂದಿದ ಜಮೀನ್ದಾರರಾಗಿ ಪರಿವರ್ತಿಸಲಾಯಿತು. ಅವರು ಗುತ್ತಿಗೆದಾರರಿಂದ ಪಡೆದಂತಹ ಗುತ್ತಿಗೆ (ಗೇಣಿ)ಯನ್ನು ಹಾಗೆಯೇ ಸರಕಾರಕ್ಕೆ ವಹಿಸಿಬಿಡಬೇಕಾಗಿತ್ತು. ಅದೇ ಸಮಯದಲ್ಲಿ ಅವರೇ ಗ್ರಾಮಾಂತರ ಸಮಾಜಗಳ ಸಂಪೂರ್ಣ ಒಡೆಯರಾದರು. ರೈತರನ್ನು ಸ್ವ-ಇಚ್ಛೆಯಿಂದ ಗೇಣಿ ಹಿಡಿದಿರುವ ಗೇಣಿದಾರರನ್ನಾಗಿ ಪರಿವರ್ತಿಸಲಾಯಿತು.

ರಯತ್ವಾರೀ ಪದ್ಧತಿಯಲ್ಲಿ ಸರಕಾರವು ಕಾನೂನಿನ ಪ್ರಕಾರ ತಾವು ಕೃಷಿ ಮಾಡುತ್ತಿದ್ದ ಭೂಮಿಯ ಮಾಲೀಕರೆಂದು ಮನ್ನಣೆ ಗಳಿಸಿದ್ದ ವೈಯಕ್ತಿಕ ಬೇಸಾಯಗಾರರಿಂದ ಕಂದಾಯವನ್ನು ನೇರವಾಗಿ ತಾನೇ ವಸೂಲು ಮಾಡುತ್ತಿತ್ತು. ಆದರೆ ಅವರ ಮಾಲೀಕತ್ವದ ಹಕ್ಕು ಮಿತವಾಗಿತ್ತು. ಏಕೆಂದರೆ ಮೊದಲನೆಯದಾಗಿ, ಭೂಕಂದಾಯ ನೀಡಿಕೆಯ ತಾತ್ಕಾಲಿಕ ಲಕ್ಷಣದಿಂದಾಗಿ, ಅಲ್ಲದೆ ಕೇಳುತ್ತಿದ್ದ ಅತ್ಯಧಿಕ ದರದ ಕಂದಾಯದಿಂದಾಗಿ. ಅನೇಕ ವೇಳೆ ಕೊಡಲು ಸಾಧ್ಯವೇ ಇಲ್ಲದಷ್ಟು ಅಧಿಕವಾಗಿರುತ್ತಿತ್ತು ಅದು. ಕೊಡುವುದು ತಪ್ಪಿತೆಂದರೆ ಭೂಮಿಯನ್ನು ಕಿತ್ತು ಕೊಳ್ಳುವುದೇ ಕ್ರಮವಾಗಿತ್ತು.

ವ್ಯವಸ್ಥೆಯ ಹೆಸರು ಏನೇ ಇರಲಿ, ಕಷ್ಟ ಅನುಭವಿಸುತ್ತಿದ್ದವರು ರೈತರು, ಬೇಸಾಯಗಾರರು. ಬಹಳ ದುಬಾರಿಯಾದ ಗೇಣಿಯನ್ನು ಅವರು ತರಬೇಕಾಗಿ ದ್ದುದಲ್ಲದೆ 'ಸ್ವ-ಇಚ್ಛೆಯ ಗೇಣಿದಾರ'ರಾಗಿರುತ್ತಿದ್ದರು. ಅನೇಕ ರೀತಿಯ ಅಕ್ರಮ ಸಾಲಗಳನ್ನು, ಸುಂಕಗಳನ್ನು ತೆರಬೇಕೆಂದು ಅವರನ್ನು ಬಲಾತ್ಕರಿಸಲಾಗುತ್ತಿತ್ತು. ಅನೇಕ ವೇಳೆ ಅವರು ಬಲಾತ್ಕಾರದ ದುಡಿಮೆ ಮಾಡಬೇಕಾಗಿತ್ತು.

ಎಲ್ಲಕ್ಕಿಂತ ಮುಖ್ಯವಾದುದೇನೆಂದರೆ, ಕಂದಾಯ ಪದ್ಧತಿಯ ಹೆಸರು ಅಥವಾ ಸ್ವರೂಪ ಯಾವುದೇ ಇದ್ದರೂ, ಪರಿಣಾಮದಲ್ಲಿ ಸರಕಾರವು ಭೂಮಾಲೀಕಸ್ಥಾನ ವನ್ನು ಆಕ್ರಮಿಸಿತು. ಬಹಳ ಕಾಲವಾದ ಮೇಲೆ, ಅಂದರೆ 1901 ರ ನಂತರ, ಈ ಕಂದಾಯ ದರವನ್ನು ಇಳಿಸಲಾಯಿತು. ಆದರೆ ಆ ವೇಳೆಗೆ ಕೃಷಿ ಅರ್ಥವ್ಯವಸ್ಥೆ ಸಂಪೂರ್ಣವಾಗಿ ನಾಶವಾಗಿತ್ತು. ಭೂಮಾಲೀಕರು, ಸಾಲ ಕೊಡುವವರು, ವ್ಯಾಪಾರಿಗಳು, ಹಳ್ಳಿಗಳನ್ನು ಪ್ರವೇಶಿಸಿ ಸಾಕಷ್ಟು ಸುಲಿಗೆ ಮಾಡಿದ್ದರಿಂದ ಕಂದಾಯದ ದರ ಕಡಮೆ ಮಾಡಿದುದು ರೈತರಿಗೆ ಯಾವ ರೀತಿಯ ನೆರವೂ ನೀಡುವಂತಿರಲಿಲ್ಲ.

ಭಾರತೀಯ ಕೃಷಿ ಅರ್ಥವ್ಯವಸ್ಥೆಗೆ ಸಂಬಂಧಿಸಿದಂತೆ ಬ್ರಿಟಿಷ್ ನೀತಿಗಳಿಂದ ಉಂಟಾದ ಅತಿದೊಡ್ಡ ಕೆಡುಕೆಂದರೆ ಸಾಲ ಕೊಡುವವನ ಉದಯ. ಅವನು ರಾಷ್ಟ್ರದಲ್ಲಿ ತುಂಬ ಪ್ರಭಾವಶಾಲಿಯಾದ ಆರ್ಥಿಕ ಮತ್ತು ರಾಜಕೀಯ ಶಕ್ತಿ ಯಾದನು. ಅತ್ಯಂತ ಹೆಚ್ಚಿನ ತೆರಿಗೆದರ ಹಾಗೂ ಅದರ ವಸೂಲಿಯ ಅತ್ಯಂತ ಕಟ್ಟುನಿಟ್ಟಾದ ರೀತಿ ಇವುಗಳಿಂದಾಗಿ ರೈತನು ಅನೇಕವೇಳೆ ತೆರಿಗೆ ಕೊಡಲು ಹಣವನ್ನು ಸಾಲ ಮಾಡಬೇಕಾಗಿತ್ತು. ಅದಕ್ಕೆ ಅತಿ ದುಬಾರಿಯಾದ ಬಡ್ಡಿ ಕೊಡುವುದರ ಜೊತೆಗೆ ಬೆಳೆ ಸಿದ್ಧವಾದಾಗ ಅದನ್ನು ಬಹಳ ಅಗ್ಗವಾದ ಬೆಲೆಗೆ ಮಾರುವಂತೆ ಬಲಾತ್ಕಾರ ಪಡಿಸಲಾಗುತ್ತಿತ್ತು. ರೈತನ ತೀವ್ರ ಬಡತನ ಮತ್ತೆ ಸಾಲಕ್ಕಾಗಿ ಸಾಹುಕಾರನ ಬಳಿಗೆ

ಹೋಗುವಂತೆ ಮಾಡುತ್ತಿತ್ತು. ಬರಗಾಲ, ಪ್ರವಾಹ, ಕ್ಷಾಮ ಮುಂತಾದ ಸಮಯ ಗಳಲ್ಲಿ ಸಾಹುಕಾರನ ಆಶ್ರಯ ಪಡೆಯದೆ ಅವನಿಗೆ ಬೇರೆ ಮಾರ್ಗವಿರಲಿಲ್ಲ. ಹೊಸತಾಗಿ ಜಾರಿಗೆ ಬಂದ ನ್ಯಾಯಾಂಗ ವ್ಯವಸ್ಥೆಯನ್ನೂ ಆಡಳಿತ ಯಂತ್ರವನ್ನೂ ತನಗೆ ತಕ್ಕಂತೆ ಬಳಸಿಕೊಳ್ಳುವಲ್ಲಿ ಈ ಸಾಹುಕಾರರು ಪ್ರವೀಣರಾಗಿದ್ದರು. ವಾಸ್ತವವಾಗಿ ಈ ವಿಚಾರದಲ್ಲಿ ಸರಕಾರವು ಅವನಿಗೆ ಸಹಾಯವನ್ನೇ ಮಾಡುತ್ತಿತ್ತು. ಏಕೆಂದರೆ ಅವನಿಲ್ಲದಿದ್ದರೆ, ಕಂದಾಯವನ್ನು ಕಾಲಕ್ಕೆ ಸರಿಯಾಗಿ ಸಂಗ್ರಹಿಸು ವುದಾಗಲಿ, ಕೃಷಿ ವಸ್ತುಗಳನ್ನು ರಫ್ತುಮಾಡಲು ಬಂದರುಗಳಿಗೆ ತರುವುದಕ್ಕಾಗಲಿ ಸಾಧ್ಯವೇ ಇರಲಿಲ್ಲ. ಬೆಳೆದ ವಾಣಿಜ್ಯಬೆಳೆಸುಗಳನ್ನು ಮೊದಲನೆಯ ಸಾರಿ ರಫ್ತಿಗಾಗಿ ಸಂಗ್ರಹಿಸಿ ತರುವುದಕ್ಕೂ ಕೂಡ ಸರಕಾರವು ಸಾಹುಕಾರನನ್ನು ಅವಲಂಬಿಸಿತು. ಅವನು ರೈತನಿಗೆ ಹಣವನ್ನು ನೀಡಿ ಅವನನ್ನು ಒಪ್ಪಿಸುತ್ತಿದ್ದನು. ಆದ್ದರಿಂದ ಕಾಲಕ್ರಮದಲ್ಲಿ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಸಾಹುಕಾರನು ಪ್ರಧಾನವಾದ ಸ್ಥಾನವನ್ನು ವಹಿಸಲು ಪ್ರಾರಂಭಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಜಮೀನ್ದಾರೀ, ರಯತ್ವಾರೀ ಪದ್ಧತಿಗಳೆರಡರಲ್ಲಿಯೂ ಭೂಮಿಯು ಭಾರೀ ಪ್ರಮಾಣದಲ್ಲಿ ವಾಸ್ತವವಾಗಿ ಕೃಷಿಮಾಡುತ್ತಿದ್ದ ರೈತರ ಕೈಗಳಿಂದ ಸಾಹುಕಾರರು, ವರ್ತಕರು, ಅಧಿಕಾರಿಗಳು ಮತ್ತು ಶ್ರೀಮಂತ ರೈತರ ಕೈಗೆ ವರ್ಗಾವಣೆ ಹೊಂದಿತು. ಇದರಿಂದ ರಾಷ್ಟ್ರಾದ್ಯಂತ ಭೂಸ್ವಾಮ್ಯವು (Landlordism) ಭೂಮಿಗೆ ಸಂಬಂಧಿಸಿದ ವಿಚಾರಗಳಲ್ಲಿ ಪ್ರಧಾನವಾದ ಲಕ್ಷಣವಾಗಿ ಪರಿಣಮಿಸಿತು.

ಮಧ್ಯವರ್ತಿಗಳಾಗಿ ಗುತ್ತಿಗೆ ಪಡೆಯುವವರೂ ಹೆಚ್ಚಿದರು. ಇದನ್ನು ಉಪಮಾನ್ಯ ಪದ್ಧತಿ (Sub-infeudation) ಎನ್ನುತ್ತಾರೆ. ಹೊಸ ಭೂಮಾಲೀಕರು ಮತ್ತು ಜಮೀನ್ದಾರರಿಗೆ, ನೆಲದ ಬಗೆಗೆ ನೇರವಾದ ಸಂಪರ್ಕ ಹಳೆಯ ಜಮೀನ್ದಾರರಿಗಿದ್ದಷ್ಟು ಇರಲಿಲ್ಲ. ಗೇಣಿ ವಸೂಲಿಗಾಗಿ ಒಂದು ಸಮರ್ಪಕ ವ್ಯವಸ್ಥೆ ಮಾಡುವುದಕ್ಕೆ ಬದಲಾಗಿ ಅವರು ತಮ್ಮ ಹಕ್ಕುಗಳನ್ನು ಮಧ್ಯವರ್ತಿಗಳಾಗಿ ಗೇಣಿ ವಸೂಲು ಮಾಡುವವರಿಗೆ ಬಾಡಿಗೆಗೆ ಕೊಟ್ಟರು.

ಹೀಗೆ ಬ್ರಿಟಿಷ್ ಆಳಿಕೆಯ ಪ್ರಭಾವವು ಸಂಪೂರ್ಣ ಹಿನ್ನಡೆಯ ರೂಪದ, ಮುನ್ನಡೆಗೆ ಕಡು ವಿರೋಧಿಯಾದ ಕೃಷಿ ಸಂಬಂಧಗಳನ್ನುಳ್ಳ ಒಂದು ನೂತನ ಪರಿಸ್ಥಿತಿಯ ವಿಕಾಸಕ್ಕೆ ದಾರಿ ಮಾಡಿತು. ನೂತನ ವ್ಯವಸ್ಥೆ ಬೇಸಾಯದ ಸುಧಾರಣೆಗೆ ಕಿಂಚಿತ್ತೂ ಸಹಾಯಮಾಡಲಿಲ್ಲ. ಸಮಾಜದ ಮೇಲು ಮತ್ತು ಕೆಳಗಿನ ಸ್ತರಗಳೆರಡ ರಲ್ಲೂ ಹೊಸದಾದ ಸಾಮಾಜಿಕ ವರ್ಗಗಳು ಕಾಣಿಸಿಕೊಂಡುವು. ಭೂಮಾಲೀಕರು, ಮಧ್ಯವರ್ತಿಗಳು ಮತ್ತು ಸಾಹುಕಾರರು ಮೇಲು ತುದಿಯಲ್ಲಿ ಕಾಣಿಸಿಕೊಂಡರೆ, "ಸ್ವ-ಇಚ್ಛೆಯ ಗೇಣಿದಾರ"ರು, ಪಂಚಿಕೊಂಡು ಬೆಳೆಯುವವರು, ಮತ್ತು ಕೃಷಿ ಕೂಲಿಗಾರ ಇವರು ಕೆಳಮಟ್ಟದಲ್ಲಿ ಹುಟ್ಟಿಕೊಂಡರು. ಹೊಸ ವ್ಯವಸ್ಥೆ ಬಂಡವಾಳ ಶಾಹಿಯೂ ಆಗಿರಲಿಲ್ಲ, ಊಳಿಗಮಾನ್ಯ ಪದ್ಧತಿಯೂ ಆಗಿರಲಿಲ್ಲ. ಹಳೆಯ ಮೊಗಲ್ ವ್ಯವಸ್ಥೆಯ ಮುಂದುವರಿಕೆ ಅಂತೂ ಅಲ್ಲವೇ ಅಲ್ಲ. ವಸಾಹತುಶಾಹಿಯು ವಿಕಾಸಗೊಳಿಸಿದ ಹೊಸ ವ್ಯವಸ್ಥೆಯದು. ಅದು ರೂಪದಲ್ಲಿ ಅರ್ಧಊಳಿಗಮಾನ್ಯವೂ ಅರ್ಧ-ವಸಾಹತುಶಾಹಿಯೂ ಆಗಿತ್ತು.

ಇದರಿಂದ ಬಂದ ಅತ್ಯಂತ ದುರದೃಷ್ಟಕರವಾದ ಫಲಿತಾಂಶವೆಂದರೆ, ಕೃಷಿ ಅಭ್ಯಾಸಗಳನ್ನು ಆಧುನಿಕ ವಿಧಾನಗಳಿಂದ ಉತ್ತಮಪಡಿಸಲು, ಹೆಚ್ಚಿನ ಉತ್ಪಾದನೆ ಸಾಧಿಸಲು ಏನೇನೂ ಪ್ರಯತ್ನ ನಡೆಯದೆ ಹೋದದ್ದು. ಕೃಷಿ ಪದ್ಧತಿಗಳು ಹಾಗೆಯೇ ಉಳಿದುವು. ಉತ್ತಮ ರೀತಿಯ ಉಪಕರಣಗಳು, ಉತ್ತಮ ಬೀಜಗಳು ಮತ್ತು ವಿವಿಧ ರೀತಿಯ ರಾಸಾಯನಿಕ ಗೊಬ್ಬರಗಳ ಬಳಕೆ-ಇವುಗಳನ್ನು ಕಾರ್ಯಗತ ಗೊಳಿಸಲೇ ಇಲ್ಲ. ದಾರಿದ್ರ್ಯ ಅಡಸಿದ ರೈತನಿಗೆ ತನ್ನ ಬೇಸಾಯವನ್ನು ಉತ್ತಮ ಪಡಿಸಲು ಬೇಕಾದ ಹಣವಿರಲಿಲ್ಲ; ಭೂಮಾಲೀಕರಿಗೆ ಅದನ್ನು ಮಾಡಲು ಆಸಕ್ತಿಯಿರಲಿಲ್ಲ; ವಸಾಹತು ಸರಕಾರವಾದರೋ ಪಕ್ಕಾ ಭೂಮಾಲೀಕನಂತೆ ವರ್ತಿಸುತ್ತಿತ್ತು. ಭಾರೀ ಪ್ರಮಾಣದ ತೆರಿಗೆ ವಸೂಲು ಮಾಡುವುದು ಬಿಟ್ಟರೆ ಬೇರೆ ಯಾವುದರಲ್ಲೂ ಅದಕ್ಕೆ ಆಸ್ಥೆಯಿರಲಿಲ್ಲ. ಅದು ಭಾರತೀಯ ವ್ಯವಸಾಯ ಪದ್ಧತಿಯನ್ನು ಆಧುನೀಕರಿಸುವ, ಉತ್ತಮಪಡಿಸುವ ಗೋಜಿಗೇ ಹೋಗಲಿಲ್ಲ.

ಇದರ ಫಲ, ಕೃಷಿ ಉತ್ಪಾದನೆಯಲ್ಲಿ ದೀರ್ಘಕಾಲದ ಸ್ಥಗಿತತೆ. ಕೃಷಿಗೆ ಸಂಬಂಧಿಸಿದ ಅಂಕಿ ಅಂಶಗಳು 20 ನೆಯ ಶತಮಾನಕ್ಕೆ ಸಂಬಂಧಿಸಿದಂತೆ ದೊರಕುತ್ತವೆ. ಇಲ್ಲಿಯೂ ಚಿತ್ರ ಮಂಕಾಗಿಯೇ ಇದೆ. 1901 ರಿಂದ 1939 ರ ನಡುವೆ ಒಟ್ಟು ಕೃಷಿ ಉತ್ಪಾದನೆ ತಲಾ ಶೇಕಡಾ 14 ರಷ್ಟು ಇಳಿಯಿತು. ಆಹಾರಧಾನ್ಯಗಳ ಉತ್ಪಾದನೆಯ ಇಳಿಕೆ ತಲಾ ಶೇಕಡಾ 24 ಕ್ಕಿಂತ ಹೆಚ್ಚಿತ್ತು. ಈ ಇಳಿತಾಯದ ಬಹುಭಾಗ ಸಂಭವಿಸಿದುದು 1918 ರ ಅನಂತರ.

## ವಾಣಿಜ್ಯ ಮತ್ತು ಕೈಗಾರಿಕೆಗಳ ಮೇಲೆ ಒತ್ತಡ

ಬ್ರಿಟಿಷ್ ಇಂಡಿಯನ್ ಸರಕಾರವು ವ್ಯವಸಾಯದಂತೆಯೇ ವಾಣಿಜ್ಯ ಮತ್ತು ಕೈಗಾರಿಕೆಗಳನ್ನೂ ಬ್ರಿಟಿಷ್ ಹಿತಾಸಕ್ತಿಗಳ ಅಭಿವೃದ್ಧಿಯ ದೃಷ್ಟಿಯಿಂದಲೇ ನೋಡಿತು. ವಸಾಹತುಶಾಹಿಯ ಒತ್ತಡಕ್ಕೆ ಸಿಕ್ಕಿ ಭಾರತ ಒಂದು ವಾಣಿಜ್ಯ ಕ್ರಾಂತಿಯನ್ನು ಕಂಡುದೇನೋ ನಿಜ. ಅದರಿಂದಾಗಿ ಭಾರತ ಜಗತ್ತಿನ ಮಾರುಕಟ್ಟೆಯೊಂದಿಗೆ ಸೇರಿಕೊಂಡಿತು. ಆದರ ಅಲ್ಲಿಯೂ ಅದರದ್ದು ಅಧೀನಸ್ಥಾನವೇ ಆಗಬೇಕಾಯಿತು. ವಿದೇಶ ವಾಣಿಜ್ಯ ಅಧಿಕಾಧಿಕವಾಯಿತು. ವಿಶೇಷತಃ 1858 ರ ನಂತರ. 1834 ರಲ್ಲಿ 15 ಕೋಟಿಯಿದ್ದದ್ದು, 1858 ರಲ್ಲಿ 60 ಕೋಟಿಯಾಗಿ, 1899ರಲ್ಲಿ 213 ಕೋಟಿಯಾಗಿತ್ತು. 1924 ರಲ್ಲಿ 758 ಕೋಟಿ ರೂಪಾಯಿಗಳ ಶಿಖರವನ್ನು ಮುಟ್ಟಿತು. ಆದರೆ ಈ ಬೆಳವಣಿಗೆ ಭಾರತೀಯ ಅರ್ಥವ್ಯವಸ್ಥೆಯಲ್ಲಿ ಯಾವುದೇ ಒಂದು ಇತ್ಯಾತ್ಮಕ ಲಕ್ಷಣ ತೋರಿಸಲಿಲ್ಲ, ಅಥವಾ ಭಾರತದ ಜನರ ಯೋಗಕ್ಷೇಮಕ್ಕೆ ಅದರಿಂದ ಯಾವ ಕೊಡುಗೆಯೂ ಬರಲಿಲ್ಲ. ಏಕೆಂದರೆ ಭಾರತೀಯ ಅರ್ಥವ್ಯವಸ್ಥೆ ಯನ್ನು ವಸಾಹತುಶಾಹಿಯಾಗಿ, ವಿಶ್ವ ಬಂಡವಾಳಶಾಹಿಯನ್ನು ಅವಲಂಬಿಸಿರುವಂತೆ ಮಾಡುವುದಕ್ಕೆ ಮುಖ್ಯ ಉಪಕರಣವಾಗಿ ಉಪಯೋಗಿಸಿಕೊಳ್ಳಲಾಯಿತು. ಭಾರತದ ವಿದೇಶ ವ್ಯಾಪಾರವು ಸಹಜವಾಗಿರಲಿಲ್ಲ, ಸಮಸ್ಥಿತಿಯಲ್ಲೂ ಇರಲಿಲ್ಲ. ಅದನ್ನು ಪ್ರಭುತ್ವಕ್ಕೆ ಸೇವೆ ಸಲ್ಲಿಸಲು ತಕ್ಕಂತೆ ಕೃತಕವಾಗಿ ಉಬ್ಬಿಸಲಾಯಿತು. ವಿದೇಶೀ ವ್ಯಾಪಾರದ ರಚನೆ ಮತ್ತು ಲಕ್ಷಣ ಸಮತೂಕವಿಲ್ಲದ್ದಾಗಿತ್ತು. ಬ್ರಿಟನ್ನಿನಿಂದ

ಉತ್ಪಾದಿತ ವಸ್ತುಗಳು ಪೂಳೆಯಾಗಿ ನುಗ್ಗಿ ಬರುತ್ತಿದ್ದುವು, ಬ್ರಿಟನ್ನು ಮತ್ತು ಇತರ ಅನ್ಯರಾಷ್ಟ್ರಗಳಿಗೆ ಅಗತ್ಯವಾದ ಕಚ್ಚಾವಸ್ತುಗಳನ್ನು ಉತ್ಪಾದಿಸಿ ರಫ್ತು ಮಾಡಲೇ ಬೇಕಾಗಿತ್ತು.

ಕೊನೆಯದಾದರೂ ಅಮುಖ್ಯವಲ್ಲದ ಮತ್ತೊಂದು ವಿಚಾರ ವಿದೇಶ ವ್ಯಾಪಾರವು ವರಮಾನದ ಆಂತರಿಕ ಹಂಚಿಕೆಯ ಮೇಲೆ ಅತ್ಯಂತ ತೀವ್ರವಾದ ದುಷ್ಪರಿಣಾಮ ಮಾಡಿತು. ಬ್ರಿಟಿಷ್ ನೀತಿಯು ಸಂಪನ್ಮೂಲಗಳನ್ನು ರೈತರಿಂದ ಮತ್ತು ಕಸಬುದಾರ ರಿಂದ ವರ್ತಕರಿಗೆ, ಸಾಹುಕಾರರಿಗೆ, ವಿದೇಶೀ ಬಂಡವಾಳಗಾರರಿಗೆ ವರ್ಗಾಯಿಸಲು ಮಾತ್ರ ಸಹಾಯ ಮಾಡಿತು.

ಈ ಯುಗದಲ್ಲಿ ಕಂಡುಬರುವ ಭಾರತದ ವಿದೇಶ ವ್ಯಾಪಾರದ ಮುಖ್ಯವಾದ ಒಂದು ಲಕ್ಷಣವೆಂದರೆ ಆಮದಿಗಿಂತ ಒಂದೇ ಸಮನ ಹೆಚ್ಚುತ್ತಿದ್ದ ರಫ್ತು. ಆದರೆ ಅದು ಭಾರತದ ಅನುಕೂಲಕ್ಕಾಗಿ ಎಂದು ನಾವು ಭಾವಿಸಬಾರದು. ಪರಿಸ್ಥಿತಿ ಈ ರಫ್ತುಗಳಿಂದ ಭಾರತವು ಮುಂದೆ ಏನನ್ನಾದರೂ ಹಿಂದಕ್ಕೆ ಪಡೆಯುವಂಥ ದಾಗಿರಲಿಲ್ಲ. ಬದಲಿಗೆ ಅದು ಭಾರತದ ಹಣ ಮತ್ತು ಸಂಪನ್ಮೂಲಗಳು ಹೊರಕ್ಕೆ ಕೊಚ್ಚಿಕೊಂಡು ಹೋಗುತ್ತಿದ್ದುದನ್ನು ತೋರಿಸುತ್ತಿತ್ತು. ಈ ವಿದೇಶ ವಾಣಿಜ್ಯದ ಬಹುಭಾಗ ವಿದೇಶೀಯರ ಕೈಯಲ್ಲೇ ಇತ್ತು, ಅದೆಲ್ಲವೂ ವಿದೇಶೀ ಹಡಗು ಗಳಲ್ಲಿಯೇ ನಡೆಯುತ್ತಿದ್ದಿತು ಎಂಬುದನ್ನು ನಾವು ಮರೆಯಬಾರದು.

ಬ್ರಿಟಿಷ್ ಆಳಿಕೆಯಿಂದುಂಟಾದ ಅತ್ಯಂತ ಮುಖ್ಯವಾದ ಪರಿಣಾಮಗಳಲ್ಲಿ ಒಂದು ಅಧಿಕಾಧಿಕವಾಗಿ ನಗರಗಳಲ್ಲೂ ಗ್ರಾಮಗಳಲ್ಲೂ ಇದ್ದ ಗೃಹಕೈಗಾರಿಕಗಳ ಅವನತಿ ಮತ್ತು ವಿನಾಶ ಏಷ್ಯಾ ಮತ್ತು ಯೂರೋಪುಗಳಲ್ಲಿ ತನಗಿದ್ದ ಮಾರುಕಟ್ಟೆಯನ್ನು ಭಾರತ ಕಳೆದುಕೊಂಡಿತು ಮಾತ್ರವಲ್ಲ, ಭಾರತದ ಮಾರುಕಟ್ಟೆಗೂ ಅಗ್ಗವಾದ, ಯಂತ್ರ ನಿರ್ಮಿತವಾದ ವಸ್ತುಗಳನ್ನು ಭಾರೀ ಪ್ರಮಾಣದಲ್ಲಿ ಹರಿಯಿಸಲಾಯಿತು. ಅದರ ಹಿಂದೆಯೇ ಸ್ಥಳೀಯ ಕೈಕಸಬುಗಳು ಕ್ಷಯಿಸಿದುವು.

ಸ್ಥಳೀಯ ಕೈಗಾರಿಕೆಗಳ ನಾಶ ಮತ್ತು ಇತರ ಕ್ಷೇತ್ರಗಳಲ್ಲಿ ವೃತ್ತಿಗಳ ಅಭಾವದಿಂದಾಗಿ ಲಕ್ಷಾಂತರ ಕಸಬುದಾರರು ವ್ಯವಸಾಯ ವೃತ್ತಿಗೆ ಮುತ್ತಿಕೊಂಡರು. ಹೀಗೆ ಭೂಮಿಯನ್ನು ಅವಲಂಬಿಸಿದ ಜನರ ಒತ್ತಡ ಹೆಚ್ಚಾಯಿತು.

## *ಆಧುನಿಕ ಕೈಗಾರಿಕೆಗಳ ಬೆಳವಣಿಗೆ*

ಬ್ರಿಟಿಷ್ ಆಳಿಕೆಯು ಭಾರತದಲ್ಲಿ ಆಧುನಿಕ ಬಂಡವಾಳಶಾಹೀ ಕೈಗಾರಿಕೋದ್ಯಮದ ಉದಯಕ್ಕೆ ತಕ್ಕ ಪರಿಸ್ಥಿತಿಗಳನ್ನು ಸೃಷ್ಟಿಸಿತು. ದೇಶದಾದ್ಯಂತ ವ್ಯಾಪಿಸಿದ ಸಾರಿಗೆ ವ್ಯವಸ್ಥೆಯನ್ನು ರಚಿಸಿ ವಿಶಾಲತರವಾದ ಅಖಿಲಭಾರತ ಮಾರುಕಟ್ಟೆಯನ್ನು ರೂಪಿಸಿತು. ಭಾರತದಲ್ಲಿ ಗ್ರಾಮೀಣ ಕೈಗಾರಿಕೆಗಳಿಗೂ ಕೃಷಿಗೂ ಒಂದು ತೆರನಾದ ಸಂಬಂಧ ಬಹುಕಾಲದಿಂದ ನಡೆದುಬಂದಿತ್ತು. ಆದರೆ ಗೃಹ ಕೈಗಾರಿಕೆಗಳ ಉದ್ಯಮ ಗಳೂ ಸೇರಿದಂತೆ ಸ್ಥಳೀಯ ಉತ್ಪಾದನಾ ವಿಧಾನ ನಶಿಸಿದುದರಿಂದಾಗಿ ಅಥವಾ ತೀವ್ರವಾದ ಪರುಪೇರನ್ನು ಕಂಡುದರಿಂದಾಗಿ ಆ ಸಂಬಂಧ ಕಡಿದು ಹೋಗುತ್ತ ಬಂದಿತು. ಲಕ್ಷಾಂತರ ಕಸಬುದಾರರು ಕೆಲಸ ಕಳೆದುಕೊಂಡರು. ಹೊಸ ಕಂದಾಯ

ಪದ್ಧತಿಯು ಲಕ್ಷಾಂತರ ಬೇಸಾಯಗಾರರಿಗೆ ಅವರ ನೆಲವನ್ನು ಇಲ್ಲವಾಗಿಸಿತ್ತು. ಈ ಎರಡು ಕಾರಣಗಳೂ ಕೂಡಿ ಒಂದು ಬಗೆಯ ಅನಿರ್ಬಂಧಿತ ಕೂಲಿಗಾರ ವರ್ಗ ಹೆಚ್ಚುವುದಕ್ಕೆ ದಾರಿ ಮಾಡಿದುವು. ಈ ಕೂಲಿಗಾರರಿಗೆ ದಿನದ ಸಂಬಳದ ಆಧಾರದ ಮೇಲೆ ಕೆಲಸಮಾಡುವುದನ್ನು ಬಿಟ್ಟರೆ ಬೇರೆ ಜೀವನೋಪಾಯವೆ ಇರಲಿಲ್ಲ. ಹೀಗೆ ಆಧುನಿಕ ಬಂಡವಾಳಶಾಹೀ ಕೈಗಾರಿಕೆಯ ಉಗಮಕ್ಕೆ ಮೂಲ ಅಗತ್ಯಗಳಾದ ಎರಡು ಅಂಶಗಳು-ಅಖಿಲಭಾರತ ಮಾರುಕಟ್ಟೆ ಹಾಗೂ ಅಗ್ಗವಾದ ಕೂಲಿಗಾರರ ಹೇರಳತೆ ಸಾಧಿತವಾದುವು. 19 ನೆಯ ಶತಮಾನದ ಉತ್ತರಾರ್ಧದಲ್ಲಿ ಆಧುನಿಕ ಕೈಗಾರಿಕೆಗಳು ಸ್ಥಾಪಿತವಾದುವು.

ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೂ ಭಾರತದ ಕೈಗಾರಿಕಾಭಿವೃದ್ಧಿ ಏನಿದ್ದರೂ ನಾಲ್ಕು ಬಗೆಯ ಕೈಗಾರಿಕೆಗಳಿಗೆ ಮುಖ್ಯವಾಗಿ ಸೀಮಿತವಾಗಿದ್ದಿತು. ಅವು ಹತ್ತಿ ಹಾಗೂ ಸೆಣಬು ಬಟ್ಟೆಗಳ ತಯಾರಿಕೆ, ಕಲ್ಲಿದ್ದಲು ಗಣಿಗಾರಿಕೆ ಮತ್ತು ಟೀ ತೋಟಗಾರಿಕೆ. ಇನ್ನು ಕೆಲವು ಸಣ್ಣ ಕೈಗಾರಿಕೆಗಳಾದ ಹತ್ತಿ ಗಿರಣಿಗಳು ಮತ್ತು ಪ್ರೆಸ್ಸುಗಳು, ಅಕ್ಕಿ ಹಿಟ್ಟು ಮತ್ತು ಮರದ ಗಿರಣಿಗಳು, ತೊಗಲು ಹದ ಮಾಡುವ ಕಾರ್ಖಾನೆಗಳು, ಉಣ್ಣೆ ಬಟ್ಟೆ ತಯಾರಿಕೆ, ಕಾಗದ ಮತ್ತು ಸಕ್ಕರೆ ಕಾರ್ಖಾನೆಗಳು, ಉಪ್ಪು, ಕಾಗೆಬಂಗಾರ, ಪೆಟ್ರೋಲಿಯಂ ಮತ್ತು ಕಬ್ಬಿಣದ ಗಣಿಗಳನ್ನೂ ಅಭಿವೃದ್ಧಿ ಪಡಿಸಲಾಯಿತು. ಕೆಲವು ಇಂಜನಿಯರಿಂಗ್ ಮತ್ತು ರೈಲ್ವೆ ಕಾರ್ಯಾಗಾರಗಳೂ, ಕಬ್ಬಿಣ ಮತ್ತು ಹಿತ್ತಾಳೆಯ ಫೌಂಡ್ರಿಗಳೂ ಅಸ್ತಿತ್ವಕ್ಕೆ ಬಂದುವು.

ಅಂಶಗಳಿಂದಲೇ ಕೈಗಾರಿಕಾಕ್ರಾಂತಿಯೊಂದರ ತಳಹದಿ ಹಾಕಿದಂತಾಯಿತೆಂದು ಭಾವಿಸಬಾರದು. ವಸ್ತುಸ್ಥಿತಿ ಅದಕ್ಕಿಂತ ಬಹುದೂರವಾಗಿತ್ತು. ಮೊದಲನೆಯದಾಗಿ, ಆಗ ವಿಕಾಸಗೊಂಡ ಅನೇಕ ಆಧುನಿಕ ಕೈಗಾರಿಕೆಗಳನ್ನು ವಿದೇಶೀ ಬಂಡವಾಳಗಾರರು ನಿಯಂತ್ರಿಸುತ್ತಿದ್ದರು. ಎರಡನೆಯದಾಗಿ, ಈ ಹಂತದಲ್ಲಿ ಕೈಗಾರಿಕಾ ಪ್ರಗತಿ ಸ್ಥಿರವಾದ ಗತಿಯಲ್ಲಿ ಒಂದೇ ಸಮನೆ ನಡೆಯುತ್ತಿದ್ದರೂ ಕೂಡ ಅದು ವಿಪರೀತ ನಿಧಾನವಾಗಿತ್ತು. ರಾಷ್ಟ್ರದ ವಿಸ್ತಾರ ಹಾಗೂ ಆಗ ಇದ್ದ ಜನಸಂಖ್ಯೆ ಇವನ್ನು ಗಮನದಲ್ಲಿ ಇಟ್ಟುಕೊಂಡು ಹೋಲಿಸಿ ನೋಡಿದರೆ, ಕೈಗಾರಿಕೋದ್ಯಮೀಕರಣದ ಪ್ರಯತ್ನ ಎಷ್ಟು ಅಲ್ಪವಾಗಿದ್ದಿತೆಂದರೆ ಅದಕ್ಕೆ ಕೈಗಾರಿಕೋದ್ಯಮೀಕರಣ ಎಂಬ ಪದವೇ ಸೂಕ್ತವಲ್ಲವೆಂದು ಕಾಣಿಸುತ್ತದೆ. 1913 ರ ವೇಳೆಗೆ ಕೂಡ ಕಾರ್ಖಾನೆಗಳ ಕಾಯಿದೆಯ ವ್ಯಾಪ್ತಿಗೆ ಬಂದ ಕೆಲಸಗಾರರ ಒಟ್ಟು ಸಂಖ್ಯೆ ಒಂದು ಮಿಲಿಯನ್‌ಗಿಂತಲೂ ಕಡಮೆಯಾಗಿತ್ತು.

ಮೊದಲನೆಯ ಮಹಾಯುದ್ಧ ಮತ್ತು 1930 ರ ಸುಮಾರಿನಲ್ಲಿ ಉಂಟಾದ ಕುಸಿತಗಳ ಫಲವಾಗಿ ಭಾರತದ ಬಂಡವಾಳಶಾಹೀವರ್ಗವು ತನ್ನ ಮೊದಲನೆಯ ಪ್ರಯತ್ನವನ್ನು ಮಾಡಿತು. ವಿದೇಶೀ ಆಮದುಗಳಿಂದ ಸ್ಪರ್ಧೆಯಿರಲಿಲ್ಲ. ಸರಕಾರವೂ ಕೂಡ ಭಾರತೀಯ ಕೈಗಾರಿಕೋದ್ಯಮಿಗಳು, ವರ್ತಕರು ಮತ್ತು ಕಂಟ್ರಾಕ್ಟರುಗಳಿಗೇ ಭಾರೀ ಪ್ರಮಾಣದ ಆರ್ಡರುಗಳನ್ನು ಕೊಡಲೇಬೇಕಾಯಿತು. ಆದರೆ ಭಾರತೀಯ ಬಂಡವಾಳಗಾರನು ಈ ಅವಧಿಯಲ್ಲಿ ಅಭೂತಪೂರ್ವವಾದ ಲಾಭಗಳನ್ನು ಸಂಪಾದಿಸಿದರೂ ಕೂಡ, ಯುದ್ಧವು ಮುಗಿದು ವಿದೇಶೀ ಸ್ಪರ್ಧೆ ಪುನರಾರಂಭಗೊಂಡಂತೆ

ಕೈಗಾರಿಕೆಗಳು ಸ್ಥಗಿತವಾಗತೊಡಗಿದುವು.

ಹೀಗೆ 1947 ರ ವರೆಗೆ ಭಾರತದಲ್ಲಿ ಕೈಗಾರಿಕಾಭಿವೃದ್ಧಿ ಎನ್ನುವುದು ನಿಧಾನವಾಗಿತ್ತು, ಎಡವುತ್ತಾ ಕುಂಟುತ್ತಾ ಸಾಗಿತ್ತು, ಕೈಗಾರಿಕಾಕ್ರಾಂತಿಯಿರಲಿಲ್ಲ, ಅಂಥದೊಂದೂ ಪ್ರಯತ್ನವನ್ನೂ ಅದು ಸೂಚಿಸುತ್ತಿರಲಿಲ್ಲ ಎಂಬುದನ್ನು ನೋಡಬಹುದು. ಇದಕ್ಕಿಂತ ಮುಖ್ಯವಾಗಿದ್ದ ವಿಚಾರವೆಂದರೆ, ನಡೆದ ಮಿತವಾದ ಬೆಳವಣಿಗೆಯೂ ಕೂಡ ಸ್ವತಂತ್ರವಾಗಿರದ, ವಿದೇಶೀ ಬಂಡವಾಳದ ಹಿಡಿತದಲ್ಲಿತ್ತು. ಎರಡನೆಯದಾಗಿ, ಕೈಗಾರಿಕೆಯ ಸ್ವರೂಪ ಅದರ ಪ್ರಗತಿಯು ಬ್ರಿಟನ್ನಿನ ಮೇಲೆಯೇ ಅವಲಂಬಿಸುವ ರೀತಿಯಲ್ಲಿತ್ತು. ಅಧಿಕ ಬಂಡವಾಳ ಹಾಕಿದ ವಸ್ತುಗಳಾಗಲಿ, ರಾಸಾಯನಿಕ ಕೈಗಾರಿಕೆಗಳಾಗಲಿ ಇರಲೇ ಇಲ್ಲ. ಅವಿಲ್ಲದೆ ವೇಗವಾದ ಸ್ವತಂತ್ರವಾದ ಕೈಗಾರಿಕಾಭಿವೃದ್ಧಿ ಸಾಧ್ಯವೇ ಇಲ್ಲ. ಯಂತ್ರೋಪಕರಣಗಳು, ಎಂಜಿನಿಯರಿಂಗ್ ಮತ್ತು ಲೋಹ ಕೈಗಾರಿಕೆಗಳು ವಸ್ತುತಃ ಇರಲೇ ಇಲ್ಲ. ಅಲ್ಲದೆ ತಾಂತ್ರಿಕ ಜ್ಞಾನದ ಕ್ಷೇತ್ರದಲ್ಲಿ ಭಾರತ ಸಂಪೂರ್ಣವಾಗಿ ಚಕ್ರಾಧಿಪತ್ಯ ರಾಷ್ಟ್ರವನ್ನೇ ಅವಲಂಬಿಸಿತ್ತು. ಈ ದೇಶದಲ್ಲಿ ತಾಂತ್ರಿಕ ಸಂಶೋಧನೆ ಎಂಬುದು ನಡೆಯುತ್ತಿರಲಿಲ್ಲ.

ಒಟ್ಟಿನಲ್ಲಿ ವಿಷಯ ಇಷ್ಟು: ಭಾರತದಲ್ಲಿ ಸಂಭವಿಸಿದ್ದು ವಾಣಿಜ್ಯ ಬದಲಾವಣೆಯೇ ಹೊರತು ಕೈಗಾರಿಕಾ ಕ್ರಾಂತಿಯಲ್ಲ. ಆಗ ಇದ್ದ ಮನೋಧರ್ಮ ಸ್ವತಂತ್ರವಾದ ಕೈಗಾರಿಕಾ ಬಂಡವಾಳಶಾಹೀ ಅರ್ಥವ್ಯವಸ್ಥೆಯ ಕಡೆಗೆ ಬಂದಿರಲಿಲ್ಲ, ಬದಲಿಗೆ, ಅಧೀನ, ಅನಭಿವೃದ್ಧ ವಸಾಹತು ಅರ್ಥವ್ಯವಸ್ಥೆಯ ಕಡೆಗೆ ಒಲಿದಿತ್ತು. ಬ್ರಿಟಿಷ್ ಆಳಿಕೆಯಲ್ಲಿ ಭಾರತದ ಕೈಗಾರಿಕಾ ಪ್ರಗತಿಗೆ ಇನ್ನೂ ಒಂದು ವಿಷಮ ಪರಿಸ್ಥಿತಿ ಇತ್ತು. ಕೈಗಾರಿಕೆಗಳ ಹಂಚಿಕೆ ತೀರಾ ಏಕಪಕ್ಷೀಯವಾಗಿದ್ದು, ರಾಷ್ಟ್ರದ ಕೆಲವೇ ಪ್ರದೇಶಗಳು ಮತ್ತು ನಗರಗಳಲ್ಲಿ ಅವು ಕೇಂದ್ರೀಕೃತವಾಗಿದ್ದುವು. ನೀರಾವರಿ ಮತ್ತು ವಿದ್ಯುಚ್ಛಕ್ತಿ ಸೌಲಭ್ಯಗಳೂ ಕೂಡ ತುಂಬ ಅಸಮರ್ಪಕ ಹಂಚಿಕೆಯಾಗಿದ್ದುವು. ಇದರಿಂದ ವರಮಾನದ ಸ್ವರೂಪಗಳಲ್ಲಿ, ಆರ್ಥಿಕ ಅಭಿವೃದ್ಧಿಯಲ್ಲಿ ಮತ್ತು ಸಾಮಾಜಿಕ ಸ್ತರನಿರ್ಮಾಣದಲ್ಲಿ ಪ್ರಾಂತೀಯವಾದ ವ್ಯತ್ಯಾಸಗಳು ಬಹಳ ತೀವ್ರವಾಗಿ ಕಾಣಿಸಿಕೊಂಡುವು.

ಭಾರತದಲ್ಲಿ ಬ್ರಿಟಿಷ್ ಆಡಳಿತದ ಒಂದು ಮುಖ್ಯ ಪರಿಣಾಮ ಇದು. ಇಲ್ಲಿನ ಜನತೆಯಲ್ಲಿ ಕಡುಬಡತನ ಮುಸುಗಿತು. ಅವರಲ್ಲಿ ಅನೇಕರು ಸಾಮಾನ್ಯ ಸಮಯಗಳಲ್ಲಿ ಜೀವನೋಪಾಯಕ್ಕೆ ತೀರಾ ಅಗತ್ಯವಾದ ಮಟ್ಟಕ್ಕಿಂತ ಕೆಳಗಿನ ಮಟ್ಟದಲ್ಲಿ ಬದುಕಿದ್ದು, ಕ್ಷಾಮವೋ ಪ್ರವಾಹವೋ ಆಕ್ರಮಿಸಿದಾಗ, ಲಕ್ಷಾಂತರ ಸಂಖ್ಯೆಯಲ್ಲಿ ಸತ್ತುಹೋಗುತ್ತಿದ್ದರು. ವ್ಯಕ್ತಿ ವರಮಾನ ಬಹಳ ಕಡಮೆಯಾಗಿತ್ತು, ನಿರುದ್ಯೋಗ ವ್ಯಾಪಕವಾಗಿತ್ತು. 1880 ರಲ್ಲಿ ದಾದಾಭಾಯಿ ನವರೋಜಿ ಅವರು ಒಬ್ಬ ಭಾರತೀಯನ ಸರಾಸರಿ ವರಮಾನದ ಶೇ. 50ರಷ್ಟನ್ನು ಜೈಲಿನಲ್ಲಿ ಒಬ್ಬ ಅಪರಾಧಿಯ ಆಹಾರ ಮತ್ತು ವಸ್ತ್ರಗಳಿಗ ವೆಚ್ಚಮಾಡಲಾಗುತ್ತಿತ್ತು ಎಂದು ತೋರಿಸಿಕೊಟ್ಟರು. ಬಡತನದಿಂದಾಗಿ ಅನಾರೋಗ್ಯ, ಅಲ್ಪಾಯುಷ್ಯ ಮತ್ತು ಶಿಶುಮರಣಗಳು ಹೇರಳವಾಗಿದ್ದುವು. ಜನರ ಬಡತನವು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಸಾಲುಸಾಲಾಗಿ ಸಂಭವಿಸಿ ದೇಶವನ್ನು ಧ್ವಂಸಮಾಡಿದ

ಕ್ಷಾಮಗಳಲ್ಲಿ ವ್ಯಕ್ತವಾದುವು. 1860 ರಿಂದ 1908ರ ವರೆಗಿನ ಅವಧಿಯಲ್ಲಿ ಇಪ್ಪತ್ತು ವರ್ಷಗಳು ಕ್ಷಾಮಡಾಮರಗಳ ವರ್ಷಗಳಾಗಿದ್ದುವು, 29 ದಶಲಕ್ಷ ಜನ ಮಡಿದರು. ವಸಾಹತು ಭಾರತದಲ್ಲಿ ಬಡತನ ಹಾಗೂ ಭೀಕರ ಹಸಿವೆಗಳು ಬಲವಾಗಿ ಬೇರುಬಿಟ್ಟಿದ್ದುವು ಎಂಬುದನ್ನು ಈ ಕ್ಷಾಮಗಳು ತೋರಿಸಿಕೊಟ್ಟುವು.

ಭಾರತದ ಬಡತನಕ್ಕೆ ಕಾರಣ ಆದರ ಭೌಗೋಳಿಕ ಸ್ವರೂಪವಲ್ಲ. ಅಥವಾ ಪ್ರಾಕೃತಿಕ ಸಂಪನ್ಮೂಲಗಳ ಕೊರತೆಯಾಗಲಿ, ಜನರ ಲಕ್ಷಣ ಸ್ವಭಾವಗಳಲ್ಲಿನ ಅಂತರ್ಗತ ದೋಷವಾಗಲಿ ಅಲ್ಲವೇ ಅಲ್ಲ. ಅಥವಾ ಅದು ಮುಗಲ್ ಯುಗದ ಅಥವಾ ಬ್ರಿಟಿಷ್ ಪೂರ್ವಯುಗದ ಫಲವೂ ಅಲ್ಲ. ಅದು ಕಳೆದ ಎರಡು ಶತಮಾನಗಳ ಇತಿಹಾಸ ನೀಡಿದ ಫಲ. ಅದಕ್ಕಿಂತ ಮುಂಚೆ ಭಾರತವು ಪಶ್ಚಿಮ ಯೂರೋಪಿನ ರಾಷ್ಟ್ರಗಳಿಗಿಂತಲೂ ಹಿಂದುಳಿದ ದೇಶವಾಗಿರಲಿಲ್ಲ. ಆಗ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ಜೀವನಮಟ್ಟಗಳ ನಡುವೆ ಇದ್ದ ವ್ಯತ್ಯಾಸಗಳೂ ಅಷ್ಟು ದೊಡ್ಡದಾಗಿರಲಿಲ್ಲ. ಪಾಶ್ಚಾತ್ಯ ದೇಶಗಳು ಬೆಳೆದು, ಅಭಿವೃದ್ಧವಾಗುತ್ತಿದ್ದ ಸಮಯ ದಲ್ಲೇ, ಕರಾರುವಾಕ್ಕಾಗಿ ಆಗಲೇ, ಭಾರತ ವಸಾಹತುಶಾಹಿಗೆ ಗುರಿಯಾಗಿ ಅಭಿವೃದ್ಧಿಯಿಂದ ವಂಚಿತವಾಯಿತು. ಇಂದು ಜಗತ್ತಿನಲ್ಲಿ ಅಭಿವೃದ್ಧಿಗೊಂಡಿರುವ ರಾಷ್ಟ್ರಗಳೆಲ್ಲವೂ, ಮುಂದೆ ಬಂದದ್ದು ಭಾರತವನ್ನು ಬ್ರಿಟನ್ನು ಆಳುತ್ತಿದ್ದ ಕಾಲ ದಲ್ಲಿಯೇ. ಅವುಗಳಲ್ಲಿ ಹೆಚ್ಚಿನವು 1850 ರ ನಂತರ ಪ್ರಗತಿ ಹೊಂದಿದುವು. ಜಗತ್ತಿನ ಬೇರೆ ಬೇರ ಭಾಗಗಳಲ್ಲಿನ ಜೀವನ ಮಟ್ಟಗಳ ನಡುವೆ ವ್ಯತ್ಯಾಸಗಳು 1750ರ ವರೆಗೆ ಅಷ್ಟಾಗಿ ಇರಲಿಲ್ಲ. ಈ ಸಂದರ್ಭದಲ್ಲಿ ಒಂದು ಸ್ವಾರಸ್ಯವಾದ ಕಾಕತಾಳೀಯವನ್ನು ಗಮನಿಸಬಹುದು. ಬ್ರಿಟನ್ನಿನಲ್ಲಿ ಕೈಗಾರಿಕಾ ಕ್ರಾಂತಿಯ ಪ್ರಾರಂಭವೂ ಬ್ರಿಟಿಷರು ಬಂಗಾಳವನ್ನು ಗೆದ್ದದ್ದೂ ಒಂದೇ ಸಮಯಕ್ಕೆ!

ಮೂಲವಿಚಾರ ಇದು: ಬ್ರಿಟನ್ನಿನಲ್ಲಿ ಕೈಗಾರಿಕಾಭಿವೃದ್ಧಿಯನ್ನು ಉಂಟುಮಾಡಿದ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪ್ರಕ್ರಿಯೆಗಳೇ ಭಾರತದಲ್ಲಿ ಆರ್ಥಿಕ ಅನಭಿವೃದ್ಧಿಯನ್ನು ಉಂಟುಮಾಡಿ, ಅದನ್ನು ಉಳಿಸಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿಂದುಳಿಕೆಗೆ ಕಾರಣವಾದುವು. ಇದಕ್ಕೆ ಕಾರಣ ಸ್ಪಷ್ಟವಾಗಿಯೇ ಇದೆ. ಬ್ರಿಟನ್ನು ಭಾರತೀಯ ಅರ್ಥವ್ಯವಸ್ಥೆಯನ್ನು ತನ್ನ ಅರ್ಥವ್ಯವಸ್ಥೆಗೆ ಅಧೀನವಾಗಿ ಮಾಡಿತು, ತನ್ನ ಅಗತ್ಯಗಳಿಗೆ ಸರಿಹೋಗುವಂತೆ ಭಾರತದ ಸಾಮಾಜಿಕ ಮನೋಧರ್ಮದ ಮೂಲ ಸ್ವರೂಪಗಳನ್ನು ನಿರ್ಧರಿಸಿತು. ಫಲ, ಭಾರತದ ಕೃಷಿಯಲ್ಲಿ ಮತ್ತು ಕೈಗಾರಿಕೆಗಳಲ್ಲಿ ಕಂಡುಬಂದ ಸ್ಥಗಿತತೆ; ಜಮೀನ್ದಾರರು, ಭೂಮಾಲೀಕರು, ರಾಜರು, ಸಾಹುಕಾರರು, ವರ್ತಕರು, ಬಂಡವಾಳಗಾರರು ಮತ್ತು ವಿದೇಶೀ ಸರಕಾರ ಹಾಗೂ ಅದರ ಅಧಿಕಾರಿಗಳು ಕೃಷಿಕರನ್ನೂ ಕಾರ್ಮಿಕರನ್ನೂ ಸುಲಿಗೆ ಮಾಡಿದ್ದು; ಮತ್ತು ದಾರಿದ್ರ್ಯ, ರೋಗ ಮತ್ತು ಅರೆ-ಉಪವಾಸಗಳು ಪರಡಿದ್ದು.

### ಸಾಂಸ್ಕೃತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಒತ್ತಡ

ಬ್ರಿಟಿಷ್ ಆಳ್ವಿಕೆಯೊಂದಿಗೇ ಪಶ್ಚಿಮದೊಂದಿಗೆ ಸಂಪರ್ಕವೂ ಉಂಟಾಯಿತು. ಪಶ್ಚಿಮ ಯೂರೋಪಿನಲ್ಲಿ ಮೊದಲು ವಿಕಾಸಗೊಂಡ ಆಧುನಿಕ ಭಾವನೆಗಳು ಭಾರತವನ್ನು

ಪ್ರವೇಶಿಸಿದುವು. ಬ್ರಿಟಿಷರು ಭಾರತಕ್ಕೆ ಬರದೆಯೇ ಹೋಗಿದ್ದರೂ, 18 ಮತ್ತು 19 ನೆಯ ಶತಮಾನಗಳಲ್ಲಿ ಪಶ್ಚಿಮದಲ್ಲಿ ನಡೆಯುತ್ತಿದ್ದ ಬದಲಾವಣೆಗಳಿಂದ ಈ ದೇಶವು ದೂರವಾಗಿ ಉಳಿದಿರುತ್ತಿರಲಿಲ್ಲ. ಭಾರತವು ಮುಚ್ಚಿದ ಬಾಗಿಲ ನೀತಿಯನ್ನು ಎಂದೂ ಅನುಸರಿಸಿರಲಿಲ್ಲವಾದುದರಿಂದ ಆ ಬದಲಾವಣೆಗಳ ಗಾಳಿಯು ನಮ್ಮ ದೇಶದ ತೀರಗಳನ್ನು ಮುಟ್ಟುತ್ತಿದ್ದುದು ಖಂಡಿತ. ವಾಣಿಜ್ಯ ಮತ್ತು ಪ್ರವಾಸಗಳ ಮೂಲಕ ಭಾರತವು ಏಷ್ಯದ ರಾಷ್ಟ್ರಗಳೊಂದಿಗೆ ಮಾತ್ರವಲ್ಲದೆ ಯೂರೋಪಿನೊಂದಿಗೂ ಅನೇಕ ಶತಮಾನಗಳ ಕಾಲದ ಸಂಪರ್ಕವನ್ನು ಸ್ಥಾಪಿಸಿಕೊಂಡಿದ್ದಿತು. ಈ ಮೂಲಗಳಿಂದಾಗಿ ಯೂರೋಪಿನಲ್ಲಿ ಮತ್ತು ಬೇರೆ ಕಡೆಗಳಲ್ಲಿ ಸಂಭವಿಸಿದ ಘಟನೆಗಳು ಮತ್ತು ಪಶ್ಚಿಮದಲ್ಲಿ ರೂಪುಗೊಳ್ಳುತ್ತಿದ್ದ ನೂತನ ಚಿಂತನೆಯ ವಿವರಗಳು ಆಗಲೇ 18 ನೆಯ ಶತಮಾನದಲ್ಲೇ ಭಾರತವನ್ನು ಮುಟ್ಟಿದ್ದುವು. ಆದರೆ ಅದು ಬಹಳ ದೀರ್ಘಕಾಲದವರೆಗೆ ಹರಡಿದ ನಿಧಾನವಾದ ಪ್ರಕ್ರಿಯೆಯಾಗುತ್ತಿತ್ತು. ಬ್ರಿಟಿಷ್ ಆಳಿಕೆಯಿಂದಾಗಿ ಅವು ಭಾರತಕ್ಕ ಕ್ಷಿಪ್ರವಾಗಿ ಬಂದದ್ದು ಮಾತ್ರವಲ್ಲ, ವಿದೇಶೀ ಪ್ರಭುತ್ವದ ಸ್ವರೂಪವೇ ಈ ಪ್ರಭಾವಗಳನ್ನು ತತ್‌ಕ್ಷಣತೆ ಮತ್ತು ಸುಸಂಗತತೆಗಳಿಂದ ಕೂಡಿದ ಸ್ಥಳೀಯ ಪ್ರಾಮುಖ್ಯತೆಗಳಿಂದ ಕ್ಷಿಪ್ರತರಗೊಳಿಸಿತು.

ಭಾರತೀಯ ಜನರ ಬೌದ್ಧಿಕ ಜೀವನವು ಪ್ರಜಾಪ್ರಭುತ್ವ ಮತ್ತು ಜನರ ಸಾರ್ವಭೌಮತ್ವ, ವಿವೇಚನೆ ಮತ್ತು ಮಾನವೀಯತೆ ಮುಂತಾದ ಭಾವನೆಗಳಿಂದ ಪ್ರಭಾವಿತವಾದ ಕ್ರಾಂತಿಕಾರಕ ಬದಲಾವಣೆಗಳಿಗೆ ಗುರಿಯಾಯಿತು. ಈ ನೂತನ ಭಾವನೆಗಳು ತಮ್ಮ ಸಮಾಜ, ಅರ್ಥವ್ಯವಸ್ಥೆ ಮತ್ತು ಸರಕಾರಗಳನ್ನು ಕುರಿತು ವಿಮರ್ಶಾತ್ಮಕ ದೃಷ್ಟಿಯಿಂದ ನೋಡಲು ಭಾರತೀಯರಿಗ ನೆರವಾದುವು. ಜೊತೆಗೆ ಭಾರತದಲ್ಲಿ ಬ್ರಿಟಿಷ್ ಸಾರ್ವಭೌಮತ್ವದ ನಿಜವಾದ ಸ್ವರೂಪವೇನೆಂಬುದನ್ನು ತಿಳಿದುಕೊಳ್ಳಲು ಸಹಾಯಮಾಡಿದುವು.

ಆಧುನಿಕ ವಿಚಾರಗಳು ಅನೇಕ ಕಾಲುವೆಗಳ ಮೂಲಕ ಹರಿದುಬಂದುವು. ರಾಜಕೀಯ ಪಕ್ಷಗಳು, ವೃತ್ತಪತ್ರಿಕೆ, ಕರಪತ್ರಗಳು ಹಾಗೂ ಬಹಿರಂಗ ವೇದಿಕೆ, ಇತ್ಯಾದಿ. 1813 ರ ನಂತರ ಸರಕಾರವು ಪ್ರವೇಶಗೊಳಿಸಿದ ಆಧುನಿಕ ಶಿಕ್ಷಣದ ಪ್ರಸಾರ, ಮಿಷನರಿಗಳು ಮತ್ತು ಖಾಸಗಿಯಾಗಿ ಭಾರತೀಯರೇ ಮಾಡಿದ ಪ್ರಯತ್ನ ಇವೂ ಮುಖ್ಯವಾದ ಪಾತ್ರ ವಹಿಸಿದುವು. ಆದರೆ ಈ ಪಾತ್ರವು ತುಂಬ ಜಟಿಲವಾಗಿತ್ತು, ವಿರೋಧಗಳಿಂದ ತುಂಬಿತ್ತು.

ಆಧುನಿಕ ಶಿಕ್ಷಣದ ಹರಡಿಕೆಯು ತುಂಬ ಮಿತವಾಗಿದ್ದುದು ಒಂದು ವಿಚಾರ. ಸುಮಾರು ಒಂದುನೂರು ವರ್ಷಗಳವರಗೆ ಅದು, ಪರಂಪರಾಗತ ಶಿಕ್ಷಣವ್ಯವಸ್ಥೆಯ ವಿನಾಶ ಉಂಟುಮಾಡಿದ್ದ ತೆರಪನ್ನು ತುಂಬಲು ಅಸಮರ್ಥವಾಯಿತು. ವಿದೇಶೀ ಸರಕಾರವು ಪ್ರೈಮರಿ ಮತ್ತು ಶಾಲಾ ವಿದ್ಯಾಭ್ಯಾಸವನ್ನು ಉಪೇಕ್ಷಿಸಿದರ, 1858 ರ ನಂತರ ಉನ್ನತ ಶಿಕ್ಷಣಕ್ಕ ಶತ್ರುಭಾವ ಬಳಸಿಕೊಂಡಿತು. ಸುಶಿಕ್ಷಿತ ಭಾರತೀಯರಲ್ಲಿ ಹಲವರು, ತಾವು ಈಚೆಗೆ ಗಳಿಸಿದ ಆಧುನಿಕ ಜ್ಞಾನವನ್ನು ಉಪಯೋಗಿಸಿಕೊಂಡು ಬ್ರಿಟಿಷ್ ಆಳಿಕೆಯ ಸಾರ್ವಭೌಮ ಸ್ವರೂಪ, ಸುಲಿಗೆಯ ನೀತಿಗಳನ್ನು ಟೀಕಿಸುತ್ತಾ ಸಾಮ್ರಾಜ್ಯಶಾಹಿ ವಿರೋಧೀ ರಾಜಕೀಯ ಚಳುವಳಿಯನ್ನು ವ್ಯವಸ್ಥಗೊಳಿಸ

ತೊಡಗಿದರು. ಇದನ್ನು ಗಮನಿಸಿದ ಬ್ರಿಟಿಷ್ ಆಡಳಿತಗಾರರು ಉನ್ನತ ಶಿಕ್ಷಣ ಸೌಲಭ್ಯವನ್ನೇ ಮೊಟಕುಮಾಡಬೇಕೆಂದು ಒಂದೇ ಸಮನೆ ಒತ್ತಾಯಮಾಡತೊಡಗಿದರು. ಆದರೆ ಸರಕಾರ ಉನ್ನತ ಶಿಕ್ಷಣವನ್ನು ತಡೆಯುವ ತನ್ನ ಪ್ರಯತ್ನದಲ್ಲಿ ವಿಫಲವಾಯಿತು. ಏಕೆಂದರೆ, ಒಮ್ಮೆ ಪ್ರಾರಂಭಿಸಿದ ಮೇಲೆ, ಜನತೆಯ ಒತ್ತಡ ಅದನ್ನು ತಾನಾಗಿಯೇ ಮುಂದುವರಿಸುತ್ತಾ ಹೋಯಿತು, ಶಿಕ್ಷಣದ ಗುಣಮಟ್ಟದಲ್ಲಿ ಒಂದೇ ಸಮನೆ ಅವನತಿಯುಂಟಾದರೂ ಕೂಡ ಅದು ನಿಲ್ಲಲಿಲ್ಲ.

ಶಿಕ್ಷಣ ವ್ಯವಸ್ಥೆಯು ರಾಷ್ಟ್ರೀಯ ಮನೋಭಾವದ ವಾಹಕವಾಗಿ ವರ್ತಿಸಿದ್ದರೆ, ಅದು ಏನಿದ್ದರೂ ಪರೋಕ್ಷವಾಗಿ ಆದದ್ದು. ಅದನ್ನು ಪಡೆದವರಿಗೆ ಭೌತಿಕ ಮತ್ತು ಸಾಮಾಜಿಕ ವಿಜ್ಞಾನಗಳು ಮತ್ತು ಮಾನವ ಶಾಸ್ತ್ರಗಳಲ್ಲಿ ಮೂಲ ಸಾಹಿತ್ಯದ ಕೆಲವಂಶವನ್ನು ಒದಗಿಸಿ, ಸಾಮಾಜಿಕ ವಿಶ್ಲೇಷಣೆ ಮಾಡಲು ಅವರ ಸಾಮರ್ಥ್ಯವನ್ನು ಕೆರಳಿಸಿದುದರಿಂದ ಅದು ಸಾಧ್ಯವಾಯಿತು. ಇದಿಷ್ಟನ್ನು ಬಿಟ್ಟರೆ, ಮಿಕ್ಕಂತೆ ಅದರ ರಚನೆ, ವಿನ್ಯಾಸ, ಗುರಿಗಳು, ವಿಧಾನಗಳು, ಪಾಠ್ಯ ವಿಷಯ, ವಸ್ತು-ಎಲ್ಲವೂ ವಸಾಹತುಶಾಹಿಗೆ ಪೋಷಕವಾಗುವ ರೀತಿಯಲ್ಲೇ ಇದ್ದುವು.

ಭಾರತೀಯ ಶಿಕ್ಷಣದ ವಸಾಹತುಶಾಹೀ ಸ್ವರೂಪದಿಂದ ಉದ್ಭವಿಸಿದ ಇನ್ನೂ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬೇಕು. ಆಧುನಿಕ ಕೈಗಾರಿಕೆಯ ಉದಯ ಮತ್ತು ವಿಕಾಸಕ್ಕೆ ಮೂಲ ಅಗತ್ಯವಾದ ಆಧುನಿಕ ತಾಂತ್ರಿಕ ಶಿಕ್ಷಣವನ್ನು ಸಂಪೂರ್ಣವಾಗಿ ಅಲಕ್ಷ್ಯಮಾಡಿದ್ದು ಅವುಗಳಲ್ಲಿ ಒಂದು. ಇನ್ನೊಂದು ವಿಚಾರ, ಭಾರತೀಯ ಭಾಷೆಗಳ ಸ್ಥಾನದಲ್ಲಿ ಇಂಗ್ಲಿಷನ್ನು ಶಿಕ್ಷಣಮಾಧ್ಯಮವಾಗಿ ಮಾಡಿದ್ದು. ಇದು ಸಾಮಾನ್ಯ ಜನರಲ್ಲಿ ಶಿಕ್ಷಣ ಪ್ರಸಾರಕ್ಕೆ ತಡೆಯುಂಟುಮಾಡಿದ್ದು ಮಾತ್ರವಲ್ಲ, ಶಿಕ್ಷಣ ಪಡೆದವರಿಗೂ, ಪಡೆಯದ ಸಾಮಾನ್ಯ ಜನಕ್ಕೂ ನಡುವೆ ಅಗಾಧವಾದ ಭಾಷೆಯ ಮತ್ತು ಸಂಸ್ಕೃತಿಯ ಕಂದಕವನ್ನು ನಿರ್ಮಿಸಿತು. ಶಿಕ್ಷಣಕ್ಕಾಗಿ ಸಾಕಷ್ಟು ಹಣವನ್ನು ಒದಗಿಸಲು ಸರಕಾರವು ನಿರಾಕರಿಸಿದ್ದು, ಕ್ರಮೇಣ ಶಿಕ್ಷಣದ ಮಟ್ಟಗಳನ್ನು ಅತ್ಯಂತ ಕೆಳಮಟ್ಟಕ್ಕೆ ತಗ್ಗಿಸಿತು. ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಶುಲ್ಕವನ್ನು ತೆರಬೇಕಾಗಿದ್ದುದರಿಂದ, ಶಿಕ್ಷಣವು ವಸ್ತುತಃ ಮಧ್ಯಮವರ್ಗ ಹಾಗೂ ಮೇಲುವರ್ಗದ ಜನರ ಮತ್ತು ನಗರ ಹಾಗೂ ಪಟ್ಟಣ ನಿವಾಸಿಗಳಿಗೆ ಮೀಸಲಾದ ವಿಷಯವಾಯಿತು.

ನೂತನ ಭಾವನೆಗಳು, ನೂತನವಾದ ರಾಜಕೀಯ ಜೀವನ ಹಾಗೂ ಬ್ರಿಟಿಷ್ ಆಳಿಕೆ ಇವು ಕೂಡಿ ಭಾರತೀಯ ಜನರ ಸಾಮಾಜಿಕ ಜೀವನದ ಮೇಲೆ ಆಳವಾದ ಪ್ರಭಾವ ಉಂಟುಮಾಡಿದುವು. ಅದು ಮೊದಲು ನಗರ ಪ್ರದೇಶಗಳಲ್ಲಿ ಅನುಭವಕ್ಕೆ ಬಂದು ಆನಂತರ ಹಳ್ಳಿಗಳನ್ನು ಪ್ರವೇಶಿಸಿತು. ಆಧುನಿಕ ಕೈಗಾರಿಕೆಗಳು, ನೂತನ ಸಾರಿಗೆ ವಿಧಾನಗಳು, ಬೆಳೆಯುತ್ತಿದ್ದ ನಗರೀಕರಣ, ಹೆಚ್ಚು ಹೆಚ್ಚಾಗಿ ಕಾರ್ಖಾನೆಗಳಲ್ಲಿ ಕಚೇರಿಗಳಲ್ಲಿ ಆಸ್ಪತ್ರೆಗಳಲ್ಲಿ ಶಾಲೆಗಳಲ್ಲಿ ಹೆಂಗಸರನ್ನು ಕೆಲಸಕ್ಕೆ ತೆಗೆದುಕೊಳ್ಳುತ್ತಿದ್ದುದು-ಇವು ಸಾಮಾಜಿಕ ಬದಲಾವಣೆಗೆ ಕಾರಣವಾದುವು. ಸಾಮಾಜಿಕವಾದ ಬೇರ್ಪಡಿಕೆ ಹಾಗೂ ಜಾತೀಯ ಕಟ್ಟುಪಾಡುಗಳು ಸವೆಯುತ್ತ ಹೋದುವು. ಹಳೆಯ ಭೂಪರಿಸ್ಥಿತಿಗಳು, ಗ್ರಾಮಸಂಬಂಧಗಳು ಕಡಿದುಹೋದದ್ದರಿಂದ ಗ್ರಾಮಾಂತರ ಪ್ರದೇಶಗಳಲ್ಲಿದ್ದ ಜಾತೀಯ ಸಮತೋಲನ ಅಸ್ತವ್ಯಸ್ತವಾಯಿತು. ಅನೇಕ

ಕೆಡುಕುಗಳು ಉಳಿದೇ ಇದ್ದರೂ ಕೂಡ, ಬಂಡವಾಳಶಾಹಿಯ ಪ್ರವೇಶದಿಂದ ಸಾಮಾಜಿಕ ಸ್ಥಾನಮಾನವು ಮುಖ್ಯವಾಗಿ ಹಣವನ್ನೇ ಅವಲಂಬಿಸುವಂತಾಯಿತು. ಲಾಭಗಳಿಕೆಯೇ ಅತ್ಯಂತ ಅಪೇಕ್ಷಣೀಯವಾದ ಸಾಮಾಜಿಕ ಚಟುವಟಿಕೆಯಾಗಿ ಪರಿಣಮಿಸಿತು.

ಪ್ರಾರಂಭದಲ್ಲಿ ವಸಾಹತು ಸರಕಾರದ ನೀತಿಗಳೂ ಸಾಮಾಜಿಕ ಸುಧಾರಣೆಯನ್ನು ಪ್ರೋತ್ಸಾಹಿಸಿದುವು. ರಾಷ್ಟ್ರದ ಆರ್ಥಿಕ ಮಧ್ಯಪ್ರವೇಶ ಹಾಗೂ ಬ್ರಿಟಿಷ್ ಆಡಳಿತದ ಸಮಗ್ರತೆಗಳು ಸಾಧ್ಯವಾಗುವಂತೆ ಭಾರತೀಯ ಸಮಾಜವನ್ನು ಆಧುನೀಕರಿಸುವ ಪ್ರಯತ್ನಗಳನ್ನು ಮಾಡಲಾಯಿತು. ಸ್ವಲ್ಪಮಟ್ಟಿಗೆ ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಹುದುಗಿದ್ದ ಸಾಮಾಜಿಕ ಅನ್ಯಾಯಗಳು, ಸಮಾಜದಲ್ಲಿ ಸ್ತ್ರೀಗೆ ಇದ್ದ ಕೀಳು ಸ್ಥಾನಮಾನ ಇವುಗಳಿಂದ ಪ್ರಚೋದಿತವಾದ ಕೆಲವು ಅಧಿಕಾರಿಗಳ ಮಾನವೀಯ ಭಾವನೆಗಳೂ ಇಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿದುವು. ಈ ಹಂತದಲ್ಲಿ ಭಾರತೀಯ ಸಮಾಜದ ಸುಧಾರಣೆಗೆ ಕ್ರೈಸ್ತ ಮಿಷನರಿಗಳೂ ಕೊಡುಗೆ ನೀಡಿದರು. ಆದರೆ ಬಹುಬೇಗ ಮೂಲ ಸಾಂಪ್ರದಾಯಿಕ ಲಕ್ಷಣ ಮತ್ತು ವಸಾಹತುಶಾಹಿಯ ದೀರ್ಘಕಾಲಿಕ ಆಸಕ್ತಿಗಳು ಭದ್ರವಾಗಿ ನಿಂತುವು, ಸಾಮಾಜಿಕ ಸುಧಾರಣೆಯ ಬಗೆಗೆ ವಸಾಹತು ನೀತಿಗಳು ಬದಲಾದುವು. ಆದ್ದರಿಂದ ಬ್ರಿಟಿಷರು ಸುಧಾರಕರಿಗೆ ಬೆಂಬಲ ಕೊಡುವುದನ್ನು ನಿಲ್ಲಿಸಿದರು, ಕ್ರಮೇಣ ಸಮಾಜದ ಸಂಪ್ರದಾಯನಿಷ್ಠವಾದ ಮತ್ತು ಆಚಾರಬದ್ಧ ಅಂಶಗಳ ಪರವಾಗಿ ನಿಂತರು.

ಆದರೂ, ಬ್ರಿಟಿಷರು ಅನುಸರಿಸಿದ ಸಾಮಾಜಿಕ ನೀತಿ ನಿಷ್ಕ್ರಿಯವಾಗಿ ಉಳಿಯಲಿಲ್ಲ. ಬೆಳೆಯುತ್ತಿದ್ದ ರಾಷ್ಟ್ರೀಯತೆಯ ಆಹ್ವಾನವನ್ನು ಎದುರಿಸಲು, ಬ್ರಿಟಿಷರು ಹೆಚ್ಚುಹೆಚ್ಚಾಗಿ "ಒಡೆದು ಆಳು" ಎಂಬ ನೀತಿಯನ್ನು ಅನುಸರಿಸಿದರು. ಜಾತೀಯತೆ ಮತ್ತು ಮತೀಯತೆಯನ್ನು ಸಕ್ರಿಯವಾಗಿ ಪ್ರೋತ್ಸಾಹಿಸಿದರು. ಅದು ಸಾಮಾಜಿಕ ಪ್ರಗತಿವಿರೋಧಿ ಶಕ್ತಿಗಳನ್ನು ಬಲಪಡಿಸಿತು.

ಜನಗಳಲ್ಲಿ ನೂತನವಾಗಿ ಉಂಟಾದ ಬೌದ್ಧಿಕ ಹಾಗೂ ರಾಜಕೀಯ ಕಲಕಾಟಗಳೂ ಸಾಮಾಜಿಕ ಬದಲಾವಣೆಗಾಗಿ ಚಳುವಳಿಗಳಿಗೆ ಎಡೆಗೊಟ್ಟವು. ಆದರೆ ಸಾಮಾಜಿಕ ಬದಲಾವಣೆಗೆ ಅತ್ಯಂತ ಪ್ರಬಲವಾದ ಶಕ್ತಿ ಮೂಡಿದ್ದು, ಕೆಳಜಾತಿಗಳ ಜನರು ಹಾಗೂ ಸ್ತ್ರೀಯರು ದಬ್ಬಾಳಿಕೆಗೊಳಗಾಗಿರುವ ತಮ್ಮ ಸ್ಥಿತಿಯನ್ನು ಗಮನಕ್ಕೆ ತಂದುಕೊಂಡು ಸಮಾಜದ ಪುನರ್‌ವ್ಯವಸ್ಥೆಗಾಗಿ ಹೋರಾಡತೊಡಗಿದಾಗ ಜ್ಯೋತಿಬಾ ಫುಲೆ (Jyotiba Phule) ಯಂತಹ ವ್ಯಕ್ತಿಗಳ ನಾಯಕತ್ವದಲ್ಲಿ ಕೆಳ ಜಾತಿಗಳ ಜನ 19 ನೆಯ ಶತಮಾನದ ಕೊನೆಯಿಂದಲೇ ಬಲಯುತವಾದ ಚಳುವಳಿಗಳನ್ನು ಪ್ರಾರಂಭಿಸಿದರು. ಅದೇ ರೀತಿ ಕೇರಳ ಮತ್ತು ದಕ್ಷಿಣ ಭಾರತದ ಇತರ ಪ್ರದೇಶಗಳಲ್ಲಿ 1920 ಮತ್ತು 1930 ರ ದಶಕಗಳಲ್ಲಿ ಕೀಳುಜಾತಿಯ ಜನರು ಮೇಲಣ ಜಾತಿಯವರ ಸಾಮಾಜಿಕ ಮತ್ತು ಆರ್ಥಿಕ ದಮನದ ವಿರುದ್ಧ ಹೋರಾಡಲು ಸಿದ್ಧರಾದರು ಸ್ತ್ರೀಯರು ಮತ್ತು ಆದಿವಾಸಿ ಜನ ಕೂಡ ತಮ್ಮ ಹಕ್ಕುಗಳ ಸಮರ್ಥನೆಗಾಗಿ ರಕ್ಷಣೆಗಾಗಿ ಹೋರಾಡಲು ನಿಂತರು. ಈ ಎಲ್ಲ ಜನರನ್ನು ಪ್ರಭುತ್ವದ ವಿರುದ್ಧವಾಗಿ ಒಂದುಗೂಡಿಸುವುದಕ್ಕಾಗಿ ರಾಷ್ಟ್ರೀಯ ಚಳುವಳಿಯು

ಜಾತಿ, ಲಿಂಗ, ಧರ್ಮಗಳ ಮೇಲೆ ಆಧಾರಗೊಂಡ ಯಾವುದೇ ಪಕ್ಷಪಾತ, ವ್ಯತ್ಯಾಸ ಮಾಡುವುದಿಲ್ಲ ಎಂದು ಸಂಕಲ್ಪಮಾಡಿತು. ಅಲ್ಲದೆ ಪ್ರದರ್ಶನಗಳಲ್ಲಿ, ಬಹಿರಂಗ ಸಭೆಗಳಲ್ಲಿ, ಜನತಾ ಚಳುವಳಿಗಳಲ್ಲಿ, ಟ್ರೇಡ್ ಯೂನಿಯನ್‌ಗಳಲ್ಲಿ ಮತ್ತು ಕಿಸಾನ್ ಸಭಾಗಳಲ್ಲಿ ಒಟ್ಟಾಗಿ ಭಾಗವಹಿಸುತ್ತಿದ್ದದ್ದು ಜಾತೀಯತಾ ಭಾವನೆಯನ್ನೂ ಕೃತಕ ಉಚ್ಚಮನೋಭಾವವನ್ನೂ ತೊಡೆದುಹಾಕಿತು.

ಭಾರತೀಯ ಸಂಸ್ಕೃತಿಯ ಆಧುನೀಕರಣಕ್ಕೆ ಇನ್ನೊಂದು ಮುಖ್ಯವಾದ ಮುಖ ವಿತ್ತು. ಭಾರತೀಯ ಸಮಾಜದಲ್ಲಿ ಸಂಪ್ರದಾಯವಾದಿಯಾದ ಹಾಗೂ ಪ್ರಗತಿ ವಿರೋಧಿಯಾದ ಭಾಗಗಳು ತಮ್ಮ ಸಾಮಾಜಿಕ ಸಾಂಸ್ಕೃತಿಕ ಸ್ಥಾನಮಾನಗಳನ್ನು ಹಾಗೆಯೇ ಉಳಿಸಿಕೊಳ್ಳುವ ಸಲುವಾಗಿ, ಆಧುನಿಕ ಸಂಸ್ಕೃತಿಯ ಪ್ರವೇಶವನ್ನು ವಿರೋಧಿಸಿದುವು. ಆದರೆ ಮಧ್ಯಮ ಹಾಗೂ ಮೇಲುವರ್ಗದ ಕೆಲಭಾಗದ ಜನ ಇದಕ್ಕೆ ವಿರುದ್ಧವಾದ ಮನೋಭಾವವನ್ನೇ ತಳೆದಿದ್ದರು. ಅವರು ಪಾಶ್ಚಾತ್ಯರ ಸಹಜ, ಮಾನವೀಯ, ವೈಜ್ಞಾನಿಕ ಲಕ್ಷಣಗಳನ್ನು ಎಚ್ಚರಿಕೆಯಿಂದ ಅರಗಿಸಿಕೊಳ್ಳುವುದಕ್ಕೆ ಬದಲಾಗಿ, ಪಾಶ್ಚಾತ್ಯ ಜೀವನ ಮತ್ತು ಸಂಸ್ಕೃತಿಗಳನ್ನು ಕುರುಡಾಗಿ ಅನುಕರಿಸಿದರು. ಆಧುನಿಕತೆ ಎನ್ನುವುದು ಚಿಂತನ ವಿಧಾನ, ಮೌಲ್ಯಗಳ ಅನುಸರಣೆಯಲ್ಲಿದೆ, ಮಾತಾಡುವ ಅಥವಾ ಉಡುಪಿನ ಅಥವಾ ಆಹಾರಾಭ್ಯಾಸಗಳ ರೀತಿಗಳಲ್ಲಲ್ಲ ಎಂಬುದನ್ನು ತಿಳಿದುಕೊಳ್ಳದೆ ಅವರು ಯೂರೋಪಿಯನ್ ಆಚಾರಗಳನ್ನು ಅಭ್ಯಾಸ ಗಳನ್ನೂ ಕೇವಲ ಅನುಕರಿಸಿದರು. ಆಧುನಿಕ ವಿಚಾರಗಳು ಮತ್ತು ಸಂಸ್ಕೃತಿಯನ್ನು ಉತ್ತಮವಾಗಿ ರೂಢಿಸಿಕೊಳ್ಳಬೇಕಾದರೆ, ಅವುಗಳನ್ನು ಭಾರತೀಯ ಸಂಸ್ಕೃತಿಯೊಂದಿಗೆ ಸಮರಸಗೊಳಿಸಿಕೊಳ್ಳಬೇಕು ಎಂಬುದನ್ನು ಅವರು ತಿಳಿದುಕೊಳ್ಳಲಾರದಾದರು.

ಮತ್ತೆ ಇಲ್ಲೂ ಕೂಡ ಈ ಪರಿಸ್ಥಿತಿಯ ಮೂಲಗಳನ್ನು ವಸಾಹತುಶಾಹೀ ನೀತಿಗಳಲ್ಲೇ ನೋಡಬಹುದು. ಭಾರತೀಯರನ್ನು ತಮ್ಮ ವಸ್ತುಗಳಿಗೆ ಉತ್ತಮತರ ಗಿರಾಕಿಗಳನ್ನಾಗಿ ಮಾಡಲು, ರಾಜನಿಗೆ ಅತ್ಯಂತ ವಿಧೇಯರಾಗಿರುವ ಪ್ರಜೆಗಳನ್ನಾಗಿ ಸಲು ಬ್ರಿಟಿಷರು, ಭಾರತದ ಮೇಲೆ ವಸಾಹತುಶಾಹಿಯನ್ನು, ಬ್ರಿಟನ್ನಿನ ಸಂಸ್ಕೃತಿ ಯನ್ನು ಹೇರುವುದಕ್ಕ ಸರ್ವಪ್ರಯತ್ನವನ್ನೂ ನಡೆಸಿದರು.

ಬ್ರಿಟಿಷ್ ಲೇಖಕರು ಮತ್ತು ರಾಜನೀತಿಜ್ಞರೂ ಕೂಡ, ಭಾರತೀಯ ಸಂಸ್ಕೃತಿ ಮತ್ತು ಸಮಾಜದ ಮೇಲಿನ ವಿಮರ್ಶೆಯನ್ನು ಭಾರತದ ಮೇಲೆ ಬ್ರಿಟಿಷ್ ರಾಜಕೀಯ ಮತ್ತು ಆರ್ಥಿಕ ಪ್ರಭುತ್ವವನ್ನು ಸಮರ್ಥಿಸುವ ದೃಷ್ಟಿಯಿಂದಲೇ ಉಪಯೋಗಿಸಿದರು. ಅಂತರ್ಗತವಾಗಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ದೋಷಗಳಿಂದಾಗಿ ಭಾರತೀಯರು ಎಂದೆಂದಿಗೂ ವಿದೇಶೀಯರಿಂದ ಆಳಲ್ಪಡಬೇಕಾ ದದ್ದು ವಿಧಿನಿಯಮವಾಗಿದೆ ಎಂದು ಅವರು ಸಾರಿದರು. ಈ ಎರಡು ಅಂಶಗಳೂ ಭಾರತದಲ್ಲಿ ತೀವ್ರವಾದ ಪ್ರತಿಕ್ರಿಯೆಯನ್ನುಂಟುಮಾಡಿದುವು. ಅನೇಕ ಭಾರತೀ ಯರು ತಮ್ಮ ಬಹು ಪ್ರಾಚೀನ ಕಾಲದ ವೈಭವವನ್ನು ಎತ್ತಿಹಿಡಿದು ಸ್ವಯಮಾಡಳಿತಕ್ಕೆ ತಮ್ಮ "ಅರ್ಹತೆಯನ್ನು" ಸ್ಥಾಪಿಸುವುದು ಆವಶ್ಯಕ ಎಂದು ಭಾವಿಸಿದರು. ಮತ್ತೆ ಕೆಲವರು ಪಾಶ್ಚಾತ್ಯ ಸಂಸ್ಕೃತಿಯನ್ನು ಅನುಕರಿಸುತ್ತಿದ್ದವರನ್ನು ಅಪಹಾಸ್ಯ ಅವಹೇಳನ ಗಳಿಗೆ ಗುರಿಮಾಡಿ ಆಧುನಿಕ ಭಾವನೆಗಳು ಮತ್ತು ಸಂಸ್ಕೃತಿಯ ಪರಿಚಯ

ಮಾಡಿಕೊಳ್ಳುವುದನ್ನೇ ವಿರೋಧಿಸಿದರು. ಸಾಂಸ್ಕೃತಿಕ ಸ್ವಾಯತ್ತತೆಯನ್ನು ಉಳಿಸಿಕೊಳ್ಳಲು ಮತ್ತೊಮ್ಮೆ ತಮ್ಮೊಳಗನ್ನೇ ತಾವು ಪರೀಕ್ಷಿಸಿಕೊಳ್ಳಬೇಕಾದದ್ದು ಅತ್ಯುತ್ತಮ ಮಾರ್ಗ ಎಂದು ಅವರು ನಂಬಿದರು. ಈ ಮನೋಭಾವವು ಅಲ್ಪ ಸಂಖ್ಯಾತರಲ್ಲಿದ್ದರೂ ಕೂಡ, ಅದು ಜನತೆಯ ಮೇಲೆ ಒಂದು ನಿರ್ದಿಷ್ಟ ಪ್ರಭಾವವನ್ನು ಬೀರಿತು, ವಿಶೇಷವಾಗಿ ನಗರಗಳ ಕೆಳಮಧ್ಯಮವರ್ಗದ ಜನರ ಮೇಲೆ.

ಬ್ರಿಟಿಷ್ ಆಳ್ವಿಕೆಯು ರಾಷ್ಟ್ರದ ಇಡೀ ಭೌಗೋಳಿಕ ಪ್ರದೇಶವನ್ನು ಒಂದೇ ಆಡಳಿತಕ್ಕೆ ಒಳಪಡಿಸಿತು. ಒಂದೇ ಬಗೆಯ ಕಾನೂನುಗಳು ಮತ್ತು ಸರಕಾರವನ್ನು ಜಾರಿಗೆ ತಂದುದರಿಂದಲೂ ಆ ರೀತಿಯ ಒಗ್ಗೂಡಿಕೆ ಸಾಧ್ಯವಾಯಿತು. ರೈಲ್ವೆ, ತಂತಿ, ಆಧುನಿಕ ಅಂಚೆ ವಿಧಾನ, ರಸ್ತೆಗಳು ಮತ್ತು ಮೋಟಾರು ಸಾರಿಗೆಯ ಅಭಿವೃದ್ಧಿ ಮುಂತಾದ ಆಧುನಿಕ ಸಂಪರ್ಕ ವಿಧಾನಗಳನ್ನು ಜಾರಿಗೆ ತಂದದ್ದೂ ಅಂತಹುದೇ ಏಕೀಕರಣದ ಪರಿಣಾಮವನ್ನು ಉಂಟುಮಾಡಿತು. ಗ್ರಾಮೀಣ ಮತ್ತು ಸ್ಥಳೀಯ ಆರ್ಥಿಕ ಸ್ವಯಂಸಂಪೂರ್ಣತೆ ನಾಶವಾಗಿದ್ದುದು, ಆಂತರಿಕ ವಾಣಿಜ್ಯ ಬೆಳೆದುದು- ಇವು ಒಂದು ಏಕೀಕೃತ ಭಾರತೀಯ ಅರ್ಥವ್ಯವಸ್ಥೆಯ ಉದಯಕ್ಕೆ ತಕ್ಕ ಪರಿಸ್ಥಿತಿಗಳನ್ನು ಸೃಷ್ಟಿಸಿದುವು. ಆಧುನಿಕ ಕೈಗಾರಿಕೆಗಳು ಕಚ್ಚಾವಸ್ತುಗಳ ಮೂಲಗಳಿಗಾಗಿ ಹಾಗೂ ಮಾರುಕಟ್ಟೆಗಾಗಿ ಅಖಿಲ ಭಾರತ ವ್ಯಾಪ್ತಿಯುಳ್ಳವಾಗಿದ್ದುವು. ಅವುಗಳಲ್ಲಿನ ಕಾರ್ಮಿಕವರ್ಗವನ್ನೂ ಕೂಡ ಅಂತರ-ಪ್ರಾಂತೀಯ ಆಧಾರದ ಮೇಲೆ ವ್ಯಾಪಕ ಪ್ರಮಾಣದಲ್ಲಿ ನೇಮಿಸಿಕೊಳ್ಳಲಾಗುತ್ತಿತ್ತು. ಭಾರತದ ಜನರ ಆರ್ಥಿಕ ಮಟ್ಟವು ಹೆಚ್ಚುಹೆಚ್ಚಾಗಿ ಒಳಗೊಳಗೇ ಒಂದುಗೂಡಿ ಇಲ್ಲಿನ ಆರ್ಥಿಕ ಜೀವನ ಒಂದು ಇಡಿಯಾಗಿ ಶಿಕ್ಷಣದ ಒಂದು ಏಕರೂಪದ ಮಾದರಿ ಹಾಗೂ ರಾಷ್ಟ್ರಾದ್ಯಂತ ಜನರು ಆಧುನಿಕ ಭಾವನೆಗಳನ್ನು ಪಡೆದುಕೊಂಡದ್ದು ಇವು ಕ್ರಮೇಣ ಅಖಿಲ ಭಾರತ ಬುದ್ಧಿಜೀವಿ ವರ್ಗವೊಂದಕ್ಕೆ ಜನ್ಮವಿತ್ತುವು. ಏಕರೂಪದ ವಿಧಾನ ಮತ್ತು ಸಮಾಜವನ್ನು ಕುರಿತ ಸಮಾನ ದೃಷ್ಟಿ ಅಲ್ಲಿ ರೂಪುಗೊಂಡಿತು. ಇದೇ ರೀತಿ ಈ ಅವಧಿಯಲ್ಲಿ ಹುಟ್ಟಿದ ಎರಡು ಹೊಸ ವರ್ಗಗಳು, ಬಂಡವಾಳಗಾರ ವರ್ಗ ಹಾಗೂ ಕಾರ್ಮಿಕ ವರ್ಗ ಇವು ಲಕ್ಷಣದಲ್ಲಿ ಅಖಿಲ ಭಾರತ ಸ್ವರೂಪದ್ದಾಗಿದ್ದು ಜಾತಿ ಮತ ಧರ್ಮಗಳ ಸಾಂಪ್ರದಾಯಿಕ ವಿಭಜನೆಗಳಿಂದ ಮೇಲೇರಿದ್ದುವು.

ಇವೆಲ್ಲವುಗಳ ಜೊತೆಗೆ ಭಾರತದ ಜನರೆಲ್ಲರನ್ನೂ, ಅವರ ಸಾಮಾಜಿಕ ವರ್ಗ, ಜಾತಿ, ಧರ್ಮ, ಅಥವಾ ಪ್ರಾಂತ ಇವುಗಳ ವಿವಕ್ಷೆಯಿಲ್ಲದೆ ತುಳಿಯುತ್ತಿದ್ದ ಸಮಾನ ಶತ್ರುವಿನಿಂದಾಗಿ ಅವರು ಒಂದಾಗಿ ಕೂಡಲು ಅವಕಾಶವಾಯಿತು. ಪ್ರಭುತ್ವ ವಿರೋಧೀ ಹೋರಾಟ, ಅದ್ದರಿಂದ ಹುಟ್ಟಿದ ರಾಷ್ಟ್ರೈಕ್ಯದ ಭಾವನೆ ಇವು ಜನರನ್ನು ಒಂದಾಗಿ ಹೆಣೆದ, ಒಂದು ಸಮಾನ ರಾಷ್ಟ್ರೀಯ ದೃಷ್ಟಿಕೋನದ ಉದಯಕ್ಕೆ ಕಾರಣವಾದ ಭಾವನಾತ್ಮಕ ಮತ್ತು ಮಾನಸಿಕ ಬಂಧನವನ್ನು ಒದಗಿಸಿದುವು.

### *ಭಾರತದ ಸಾಮಾಜಿಕ ಪಂಗಡಗಳು ಹಾಗೂ ವರ್ಗಗಳು ಮತ್ತು ಬ್ರಿಟಿಷ್ ಆಳಿಕೆ*

ಕಾಲ ಉರುಳಿದಂತೆ ಬ್ರಿಟಿಷ್ ರಾಜತ್ವದ ಒತ್ತಡ ಸ್ಪಷ್ಟವಾಗಿ ಕಾಣಿಸಿತು. ಹಾಗೆಯೇ

ಬ್ರಿಟಿಷ್ ಆಳಿಕೆಗೂ ಭಾರತೀಯ ಜನರ ಹಿತಾಸಕ್ತಿಗಳಿಗೂ ಧ್ಯೇಯ ಉದ್ದೇಶಗಳಲ್ಲಿ ಇದ್ದ ಘರ್ಷಣೆ ಮತ್ತು ವೈಷಮ್ಯಗಳು ಖಚಿತವೂ ಸ್ಪಷ್ಟವೂ ಆದುವು. ಬ್ರಿಟಿಷರು ಭಾರತವನ್ನು ತಮ್ಮದೇ ಆಸಕ್ತಿಗಳನ್ನು ಪೂರೈಸಿಕೊಳ್ಳಲು ಆಳುತ್ತಿದ್ದಾರೆ; ಹಾಗೆ ಮಾಡುವಾಗ ಅವರು ಒಟ್ಟಿನಲ್ಲಿ ಬ್ರಿಟಿಷ್ ರಾಷ್ಟ್ರದ, ವಿಶೇಷವಾಗಿ ಬ್ರಿಟಿಷ್ ಬಂಡವಾಳಗಾರರ ಹಿತಗಳ ರಕ್ಷಣೆಗೋಸ್ಕರ ಭಾರತೀಯರ ಹಿತಗಳನ್ನು ಬಲಿ ಕೊಡಲು ಹಿಂದೆ ಮುಂದೆ ನೋಡುತ್ತಿಲ್ಲ; ವಸಾಹತುಶಾಹಿಯೇ ಭಾರತದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಹಿಂದುಳಿಕೆಗೆ ಮುಖ್ಯ ಕಾರಣವಾಗಿದೆ-ಎಂಬ ಈ ವಾಸ್ತವಾಂಶಗಳನ್ನು ಹೆಚ್ಚುಹೆಚ್ಚು ಜನ ಭಾರತೀಯರು ಅರ್ಥಮಾಡಿಕೊಂಡರು. ಬ್ರಿಟಿಷ್ ಆಳಿಕೆಯು ತಮ್ಮ ಬೆಳವಣಿಗೆಯನ್ನು ಎಲ್ಲ ಮೂಲ ಅಂಶಗಳಲ್ಲಿಯೂ ಕುಂಠಿತಗೊಳಿಸುತ್ತದೆ ಎಂಬುದನ್ನು ಭಾರತೀಯ ಸಮಾಜದ ಬೇರೆಬೇರೆ ವರ್ಗಗಳೂ ಪಂಗಡಗಳೂ ಕ್ರಮೇಣ ಕಂಡುಕೊಂಡುವು.

ಬ್ರಿಟಿಷ್ ವಸಾಹತುಶಾಹಿಗೆ ಮುಖ್ಯವಾಗಿ ಬಲಿಯಾದದ್ದು ಬಹುಶಃ ಇಲ್ಲಿನ ರೈತಾಪಿ ಜನತೆ. ಅವರು ಉತ್ಪಾದಿಸಿದ್ದರಲ್ಲಿ ಬಹುಭಾಗವನ್ನು ಸರಕಾರವು ಭೂಕಂದಾಯ ಮತ್ತು ಇತರ ತೆರಿಗೆಗಳ ರೂಪದಲ್ಲಿ ಕಿತ್ತುಕೊಂಡುಬಿಡುತ್ತಿತ್ತು. ಬಹುಬೇಗನೆ ಈ ಜನ ಭೂಮಾಲೀಕನ ಹಾಗೂ ಹಣ ಸಾಲಕೊಡುವ ಸಾಹುಕಾರನ ಕಪಿಮುಷ್ಟಿಗೆ ಸಿಕ್ಕಿಕೊಂಡರು. ರೈತನು ತನ್ನ ನೆಲಕ್ಕಾಗಲಿ, ತಾನು ಬೆಳೆದ ಬೆಳೆಗಾಗಲಿ ಯಜಮಾನನಾಗಿ ಉಳಿಯಲಿಲ್ಲ. ತನ್ನ ದುಡಿಮೆಯ ಶಕ್ತಿಯ ಬಗೆಗೂ ಅವನಿಗೆ ಸ್ವಾತಂತ್ರ್ಯವಿರಲಿಲ್ಲ. ರೈತರು ಜಮೀನ್ದಾರರ, ಭೂಮಾಲೀಕರ, ಸಾಹುಕಾರರ ವಿರುದ್ಧವಾಗಿ ರಾಜಕೀಯ ಮತ್ತು ಆರ್ಥಿಕ ಹೋರಾಟವನ್ನು ವ್ಯವಸ್ಥೆಗೊಳಿಸಿದಾಗ ಸರಕಾರವು ಕಾನೂನು ಶಾಂತಿ ಶಿಸ್ತುಗಳ ಹೆಸರಿನಲ್ಲಿ ಸಮಸ್ತ ಪೋಲೀಸ್ ವ್ಯವಸ್ಥೆ ಹಾಗೂ ನ್ಯಾಯಾಂಗ ವ್ಯವಸ್ಥೆಗಳನ್ನು ಕಾರ್ಯಮುಖವಾಗಿಸಿ, ಆ ಹೋರಾಟಗಳನ್ನು ಅತ್ಯಂತ ಹೇಯವಾದ ರೂಪದಲ್ಲಿ ದಮನಗೊಳಿಸುತ್ತಿತ್ತು. ಕಾಲಕಳೆದಂತೆ ಪ್ರಭುತ್ವದ ರಾಜಕೀಯ ಪಾತ್ರ ನಿಜವಾಗಿ ಏನು ಎಂಬುದು ರೈತರಿಗೆ ಅರ್ಥವಾಯಿತು. ತಮ್ಮ ವಿನಾಶಕ್ಕೆ ಅದೇ ಮುಖ್ಯ ಕಾರಣ ಎಂಬುದನ್ನು ಅವರು ಕಂಡುಕೊಂಡರು.

ಕಸಬುದಾರರು ಕೂಡ ಈ ಪ್ರಭುತ್ವದಿಂದಾಗಿ ತುಂಬ ಕಷ್ಟ ಅನುಭವಿಸಿದರು. ಶತಮಾನಗಳಿಂದ ಅವರ ಜೀವನೋಪಾಯವಾಗಿದ್ದ ಕಸಬುಗಳನ್ನು ಕಿತ್ತುಕೊಳ್ಳಲಾಗಿತ್ತು. ಆದರೆ ಪರಿಹಾರವಾಗಿ ಬೇರೆ ಉದ್ಯೋಗ ಯಾವುದೂ ಅವರಿಗೆ ದೊರೆತಿರಲಿಲ್ಲ. ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ ಅವರ ಪರಿಸ್ಥಿತಿ ತೀರಾ ಚಿಂತಾಜನಕವೂ ಅಸಹನೀಯವೂ ಆಗಿತ್ತು. ಪರಿಣಾಮವಾಗಿ ಇಪ್ಪತ್ತನೆಯ ಶತಮಾನದ ಪ್ರಭುತ್ವವಿರೋಧೀ ಹೋರಾಟಗಳಲ್ಲಿ ಬಹಳ ಕ್ರಿಯಾತ್ಮಕವಾದ ಪಾತ್ರವನ್ನು ಅವರು ವಹಿಸಿದರು.

ಆಧುನಿಕ ಕೈಗಾರಿಕೆಗಳ ಬೆಳವಣಿಗೆಯಿಂದಾಗಿ ಭಾರತದಲ್ಲಿ ಹೊಸದೊಂದು ಸಾಮಾಜಿಕ ವರ್ಗ ಹುಟ್ಟಿಕೊಂಡಿತು-ಅದೇ ಕಾರ್ಮಿಕ ವರ್ಗ. ಸಂಖ್ಯೆಯಲ್ಲಿ ಕಡಮೆಯಾಗಿದ್ದರೂ, ಜನಸಂಖ್ಯೆಯ ಬಹು ಅಲ್ಪವಾದ ಭಾಗವಾಗಿದ್ದರೂ ಈ ವರ್ಗವು ಒಂದು ಹೊಸ ದೃಷ್ಟಿಕೋನವನ್ನು ಪ್ರತಿನಿಧಿಸಿತು. ಅದು ಶತಮಾನಗಳ

ಕಾಲದ ಸಂಪ್ರದಾಯದ, ಅಭ್ಯಾಸ, ಜೀವನ ವಿಧಾನಗಳ ಹೊರೆಯನ್ನು ಹೊರ ಬೇಕಾಗಿರಲಿಲ್ಲ. ಆ ವರ್ಗದ ದೃಷ್ಟಿಕೋನ ಹಾಗೂ ಆಸಕ್ತಿಗಳು ಮೊದಲಿನಿಂದಲೂ ಅಖಿಲ ಭಾರತ ಲಕ್ಷಣಗಳನ್ನು ಹೊಂದಿದ್ದುವು. ಅಲ್ಲದೆ ಕೆಲಸಗಾರರೆಲ್ಲರೂ ಕಾರ್ಖಾನೆಗಳಲ್ಲಿ ಮತ್ತು ನಗರಗಳಲ್ಲಿ ಕೇಂದ್ರೀಕರಿಸಿದ್ದರು. ಈ ಎಲ್ಲ ಅಂಶಗಳೂ ಕೂಡಿ ಅವರ ಸಂಖ್ಯೆಯು ಸೂಚಿಸಬಹುದಾದುದಕ್ಕಿಂತಲೂ ಅಧಿಕವಾದ ಮಹತ್ವ ವನ್ನು ಕೊಟ್ಟುವು.

ಭಾರತದ ಕಾರ್ಮಿಕರು ವಿಪರೀತ ಅತೃಪ್ತಿಕರವಾದ ಪರಿಸ್ಥಿತಿಗಳಲ್ಲಿ ಬದುಕಿದ್ದರು, ದುಡಿಯುತ್ತಿದ್ದರು. 1911 ರ ವರೆಗೆ ಅವರ ದುಡಿಮೆಯ ಕಾಲವನ್ನು ಕುರಿತ ನಿರ್ದಿಷ್ಟ ವ್ಯವಸ್ಥೆಯಿರಲಿಲ್ಲ. ಕಾಯಿಲೆ, ಮುಪ್ಪು, ನಿರುದ್ಯೋಗ, ಅಪಘಾತ, ಆಕಸ್ಮಿಕ ಮರಣ ಮುಂತಾದುವುಗಳ ಎದುರಾಗಿ ಸಾಮಾಜಿಕವಾದ ಭದ್ರತೆ ಯಾವುದೂ ಇರಲಿಲ್ಲ. ಪ್ರಾವಿಡೆಂಟ್ ಫಂಡ್ (ಕ್ಷೇಮನಿಧಿ) ಯೋಜನೆ ಇರಲಿಲ್ಲ. ಅತ್ಯಂತ ಅತೃಪ್ತಿಕರವಾದ ರೂಪದಲ್ಲಿದ್ದರೂ ಪ್ರಸವಕಾಲದ ಸೌಲಭ್ಯಯೋಜನೆ ಜಾರಿಗೆ ಬಂದದ್ದು 1930 ರ ಸುಮಾರಿನಲ್ಲಿಯೇ.

ಕಾರ್ಖಾನೆಯ ಕೆಲಸಗಾರರ ನಿಜವಾದ ಸಂಬಳ 1889 ರಿಂದ 1929 ರ ಅವಧಿಯಲ್ಲಿ ಬಹುವಾಗಿ ಕ್ಷೀಣಿಸಿತು. 1930 ರಲ್ಲಿ ಟ್ರೇಡ್ ಯೂನಿಯನ್ ಚಳುವಳಿ ಎದ್ದಾಗಲೇ ಸಂಬಳದ ಶ್ರೇಣಿಗಳು 1880 ರಿಂದ 1890 ರ ವರೆಗೆ ಇದ್ದ ಮಟ್ಟಕ್ಕೆ ಮತ್ತೆ ಏರಿದ್ದು. ಇದು ನಡೆದದ್ದು ಉತ್ಪಾದನಾ ಸಾಮರ್ಥ್ಯ ಶೇಕಡಾ 50ರಷ್ಟು ಹೆಚ್ಚಾದಾಗ. ಫಲವಾಗಿ, ಸಾಮಾನ್ಯ ಕೆಲಸಗಾರನು ಜೀವನಕ್ಕೆ ಅಗತ್ಯವಾದುದಕ್ಕಿಂತ ಕಡಮೆ ಮಟ್ಟದಲ್ಲಿ ಜೀವಿಸುತ್ತಿದ್ದನು. ಬ್ರಿಟಿಷರ ಆಳಿಕೆಯಲ್ಲಿ ಭಾರತದ ಕಾರ್ಮಿಕರಿದ್ದ ಪರಿಸ್ಥಿತಿಗಳನ್ನು ಒಟ್ಟುಗೂಡಿಸಿ ಹೇಳುತ್ತಾ, ಪ್ರಸಿದ್ಧ ಜರ್ಮನ್ ಆರ್ಥಿಕ ಇತಿಹಾಸಕಾರ ಪ್ರಾಧ್ಯಾಪಕ ಜುರ್ಗನ್ ಕುಜ್‌ಯಸ್ಕಿ (Prof. Jurgen Kuczyaski) 1938 ರಲ್ಲಿ ಹೀಗೆ ಬರೆದರು: "ಆಹಾರ ಸಾಲದೆ, ಪ್ರಾಣಿಗಳನ್ನು ಇಡಲು ಯೋಗ್ಯವಾದ ವಸತಿಗಳಲ್ಲಿದ್ದುಕೊಂಡು, ಗಾಳಿ ಬೆಳಕು ನೀರು ಇಲ್ಲದೆ, ಭಾರತದ ಕೈಗಾರಿಕಾ ಕಾರ್ಮಿಕನು, ಕೈಗಾರಿಕಾ ಬಂಡವಾಳಶಾಹಿಯ ಜಗತ್ತಿನಲ್ಲಿ ಅತ್ಯಂತ ಹೆಚ್ಚು ಸುಲಿಗೆಗೊಳಗಾದ ಜೀವಿಯಾಗಿದ್ದಾನೆ."

ಟೀ ಮತ್ತು ಕಾಫಿ ಪ್ಲಾಂಟೇಷನ್ನುಗಳಲ್ಲಿ ಇದ್ದ ಪರಿಸ್ಥಿತಿ ಇನ್ನೂ ಕೇಡಾದುದು. ಈ ತೋಟಗಳಿದ್ದದ್ದು ವಿರಳವಾದ ಜನವಸತಿಯಿರುವ, ಅನಾರೋಗ್ಯಕರ ಹವೆಯಿರುವ ಪ್ರದೇಶಗಳಲ್ಲಿ. ಆದರೆ ಪ್ಲಾಂಟರರು ಕೂಲಿಗಾರರನ್ನು ಹೊರಗಿನಿಂದ ಆಕರ್ಷಿಸಲು ಸಾಕಾದಷ್ಟು ಸಂಬಳವನ್ನು ಕೊಡುತ್ತಿರಲಿಲ್ಲ. ಅದಕ್ಕೆ ಬದಲಾಗಿ ಕೂಲಿಗಾರರನ್ನು ನೇಮಿಸಿಕೊಳ್ಳಲು ಸುಳ್ಳು, ವಂಚನೆಗಳನ್ನು ಉಪಯೋಗಿಸು ತ್ತಿದ್ದರು. ಅವರು ತೋಟಗಳಲ್ಲಿ ವಾಸ್ತವವಾಗಿ ಗುಲಾಮರಂತೆ ಉಳಿದಿರುವುದಕ್ಕಾಗಿ ಕ್ರೌರ್ಯ, ಹಿಂಸೆ, ದೈಹಿಕಪೀಡನೆಗಳನ್ನು ಪ್ರಯೋಗಿಸುವುದೇ ಸಾಮಾನ್ಯವಾದ ವಿಧಾನವಾಗಿತ್ತು. ಸರಕಾರವು ತೋಟದ ಮಾಲೀಕರಿಗೆ ಪೂರ್ಣ ನೆರವು ನೀಡಿ, ಅವರು ಕೆಲಸಗಾರರನ್ನು ಸರಿಯಾಗಿ ದಮನಿಸಿ ಹತೋಟಿಯಲ್ಲಿಟ್ಟುಕೊಳ್ಳಲು ಅಗತ್ಯವಾದ ಕಾನೂನುಗಳನ್ನು ಹೊರಡಿಸುತ್ತಿತ್ತು.

ಕಾಲ ಕಳೆದಂತೆ ಭಾರತದ ಶ್ರಮಜೀವಿ ವರ್ಗವು ಉಗ್ರವಾದ ಪ್ರಭುತ್ವ-ವಿರೋಧೀ ವಿಧಾನವನ್ನು ಅನುಸರಿಸಲು ಹೊರಟಿತು.

ರಾಷ್ಟ್ರೀಯ ಚಳುವಳಿಯ ಬೆನ್ನೆಲುಬಾಗಿ ಪರಿಣಮಿಸಿದ ಇನ್ನೊಂದು ಸಾಮಾಜಿಕ ವರ್ಗವೆಂದರೆ ಜನತೆಯಲ್ಲಿನ ಮಧ್ಯಮ ಹಾಗೂ ಕೆಳ ಮಧ್ಯಮ ವರ್ಗಗಳು. 19ನೆಯ ಶತಮಾನದ ಮೊದಲ ಅರ್ಧದಲ್ಲಿ ಈ ಪಂಗಡಗಳಿಗೆ ಹೊಸ ಹೊಸ ಅವಕಾಶಗಳು ತೆರೆದಿದ್ದುವು, ಬ್ರಿಟಿಷರು ಸರಕಾರಕ್ಕೆ ಸಣ್ಣಪುಟ್ಟ ಅಧಿಕಾರಿಗಳನ್ನು ತಂಡತಂಡವಾಗಿ ನೇಮಿಸಿಕೊಂಡಾಗ. ಹಾಗೆಯೇ ಹೊಸ ಶಾಲೆಗಳು, ನ್ಯಾಯಾಲಯಗಳನ್ನು ತೆರೆದು ಹೊಸ ಹುದ್ದೆಗಳನ್ನು, ವೃತ್ತಿಗಳನ್ನು ಅವರು ಸೃಷ್ಟಿಸಿದರು. ಜೊತೆಗೆ ಆಂತರಿಕ ಹಾಗೂ ವಿದೇಶೀ ವಾಣಿಜ್ಯದಲ್ಲಿ ಇದ್ದಕ್ಕಿದ್ದಂತೆ ಕಂಡುಬಂದ ಬೆಳವಣಿಗೆಯಿಂದಾಗಿ ಎಲ್ಲ ಮಟ್ಟಗಳಲ್ಲೂ ವರ್ತಕ ವರ್ಗ ವಿಸ್ತೃತಗೊಂಡಿತು. ಆದರೆ ಅನಭಿವೃದ್ಧ ವಸಾಹತುಶಾಹೀ ಅರ್ಥವ್ಯವಸ್ಥೆಯು ತರ್ಕ ಬೇಗನೆ ತನ್ನ ಸ್ಥಾನವನ್ನು ಸ್ಥಾಪಿಸಿತು. ಹತ್ತೊಂಬತ್ತನೆಯ ಶತಮಾನದ ಕೊನೆಯವೇಳೆಗೆ ಮಿತ ಸಂಖ್ಯೆಯಲ್ಲಿದ್ದ ಸುಶಿಕ್ಷಿತ ಭಾರತೀಯರೂ ಕೂಡ-ಇಡೀ ರಾಷ್ಟ್ರದಲ್ಲಿ ಈಗ ದೆಹಲಿಯಂತಹ ಒಂದು ಚಿಕ್ಕ ಪ್ರದೇಶದಲ್ಲಿರುವುದಕ್ಕಿಂತ ಕಡಮೆ ಪ್ರಮಾಣದಲ್ಲಿ-ನಿರುದ್ಯೋಗವನ್ನು ಎದುರಿಸಬೇಕಾಯಿತು. ಅಲ್ಲದೆ ಕೆಲಸ ಸಿಕ್ಕಿದವರೂ ಕೂಡ, ಉತ್ತಮ ವೇತನಶ್ರೇಣಿಯಿರುವ ಉದ್ಯೋಗಗಳೆಲ್ಲವನ್ನೂ ಮಧ್ಯಮ ಹಾಗೂ ಮೇಲುವರ್ಗದ ಇಂಗ್ಲಿಷ್ ಜನರಿಗೇ ಮೀಸಲಾಗಿ ಇಟ್ಟಿದ್ದುದನ್ನು ಕಂಡುಕೊಂಡರು. ವಿಶ್ವವಿದ್ಯಾನಿಲಯದಿಂದ ಬಿ.ಎ. ಪದವಿಯನ್ನು ಪಡೆಯದೆ ಬಿಟ್ಟು ಬರಬೇಕಾದವರಿಗೆ ಉದ್ಯೋಗ ಸಿಕ್ಕುವುದು ಬರಬರುತ್ತಾ ತುಂಬ ಕಷ್ಟವಾಯಿತು. ಆರ್ಥಿಕವಾಗಿ ಅಭಿವೃದ್ಧಿಗೊಳ್ಳುತ್ತಿರುವ ಮತ್ತು ಸಾಮಾಜಿಕವಾಗಿಯೂ ಸಾಂಸ್ಕೃತಿಕವಾಗಿಯೂ ಆಧುನಿಕವಾಗಿರುವ ರಾಷ್ಟ್ರ ಮಾತ್ರವೇ, ತಮಗೆ ಅರ್ಹವಾದ ಅರ್ಥಪೂರ್ಣವಾದ ಬದುಕನ್ನು ನಡೆಸಲು ತಕ್ಕ ಆರ್ಥಿಕ ಹಾಗೂ ಸಾಂಸ್ಕೃತಿಕ ಅವಕಾಶಗಳನ್ನು ಒದಗಿಸುವುದು ಸಾಧ್ಯ ಎಂಬುದನ್ನು ಮಧ್ಯಮ ಮತ್ತು ಕೆಳಮಧ್ಯಮ ವರ್ಗದ ಜನ ಬೇಗನೆ ಅರ್ಥಮಾಡಿಕೊಂಡರು. ಎಲ್ಲಕ್ಕಿಂತ ಮಿಗಿಲಾಗಿ ತಮ್ಮನ್ನು ವೇಗವಾಗಿ ಆವರಿಸುತ್ತಿರುವ ದಾರಿದ್ರ್ಯ, ನಿರುದ್ಯೋಗ ಮತ್ತು ಸಾಮಾಜಿಕ-ಆರ್ಥಿಕ ಸ್ಥಾನಮಾನ ರಾಹಿತ್ಯ ಇವುಗಳಿಂದ ರಕ್ಷಿಸಬೇಕಾದರೆ ಅದರಿಂದ ಮಾತ್ರವೇ ಸಾಧ್ಯ ಎಂದು ಅವರಿಗೆ ಮನದಟ್ಟಾಯಿತು.

ಭಾರತದ ಕೈಗಾರಿಕಾ ಬಂಡವಾಳಶಾಹೀ ವರ್ಗ 1858 ರ ನಂತರ ಬೆಳೆಯಿತು. ಬಹು ಬೇಗನೆ ಈ ವರ್ಗ ಬ್ರಿಟಿಷ್ ಬಂಡವಾಳಗಾರರೊಂದಿಗೆ ಸ್ಪರ್ಧೆಗಿಳಿಯಿತು. ಆದರೆ ತನ್ನ ಬೆಳವಣಿಗೆ ಸರಕಾರದ ಅಧಿಕೃತ ವಾಣಿಜ್ಯ, ಸುಂಕದ ದರ, ಸಾರಿಗೆ, ಆರ್ಥಿಕ ನೀತಿಗಳು ಮುಂತಾದುವುಗಳಿಂದ ತಡೆಗೊಂಡಿದೆ ಎಂಬುದು ಆ ವರ್ಗದ ಜನರಿಗೆ ಅರಿವಾಯಿತು. ಸ್ವತಂತ್ರವಾದ ಆರ್ಥಿಕ ಬೆಳವಣಿಗೆಗಾಗಿ ಹೋರಾಡುತ್ತಿದ್ದ ಅದು ಹೆಚ್ಚು ಕಡಮೆ ಪ್ರತಿಯೊಂದು ಆರ್ಥಿಕ ವಿಷಯದಲ್ಲೂ ಪ್ರಭುತ್ವದೊಂದಿಗೆ ಘರ್ಷಿಸಬೇಕಾಯಿತು.

ಭಾರತೀಯ ಬಂಡವಾಳಗಾರ ವರ್ಗಕ್ಕೆ, ಪಶ್ಚಿಮ ಯೂರೋಪಿನ ಭದ್ರವಾಗಿ ಸ್ಥಾಪಿತವಾದ ಕೈಗಾರಿಕೆಗಳೊಂದಿಗೆ ಸ್ಪರ್ಧಿಸುವಲ್ಲಿ ಇದ್ದ ಪ್ರಾರಂಭಿಕ ದೌರ್ಬಲ್ಯ

ಮತ್ತು ಅಸಹಾಯಕತೆಗಳಿಗೆ ಪರಿಹಾರರೂಪವಾಗಿ ಸರಕಾರದಿಂದ ನೇರವೂ ಕ್ರಿಯಾತ್ಮಕವೂ ಆದ ನೆರವು ಅಗತ್ಯವಾಗಿತ್ತು. ಫ್ರಾನ್ಸ್, ಜರ್ಮನಿ ಮತ್ತು ಜಪಾನ್ ದೇಶಗಳಲ್ಲಿ ಸಮಕಾಲೀನ ಕೈಗಾರಿಕೆಗಳು ಸಕ್ರಿಯವೂ, ಬೃಹತ್ ಪ್ರಮಾಣದ್ದೂ ಆದ ಸರಕಾರೀ ನೆರವಿನಿಂದ ಬೆಳೆಯುತ್ತಿದ್ದುವು. ಈ ಬಗೆಯ ನೆರವು ಭಾರತದ ಬಂಡವಾಳಗಾರರಿಗೆ ದೊರಕಲಿಲ್ಲ, ಎಲ್ಲಕ್ಕಿಂತ ಮಿಗಿಲಾಗಿ ಭಾರತೀಯ ಕೈಗಾರಿಕೆಗೆ ಅಗತ್ಯವಾಗಿದ್ದದ್ದು ಸುಂಕದ ದರದ ರಕ್ಷಣೆ. ಅಗ್ಗವಾಗಿದ್ದ ವಿದೇಶೀ ವಸ್ತುಗಳು ತಮ್ಮ ಉತ್ಪಾದನೆಗಳ ಮಾರಾಟವನ್ನು ಮೀರಿಸಬಾರದೆಂಬುದೇ ಅದರ ಉದ್ದೇಶ. ಆ ರಕ್ಷಣೆ ದೊರೆಯದುದು ಹೋಗಲಿ, ಜಗತ್ತಿನ ಬೇರೆ ಯಾವುದೇ ರಾಷ್ಟ್ರದಲ್ಲಿದ್ದುದಕ್ಕಿಂತ ಹೆಚ್ಚಾದ ಪ್ರಮಾಣದಲ್ಲಿ ಸಂಪೂರ್ಣವಾಗಿ ಅನಿರ್ಬಂಧಿತ ಸುಂಕರಹಿತ ವ್ಯಾಪಾರವನ್ನು ಜಾರಿಗೆ ತರಲಾಯಿತು.

ಸಹಾನುಭೂತಿಯಿಂದ ಕೂಡಿದ ನೌಕರಶಾಹಿ ಅಥವಾ ಅಧಿಕಾರಿ ಆಡಳಿತ (Bureaucracy) ಭಾರತೀಯ ಬಂಡವಾಳಗಾರರಿಗೆ ಅನೇಕ ರೀತಿಗಳಲ್ಲಿ ನೆರವಾಗಬಹುದಾಗಿತ್ತು. ಪಶ್ಚಿಮ ಯೂರೋಪಿನಲ್ಲಿ ನೌಕರಶಾಹಿಯು ಬಂಡವಾಳಗಾರ ವರ್ಗದಂತೆಯೇ ಬಂಡವಾಳಶಾಹೀ ಪರವಾದ ಮನೋಧರ್ಮವನ್ನು ಹೊಂದಿತ್ತು. ಎರಡನ್ನೂ ನೂರಾರು ಕೊಂಡಿಗಳು ಒಟ್ಟಿಗೆ ಬೆಸೆದಿದ್ದುವು. ಆದರೆ ಭಾರತಕ್ಕೆ ನೌಕರಶಾಹಿ ವಿದೇಶೀಯವಾಗಿತ್ತು. ಅದು ಬ್ರಿಟಿಷ್ ಬಂಡವಾಳಗಾರರೊಂದಿಗೆ ಜೊತೆಗೂಡಿ ಮೋಜು ನಡೆಸುತ್ತಿತ್ತು. ಅದರ ಸಹಜ ಸಹಾನುಭೂತಿ ತಾಯ್ನಾಡು ಮತ್ತು ಅಲ್ಲಿನ ಕೈಗಾರಿಕಾ ಆಕಾಂಕ್ಷೆಗಳ ಕಡೆಗ ಇದ್ದಿತು, ಅದು ಬ್ರಿಟನ್ನಿನಲ್ಲಿರಲಿ, ಭಾರತದಲ್ಲಿರಲಿ. ಭಾರತೀಯ ಕೈಗಾರಿಕೋದ್ಯಮಗಳ ಬಗೆಗೆ ಅದು ಸಹಾನುಭೂತಿಯುತವಾಗಿರಲಿಲ್ಲ, ಅಷ್ಟೇ ಅಲ್ಲ, ದ್ವೇಷಭಾವನೆಯನ್ನೇ ತಳೆದಿತ್ತು.

ಭಾರತೀಯ ಬಂಡವಾಳಗಾರರು ಎಲ್ಲಕ್ಕಿಂತ ಹೆಚ್ಚಾಗಿ ಹೆದರಿದ್ದು ತನಗಿಂತ ಹೆಚ್ಚು ಬಲಿಷ್ಠವಾದ ವಿದೇಶೀ ಪ್ರಭುತ್ವ ಮತ್ತು ಅದರ ದಮನಕ್ಕೆ. 1918 ರ ನಂತರ ಭಾರೀ ಪ್ರಮಾಣದಲ್ಲಿ ವಿದೇಶೀ ಬಂಡವಾಳವು ಭಾರತೀಯ ಕೈಗಾರಿಕೋದ್ಯಮಕ್ಕೆ ಹರಿದುಬರತೊಡಗಿದಾಗ, ರಾಕ್ಷಸಾಕಾರದ ಬ್ರಿಟಿಷ್ ಕೈಗಾರಿಕಾ ಕಾರ್ಪೊರೇಷನುಗಳು ಭಾರತದಲ್ಲಿ ಶಾಖೆಗಳನ್ನು ತೆರೆಯತೊಡಗಿದಾಗ ಭಾರತೀಯ ಬಂಡವಾಳಗಾರರು ತಮ್ಮ ಉಳಿವಿನ ವಿಚಾರವಾಗಿ ತುಂಬ ತೀವ್ರತೆಯಿಂದ ಆಲೋಚಿಸತೊಡಗಿದರು. ಬ್ರಿಟಿಷರು ಹಾಗೆ ಮಾಡಿದುದಕ್ಕೆ ಕಾರಣ 1920 ರ ಮತ್ತು 1930 ರ ಸುಮಾರಿನಲ್ಲಿ ಸರಕಾರವು ನೀಡಿದ ಸುಂಕದರದ ರಕ್ಷಣೆ; ಅಗ್ಗವಾಗಿದ್ದ ಭಾರತೀಯ ಕೂಲಿಕಾರ ವರ್ಗದ ದುಡಿಮೆ; ಹತ್ತಿರದ ಮಾರುಕಟ್ಟೆ-ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂಬ ಆಸೆ. ಭಾರತೀಯ ಬಂಡವಾಳಗಾರರು ಈಗ ಘೋಷಣೆಯನ್ನು ಎತ್ತಿದರು: "ಭಾರತದ ಮಾರುಕಟ್ಟೆಗಳ ಮೇಲೆ ಭಾರತೀಯ ಪ್ರಭುತ್ವ" ಎಂಬುದಾಗಿ.

ಹೀಗೆ ಭಾರತೀಯ ಬಂಡವಾಳಗಾರರು ವಸಾಹತುಶಾಹೀ ಆರ್ಥಿಕ ವ್ಯವಸ್ಥೆ, ಆಡಳಿತ ಸ್ವರೂಪ, ನೀತಿಗಳು-ಇವುಗಳೊಂದಿಗೆ ತಾವು ಸ್ಪಷ್ಟವಾಗಿ ವಿರುದ್ಧವಾದ ನಿಲುವಿನಲ್ಲಿರುವುದನ್ನು ಹೆಚ್ಚುಹೆಚ್ಚಾಗಿ ಮನವರಿಕೆ ಮಾಡಿಕೊಂಡರು. ತಮಗೆ

ಬೇಕಾದದ್ದು ಒಂದು ಒಟ್ಟಾದ ರಾಷ್ಟ್ರ ಮತ್ತು ಸ್ಥಳೀಯ ಬಂಡವಾಳಗಾರನಿಗೆ ಅನುಕೂಲಕರವಾದ ಸರಕಾರ ಎಂಬುದು ಕ್ರಮೇಣ ಅವರಿಗೆ ತಿಳಿಯಿತು. ವಿದೇಶೀ ಪ್ರಭುತ್ವವು ರಾಷ್ಟ್ರವನ್ನು ಆಳುತ್ತಿರುವವರೆಗೆ ಭಾರತೀಯ ವಾಣಿಜ್ಯ ಹಾಗೂ ಕೈಗಾರಿಕೆ ವೇಗವಾಗಿ ಬೆಳೆಯುವುದು ಸಾಧ್ಯವಿರಲಿಲ್ಲ. ಆಸ್ತಿಪಾಸ್ತಿಯುಳ್ಳವರಾಗಿದ್ದುದರಿಂದ, ಬೆಳೆಯುತ್ತಿದ್ದರೂ ದುರ್ಬಲವಾಗಿದ್ದ ಒಂದು ವರ್ಗಕ್ಕೆ ಸೇರಿದವರಾಗಿದ್ದುದರಿಂದ ಅವರು ವಿದೇಶೀ ಪ್ರಭುತ್ವದ ವೈಮನಸ್ಯವನ್ನು ತಟಕ್ಕನೆ ಕಟ್ಟಿಕೊಳ್ಳಲಿಲ್ಲ. ಏಕೆಂದರೆ ಎಷ್ಟೋ ಆಡಳಿತ ಸಂಬಂಧವಾದ ಕೆಲಸಕಾರ್ಯಗಳಿಗೆ ಅವರನ್ನೇ ಇವರು ಆಶ್ರಯಿಸಬೇಕಾಗಿತ್ತು. ಆದರೆ 1918 ರ ನಂತರ ವೇಗವಾಗಿ ವರ್ಧಿಸುತ್ತಿದ್ದ ರಾಷ್ಟ್ರೀಯ ಚಳುವಳಿಗೆ ಹಾಗೂ ರಾಷ್ಟ್ರೀಯ ನಾಯಕರಿಗೆ ಅವರು ಬೆಂಬಲ ಕೊಡತೊಡಗಿದರು, ವಿಶೇಷವಾಗಿ ಹಣದ ಬೆಂಬಲವನ್ನು ಕೊಟ್ಟರು.

ರಾಷ್ಟ್ರೀಯತೆಯ ವಿಕಾಸದಲ್ಲಿ ಅತ್ಯಂತ ಮುಖ್ಯವೂ ರಚನಶೀಲವೂ ಆದ ಪಾತ್ರವಹಿಸಿದುದು ಆಧುನಿಕ ಭಾರತದ ವಿದ್ಯಾವಂತ ವರ್ಗ. ಭಾರತದಲ್ಲಿ ಬ್ರಿಟಿಷ್ ಅಧಿಕಾರದ ಸ್ಥಾಪನೆಯು ಭೂತಕಾಲದಿಂದ ತೀವ್ರವಾಗಿ ಕತ್ತರಿಸಿಕೊಂಡ, ನೂತನ ವಾದ ಐತಿಹಾಸಿಕ ಯುಗವೊಂದರ ಪ್ರಾರಂಭದ ದ್ಯೋತಕ ಎಂದು ಮೊತ್ತಮೊದಲಿಗೆ ಗುರುತಿಸಿದ ಮೊದಲನೆಯ ಸಾಮಾಜಿಕ ವರ್ಗ ಇದುವೇ ಆಗಿತ್ತು. ಇದೇಯೆ. ಬ್ರಿಟಿಷ್ ಆಳಿಕೆಯ ಬಗೆಗೆ ಅದರ ಪ್ರಾರಂಭದ ಪ್ರತಿಕ್ರಿಯೆ ಸಂದೇಹದೂರವಾಗಿತ್ತು. ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ರಾಜಾರಾಮ ಮೋಹನರಾಯ ರಂತಹ ಜನರು, ಕುರುಡು ರಾಷ್ಟ್ರೀಯ ಮನೋಭಾವನೆಯಿಂದ ಏನೂ ಪ್ರಯೋಜನವಿಲ್ಲವೆಂದೂ; ಬೆರಳೆಣಿಕೆಯಷ್ಟು ಜನ ವಿದೇಶೀಯರು ಭಾರತದಂತಹ ವಿಶಾಲ ರಾಷ್ಟ್ರವನ್ನು ಸೋಲಿಸಿದುದಕ್ಕೆ ಕಾರಣ ಅದರ ಆಂತರಿಕ ಸಾಮಾಜಿಕ ರಾಜಕೀಯ ಮತ್ತು ಬೌದ್ಧಿಕ ಸ್ವರೂಪದಲ್ಲಿನ ದೌರ್ಬಲ್ಯವೇ ಆಗಿದೆಯೆಂಬುದುಅದೇ ಸಮಯದಲ್ಲಿ ಬ್ರಿಟನ್ನು ಒಂದು ಮೇಲುಮಟ್ಟದ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಹೊಂದಿದೆ ಎಂದೂ ಸ್ಪಷ್ಟವಾಗಿ ತಿಳಿದುಕೊಂಡಿದ್ದರು. ಅವರು ಸಮಕಾಲೀನ ಭಾರತದ ಸಾಮಾಜಿಕ ರಚನೆ ಮತ್ತು ವ್ಯವಸ್ಥೆಯ ಪ್ರಾಮಾಣಿಕವಾದ ನಿಷ್ಪಕ್ಷಪಾತವಾದ ವಿಶ್ಲೇಷಣೆ ಮಾಡಿದರು. ಆಗ ಇದ್ದ ಸ್ಥಿತಿಯಲ್ಲಿ ಅದು ಭಾರತದ ಭವಿಷ್ಯದ ವಿಕಾಸಕ್ಕೆ ಆಧಾರವಾಗುವುದು ಸಾಧ್ಯವೇ ಇಲ್ಲ ಎಂದು ಅವರು ಹೇಳಿದರು. ಆದ್ದರಿಂದ ಅವರು ತಮ್ಮ ಸಮಾಜವನ್ನೂ ರಾಷ್ಟ್ರವನ್ನೂ ಆಧುನೀಕರಿಸಲು ಹೊರಟರು.

ಆರ್ಥಿಕ ಕ್ಷೇತ್ರದಲ್ಲಿ ಆಧುನಿಕ ಕೈಗಾರಿಕೆ ಮತ್ತು ಆರ್ಥಿಕಾಭಿವೃದ್ಧಿ ಹಾಗೂ ಅಭ್ಯುದಯಗಳಿಂದ ಅವರು ಆಕರ್ಷಿತರಾದರು. ಆರ್ಥಿಕವಾಗಿ ಅತಿ ಹೆಚ್ಚು ಮುಂದುವರಿದ ರಾಷ್ಟ್ರವಾದ ಬ್ರಿಟನ್ ತನ್ನ ಅಧೀನ ರಾಜ್ಯಗಳಲ್ಲಿ, ಭಾರತವೂ ಸೇರಿದಂತೆ, ಆಧುನಿಕ ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳನ್ನೂ ಆರ್ಥಿಕ ವ್ಯವಸ್ಥೆಯನ್ನೂ ಕಾರ್ಯಗತಗೊಳಿಸೀತು ಎಂದು ಅವರು ಆಶಿಸಿದರು. ರಾಜಕೀಯ ರಂಗದಲ್ಲಾದರೆ, ಪ್ರಜಾಸತ್ತೆಗೆ ದಾರಿಮಾಡುವ ಆಧುನಿಕ ಚಿಂತನೆ ಮತ್ತು ಜನರ ಪ್ರಭುತ್ವ, ವಾಕ್ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ, ಆಳುಗರನ್ನು

ಬಹಿರಂಗವಾಗಿ ವಿಮರ್ಶಿಸುವ ಹಕ್ಕು ಇವುಗಳ ಸಿದ್ಧಾಂತದಿಂದ ಆಕರ್ಷಿತರಾದರು. ತಮ್ಮ ಕಣ್ಣೆದುರಿಗೇ ಅವರು ಭಾರತದ ಏಕೀಕರಣ, ಮತ್ತು ಭಾರತದ ಜನತೆ ಒಂದು ಏಕರಾಷ್ಟ್ರವಾಗುವಂತೆ ಬೆಸೆಯುವಿಕೆ ಈ ಪ್ರಕ್ರಿಯೆಯನ್ನು ಕಂಡರು. ಬ್ರಿಟನ್ನು ಈ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ನೆರವಾಗುತ್ತದೆಂದು ಅವರು ಆಶಿಸಿದರು. ಶ್ರದ್ಧೆಗೆ ವಿರುದ್ಧವಾಗಿ ಅವರು ಆಧುನಿಕ ವಿವೇಚನಾಶಕ್ತಿಯಿಂದ ಆಕರ್ಷಿತರಾದರು. ಸಾಹಿತ್ಯ ಮತ್ತು ಕಲೆಗಳನ್ನು ಜನಪ್ರಿಯವಾಗಿಸಬೇಕು, ಕೇವಲ ವಿದ್ಯಾವಂತರಿಗೆ ಮಾತ್ರ ಮೀಸಲಾಗಿಟ್ಟರೆ ಸಾಲದು ಎಂಬುದೂ ಅವರಿಗೆ ಅರ್ಥವಾಗತೊಡಗಿತ್ತು. ಈ ಉದ್ದೇಶದಿಂದ ಅವರು ಆಧುನಿಕ ಶಿಕ್ಷಣವನ್ನು ಇಂಗ್ಲಿಷ್ ಭಾಷೆಯ ಮಾಧ್ಯಮದ ಮೂಲಕ ಹರಡಲು ಅಪೇಕ್ಷಿಸಿದರು, ಅದೇ ಸಮಯದಲ್ಲಿ ಆಧುನಿಕ ಭಾರತೀಯ ಭಾಷೆಗಳ ಅಭಿವೃದ್ಧಿಯಾಗಬೇಕೆಂದು ಇಚ್ಛಿಸಿದರು. ಸಾಮಾಜಿಕ ಕ್ಷೇತ್ರದಲ್ಲಿ ಸಾಮಾಜಿಕ ಸ್ವಾತಂತ್ರ್ಯ ಮತ್ತು ಸಮಾಜ ಹಾಗೂ ವ್ಯಕ್ತಿಯ ಮಾನವೀಯ ಕಲ್ಪನೆ-ಪ್ರತಿಯೊಬ್ಬ ವ್ಯಕ್ತಿಯನ್ನೂ ಅವನಿಗಾಗಿಯೇ ಬೆಲೆಕಟ್ಟಬೇಕು ಎಂಬುದರಿಂದ ಆಕರ್ಷಿತರಾದರು.

ಹೀಗೆ ಸುಮಾರು ಅರ್ಧ ಶತಮಾನ ಕಾಲ ಆಧುನಿಕ ಭಾರತೀಯ ಬುದ್ಧಿಜೀವಿಗಳು ಭಾರತೀಯ ಸಮಾಜದ ಪುನರ್‌ರೂಪಣ ಮತ್ತು ಪರಿವರ್ತನೆಗಳು ಬ್ರಿಟಿಷ್ ಆಳಿಕೆಯಲ್ಲಿ ಸಂಭವಿಸುತ್ತವೆ, ಸಂಭವಿಸೀತು ಎಂದು ನಂಬಿದ್ದರು. ಬ್ರಿಟನ್ ಆಗ ಅತ್ಯಂತ ಅಭಿವೃದ್ಧವಾಗಿದ್ದ ರಾಷ್ಟ್ರವಾಗಿದ್ದುದೇ ಅದಕ್ಕೆ ಕಾರಣ. ಪರಿಣಾಮವಾಗಿ ಅವರು ಬ್ರಿಟಿಷ್ ಆಳಿಕೆಯನ್ನು ಬೆಂಬಲಿಸಿದರು, ಅದು "ದೈವದತ್ತವಾದ ಕೃಪೆ" ಎಂದೂ ಬಣ್ಣಿಸಿದರು. 1857 ರ ಕ್ರಾಂತಿಯ ಸಂದರ್ಭದಲ್ಲೂ ಈ ಬೆಂಬಲವನ್ನು ಅವರು ನೀಡಿದರು.

ಆದರೆ, ಕಾಲ ಕಳೆದ ಹಾಗೆ 19ನೆಯ ಶತಮಾನದ ಮೊದಲ ಮುಕ್ಕಾಲುಭಾಗದಲ್ಲಿ ಸಂಭವಿಸಿದ ಬೆಳವಣಿಗೆಗಳು, ಅವರ ನಿರೀಕ್ಷೆಯನ್ನು ಪೂರೈಸಲಿಲ್ಲವಾಗಿ ಅವರ ಭ್ರಮೆಗಳು ಕ್ರಮೇಣ ನಿರಸನಗೊಂಡುವು. ತಮ್ಮ ನಿರೀಕ್ಷೆಗಳು ತಪ್ಪಾಗಿದ್ದುವೆಂಬುದನ್ನೂ ಬ್ರಿಟಿಷ್ ಆಳಿಕೆಯ ಸ್ವರೂಪ ಮತ್ತು ಲಕ್ಷಣವನ್ನು ಕುರಿತ ತಪ್ಪು ತಿಳಿವಳಿಕೆಯ ಮೇಲೆ ನಿಂತಿದ್ದುವೆಂಬುದನ್ನು ಅವರು ತಿಳಿಯತೊಡಗಿದರು.

ಹೀಗೆ, ಆಚರಣೆಯಲ್ಲಿ ಬ್ರಿಟಿಷರು ಭಾರತಕ್ಕೆ ಆಧುನಿಕ ತಾಂತ್ರಿಕ ವಿಜ್ಞಾನವನ್ನೂ ಕೈಗಾರಿಕೆಯನ್ನೂ ವರ್ಗಾಯಿಸಲಿಲ್ಲ. 1866 ರಿಂದ 1901 ರ ವರೆಗೆ ಸಾಲುಸಾಲಾಗಿ ಸಂಭವಿಸಿದ ಕ್ಷಾಮಗಳು ಭಾರತವನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡು, "ನಿರ್ದೇಶಿತ" ಅಭಿವೃದ್ಧಿಯ ಹಗಲುಗನಸುಗಳನ್ನು ನುಚ್ಚುನೂರು ಮಾಡಿದುವು. ಸುಶಿಕ್ಷಿತ ಜನರಿಗೆ, ಜನತೆಯ ಕಡುಬಡತನವನ್ನೂ, ರಾಷ್ಟ್ರದ ಆರ್ಥಿಕ ಅನಭಿವೃದ್ಧಿಯ ಪ್ರಕ್ರಿಯೆಯನ್ನೂ ಮನದಟ್ಟು ಮಾಡಿದುವು. ಎಲ್ಲಿಯವರೆಗೆ ಭಾರತೀಯ ಅರ್ಥವ್ಯವಸ್ಥೆಯ ಮೇಲೆ ವಿದೇಶೀ ಪ್ರಭುತ್ವದ ನಿಯಂತ್ರಣ ಮುಂದುವರಿಯುತ್ತದೋ ಅಲ್ಲಿಯವರೆಗೆ ಭಾರತವು ಆರ್ಥಿಕವಾಗಿ ಪ್ರಗತಿಹೊಂದಲು ಸಾಧ್ಯವೇ ಇಲ್ಲ, ಅದಕ್ಕೆ ಬದಲಾಗಿ ಇನ್ನೂ ಹೆಚ್ಚುಹೆಚ್ಚಾಗಿ ಕೆಳಗಿಳಿಯುತ್ತದೆ, ಎಂಬುದನ್ನು ಅರ್ಥಮಾಡಿಕೊಂಡರು. ರಾಜಕೀಯ ಕ್ಷೇತ್ರದಲ್ಲಿ ಬ್ರಿಟಿಷ್ ಅಧಿಕಾರಿಗಳು ಮತ್ತು

ರಾಜಕೀಯ ನಾಯಕರು ಭಾರತೀಯರನ್ನು ಸ್ವಯಮಾಡಳಿತಕ್ಕೆ ತರಪೇತು ಮಾಡು ತ್ತೇವೆಂಬ ಘೋಷಣೆಯನ್ನು ಕೈಬಿಟ್ಟಾಗಿತ್ತು. ಬ್ರಿಟಿಷ್ ಆಳಿಕೆಯ ರಾಜಕೀಯ ಉದ್ದೇಶ ಭಾರತದಲ್ಲಿ ಶಾಶ್ವತವಾದ "ಪ್ರಜಾಹಿತೈಷಿ ಆಳಿಕೆ"ಯನ್ನು ಸ್ಥಾಪಿಸುವುದೇ ಆಗಿದೆ ಎಂದು ಘೋಷಿಸುತ್ತಿದ್ದರು. ಭಾರತೀಯರು ಸ್ವಯಮಾಡಳಿತಕ್ಕಾಗಲಿ ಪ್ರಜಾಪ್ರಭುತ್ವಕ್ಕಾಗಲಿ "ಅನರ್ಹರು" ಎಂದು ಅವರು ಹೇಳುತ್ತಿದ್ದರು. ಭಾರತೀಯ ಬುದ್ಧಿಜೀವಿಗಳನ್ನು ಅಷ್ಟುಮಟ್ಟಿಗೆ ಆಕರ್ಷಿಸಿದ್ದ ಪತ್ರಿಕಾ ಸ್ವಾತಂತ್ರ್ಯಕ್ಕೆ ಪೆಟ್ಟು ಬೀಳತೊಡಗಿತ್ತು. ಚಿಂತನೆ, ವಾಕ್ ಮತ್ತು ಸಂಘಸ್ವಾತಂತ್ರ್ಯಗಳಂತಹ ಮೂಲ ಹಕ್ಕುಗಳನ್ನೂ ಕುಂಠಿತಗೊಳಿಸಲಾಗುತ್ತಿತ್ತು. ಶಾಂತಿಯುತ ಬೆಳವಣಿಗೆ ಮತ್ತು ಆಧುನೀಕರಣಗಳಿಗೆ ಮುಖ್ಯ ಅಗತ್ಯವೆಂದು ಮೊದಲು ಅವರಿಗೆ ತೋರಿದ್ದ ಕಾನೂನು ಮತ್ತು ಸುವ್ಯವಸ್ಥೆ ಇವು ಈಗ ರಾಜಕೀಯ ಮತ್ತು ಆರ್ಥಿಕ ವಿರೋಧಗಳಿಂದ ರಕ್ಷಿಸಿಕೊಳ್ಳಲು ಕವಚವಾದುವು. ಭಾರತದ ಒಗ್ಗೂಡಿಕೆಯನ್ನು ಪೂರ್ಣಗೊಳಿಸಿ ಅದು ಏಕರಾಷ್ಟ್ರವಾಗಿ ಅರಳುವಂತೆ ಮಾಡುವುದಕ್ಕೆ ಬದಲಾಗಿ ಬ್ರಿಟಿಷರು, ಜಾತೀಯತೆ ಮತೀಯತೆ ಪ್ರಾಂತೀಯತೆ ಮುಂತಾದ ವಿಭಜಕ ಶಕ್ತಿಗಳು ಕೆಲಸಮಾಡುವಂತೆ ಮಾಡಿ ಬಿದ್ದುಹೋಗುತ್ತಿದ್ದ ರಾಜಮನೆತನಗಳಿಗೆ ಪ್ರೋತ್ಸಾಹ ವಿತ್ತು ರಾಷ್ಟ್ರದ ಮೇಲೆ ತಮ್ಮ ಹಿಡಿತವನ್ನು ಇಟ್ಟುಕೊಳ್ಳಲು ಪ್ರಯತ್ನಿಸಿದರು. ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಗತಿ ಭಾವನೆಯು ಬಹುಬೇಗನೆ ಸುರುಟಿಹೋದುದನ್ನು ಭಾರತೀಯ ಬುದ್ಧಿಜೀವಿಗಳು ಗಮನಿಸಿದರು. ಬ್ರಿಟಿಷ್ ಇಂಡಿಯದ ಸರಕಾರವು ತನ್ನ ಬಜೆಟ್ಟಿನ ಶೇಕಡಾ ಮೂರಕ್ಕಿಂತಲೂ ಕಡಮೆ ಮೊತ್ತವನ್ನು ಶಿಕ್ಷಣದಮೇಲೆ ವೆಚ್ಚಮಾಡುತ್ತಿತ್ತು. ಸಾಮಾನ್ಯ ಜನರು ಹಾಗೂ ಸ್ತ್ರೀಯರ ಶಿಕ್ಷಣವನ್ನು ಸಂಪೂರ್ಣ ವಾಗಿ ನಿರ್ಲಕ್ಷಿಸಿತು, ಉನ್ನತ ಶಿಕ್ಷಣದ ಬಗೆಗೆ ಹಾಗೂ ಆಧುನಿಕ ಭಾವನೆಗಳ ಪ್ರಸಾರಕ್ಕೆ ವಿರೋಧಭಾವ ತಾಳಿತು. 1858 ರ ನಂತರ ಸಾಮಾಜಿಕ ಸುಧಾರಣೆಯ ಎಲ್ಲ ಪ್ರಯತ್ನಗಳನ್ನೂ ಬ್ರಿಟಿಷ್ ಆಳುಗರು ನಿಷೇಧಿಸಿದರು. ಅತ್ಯಂತ ಹಿಂದುಳಿದ, ಸಾಂಪ್ರದಾಯಿಕವಾದ, ಪ್ರಗತಿವಿರೋಧಿಯಾದ ಸಾಂಸ್ಕೃತಿಕ ಧಾರ್ಮಿಕ ಮತ್ತು ಸಾಮಾಜಿಕ ಶಕ್ತಿಗಳೊಂದಿಗೆ ಜೊತೆಗೂಡಿದರು.

ಇದರ ಪರಿಣಾಮವಾಗಿ ಭಾರತದ ಆಧುನಿಕ ಬುದ್ಧಿಜೀವಿಯು ಹೊಸದಾಗಿ ಬ್ರಿಟಿಷ್ ಆಳಿಕೆಯ ಲಕ್ಷಣವನ್ನು ಪರೀಕ್ಷಿಸುವ ಮತ್ತು ಅರಿತುಕೊಳ್ಳುವ ಕಠಿಣವಾದ ಕೆಲಸಕ್ಕೆ ತೊಡಗಿದನು. ಅವರನ್ನು ಅರ್ಥಮಾಡಿಕೊಳ್ಳಲು ಸಾಕಷ್ಟು ಕಾಲ ಹಿಡಿಯಿತು. ಆದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ, ಮೊದಲು ಭಾರತದ ಆಧುನೀಕರಣ ಎಂದು ತಮಗೆ ಅನ್ನಿಸಿದ್ದದ್ದು ವಾಸ್ತವವಾಗಿ ಅದರ ವಸಾಹತುಶಾಹೀಕರಣ ಎಂಬುದನ್ನು ಅವರು ಅರಿತುಕೊಂಡರು. ವಿದೇಶೀ ಪ್ರಭುತ್ವಕ್ಕೆದುರಾಗಿ ರಾಷ್ಟ್ರೀಯವಾದ ಒಂದು ರಾಜಕೀಯ ಚಳುವಳಿಯನ್ನು ರೂಪಿಸಲು ಹೊರಟರು.

ಇತರ ಮೂರು ಸಾಮಾಜಿಕ ವರ್ಗಗಳು-ಜಮೀನ್ದಾರರು, ಭೂಮಾಲೀಕರು ಮತ್ತು ರಾಜರು, ಉನ್ನತ ಅಧಿಕಾರಶಾಹೀ ವರ್ಗ (ಸರಕಾರೀ ಸೇವೆಯಲ್ಲಿ ಉನ್ನತ ಶ್ರೇಣಿಗಳಲ್ಲಿದ್ದ ಭಾರತೀಯರು) ಮತ್ತು ಸಾಂಪ್ರದಾಯಿಕ ಬುದ್ಧಿಜೀವಿ

ವರ್ಗ-ಇವರಿಗೆ ಪ್ರಭುತ್ವದ ಬಗೆಗೆ ಖಚಿತವಲ್ಲದ ಇಬ್ಬಗೆಯ ಮನೋಭಾವವಿತ್ತು. ಜಮೀನ್ದಾರರು, ಭೂಮಾಲೀಕರು ಮತ್ತು ರಾಜರು ಒಂದು ವರ್ಗವಾಗಿದ್ದರು. ಇವರಿಗೆ ವಿದೇಶೀ ಆಳಿಕೆಯ ಬಗೆಗೆ ವಿಧೇಯತೆ. ಏಕೆಂದರೆ ಅವರ ಇವರ ಆಸಕ್ತಿಗಳು ಒಂದೇ ಆಗಿದ್ದುವು. ಅದೇ ರೀತಿ ಮೇಲುಮಟ್ಟದ ಅಧಿಕಾರವರ್ಗದ ಭಾರತೀಯ ಸದಸ್ಯರು, ಈ ಬಡರಾಷ್ಟ್ರದಲ್ಲಿದ್ದರೂ ವಿದೇಶೀಯರ ಉನ್ನತ ಮಟ್ಟದ ಜೀವನ ಸೌಲಭ್ಯಗಳನ್ನೇ ಅವರೊಂದಿಗೆ ಹಂಚಿಕೊಂಡಿದ್ದರು. ಆಡಳಿತಾಧಿಕಾರದ ಶಕ್ತಿ ಮತ್ತು ಉನ್ನತವಾದ ಸಾಮಾಜಿಕ ಸ್ಥಾನಮಾನ ಇವುಗಳ ಭಾವನೆ ಅವರಿಗಿತ್ತು. ಒಟ್ಟಿನಮೇಲೆ ಅವರು ಕೊನೆಯವರೆಗೂ ಬ್ರಿಟಿಷ್ ಆಳಿಕೆಯ ವಿಧೇಯ ಉಪಕರಣಗಳಾಗಿಯೇ ವರ್ತಿಸಿದರು. ಆದರೂ ಈ ಎರಡು ಸ್ತರಗಳಿಂದಲೂ ಅನೇಕ ಜನರು, ಆಗ ಪ್ರಚಲಿತವಾಗುತ್ತಿದ್ದ ರಾಷ್ಟ್ರೀಯತೆಯ ಭಾವನೆಯಿಂದ ಪ್ರಚೋದಿತವಾಗಿ ರಾಷ್ಟ್ರೀಯ ಚಳುವಳಿಯನ್ನು ಸೇರಿದರು.

ಧಾರ್ಮಿಕ ಚಿಂತನಶೀಲರು, ನೌಕರರು, ಪ್ರಾಚೀನ ವಿದ್ಯಾಭ್ಯಾಸ ಪದ್ಧತಿಯ ಬೋಧಕರು, ಉಪಾಧ್ಯಾಯರು ಇವರಿಂದ ಕೂಡಿದ ಪರಂಪರಾಗತವಾದ ಬುದ್ಧಿಜೀವಿ ವರ್ಗ ಪರಸ್ಪರ ವಿರುದ್ಧವಾದ ಸೆಳೆತಗಳಿಗೆ ಸಿಕ್ಕಿ ಚೂರುಚೂರಾಗಿತ್ತು. ಅವರ ಸಾಂಪ್ರದಾಯಿಕ ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿಕೋನವು ರಾಜಕೀಯ ಸಂಪ್ರದಾಯ ವಾದದತ್ತ ಒಲಿಯುವಂತೆ ಮಾಡಿತ್ತು. ಅಲ್ಲದೆ ಆಗ ಇದ್ದ ಆಡಳಿತಕ್ಕೆ ವಿಧೇಯತೆ ತೋರಿಸುವುದೂ ಅವರ ದೀರ್ಘ ಚಾರಿತ್ರಕ ಸಾಂಪ್ರದಾಯಿಕವಾಗಿತ್ತು. ಅದೇ ಸಮಯದಲ್ಲಿ ಆಧುನಿಕ ಶಾಲೆಗಳು ಕಾಲೇಜುಗಳ ಹರಡುವಿಕೆ ಸಾಂಪ್ರದಾಯಿಕ ಪಾಠಶಾಲೆಗಳು, ಮದರಸಾಗಳು ಮತ್ತು ಉನ್ನತ ಶಿಕ್ಷಣದ ಸಾಂಪ್ರದಾಯಿಕ ಕೇಂದ್ರಗಳನ್ನು ಮುಚ್ಚುವುದಕ್ಕೆ ಕಾರಣವಾದುದರಿಂದ ಕೆಳಮಟ್ಟದ ಸಾಂಪ್ರದಾಯಿಕ ಬುದ್ಧಿಜೀವಿ ವರ್ಗದ ಬಹುಭಾಗವು ಅವನತಿಗೊಂಡಿತು. ಅನೇಕ ಸಾಂಪ್ರದಾಯಿಕ ವಿದ್ವಾಂಸರು ಆಧುನಿಕ ಸಂಸ್ಕೃತಿ ಮತ್ತು ಚಿಂತನೆ, ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣಾ ಚಳುವಳಿಗಳಿಂದ, ಇವಕ್ಕೆ ವಿರೋಧವಾಗಿದ್ದರು. ಅದಕ್ಕೆ ಆಧಾರಗಳು ಎರಡು: ಆದರ್ಶದ ಆಧಾರಗಳು ಹಾಗೂ ಅವರು ಸಮಾಜದ ಮೇಲೆ ತಮ್ಮ ಹಿಡಿತವನ್ನು ಶಿಥಿಲಗೊಳಿಸಿದುದು.ಕ್ರೈಸ್ತ ಪಾದ್ರಿಗಳು ಬಹಳ ತೀವ್ರರೀತಿಯಲ್ಲಿ ನಡೆಸುತ್ತಿದ್ದ ಮತಾಂತರ ಪ್ರಚಾರವೂ ಅವರ ಕ್ರೋಧವನ್ನು ಹೆಚ್ಚಿಸಿತು.

ಇದರಿಂದ ದೊರೆತ ಫಲ ಇಷ್ಟೆ. ಸಾಂಪ್ರದಾಯಿಕ ಬುದ್ಧಿಜೀವಿಗಳಲ್ಲಿ ಎರಡು ಪರಸ್ಪರ ವಿರೋಧೀ ಮನೋಧರ್ಮಗಳು ಕಾಣಿಸಿಕೊಂಡುವು. ಒಂದು ಮನೋಧರ್ಮದ ಅನುಯಾಯಿಗಳು ರಾಷ್ಟ್ರೀಯ ಚಳುವಳಿಗೆ ಸಕ್ರಿಯವಾಗಿ ಸೇರಿಕೊಳ್ಳುವ ಒಲವು ತೋರಿಸಿದರು. ಆಧುನಿಕ ಭಾವನೆಗಳ ಬಗೆಗೆ ಜುಗುಪ್ಸೆಯೂ ಅವರಲ್ಲಿತ್ತು. ಇನ್ನೊಂದು ಮನೋಧರ್ಮದ ಅನುಯಾಯಿಗಳು ವಿದೇಶೀ ಆಳುಗರನ್ನು ಬೆಂಬಲಿಸಿದರು. ಸಮಾಜದಲ್ಲಿ ಹಿಂದಿನಿಂದಲೂ ತಮಗಿದ್ದ ಪ್ರಭಾವಶಾಲಿಯಾದ ಸ್ಥಾನವನ್ನು ಉಳಿಸಿಕೊಳ್ಳುವ ಆಸೆ ಅವರಿಗಿತ್ತು. ಈ ಎರಡನೆಯ ಮನೋಧರ್ಮವನ್ನು ಸರಕಾರವು ಸಕ್ರಿಯವಾಗಿ ಪ್ರೋತ್ಸಾಹಿಸಿತು.

ಇದರಿಂದಾಗಿ ದೇವಾಲಯಗಳು, ಮಠಗಳು, ಮಸೀದಿಗಳು, ದರ್ಗಾಗಳು,

ಗುರುದ್ವಾರಗಳು ಮತ್ತು ಇತರ ಧಾರ್ಮಿಕ ಸಂಸ್ಥೆಗಳು ಸಾಂಪ್ರದಾಯಿಕ ಬುದ್ಧಿಜೀವಿ ವರ್ಗದ ಕೈಯಲ್ಲಿ ಭದ್ರವಾಗಿ ಉಳಿಯುವಂತೆ ಮಾಡಿದುವು. ಸರಕಾರವು ನಿವೃತ್ತಿ ವೇತನಗಳು, ಹಣದ ರೂಪದ ಬಹುಮಾನಗಳು, ಬಿರುದುಗಳನ್ನು-ಗೌರವಗಳನ್ನು ನೀಡುವುದು ಮುಂತಾದುವುಗಳ ಮೂಲಕ ಸಾಂಪ್ರದಾಯಿಕ ಶಿಕ್ಷಣವನ್ನು ಸಜೀವ ವಾಗಿಡುವುದಕ್ಕೆ ಕೃತಕವಾದ ಕ್ರಮಗಳನ್ನು ಕೈಗೊಂಡಿತು. ನಾವು ಮೊದಲೇ ನೋಡಿರುವಂತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸುಧಾರಣೆಯ ನೀತಿಯನ್ನು ತಳ್ಳಿಹಾಕಿ ಸಂಪ್ರದಾಯ ನಿಷ್ಠರ ದೃಷ್ಟಿಯಲ್ಲಿ ಗೌರವವನ್ನು ಗಳಿಸಿಕೊಂಡಿತ್ತು. ರಾಷ್ಟ್ರೀಯತೆ, ಪ್ರಜಾಸತ್ತೆ, ಆರ್ಥಿಕ ಅಭಿವೃದ್ಧಿ ಮುಂತಾದ ಆಧುನಿಕ ಭಾವನೆಗಳು ಹರಡುವುದನ್ನು ತಡೆಯುವುದಕ್ಕಾಗಿ ಬ್ರಿಟಿಷರು ಇನ್ನೂ ಒಂದು ದೃಷ್ಟಿಯನ್ನು ಹರಡಿದರು. ಭಾರತದ ಸಾಂಪ್ರದಾಯಿಕ ಭಾವನೆಗಳು ಮತ್ತು ಸಂಸ್ಥೆಗಳು ಭಾರತೀಯರಿಗೆ ಅತ್ಯಂತ ಸೂಕ್ತವಾಗಿ ಹೊಂದಿಕೆಯಾಗುವಂಥವು; ಭಾರತೀಯರು ತಮ್ಮ ತಾತ್ವಿಕ ಮತ್ತು ಧಾರ್ಮಿಕ ಪರಂಪರೆಯ ಮೇಲೆ ಹಾಗೂ ತಮ್ಮ ಜೀವನದ "ಆಧ್ಯಾತ್ಮಿಕ" ಮುಖವನ್ನು ಕುರಿತು ಕೇಂದ್ರೀಕರಿಸಬೇಕು, ಬ್ರಿಟಿಷರಿಗೆ ಅರ್ಥ ವ್ಯವಸ್ಥೆ, ರಾಜಕೀಯ ಹಾಗೂ ಆಡಳಿತಗಳ ವ್ಯವಸ್ಥೆಯ ವಿಚಾರವನ್ನು ಬಿಟ್ಟು ಬಿಡಬೇಕು-ಎಂಬುದೇ ಆ ವಾದ. ಈ ರೀತಿಯ ಕಾರ್ಯ ವಿಭಜನೆ ಕೂಡ ಸಾಂಪ್ರದಾಯಿಕ ಬುದ್ಧಿಜೀವಿ ವರ್ಗವನ್ನು ಆಕರ್ಷಿಸಿತು.

ಭಾರತದಲ್ಲಿನ ರಾಜರಾಗಲಿ ದರಿದ್ರರಾಗಲಿ, ಜಮೀನ್ದಾರರಾಗಲಿ ಗೇಣೀದಾರ ರಾಗಲಿ, ಉನ್ನತಾಧಿಕಾರಿಗಳಾಗಲಿ, ಗುಮಾಸ್ತರಾಗಲಿ, ಶ್ರೀಮಂತರಾಗಲಿ ಬಡವ ರಾಗಲಿ-ಎಲ್ಲರನ್ನೂ ರಾಷ್ಟ್ರೀಯತೆಯ ಭಾವನೆಯತ್ತ ಪ್ರಚೋದಿಸಿದ ಇನ್ನೊಂದು ಅತಿಮುಖ್ಯವಾದ ಅಂಶವೆಂದರೆ, ಆಳುಗರು ಪ್ರದರ್ಶಿಸುತ್ತಿದ್ದ ಜನಾಂಗಿಕ ಗರ್ವ. ಭಾರತದಲ್ಲಿ ಬ್ರಿಟಿಷರು ಯಾವಾಗಲೂ ಭಾರತೀಯರಿಂದ ದೂರದಲ್ಲಿಯೇ ಇರು ತ್ತಿದ್ದರು, ಜನಾಂಗ ದೃಷ್ಟಿಯಿಂದ ತಾವು ಮೇಲಾದವರೆಂದು ಭಾವಿಸಿಕೊಂಡಿದ್ದರು. ಆದರೆ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಇದರಲ್ಲಿ ಒಂದು ಗುಣ ಬದಲಾವಣೆ ಉಂಟಾಯಿತು. ಎರಡೂ ವರ್ಗದ ನಡುವೆ ಸಾಮಾಜಿಕ ಹಾಗೂ ಜನಾಂಗಿಕ ಭಿನ್ನತೆಯ ಕಂದಕ ಅಗಲವಾಯಿತು. ಕರಿಯರಿಗಿಂತ ಬಿಳಿಯರು ಮೇಲಾದವರು ಎಂದು ಬೋಧಿಸುವ ಸಿದ್ಧಾಂತಗಳು ಯೂರೋಪಿನಲ್ಲೆಲ್ಲ ಹರಡಿದುವು, ಪ್ರಭುತ್ವ ಹಾಗೂ ಸಾಮ್ರಾಜ್ಯಶಾಹಿ ತತ್ವಗಳು ವಿಕಾಸಗೊಂಡ ಹಾಗೆ. ಭಾರತದಲ್ಲಿದ್ದ ಬ್ರಿಟಿಷರು ಈಗ ಬಹಿರಂಗವಾಗಿ, ಭಾರತೀಯರು ಕೀಳುಜನಾಂಗ ದವರು ಎಂದು ಘೋಷಿಸಿ ಆಕ್ರಮಿತ ಅಧಿಕಾರದ ಸೌಲಭ್ಯಗಳನ್ನು ಸ್ಥಿರಪಡಿಸಿ ಕೊಂಡರು. ವೈಸರಾಯ್ ಆಗಿದ್ದ ಮೇಯೋ (Mayo) ಅಂತಹ ದೊಡ್ಡ ವ್ಯಕ್ತಿ 1870 ರಲ್ಲಿ ಪಂಜಾಬಿನ ಲೆಫ್ಟಿನೆಂಟ್ ಗವರ್ನರನಿಗೆ ಹೀಗೆ ಬರೆದನು: "ನಾವು ಒಂದು ಕೆಳಮಟ್ಟದ ಜನಾಂಗವನ್ನು ಆಳುವ ಭವ್ಯವಾದ ಕೆಲಸದಲ್ಲಿ ತೊಡಗಿರುವ ಬ್ರಿಟಿಷ್ ಸಭ್ಯಜನ ಎಂಬುದನ್ನು ನಿಮ್ಮ ಕೈಕೆಳಗಿನವರಿಗೆ ಕಲಿಸಿರಿ". ಈ ರೀತಿ ಜನಾಂಗಿಕ ಗರ್ವ ದುರಹಂಕಾರಗಳು ಪ್ರಜ್ವಲಿಸಿ ಕಾಣತೊಡಗಿದಾಗ, ಆಲೋಚನಾಶಕ್ತಿಯಿರುವ, ಆತ್ಮಗೌರವವಿರುವ ಪ್ರತಿಯೊಬ್ಬ ಭಾರತೀಯನೂ ತನಗ ಅಪಮಾನವಾದಂತೆ

ಭಾವಿಸಿದನು. ತಾನು ದೀನನಾದಂತೆ ಭಾವಿಸಿದನು, ರಾಷ್ಟ್ರೀಯತಾ ಚಟುವಟಿಕೆಯತ್ತ ಸಿಡಿದೆದ್ದನು.

ಸಂಗ್ರಹಿಸಿ ಹೇಳಬೇಕಾದರೆ, ಬ್ರಿಟಿಷ್ ಆಳ್ವಿಕೆಯ ಮೂಲ ವಸಾಹತುಶಾಹೀ ಲಕ್ಷಣ ಹಾಗೂ ಭಾರತೀಯ ಜನಜೀವನದ ಮೇಲೆ ಅದರ ಕೆಟ್ಟ ಪ್ರಭಾವ ಇವು, ಭಾರತದಲ್ಲಿ ಶಕ್ತಿಯುತವಾದ ಸಾಮ್ರಾಜ್ಯಶಾಹೀ ವಿರೋಧಿ ಚಳುವಳಿಯ ಉದಯ ಮತ್ತು ಬೆಳವಣಿಗೆಗೆ ಎಡೆಗೊಟ್ಟುವು. ಇದು ರಾಷ್ಟ್ರೀಯ ಚಳುವಳಿಯಾಗಿತ್ತು. ಏಕೆಂದರೆ, ಅದು ತನ್ನ ವ್ಯಾಪ್ತಿಯಲ್ಲಿ ಭಾರತೀಯ ಸಮಾಜದ ಎಲ್ಲ ಬೇರೆಬೇರೆ ವರ್ಗಗಳನ್ನೂ ಪಂಗಡಗಳನ್ನೂ ಒಳಗೊಂಡಿತ್ತು. ಈ ವರ್ಗಗಳು ಮತ್ತು ಪಂಗಡಗಳು ಪ್ರಭುತ್ವದೊಂದಿಗೆ ತಮ್ಮದ್ದೇ ವಿರೋಧಗಳನ್ನು ಹೊಂದಿದ್ದವು. ಆ ವಿರೋಧಗಳೇ ಅವರನ್ನು ಒಂದು ಸಮಾನ ರಾಷ್ಟ್ರೀಯ ಚಳುವಳಿಯನ್ನು ಒಟ್ಟಿಗೆ ಸೇರಿಸಿದ್ದುವು. ಅವುಗಳ ನಡುವೆ ಪರಸ್ಪರ ಆಸಕ್ತಿಗಳ ಭಿನ್ನತೆಗಳೂ ಇದ್ದುವು. ಆದರೆ ತಮ್ಮ ನಡುವಣ ಭಿನ್ನತೆಗಳನ್ನು ಅಡಗಿಸಿ, ಅವರು ಸಮಾನ ಶತ್ರುವಿಗೆ ಎದುರಾಗಿ ಒಟ್ಟಾದರು.

# II

# ಮೊದಲನೆ ಹಂತ

### *(ಅ) ಸಾಂಪ್ರದಾಯಿಕ ಪ್ರತಿಭಟನೆ*

ಬ್ರಿಟಿಷ್ ಆಳಿಕೆಯನ್ನು ಭಾರತೀಯರು ಅದರ ಪ್ರಾರಂಭದಿಂದಲೇ ಪ್ರತಿಭಟಿಸಿದರು. 1857 ರ ವರೆಗೂ ದೇಶದ ಒಂದಿಲ್ಲ ಒಂದು ಭಾಗವು ಸಶಸ್ತ್ರ ದಂಗೆಯಿಂದ ಕ್ಷೋಭೆಗೊಳ್ಳದ ಒಂದೇ ಒಂದು ವರ್ಷವೂ ಇರಲಿಲ್ಲ. ಲಕ್ಷಣದಲ್ಲಿ ಸಂಪೂರ್ಣವಾಗಿ ಸಾಂಪ್ರದಾಯಿಕವಾಗಿದ್ದ ಈ ಪ್ರತಿಭಟನೆಯು ಮೂರು ಮುಖ್ಯ ರೂಪಗಳಲ್ಲಿ ವ್ಯಕ್ತವಾಗುತ್ತಿತ್ತು. ಪೌರ ಪ್ರತಿಭಟನೆಗಳು, ಬುಡಕಟ್ಟುಗಳ ದಂಗೆಗಳು ಮತ್ತು ರೈತರ ಚಳುವಳಿಗಳು ಹಾಗೂ ದಂಗೆಗಳು.

### *ಪೌರ ಪ್ರತಿಭಟನೆಗಳು*

ಬ್ರಿಟಿಷರು ಭಾರತವನ್ನು ಗೆದ್ದದ್ದು, ಬ್ರಿಟಿಷ್ ಆಳಿಕೆಯನ್ನು ಸಮಗ್ರಗೊಳಿಸಿದ್ದು-ಈ ಪ್ರಕ್ರಿಯೆಯ ಜೊತೆಯಲ್ಲೇ ಜನತೆಯಲ್ಲಿ ತೀವ್ರವಾದ ಅತೃಪ್ತಿಯೂ ಅಸಮಾಧಾನವೂ ತಲೆದೋರಿದುವು. ಬ್ರಿಟಿಷ್ ಇಂಡಿಯದ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಭಾರತೀಯ ಯೋಧರ ಮೇಲೂ ಇದೇ ಪರಿಣಾಮ ಉಂಟಾಯಿತು. ಸುಮಾರು 100 ವರ್ಷಗಳವರೆಗೆ ಜನತೆಯ ಈ ಅತೃಪ್ತಿಯು ಪಡೆದ ರೂಪಗಳು ಹಲವಾರು. ಪದಚ್ಯುತ ಸೇನಾ ನಾಯಕರು ಅಥವಾ ಅವರ ಉತ್ತರಾಧಿಕಾರಿಗಳು ಅಥವಾ ಬಂಧುಗಳು, ಜಮೀನ್ದಾರರು ಮತ್ತು ಪಾಳೆಯಗಾರರು, ಹಿಂದೆ ಯೋಧರಾಗಿದ್ದವರು, ಭಾರತೀಯ ಸಂಸ್ಥಾನಗಳ ಅಧಿಕಾರಿಗಳು ಮತ್ತು ಅವರ ಹಸ್ತಕರು-ಈ ಜನ ಸಶಸ್ತ್ರ ಪ್ರತಿಭಟನೆಯನ್ನು ಪ್ರದರ್ಶಿಸುತ್ತಿದ್ದರು. ಕೃಷಿಕವರ್ಗ ಮತ್ತು ಕುಶಲಕರ್ಮಿಗಳಲ್ಲಿ ಅನೇಕ ಜನರು ಈ ದಂಗೆಗಳಲ್ಲಿ ಜೊತೆಗೂಡುತ್ತಿದ್ದರು. ತಮಗಾದ ಅನ್ಯಾಯಗಳು ಮತ್ತು ಕಷ್ಟನಷ್ಟಗಳಿಂದಾಗಿ ಅವರು ಒಂದಾಗಿ ಸೇರಿ ಆ ಪ್ರತಿಭಟನೆಗಳಿಗೆ ಆಧಾರವಾಗುತ್ತಿದ್ದರು. ಬಂಗಾಳ ಮತ್ತು ಬಿಹಾರಗಳಲ್ಲಿ ಬ್ರಿಟಿಷ್ ಆಡಳಿತವು ಸ್ಥಾಪಿತವಾದಂದೇ ಈ ಪೌರ ಪ್ರತಿಭಟನೆಗಳೂ ಪ್ರಾರಂಭವಾದುವು. ಭೂಕಂದಾಯದ ಒತ್ತಾಯ ಅತಿಯಾದದ್ದು, ಈಸ್ಟ್ ಇಂಡಿಯಾ ಕಂಪೆನಿ ಮತ್ತು ಅದರ ನೌಕರರು ಕುಶಲಕರ್ಮಿಗಳ ಸುಲಿಗೆ ಮಾಡಿದ್ದು, ಹಳೆಯ ಜಮೀನ್ದಾರರನ್ನು ಉರುಳಿಸಿದ್ದು-ಈ ಎಲ್ಲ ಕೂಡಿ ಒಂದು ಸ್ಫೋಟಕ ಪರಿಸ್ಥಿತಿಯನ್ನುಂಟುಮಾಡಿದುವು. ಪಶ್ಚಿಮಕಡೆ ಪ್ರತಿಯೊಂದು ಜಿಲ್ಲೆಯಲ್ಲೂ ಪ್ರಾಂತದಲ್ಲೂ ಜನತಾ ಬಂಡಾಯಗಳು ನಡೆದುವು. ಜನತೆಯಲ್ಲಿ ಮೂಡಿದ್ದ ಅಸಮಾಧಾನ ಎಷ್ಟು ವ್ಯಾಪಕವಾಗಿತ್ತೆನ್ನುವುದನ್ನು

ನಿದರ್ಶಿಸಲು ಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ಸೂಚಿಸಬಹುದು.

ಬಂಗಾಳದ ನಿವೃತ್ತ ಸೈನಿಕರು ಮತ್ತು ತಮ್ಮ ಸ್ಥಳ ತ್ಯಜಿಸಿಬಂದ ರೈತರು ಪ್ರಸಿದ್ಧವಾದ ಸನ್ಯಾಸಿ ದಂಗೆಯಲ್ಲಿ ಭಾಗವಹಿಸಿದ್ದರು. ಧಾರ್ಮಿಕ ಸನ್ಯಾಸಿಗಳೂ, ಎಲ್ಲವನ್ನೂ ಕಳೆದುಕೊಂಡ ಜಮೀನ್ದಾರರೂ ಆ ದಂಗೆಯ ನೇತೃತ್ವ ವಹಿಸಿದ್ದರು. ಸನ್ಯಾಸಿ ದಂಗೆಯು 1763 ರಿಂದ 1800 ರ ವರೆಗೆ ನಡೆಯಿತು. ಅದರ ಹಿಂದೆಯೇ ಚುಆರ್ (Chuar)ದಂಗೆಯೆದ್ದಿತು. ಬಂಗಾಳ ಮತ್ತು ಬಿಹಾರಗಳ ಐದು ಜಿಲ್ಲೆಗಳಲ್ಲಿ ಅದು ವ್ಯಾಪಿಸಿತ್ತು. ಇದು ನಡೆದದ್ದು 1766ರ ರಿಂದ 1772 ರ ವರೆಗೆ. ಹಾಗೆಯೇ 1795 ರಿಂದ 1816 ರ ವರೆಗೆ ಇನ್ನೂ ಒಂದು ಚುಆರ್ ದಂಗೆ ಎದ್ದಿತು.

ರಾಷ್ಟ್ರದ ಬೇರೆ ಭಾಗಗಳಿಗೆ ಬ್ರಿಟಿಷ್ ಆಡಳಿತವು ವ್ಯಾಪಿಸಿದಂತೆ, ಅಂಥವೇ ದಂಗೆಗಳು ಅಲ್ಲೂ ಸಂಭವಿಸಿದುವು. ಒರಿಸ್ಸಾ ಜಮೀನ್ದಾರರ ಬಂಡಾಯ 1804 ರಿಂದ 1817 ರ ವರೆಗೆ ನಡೆಯಿತು. ದಕ್ಷಿಣ ಭಾರತದಲ್ಲಿ ವಿಜಯನಗರದ ರಾಜನು 1794 ರಲ್ಲಿ ಬಂಡೆದ್ದನು. 1790 ರ ಸುಮಾರಿನಲ್ಲಿ ತಮಿಳುನಾಡಿನ ಪಾಳೆಯಗಾರರು ದಂಗೆಯೆದ್ದರು, 1801 ರಲ್ಲಿ ಮಲಬಾರ್ ಮತ್ತು ದಿಂಡಿಗಲ್‌ನವರು, 1801 ರಿಂದ 1805 ರ ವರೆಗೆ ಆಂಧ್ರದ ಕರಾವಳಿಯವರು, 1813 ರಿಂದ 1834 ರ ವರೆಗೆ ಪರ್ಲಕಿಮಿಡಿಯವರು ಪ್ರತಿಭಟಿಸಿದರು. 1800 ರಲ್ಲಿ, ಮತ್ತೆ 1831 ರಲ್ಲಿ ಮೈಸೂರಿನವರು ಎದುರೆದ್ದರು. 1830-34 ರ ಅವಧಿಯಲ್ಲಿ ವಿಶಾಖಪಟ್ಟಣದ ದಂಗೆ ನಡೆಯಿತು. ತಿರುವಾಂಕೂರಿನ ದಿವಾನ ವೇಲುತಂಬಿ 1805 ರಲ್ಲಿ ಬಂಡೆದ್ದನು. ಪಶ್ಚಿಮ ಭಾರತದಲ್ಲಿ ಸೌರಾಷ್ಟ್ರದ ನಾಯಕರು 1816 ರಿಂದ 32 ರ ವರೆಗೆ ಪದೇ ಪದೇ ದಂಗೆಯೆದ್ದರು. ಗುಜರಾತಿನ ಕೋಲಿ (Kolis)ಗಳು 1824-25, 1828, 1839 ಮತ್ತು 1849 ರಲ್ಲಿ ಅದನ್ನೇ ಅನುಕರಿಸಿದರು. ಮಹಾರಾಷ್ಟ್ರದಲ್ಲಿ ಲೆಕ್ಕವೇ ಇಲ್ಲದಷ್ಟು ದಂಗೆಗಳಾದುವು. ವಾಸ್ತವವಾಗಿ ಮಹಾರಾಷ್ಟ್ರವು ಎಡೆಬಿಡದೆ ದಂಗೆಯ ಸ್ಥಿತಿಯಲ್ಲೇ ಇತ್ತು. ಕಿತ್ತೂರು ದಂಗೆ (1824-29),ಕೊಲ್ಹಾಪುರ ದಂಗೆ (1824),ಸತಾರ ಬಂಡಾಯ (1841) ಮತ್ತು ಗಡ್ಕರಿಗಳ ಪ್ರತಿಭಟನೆ (1844) ಇವನ್ನು ಇಲ್ಲಿ ವಿಶೇಷವಾಗಿ ಹೆಸರಿಸಬೇಕು. ಉತ್ತರ ಭಾರತವೂ ಪ್ರತಿಭಟನೆಯಲ್ಲಿ ಕಡಮೆಯೇನಾಗಿರಲಿಲ್ಲ. ಉತ್ತರ ಪ್ರದೇಶದ ಪಶ್ಚಿಮ ಭಾಗದ ಮತ್ತು ಹರಿಯಾನದ ಜಾಟರು (Jats)1824ರಲ್ಲಿ ಉಗ್ರವಾದ ಕ್ಷೋಭೆಗಳನ್ನು ಉಂಟುಮಾಡಿದರು. ಇತರ ಮುಖ್ಯ ಕ್ರಾಂತಿಗಳೆಂದರೆ, 1805ರಲ್ಲಿ ನಡೆದ ಬಿಲಾಸಪುರದ ರಜಪೂತರದ್ದು, 1814-17ರಲ್ಲಿ ನಡೆದ ಆಲಿಘಡದ ತಾಲ್ಲೂಕುದಾರರದು ಮತ್ತು 1842 ರಲ್ಲಿ ಜಬ್ಬಲ್‌ಪುರದ ಬುಂದೇಲರದು.

ಭಾರತದಲ್ಲಿ ಬ್ರಿಟಿಷ್ ಆಳಿಕೆಯ ಮೊದಲ ನೂರು ವರ್ಷಗಳ ಕಾಲದ ಇತಿಹಾಸದುದ್ದಕ್ಕೂ ಎಳೆಯಂತೆ ಹರಿದ ಈ ದಂಗೆಗಳಿಗೆ ಆಧಾರವಾಗಿದ್ದದ್ದು, ರೈತರು, ಜಮೀನ್ದಾರರು ಮತ್ತು ಚಿಕ್ಕಪುಟ್ಟ ನಾಯಕರ ನಡುವೆ ಇದ್ದ ಪರಂಪರಾಗತವಾದ ಸಂಬಂಧಗಳು ಮತ್ತು ವಿಧೇಯತೆಗಳು. ಅವು ಸ್ವರೂಪದಲ್ಲಿ ಸಂಪೂರ್ಣವಾಗಿ ಸ್ಥಳೀಯವಾದುವು ಹಾಗೂ ಬೇರೆಬೇರೆಯಾಗಿದ್ದುವು. ಅವು ಹಿಂದುಳಿದ ರೀತಿಯವು. ಆಧುನಿಕವಾದ ರಾಷ್ಟ್ರೀಯತೆಯ ಪ್ರಜ್ಞೆಯಾಗಲಿ, ವಸಾಹತುಶಾಹಿಯ ಸ್ವರೂಪ ಮತ್ತು ಲಕ್ಷಣಗಳ ಇತ್ತೀಚಿನ ಅರಿವಾಗಲಿ, ನೂತನ ಸಾಮಾಜಿಕ ಸಂಬಂಧಗಳ

ಆಧಾರಗಳ ಮೇಲೆ ನೂತನ ಸಮಾಜವನ್ನು ಕಟ್ಟಬೇಕೆಂಬ ಭಾವನೆಯಾಗಲಿ ಅವುಗಳಲ್ಲಿ ಇರಲಿಲ್ಲ. ಅವುಗಳ ನಾಯಕತ್ವವೂ ಅಷ್ಟೆ, ಅನಿವಾರ್ಯವಾಗಿ ಸಾಂಪ್ರದಾಯಿಕ ಸ್ವರೂಪದಲ್ಲಿದ್ದು, ತಮ್ಮ ಸುತ್ತ ಇರುವ ಬದಲಾಗುತ್ತಿರುವ ವಿಶ್ವದ ಅರಿವು ಸ್ವಲ್ಪವೂ ಅಲ್ಲಿ ಕಾಣುತ್ತಿರಲಿಲ್ಲ. ಅವುಗಳನ್ನು ಅಡಗಿಸಲು ಕೆಲವು ಸಾರಿ ಬ್ರಿಟಿಷರು ಭಾರೀ ಸೈನ್ಯಗಳನ್ನೇ ಬಳಸಬೇಕಾಯಿತಾದರೂ, ನಿಜವಾಗಿಯೂ ಆ ಹೋರಾಟಗಳು ಬ್ರಿಟಿಷರಿಗೆ ಸವಾಲಾಗಿರಲಿಲ್ಲ. ವಿದೇಶೀ ಆಡಳಿತಕ್ಕೆ ವಿರುದ್ಧವಾಗಿ ಹೋರಾಟದ ಸ್ಥಳೀಯ ಪರಂಪರೆಯನ್ನು ನಿರ್ಮಿಸಿದುದೇ ಅವು ನೀಡಿದ ಕಾಣಿಕೆಯಾಗಿತ್ತು.

ಬ್ರಿಟಿಷ್ ಆಳಿಕೆಗೆ ಎದುರಾಗಿದ್ದ ಸಾಂಪ್ರದಾಯಿಕ ವಿರೋಧವು ಸಿಡಿದು ಶಿಖರವನ್ನು ಮುಟ್ಟಿದ್ದು 1857 ರಲ್ಲಿ. ಲಕ್ಷಾಂತರ ರೈತರು, ಕುಶಲಕರ್ಮಿಗಳು, ಸೈನಿಕರು ಅದರಲ್ಲಿ ಪಾಲುಗೊಂಡಿದ್ದರು. 1857 ರ ಕ್ರಾಂತಿಯು ಬ್ರಿಟಿಷ್ ಆಳಿಕೆಯನ್ನು ಬುಡಸಹಿತ ಅಲುಗಿಸಿತು.

ಈ ಕ್ರಾಂತಿಯು ಸಿಪಾಯಿಗಳ (ಈಸ್ಟ್ ಇಂಡಿಯಾ ಕಂಪೆನಿಯ ಭಾರತೀಯ ಸೈನಿಕರ) ದಂಗೆಯಿಂದ ಪ್ರಾರಂಭವಾಗಿ ವಿಶಾಲ ಪ್ರದೇಶ ಹಾಗೂ ಜನತೆಯನ್ನು ಆವರಿಸಿತು. ವಿದೇಶಿ ಸರಕಾರದ ವಿರುದ್ಧ ಜನರಿಗಿದ್ದ ಜಿಗುಪ್ಸೆ ಕುಂದುಕೊರತೆಗಳು ಸಾಕಷ್ಟು ಕಾಲದಿಂದ ಒಟ್ಟುಗೂಡಿದ ಪರಿಣಾಮವಿದು. ಭೂ ಸುಧಾರಣೆಗಳು ರೈತರಿಗೆ ಭೂಮಿ ಇಲ್ಲವಾಗಿಸಿತು. ಪೋಲೀಸರು, ಸಣ್ಣ ಹುದ್ದೆಗಳಲ್ಲಿನ ಅಧಿಕಾರಿಗಳು ಹಾಗೂ ಕೆಳಮಟ್ಟದ ನ್ಯಾಯಾಲಯಗಳು ಭ್ರಷ್ಟಾಚಾರಗಳಿಂದ ತುಂಬಿದ್ದುವು. ಈ ಎಲ್ಲಾ ಕಾರಣಗಳಿಂದ ರೈತರಿಗೆ ಸಾಕಷ್ಟು ಅಸಮಾಧಾನವಾಗಿತ್ತು. ಉತ್ತರ ಭಾರತದಲ್ಲಿನ ಮಧ್ಯಮ ಹಾಗೂ ಮೇಲಣ ಮಧ್ಯಮ ವರ್ಗದ ಜನರಿಗೆ ಒಳ್ಳೆಯ ಸಂಬಳ ದೊರಕುವ ಉದ್ಯೋಗಗಳಿಗೆ ಅವಕಾಶವಿರಲಿಲ್ಲ. ಪುರೋಹಿತರು, ಪಂಡಿತರು, ಮೌಲ್ವಿಗಳು ಇವೇ ಮುಂತಾದವರಿಗೆ ಜೀವನೋಪಾಯ ಇಲ್ಲವಾಯಿತು. ಇವರುಗಳಿಗೆ ಪ್ರೋತ್ಸಾಹ ನೀಡುತ್ತಿದ್ದ ಭಾರತೀಯ ರಾಜರುಗಳು, ಜಮೀನುದಾರರು ತಮ್ಮ ಅಧಿಕಾರಗಳನ್ನು ಕಳೆದುಕೊಂಡುದುದೇ ಇದಕ್ಕೆ ಕಾರಣ. 1856 ರಲ್ಲಿ ಬ್ರಿಟಿಷರು ಅವಧವನ್ನು ಆಕ್ರಮಿಸಿಕೊಂಡದ್ದು ಎಲ್ಲೆಡೆಯಲ್ಲೂ ವಿರೋಧವನ್ನು ಪ್ರಕಟಿಸಿತು. ಈ ಕ್ರಮದಿಂದಾಗಿ ಕಂಪೆನಿಯ ಸೈನಿಕರ ಕೋಪ ಉಕ್ಕೇರಿತು. ಅವರುಗಳ ಪೈಕಿ ಅನೇಕರು ಅವಧಕ್ಕೆ ಸೇರಿದವರಾಗಿದ್ದರು. ಇಷ್ಟೇ ಅಲ್ಲದೆ ಅವಧದಲ್ಲಿದ್ದ ಅವರ ಸಂಸಾರಗಳು ಭೂಕಂದಾಯವನ್ನು ಹೆಚ್ಚಾಗಿ ಕೊಡಬೇಕಾಗಿ ಬಂತು. ಅನೇಕ ತಾಲ್ಲೂಕುದಾರರ ಹಾಗೂ ಜಮೀನುದಾರರ ಜಮೀನುಗಳನ್ನು ಸಹ ಬ್ರಿಟಿಷರು ವಶಪಡಿಸಿಕೊಂಡರು. ಜಮೀನುಗಳನ್ನು ಕಳೆದುಕೊಂಡ ಈ ತಾಲ್ಲೂಕುದಾರರು ಬ್ರಿಟಿಷ್ ಅಧಿಕಾರವನ್ನು ತೀವ್ರವಾಗಿ ವಿರೋಧಿಸಿ ಅಪಾಯಕಾರಿ ಆಗಲಾರಂಭಿಸಿದರು. ವೈಸರಾಯ್ ಡಾಲ್‌ಹೌಸಿಯ ಆಕ್ರಮಣಕಾರಿ ಅಧಿಕಾರವು ಅನೇಕ ರಾಜರುಗಳಲ್ಲಿ ಭಯವನ್ನು ಹುಟ್ಟಿಸಿತು. ವಿದೇಶಿ ಪ್ರಭುತ್ವಕ್ಕೆ ಸಂಪೂರ್ಣವಾಗಿ ಶರಣಾಗಿ ಅವರ ವಿಧೇಯರಾಗಿರುವುದು ಅವರ ಇರುವಿಕೆಗೆ ಭದ್ರವಾದ ಕ್ರಮವಲ್ಲವೆಂದು ಈ ರಾಜರು ಅರಿತರು. ರಾಜ್ಯಗಳನ್ನು ವಶಪಡಿಸಿಕೊಳ್ಳುವ ಬ್ರಿಟಿಷರ ದಮನಕಾರಿ ಶಾಸನದಿಂದಾಗಿ ನಾನಾ ಸಾಹೇಬ್, ಝಾನ್ಸಿಯ ರಾಣಿ, ಬಹದೂರ್ ಷಾ, ಇವರೇ ಮುಂತಾದವರು ಅವರ

ವಿರೋಧಿಗಳಾದರು. ಕಡಿಮೆ ಭತ್ಯ, ಕಷ್ಟತರವಾದ ಜೀವನ ಹಾಗೂ ಬ್ರಿಟಿಷ್ ಅಧಿಕಾರಿಗಳ ಅಸಭ್ಯ ವರ್ತನೆಯಿಂದಾಗಿ ಕಂಪನಿಯ ಸೈನಿಕರಲ್ಲಿ ಅಸಮಾಧಾನ ತಲೆದೋರಿತು. ಆಗಿನ ಕಾಲದ ಒಬ್ಬ ಬ್ರಿಟಿಷ್ ಪ್ರಜೆಯು ಈ ರೀತಿ ಬರೆದಿದ್ದಾನೆ: "ಸಿಪಾಯಿ ಒಬ್ಬ ಕೀಳು ದರ್ಜೆಯ ಸೃಷ್ಟಿ ಎಂದು ಭಾವಿಸಲಾಗಿದೆ. ಅವನ ಮೇಲೆ ಆಣೆ ಇಡಲಾಗುತ್ತದೆ, ಅವನ ಬಗ್ಗೆ ಯಾರೂ ಸರಿಯಾಗಿ ವರ್ತಿಸುವುದಿಲ್ಲ. ಅವನನ್ನು 'ಒಂದು ಕ್ರಿಮಿ' ಎಂಬ ಅರ್ಥದಲ್ಲಿ ನೋಡಲಾಗುತ್ತದೆ. ಅವನನ್ನು 'ಹಂದಿ' ಎಂದು ಸಂಬೋಧಿಸಲಾಗುತ್ತದೆ. ಅವನನ್ನು ಕೀಳುಜಾತಿಯ ಪ್ರಾಣಿಯನ್ನಾಗಿ ಕೆಳಗಿನ ಅಧಿಕಾರಿಗಳು ಭಾವಿಸುತ್ತಾರೆ". ಇಷ್ಟೇ ಅಲ್ಲದೆ ತನ್ನ ಉದ್ಯೋಗದಲ್ಲಿ ಮೇಲೆ ಹೋಗುವ ಅವಕಾಶ ಸಿಪಾಯಿಗಿರಲಿಲ್ಲ. ಯಾವ ಭಾರತೀಯನೂ ತಿಂಗಳಿಗೆ 60-70 ರೂಪಾಯಿಗಳ ಸಂಬಳದ ಸುಬೇದಾರನ ಪದವಿಗಿಂತ ಹೆಚ್ಚು ಹೋಗುವ ಹಾಗಿರಲಿಲ್ಲ.

ಹೀಗಾಗಿ 1857 ರ ಸಮಯಕ್ಕೆ ಸಾಮೂಹಿಕ ದಂಗೆಗೆ ಸನ್ನಿವೇಶಗಳು ಸಿದ್ಧವಾಗಿದ್ದುವು. ಬಂದೂಕುಗಳಲ್ಲಿ ಬಳಸಲಾಗುವ ತೋಟಾಗಳಿಗೆ ಹಂದಿ ಅಥವಾ ದನಗಳ ಮಾಂಸದ ರಸ ಹಚ್ಚಲಾಗಿದೆ ಎಂಬುದು ಕ್ರಾಂತಿಗೆ ತಕ್ಷಣ ಎಡೆಕೊಟ್ಟಿತು. ಹೊಸದಾಗಿ ಬಳಕೆಗೆ ಬಂದಿದ್ದ 'ಎನ್‌ಫೀಲ್ಡ್ ರೈಫಲ್'ಗಳಿಗೆ ಬಳಸಬೇಕಾಗಿದ್ದ ಈ ತೋಟಾಗಳನ್ನು ಕಾಗದದ ಚೂರಿನಿಂದ ಸುತ್ತಲಾಗುತ್ತಿತ್ತು. ಈ ಕಾಗದದ ಅಂಟಿಗೆ ಮಾಂಸದ ರಸವನ್ನು ಉಪಯೋಗಿಸಲಾಗಿದ್ದು ಸೈನಿಕರು ಕಾಗದವನ್ನು ಹಲ್ಲಿನಿಂದ ಕಚ್ಚಿ ಹರಿಯಬೇಕಾಗಿತ್ತು. ಇದು ಅವರ ಮತೀಯ ಭಾವನೆಗಳನ್ನು ಪ್ರಚೋದಿಸುತ್ತಿದ್ದುವು. ಅವರು ದಂಗೆ ಏಳಲು ಸಿದ್ಧರಾಗಿದ್ದರು. ಅವರ ಈ ದಂಗೆ ಭಾರತೀಯ ಸಮಾಜದ ಇತರ ವರ್ಗಗಳು ದಂಗೆ ಏಳಲು ಅನುಕೂಲ ಮಾಡಿಕೊಡುವುದು ಸಾಧ್ಯವಾಯಿತು.

1857ರ ಮೇ ತಿಂಗಳ 10ನೇ ತಾರೀಖು ದೆಹಲಿಯಿಂದ 36ಮೈಲಿಗಳ ದೂರದ ಮೀರತ್‌ನಲ್ಲಿ ಸಿಪಾಯಿ ದಂಗೆ ಪ್ರಾರಂಭವಾಯಿತು. ಉತ್ತರದಲ್ಲಿ ಪಂಜಾಬಿನಿಂದ ದಕ್ಷಿಣದಲ್ಲಿ ನರ್ಮದಾವರೆವಿಗೂ ಪೂರ್ವದಲ್ಲಿ ಬಿಹಾರದಿಂದ ಪಶ್ಚಿಮದ ರಾಜಾಸ್ಥಾನದವರೆವಿಗೂ ಶೀಘ್ರದಲ್ಲೇ ಈ ದಂಗೆ ಹಬ್ಬಿತು. ಮೀರತ್‌ನ ಸೈನಿಕರು ಅವರ ಅಧಿಕಾರಿಗಳನ್ನು ಕೊಂದು ದೆಹಲಿಯತ್ತ ನಡೆದರು. ಮಾರನೆಯ ದಿನ ಅವರು ದೆಹಲಿಯನ್ನು ತಲುಪಿದಾಗ ಅಲ್ಲಿನ ಸೈನಿಕರು ಅವರನ್ನು ಅನುಸರಿಸಿದರು. ಅವರು ದಂಗೆ ಎದ್ದು ಊರಿಗೆ ಮುತ್ತಿಗೆ ಹಾಕಿ ವಯಸ್ಸಾಗಿದ್ದ ಬಹದೂರ್ ಷಾನನ್ನು ಭಾರತದ ಚಕ್ರವರ್ತಿ ಎಂದು ಘೋಷಿಸಿದರು. ಹೀಗೆ ಸೈನಿಕರು ತಮ್ಮ ದಂಗೆಯನ್ನು ಕ್ರಾಂತಿಕಾರಿ ಯುದ್ಧವನ್ನಾಗಿ ಪರಿಣಮಿಸಿದರು. ಆ ಕ್ಷಣದಿಂದ ಕ್ರಾಂತಿಯಲ್ಲಿ ಭಾಗವಹಿಸಿದ ಎಲ್ಲಾ ಸೈನಿಕರು, ನಾಯಕರು ಮತ್ತು ಜಮೀನುದಾರರು ಮೊಗಲ್ ಚಕ್ರವರ್ತಿಯ ವಿಧೇಯರಾದರು. ಬಹದ್ದೂರ್ ಷಾ ಭಾರತದ ಐಕಮತ್ಯದ ಪ್ರತೀಕನಾದನು.

ಉತ್ತರ ಮತ್ತು ಮಧ್ಯಭಾರತದ ಎಲ್ಲೆಡೆಗಳಲ್ಲೂ ಸಾಮಾನ್ಯ ಜನ ಸಮೂಹ ದಂಗೆ ಏಳಲಾರಂಭಿಸಿತು. ಜನರು ಲಾಠಿ, ಬಿಲ್ಲು-ಬಾಣಗಳು, ಕೊಡಲಿ, ಈಟಿ ಮತ್ತು ಇತರ ಆಯುಧಗಳನ್ನು ಹಿಡಿದು ಹೋರಾಡಿದರು. ಮುಖ್ಯವಾಗಿ ಇಂದಿನ ಉತ್ತರ

ಪ್ರದೇಶ ಮತ್ತು ಬಿಹಾರ ರಾಜ್ಯಗಳ ರೈತರು ದಂಗೆಯಲ್ಲಿ ಭಾಗವಹಿಸಿದ್ದು ಸಿಪಾಯಿ ದಂಗೆಗೆ ಶಕ್ತಿಯನ್ನು ನೀಡಿತ್ತು. ಅವಧದಲ್ಲಿ ಇಂಗ್ಲಿಷರೊಡನೆ ಯುದ್ಧ ಮಾಡಿ ಸತ್ತ 1,50,000 ಜನರ ಪೈಕಿ 1,00,000 ಜನರು ಸಾರ್ವಜನಿಕರಾಗಿದ್ದರೆಂದು ಒಂದು ಲೆಕ್ಕಾಚಾರದಿಂದ ತಿಳಿದುಬಂದಿದೆ.

ಹಿಂದೂ-ಮುಸ್ಲಿಂ ಐಕಮತ್ಯ 1857 ರ ದಂಗೆಯ ಮುಖ್ಯ ಶಕ್ತಿಯಾಗಿತ್ತು. ಸೈನಿಕರು, ಸಾರ್ವಜನಿಕರು ಹಾಗೂ ನಾಯಕರಲ್ಲಿ ಹಿಂದೂ ಮುಸ್ಲಿಂ ಒಗ್ಗಟ್ಟು ಚೆನ್ನಾಗಿ ಕಂಡುಬಂದಿತ್ತು. ದಂಗೆ ಎದ್ದಿದ್ದ ಎಲ್ಲರೂ ಮುಸ್ಲಿಂ ದೊರೆಯಾದ ಬಹದೂರ್ ಷಾನನ್ನು ತಮ್ಮ ನಾಯಕನೆಂದು ಪರಿಗಣಿಸಿದ್ದರು. ಹಿಂದೂ ಮುಸ್ಲಿಂ ಮತೀಯ ಭಾವನೆಗಳನ್ನು ಉಭಯ ಪಂಗಡಗಳು ಗೌರವಿಸಿದುವು. ದಂಗೆ ಯಶಸ್ವಿಯಾಗಿದ್ದ ಕಡೆಯೆಲ್ಲಾ ಹಿಂದೂಗಳ ಭಾವನೆಗಳನ್ನು ಗೌರವಿಸಲು ಗೋಹತ್ಯೆಯನ್ನು ನಿಷೇಧಿಸುವ ಆಜ್ಞೆಯನ್ನು ಹೊರಡಿಸಲಾಗಿತ್ತೆಂಬುದು ಗಮನಾರ್ಹ. ನಾಯಕತ್ವದ ಎಲ್ಲಾ ಪಂತಗಳಲ್ಲೂ ಹಿಂದೂ-ಮುಸ್ಲಿಂರ ಪ್ರಾತಿನಿಧ್ಯ ಸರಿಸಮಾನವಾಗಿತ್ತು. "ಈ ಸನ್ನಿವೇಶದಲ್ಲಿ ಮುಸ್ಲಿಂರನ್ನು ಹಿಂದೂಗಳ ವಿರುದ್ಧ ಎತ್ತಿಕಟ್ಟುವುದು ಸಾಧ್ಯವಿರಲಿಲ್ಲ" ಎಂದು ಒಬ್ಬ ಬ್ರಿಟಿಷ್ ಅಧಿಕಾರಿಯು ನಂತರ ತಿಳಿಸಿದನು. ಮಧ್ಯಕಾಲೀನ ಭಾರತದಲ್ಲಿ ಹಾಗೂ 1858 ರ ಮುಂಚೆ ಭಾರತದ ರಾಜಕೀಯ ಹಾಗೂ ಜನತೆ ಮತೀಯ ಭಾವನೆಗೆ ತುತ್ತಾಗಿರಲಿಲ್ಲವೆಂಬ ಅಂಶವನ್ನು 1857 ರ ಚಟುವಟಿಕೆಗಳು ಸ್ಪಷ್ಟಪಡಿಸುತ್ತವೆ.

ವಿಶ್ವದಾದ್ಯಂತ ಅಧಿಕಾರ ಹೊಂದಿದ್ದ ಹಾಗೂ ಭಾರತೀಯ ರಾಜರು ಮತ್ತು ನಾಯಕರುಗಳ ಬೆಂಬಲಪಡೆದಿದ್ದ ಬ್ರಿಟಿಷ್ ಸರಕಾರ ಮಿಲಿಟರಿ ಶಕ್ತಿಯಲ್ಲಿ ಕ್ರಾಂತಿಕಾರರಿಗಿಂತ ಹಿರಿದಾಗಿತ್ತು. ಆಯುಧಗಳು, ಸಂಘಟನೆ, ವ್ಯವಸ್ಥೆ, ನಾಯಕರು ಮುಂತಾದ ಅಂಶಗಳಲ್ಲಿ ಕೊರತೆ ಅನುಭವಿಸುತ್ತಿದ್ದ ಕ್ರಾಂತಿಕಾರರು ಬ್ರಿಟಿಷರ ಮುಂದೆ ನಿಲ್ಲಲಾಗಲಿಲ್ಲ. ಅವರು ಈ ಕೊರತೆಗಳನ್ನು ನಿವಾರಿಸಿಕೊಳ್ಳುವ ಮುನ್ನ ಬ್ರಿಟಿಷ್ ಸರಕಾರ ತನ್ನ ಎಲ್ಲಾ ಶಕ್ತಿಯನ್ನೂ ಉಪಯೋಗಿಸಿ ದಂಗೆಯನ್ನು ಅತ್ಯಂತ ಹೇಯವಾದ ರೀತಿಯಲ್ಲಿ ಅಡಗಿಸಿತು. 1857 ರ ಸೆಪ್ಟಂಬರ್ 20 ರಂದು ಬ್ರಿಟಿಷರು ದೆಹಲಿಯನ್ನು ವಶಪಡಿಸಿಕೊಂಡು ಬಹದೂರ್ ಷಾನನ್ನು ಬಂಧಿಸಿದ್ದು ಸಿಪಾಯಿ ದಂಗೆಗೆ ಬಲವಾದ ಪೆಟ್ಟು ಬಿದ್ದಂತಾಯಿತು. ಇತರ ನಾಯಕರು ವೀರೋತ್ಸಾಹಗಳಿಂದ ಕ್ರಾಂತಿಯನ್ನು ಮುಂದುವರೆಸಿದರೂ ಒಬ್ಬೊಬ್ಬರಾಗಿ ಸೋಲೊಪ್ಪಬೇಕಾಯಿತು. ನಾನಾ ಸಾಹೇಬನನ್ನು ಕಾನ್ಪುರದಲ್ಲಿ ಸೋಲಿಸಲಾಯಿತು. ಅವನ ನೆಚ್ಚಿನ ಅನುಯಾಯಿ ತಾಂತ್ಯಾ ಟೋಪಿ ಗೆರಿಲ್ಲಾ ಯುದ್ಧವನ್ನು ಆರಂಭಿಸಿದನು. 1859 ರಲ್ಲಿ ಅವನ ಜಮೀನ್ದಾರ ಮಿತ್ರನೊಬ್ಬನು ವಂಚನೆ ಮಾಡುವವರಿಗೆ ತನ್ನ ಯುದ್ಧವನ್ನು ಯಶಸ್ವಿಯಾಗಿ ಮುಂದುವರಿಸಿದ್ದನು. ಕೈಯಲ್ಲಿ ಕತ್ತಿ ಹಿಡಿದು ಯುದ್ಧಮಾಡುತ್ತಿದ್ದಾಗ 1858ರ ಜೂನ್ 17 ರಂದು ಝಾನ್ಸಿಯ ರಾಣಿ ಮೃತಳಾದಳು. 1859 ರ ಹೊತ್ತಿಗೆ ಬಿಹಾರಿನ ಕುವರಾ ಸಿಂಗ್, ದೆಹಲಿಯ ಕ್ರಾಂತಿಕಾರಿ ಸಿಪಾಯಿಗಳ ಮುಖಂಡನಾಗಿದ್ದ ಬಕ್ತ್‌ಖಾನ್ ಮತ್ತು ಫೈಜಾಬಾದಿನ ಮೌಲ್ವಿ ಅಹ್ಮದುಲ್ಲಾ ಇವರೇ ಮುಂತಾದವರು ಮಡಿದಿದರು. ಅವಧದ ಬೇಗಂ ನೇಪಾಳಕ್ಕೆ ಓಡಿಹೋಗಿದ್ದಳು.

1859 ರ ಕೊನೆಯ ವೇಳೆಗೆ ಬ್ರಿಟಿಷರು ಭಾರತದ ಮೇಲೆ ಸಂಪೂರ್ಣ ಹತೋಟಿಯನ್ನು ಪಡೆದಿದ್ದರು. ಆದರೂ ಈ ಕ್ರಾಂತಿಯು ಪ್ರಯೋಜನಕಾರಿಯಾಗದೆ ಇರಲಿಲ್ಲ. ಭಾರತವನ್ನು ಸಾಂಪ್ರದಾಯಿಕ ನಾಯಕತ್ವದಲ್ಲಿ ರಕ್ಷಿಸುವ ಪ್ರಯತ್ನ ವಿಫಲವಾದರೂ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ವಿರೋಧಿಸುವ ಮೊದಲ ಬಾರಿ ದಂಗೆಯಾಯಿತು. ಕ್ರಾಂತಿಯ ನಾಯಕರನ್ನು ಸ್ಮರಿಸುವುದನ್ನು ಒಂದು ದೊಡ್ಡ ತಪ್ಪೆಂದು ಆಳುಗರು ಪರಿಗಣಿಸಿದ್ದರೂ ಅವರುಗಳ ಹೆಸರು ಮನೆಮಾತಾಯಿತು.

## *ಬುಡಕಟ್ಟುಗಳ ದಂಗೆಗಳು*

ಭಾರತದ ಬಹು ವಿಸ್ತಾರವಾದ ಭಾಗದಲ್ಲಿ ಹರಡಿದ ಪ್ರಾಚೀನ ಬುಡಕಟ್ಟುಗಳ ಜನ ನೂರಾರು ದಂಗೆಗಳಲ್ಲಿ ಭಾಗವಹಿಸಿದ್ದರು. ಬ್ರಿಟಿಷ್ ನಿಯಂತ್ರಣದ ವಿಸ್ತರಣ ಮತ್ತು ತಮ್ಮ ನಡುವೆ ವಸಾಹತುಶಾಹೀ ಆಡಳಿತದ ಮಧ್ಯಪ್ರವೇಶ ಅವರಿಗೆ ತೀವ್ರ ಅಸಮಾಧಾನವುಂಟುಮಾಡಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ತಮ್ಮ ಸರಳವೂ ಸುರಕ್ಷಿತವೂ ಆದ ಜೀವನದಲ್ಲಿ ಹಣ ಸಾಲಕೊಡುವ ಸಾಹುಕಾರರು, ವ್ಯಾಪಾರಿಗಳು, ಕಂದಾಯದ ವಸೂಲುಗಾರರು ನುಗ್ಗಿದ್ದು ಅವರಿಗೆ ಸಹಿಸಲಾಗಲಿಲ್ಲ. ಈ ಜನ ಆದಿವಾಸಿಗಳನ್ನು ವಸಾಹತುಶಾಹೀ ಅರ್ಥವ್ಯವಸ್ಥೆ ಹಾಗೂ ಸುಲಿಗೆಗಳ ಪ್ರಭಾವಕ್ಕೆ ಒಳಪಡಿಸುವಲ್ಲಿ ಬ್ರಿಟಿಷರ ಕೈಯ ಉಪಕರಣಗಳಾಗಿ ವರ್ತಿಸುತ್ತಿದ್ದರು. ಬುಡಕಟ್ಟು ಜನರ ದಂಗೆಗಳ ವಿಶಿಷ್ಟ ಲಕ್ಷಣ, ಅವರ ಅಸೀಮ ಧೈರ್ಯ, ಬಲಿದಾನ ಮತ್ತು ಆ ದಂಗೆಗಳನ್ನು ಅಡಗಿಸಿದ ಅಧಿಕಾರಿಗಳ ಹೇಯವಾದ ಕಟುತನ ಇವು ವ್ಯಕ್ತವಾದದ್ದು. ಒಂದುಕಡೆ ಕ್ರೋಧಾವಿಷ್ಟರಾದ, ಆದರೆ ವ್ಯವಸ್ಥೆಯಿಲ್ಲದ ಜನ ಕೊಡಲಿಗಳು ಅಥವಾ ಬಿಲ್ಲು-ಬಾಣಗಳನ್ನೇ ಆಯುಧಗಳಾಗಿಟ್ಟುಕೊಂಡು ನಿಂತರೆ ಇನ್ನೊಂದು ಕಡೆ, ಬ್ರಿಟಿಷ್ ಇಂಡಿಯನ್ ಸೇನೆಯ ರೆಜಿಮಂಟುಗಳು ಸುವ್ಯವಸ್ಥಿತವಾಗಿ, ಅತ್ಯಾಧುನಿಕ ಯುದ್ಧಶಸ್ತ್ರಗಳಿಂದ ಸಜ್ಜುಗೊಂಡು ನಿಲ್ಲುತ್ತಿತ್ತು. ಈ ಅಸಮವಾದ ಯುದ್ಧಗಳಲ್ಲಿ ಲಕ್ಷಾಂತರ ಜನ ಸತ್ತರು. ಅಸಂಖ್ಯಾತವಾದ ಬುಡಕಟ್ಟು ದಂಗೆಗಳಲ್ಲಿ 1820 ರಿಂದ 1837 ರ ವರೆಗಿನ ಕೋಲ(Kols)ರ ದಂಗೆ, 1855-56 ರಲ್ಲಿ ಸಂತಾಲರು (Santals) ನಡೆಸಿದ ಬಂಡು, ರಂಪರ (Rampas) 1879 ರ ದಂಗೆ ಮತ್ತು 1895 ರಿಂದ 1901ರ ವರೆಗಿನ ಮುಂಡರ (Mundas) ಹೋರಾಟಗಳು ವಿಶಿಷ್ಟವಾದವು.

## *ರೈತರ ಚಳುವಳಿಗಳು ಮತ್ತು ದಂಗೆಗಳು*

ವಸಾಹತುಶಾಹೀ ಸುಲಿಗೆಯ ಹೊಡೆತವನ್ನು ಬಹಳ ತೀವ್ರವಾಗಿ ಅನುಭವಿಸಿದವರು ಭಾರತದ ಕೃಷಿಕವರ್ಗದ ಜನ. ಆದ್ದರಿಂದ ಅವರು ಪ್ರತಿ ಹೆಜ್ಜೆಗೂ ಸರಿಯಾದ ಹೋರಾಟವನ್ನೇ ನಡೆಸಿದರು. ದುರದೃಷ್ಟವಶಾತ್, ಬ್ರಿಟಿಷ್ ವಸಾಹತುಶಾಹಿಗೆ ಮಲೆತು ನಿಂತ ಕೃಷಿಕವರ್ಗದ ಪ್ರತಿಭಟನೆಯ ವಿವರಗಳು ಸುಲಭವಾಗಿ ದೊರಕು ವುದಿಲ್ಲ. ಆ ವಿವರಗಳು ಇನ್ನೂ ಸರಕಾರೀ ಪತ್ರಾಗಾರಗಳಲ್ಲಿ ಮತ್ತಿತರ ಅಧುನಿಕ ಇತಿಹಾಸದ ಮೂಲಗಳಲ್ಲಿ ಅಡಗಿ ಕುಳಿತಿವೆ. ಅಲ್ಲದೆ ಅಧಿಕೃತ ದಾಖಲೆಗಳಲ್ಲಿ ಈ ರೈತವರ್ಗದ ದಂಗೆಗಳನ್ನು ಕಾನೂನು ಉಲ್ಲಂಘನೆ ಮತ್ತು ಡಕಾಯತಿಗಳೆಂದು

ಪಟ್ಟಿಮಾಡಲಾಗಿದೆ. ಬ್ರಿಟಿಷ್ ಆಡಳಿತಕ್ಕೆದುರಾಗಿ ಕೃಷಿಕ ವರ್ಗ ಒಡ್ಡಿದ್ದ ಪ್ರತಿಭಟನೆಯ ಅಸಂಖ್ಯಾತ ಕ್ರಮಗಳ ಮಿಂಚುನೋಟಗಳು ಈಗೀಗ ಕಳೆದ ಕೆಲವು ವರ್ಷಗಳಿಂದ ನಮಗೆ ದೊರಕುತ್ತಿವೆ.

ಮೊದಲೇ ವಿವರಿಸಿರುವಂತೆ ಅನೇಕ ವೇಳೆ ಜಮೀನ್ದಾರರು ಮತ್ತು ಚಿಕ್ಕಪುಟ್ಟ ನಾಯಕರು ಮುಂದಾಳುಗಳಾಗಿ ನಿಂತು ನಡೆಸುತ್ತಿದ್ದ ಪೌರ ಪ್ರತಿಭಟನೆಗಳಿಗೆ ಕೃಷಿಕರು ಬೆನ್ನೆಲುಬಾಗಿರುತ್ತಿದ್ದರು. ಉಳಿದೆಲ್ಲಕ್ಕಿಂತ ಮಿಗಿಲಾಗಿ 1857 ರ ಕ್ರಾಂತಿಗೆ ಇದು ಅನ್ವಯಿಸುತ್ತದೆ. ಕೃಷಿಕರ ಕ್ರಾಂತಿಗಳ ಇನ್ನೊಂದು ಶ್ರೇಣಿ ಧಾರ್ಮಿಕ ಬಣ್ಣವನ್ನು ತಳೆಯಿತು. ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆ ಮತ್ತು ಶುದ್ಧೀಕರಣ ಚಳುವಳಿಗಳಾಗಿ ಪ್ರಾರಂಭವಾಗಿ, ನೂತನವಾಗಿ ಹುಟ್ಟಿಕೊಂಡಿದ್ದ ಜಮೀನ್ದಾರರು, ಸಾಲಿಗರು*, ಭೂಮಾಲೀಕರು ಮುಂತಾದವರ ಮೇಲೆ ಮುಂದಾಗಿ ಬಿದ್ದು ಅವು ತಮ್ಮ ಧರ್ಮ ಯಾವುದೇ ಇರಲಿ, ಕೃಷಿಕವೃತ್ತಿಯ ಮೂಲವನ್ನು ಪ್ರದರ್ಶಿಸುತ್ತಿದ್ದುವು. ಕೊನೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯೊಂದಿಗೆ ಘರ್ಷಣೆ ಉಂಟಾಗುತ್ತಿತ್ತು. ಒಂದು ಹಂತದಲ್ಲಿ, ಬಂಗಾಳ, ಬಿಹಾರ, ಪಂಜಾಬ್ ಮತ್ತು ಮದರಾಸುಗಳನ್ನು ವ್ಯಾಪಿಸಿದ್ದ ವಹಾಬಿ (Wahabi) ಚಳುವಳಿ, ಬಂಗಾಳದ ಫರಾಜಿ (Farazi) ಚಳುವಳಿ ಮತ್ತು ಪಂಜಾಬಿನ ಕುಕಾ (Kuka) ದೊಂಬಿ ಮುಂತಾದುವು ಇಂಥವು.

1858 ರ ಅನಂತರ ಬ್ರಿಟಿಷ್ ಆಳಿಕೆಯ ವಿರುದ್ಧವಾದ ಕೃಷಿಕ ಪ್ರತಿಭಟನೆಯ ಸ್ವರೂಪದಲ್ಲಿ ಸ್ವಲ್ಪ ಬದಲಾವಣೆಯುಂಟಾಯಿತು. ಈಗ ರೈತರು ನೇರವಾಗಿ ಕೃಷಿಸಂಬಂಧಿಯಾದ ಬೇಡಿಕೆಗಳಿಗಾಗಿ ಸರಕಾರದ ವಿರುದ್ಧ ಹಾಗೂ ವಿದೇಶೀ ಪ್ಲಾಂಟರು, ದೇಶೀಯ ಜಮೀನ್ದಾರರು ಮತ್ತು ಸಾಲಿಗರ ಎದುರಾಗಿ ಹೋರಾಡ ತೊಡಗಿದರು.

ಆಧುನಿಕ ಯುಗದ ಅತ್ಯಂತ ಮಹತ್ವದ ಕೃಷಿಕ ಚಳುವಳಿಗಳಲ್ಲಿ ಒಂದು 1859-60 ರಲ್ಲಿ ಬಂಗಾಳದಲ್ಲಿ ಎದ್ದ ನೀಲಿ ಚಳುವಳಿ. ನೀಲಿಯ ಬೆಳಸು ಕಟ್ಟು ನಿಟ್ಟಾಗಿ ಬ್ರಿಟಿಷರ ಏಕಸ್ವಾಮ್ಯವಾಗಿತ್ತು. ವಿದೇಶೀ ಪ್ಲಾಂಟರರು ರೈತರನ್ನು ನೀಲಿ ಬೆಳೆಯಲು ಬಲಾತ್ಕರಿಸುತ್ತಿದ್ದರು, ಮಾತಿನಲ್ಲಿ ವರ್ಣಿಸಲಾಗದಂತಹ ದಬ್ಬಾಳಿಕೆಗೆ ಅವರನ್ನು ಒಳಪಡಿಸಿದ್ದರು. ಲಾಭಕರವಲ್ಲದ ದರಗಳಲ್ಲಿ ನೀಲಿಯನ್ನು ಅವರು ಬೆಳೆಯಲೇಬೇಕೆಂದು ಬಲಾತ್ಕರಿಸಲು ಪ್ಲಾಂಟರುಗಳು ಅಕ್ರಮವಾದ ದಂಡನೆ, ಬಂಧನ ಮುಂತಾದ ಮಾರ್ಗಗಳನ್ನು ಹಿಡಿದರು. ಪ್ರಸಿದ್ಧ ಬಂಗಾಳಿ ಲೇಖಕ ದೀನಬಂಧು ಮಿತ್ರ 1860 ರಲ್ಲಿ ಪ್ರಕಟಿಸಿದ ತಮ್ಮ ನಾಟಕ "ನೀಲ ದರ್ಪಣ"ದಲ್ಲಿ ಈ ಕ್ರೂರ ದಬ್ಬಾಳಿಕೆಯನ್ನು ವಿಶದವಾಗಿ ಚಿತ್ರಿಸಿದ್ದಾರೆ. ಕೃಷಿಕರ ಕ್ರೋಧ 1859 ರಲ್ಲಿ ಕಟ್ಟೆಯೊಡೆಯಿತು. ಸಹಸ್ರಾರು ಜನ ಕೃಷಿಕರು ತಾವಾಗಿಯೇ ನೀಲಿ ಬೆಳೆಯಲು ನಿರಾಕರಿಸಿದರು, ಪ್ಲಾಂಟರರು ಮತ್ತು ಅವರ ಸಶಸ್ತ್ರ ಹಸ್ತಕರ ಕಟುಕತನ, ಕ್ರೌರ್ಯ, ಹಿಂಸೆಗಳನ್ನು ದೃಢತೆಯಿಂದ ಎದುರಿಸಿದರು. ಬಂಗಾಳದ ನೂತನ ಬುದ್ಧಿಜೀವಿ ವರ್ಗವು ಈ ಸಂದರ್ಭವನ್ನು ಅರ್ಥಮಾಡಿಕೊಂಡಿತು. ಅವರು ದಂಗೆಯೆದ್ದಿದ್ದ ಕೃಷಿಕ ವರ್ಗದವರ

* ಬಡ್ಡಿಗೆ ಸಾಲ ಕೊಡುವವರನ್ನು ಸಾಲಿಗರೆಂದು ಇಲ್ಲಿ ಕರೆದಿದೆ. [ಅನು.]

ಬೆಂಬಲವಾಗಿ ಪ್ರಬಲವಾದ ಚಳುವಳಿಯನ್ನು ವ್ಯವಸ್ಥೆಗೊಳಿಸಿದರು. ಸರಕಾರವು ಇದಕ್ಕಾಗಿ ಒಂದು ಮಂಡಳಿಯನ್ನು ನೇಮಿಸಲೇಬೇಕಾಯಿತು. ಅದರ ಫಲ, ಇಡೀ ವ್ಯವಸ್ಥೆಯಲ್ಲಿದ್ದ ಅತ್ಯಂತ ನೀಚವಾದ ದುರುಪಯೋಗ ಕಡಮೆಯಾಗಿದ್ದು. ಆದರೆ ಪ್ಲಾಂಟರರು ನಡೆಸುತ್ತಿದ್ದ ದಬ್ಬಾಳಿಕೆ, ಕೃಷಿಕ ಪ್ರತಿಭಟನೆ ಇವು ಹಾಗೆಯೇ ಮುಂದುವರಿದುವು. 1866-68 ರಲ್ಲಿ ಬಿಹಾರದಲ್ಲಿನ ದರ್ಭಾಂಗಾ ಮತ್ತು ಚಂಪಾರಣ್‌ಗಳಲ್ಲಿ ನೀಲಿ ಬೆಳೆಗಾರರು ದಂಗೆಯೆದ್ದರು. ಅದೇ ರೀತಿ ಬಂಗಾಳದ ಜೆಸ್ಸೂರಿನ ಕೃಷಿಕರು 1883 ರಲ್ಲಿ, ಮತ್ತೆ 1889-1890 ರಲ್ಲಿ ಬಂಡಾಯ ಹೂಡಿದರು.

ಮತ್ತೆ 1870 ರಲ್ಲಿ ಕೃಷಿಕವರ್ಗದ ಅಶಾಂತಿ ಸಿಡಿದೆದ್ದಿತು, ಈ ಸಾರಿ ಪೂರ್ವ ಬಂಗಾಳದಲ್ಲಿ. ಬಂಗಾಳದ ಪ್ರಬಲರಾದ ಜಮೀನ್ದಾರರು, ಗೇಣಿದಾರರ ದಮನ ಕಾರ್ಯದಲ್ಲಿ ಅದ್ವಿತೀಯರಾಗಿದ್ದರು. ಉಚ್ಚಾಟನೆ, ಕಿರುಕುಳ, ಆಸ್ತಿಗಳನ್ನು-ಬೆಳೆಗಳು ಮತ್ತು ಇತರ ಚರಾಸ್ತಿಗಳೂ ಕೂಡಿದಂತೆ-ಅಕ್ರಮವಾಗಿ ಕಿತ್ತುಕೊಳ್ಳುವುದು, ಗೇಣಿ ಹೆಚ್ಚಿಸಲು ಬಲಾತ್ಕಾರ ಪ್ರಯೋಗ, ರೈತರು ಹಿಡುವಳಿ ಹಕ್ಕನ್ನು ಪಡೆದುಕೊಳ್ಳ ಲಾಗದಂತೆ ಮಾಡಲು ಬಲಪ್ರಯೋಗ-ಈ ಅಕ್ರಮ ವಿಧಾನಗಳನ್ನು ಅವರು ಧಾರಾಳವಾಗಿ ಬಳಸಿದರು. ಬಂಗಾಳದ ಕೃಷಿಕರಿಗೂ 1782 ರ ವರೆಗೂ ಹಿಂದಕ್ಕೆ ವಿಸ್ತರಿಸಿದ್ದ ಹೋರಾಟದ ಪರಪಂರೆಯೇ ಇತ್ತು. ಆಗ ಉತ್ತರ ಬಂಗಾಳದ ರೈತರು ಈಸ್ಟ್ ಇಂಡಿಯಾ ಕಂಪನಿಯ ಕಂದಾಯ ವಸೂಲಿ ರೈತ ದೇಬೀಸಿಂಗ್‌ನ ವಿರುದ್ಧ ಬಂಡೆದ್ದಿದ್ದರು. 1872-76 ರಿಂದ ಅವರು ಗೇಣಿ-ರಹಿತ ಸಂಘಗಳಾಗಿ ಒಟ್ಟುಗೂಡಿ ಪೂರ್ವ ಬಂಗಾಳದ ಬೇರೆಬೇರೆ ಭಾಗಗಳಲ್ಲಿ ಜಮೀನ್ದಾರರನ್ನೂ ಅವರ ದಳ್ಳಾಳಿ ಗಳನ್ನೂ ಮುತ್ತುತ್ತಿದ್ದರು. ಕೃಷಿಕ ಪ್ರತಿಭಟನೆ ಅಡಗಿದ್ದು ಸರಕಾರ ಮಧ್ಯಪ್ರವೇಶ ಮಾಡಿ ಇದನ್ನು ತುಳಿಯಲು ತೀವ್ರವಾದ ಕ್ರಮಗಳನ್ನು ಕೈಕೊಂಡ ಮೇಲೆಯೇ. ಆದರೂ ಮುಂದಿನ ವರ್ಷಗಳಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಬಂಡಾಯವೇಳುತ್ತಿತ್ತು, ಸರಕಾರವು ಕಾನೂನು ಪ್ರಕಾರ ಕ್ರಮಗಳನ್ನು ಕೈಗೊಂಡು ಜಮೀನ್ದಾರರ ದಬ್ಬಾಳಿಕೆಯ ವಿರುದ್ಧ ಕೃಷಿಕರನ್ನು ರಕ್ಷಿಸುವುದಾಗಿ ಮಾತುಕೊಟ್ಟಾಗ ಶಾಂತವಾಗುತ್ತಿತ್ತು. ಇಲ್ಲೂ ಕೂಡ ವಿದ್ಯಾವಂತ ವರ್ಗದವರು ಬಹು ಪ್ರಮಾಣದಲ್ಲಿ ರೈತರ ಪರವಾಗಿ ಬೆಂಬಲ ನೀಡಿದರು.

1875 ರಲ್ಲಿ ಮಹಾರಾಷ್ಟ್ರದ ಪೂನಾ ಮತ್ತು ಅಹಮದ್‌ನಗರ ಜಿಲ್ಲೆಗಳಲ್ಲಿ ಮುಖ್ಯವಾದೊಂದು ದಂಗೆಯೆದ್ದಿತು. ಮಹಾರಾಷ್ಟ್ರದಲ್ಲಿ ಸರಕಾರವು ಭೂಕಂದಾಯ ವನ್ನು ನೇರವಾಗಿ ರೈತರೊಂದಿಗೆ ನಿರ್ಧರಿಸಿಕೊಂಡಿತ್ತು. ಅದೇ ಸಮಯದಲ್ಲಿ ಸರಕಾರದ ಕಂದಾಯ ಬೇಡಿಕೆ ಎಷ್ಟು ಅಧಿಕ ಪ್ರಮಾಣಕ್ಕೆ ಏರಿತೆಂದರೆ, ಬಹು ಸಂಖ್ಯಾತ ರೈತರಿಗೆ ಅದನ್ನು ಕೊಡಲು ಸಾಲಿಗರಿಂದ ಹಣ ಸಾಲ ಕೇಳದೆ ಗತ್ಯಂತರವೇ ಉಳಿಯಲಿಲ್ಲ. ಅವರೋ ಅತಿ ದುಬಾರಿಯಾದ ಬಡ್ಡಿ ಕೇಳುತ್ತಿದ್ದರು. ಇದರಿಂದಾಗಿ ರೈತರು ಹೆಚ್ಚುಹೆಚ್ಚು ಪ್ರಮಾಣದಲ್ಲಿ ಭೂಮಿಯನ್ನು ಸಾಲಿಗರಿಗೆ ಅಡವಿಡುತ್ತಿದ್ದರು, ಇಲ್ಲವೇ ಮಾರುತ್ತಿದ್ದರು. ಸಾಲಿಗರು ಬೇಸಾಯಗಾರನ ಮೇಲೆ ಮತ್ತು ಅವನ ನೆಲದ ಮೇಲೆ ತಮ್ಮ ಹಿಡಿತವನ್ನು ಬಲಪಡಿಸಿಕೊಳ್ಳುವುದಕ್ಕಾಗಿ ಸಾಧ್ಯವಾದ ಎಲ್ಲ ಕ್ರಮ, ಅಕ್ರಮ ಹಂಚಿಕೆಗಳು, ಮೋಸಗಳನ್ನು ಅನುಸರಿಸುತ್ತಿದ್ದರು. ಕೃಷಿಕರ ಸಹನೆ 1874

ರ ವೇಳೆಗೆ ಇನ್ನು ಉಳಿಯದಾಯಿತು. ಪೂನಾ ಮತ್ತು ಅಹಮದ್ ನಗರದ ರೈತರು ಒಟ್ಟಾಗಿ ಸೇರಿ ಸಾಲಿಗರ ವಿರುದ್ಧ ಒಂದು ಸಾಮಾಜಿಕ ಬಹಿಷ್ಕಾರವನ್ನು ವ್ಯವಸ್ಥೆ ಮಾಡಿದರು. ಬಹುಬೇಗನೆ ಅದು ಕೃಷಿಕ ದಂಗೆಗಳ ರೂಪು ತಳೆಯಿತು. ಎಲ್ಲೆಂದರಲ್ಲಿ ಅವರು ಸಾಲಿಗರ ಬಳಿ ತಾವು ಬರೆದುಕೊಟ್ಟಿದ್ದ ಅಡವು ಪತ್ರ, ಡಿಕ್ರಿಗಳು ಮುಂತಾದ ದಾಖಲೆಗಳನ್ನು ಬಲಾತ್ಕಾರದಿಂದ ಕಿತ್ತು ತಂದು ಬಹಿರಂಗವಾಗಿ ಸುಟ್ಟುಹಾಕಿದರು. ಪೋಲೀಸ್ ದಳಕ್ಕೆ ಅವರ ಪ್ರತಿಭಟನೆಯ ರಭಸವನ್ನು ಎದುರಿಸುವುದು ಸಾಧ್ಯವೇ ಇಲ್ಲವಾಯಿತು. "ಪೂನಾದಲ್ಲಿದ್ದ ಇಡೀ ಸೈನ್ಯದಳ-ಅಶ್ವದಳ, ಪದಾತಿ ಹಾಗೂ ಫಿರಂಗಿದಳ-ಸಂಪೂರ್ಣವಾಗಿ" ಅವರೆದುರು ಹೋರಾಡಿ ಅಡಗಿಸಬೇಕಾಯಿತು. ಇಲ್ಲಿಯೂ ಆಧುನಿಕ ಸುಶಿಕ್ಷಿತ ವರ್ಗದ ಜನ ರೈತರ ಬೇಡಿಕೆಗಳನ್ನು ಬೆಂಬಲಿಸಿದರು. ರೈತರು ಅನುಭವಿಸುತ್ತಿದ್ದ ಯಾತನೆಯ ಮೂಲ ನಿಜವಾಗಿ ಇದ್ದದ್ದು ಅಧಿಕವಾದ ನೆಲಗಂದಾಯದಲ್ಲಿ ಮತ್ತು ರೈತನಿಗೆ ಅಗ್ಗವಾಗಿ ಮುಂಗಡ ಕೊಡುವ ಮೂಲಗಳನ್ನು ಸರಕಾರ ಒದಗಿಸಲು ಅಸಮರ್ಥವಾದುದರಲ್ಲಿ ಎಂಬುದನ್ನು ಅವರು ಎತ್ತಿ ತೋರಿಸಿದರು.

ರಾಷ್ಟ್ರದ ಇತರ ಭಾಗಗಳಲ್ಲೂ ಕೃಷಿಕ ಪ್ರತಿಭಟನೆ ಕಂಡುಬಂದಿತು. ಇನ್ನೂ ಎರಡು ಸಂದರ್ಭಗಳನ್ನು ಇಲ್ಲಿ ಉಲ್ಲೇಖಿಸಬಹುದು. ಭೂಮಾಲೀಕರ (ಜೆನ್‌ಮೀ ಗಳು) ದಬ್ಬಾಳಿಕೆಯನ್ನು ತಡೆಯಲಾಗದ ಮಲಬಾರಿನ ಮಾಪಿಳ್ಳೆಗಳು 1836 ರಿಂದ 1854 ರ ವರೆಗೆ 22 ದಂಗೆಗಳನ್ನು ನಡೆಸಿದರು. 1873 ರಿಂದ 1880 ರ ವರೆಗಿನ ಐದು ಮುಖ್ಯವಾದ ಬಂಡಾಯಗಳಲ್ಲಿ ಮಾಪಿಳ್ಳೆಗಳ ಅತೃಪ್ತಿ ಮತ್ತೆ ವ್ಯಕ್ತವಾಯಿತು. ಇದೇ ರೀತಿ ಅಧಿಕ ಪ್ರಮಾಣದ ಭೂಕಂದಾಯ ವಿಧಿಸಿದ್ದು 1893-94 ರ ಅವಧಿಯಲ್ಲಿ ಅಸ್ಸಾಮಿನ ಬಯಲುಗಳಲ್ಲಿ ಒಂದರ ಹಿಂದೊಂದರಂತೆ ರೈತರ ದಂಗೆಗಳಿಗೆ ಕಾರಣವಾಯಿತು. ರೈತರು ಅಧಿಕ ತೆರಿಗೆಕೊಡಲು ನಿರಾಕರಿಸಿದರು. ತಮ್ಮ ಭೂಮಿಗಳನ್ನು ಕಿತ್ತುಕೊಳ್ಳಲು ನಡೆದ ಅಧಿಕೃತ ಪ್ರಯತ್ನಗಳನ್ನು ಒಟ್ಟಾಗಿ ಸೇರಿ ಪ್ರತಿಭಟಿಸಿದರು. ಕಂದಾಯ ವಸೂಲಿಗಾರರನ್ನು ಹೊಡೆದಟ್ಟಿದರು. ಸರಕಾರವು ಈ ಕೃಷಿಕ ಚಳುವಳಿಯನ್ನು ದಮನಗೊಳಿಸಲು ಸೈನಿಕ ಪಡೆ ಹಾಗೂ ಪೋಲೀಸ್ ಪಡೆಗಳನ್ನು ಭಾರೀ ಪ್ರಮಾಣದಲ್ಲಿ ಕಳುಹಿಸಬೇಕಾಯಿತು. ಕ್ರೂರವಾದ ಗುಂಡೇಟು ಗಳಿಂದ, ಬಯೊನೆಟ್ ತಿವಿತಗಳಿಂದ ಅನೇಕ ರೈತರನ್ನು ಕೊಲ್ಲಲಾಯಿತು. ಪೋಲೀಸರ ಮತ್ತು ಸೈನಿಕರ ಅಂದಿನ ಅನಾಗರಿಕ ವರ್ತನೆಯನ್ನು ಅಸ್ಸಾಮಿನ ಜನ ಇಂದಿಗೂ ನೆನೆಯುತ್ತಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಕೃಷಿಕ ಚಳುವಳಿಗಳು, ದಂಗೆಗಳು ಯಾವುದೇ ಹಂತದಲ್ಲಿ ಭಾರತದ ಮೇಲಿನ ಬ್ರಿಟಿಷ್ ಪ್ರಭುತ್ವಕ್ಕೆ ಬೆದರಿಕೆ ಉಂಟು ಮಾಡಲಿಲ್ಲ. ಅಧಿಕ ಪ್ರಮಾಣದ ಸುಲಿಗೆ, ಅಸಹನೀಯ ದಬ್ಬಾಳಿಕೆಗಳ ವಿರುದ್ಧವಾಗಿ ಕೃಷಿಕವರ್ಗವೂ ಬುಡಕಟ್ಟುಗಳ ಜನವೂ ತಮಗೆ ತಾವೇ ತೋರಿಸಿದ ಪ್ರತಿಕ್ರಿಯೆ ಗಳನ್ನು ಅವು ಚಿತ್ರಿಸಿದುವು. ಪರಿಣಾಮವಾಗಿ ಭಾರತೀಯ ಅರ್ಥ ವ್ಯವಸ್ಥೆಯ ವಸಾಹತುಶಾಹೀ ಸ್ವರೂಪವನ್ನು ಕುರಿತ ಅವರ ಪ್ರತಿಕ್ರಿಯೆಯನ್ನೂ ನಿರೂಪಿಸಿದುವು. ಅನೇಕವೇಳೆ ಅವರ ಕ್ರೋಧವು ತಮ್ಮ ಯಾತನೆಗೆ ಅತಿ ಸಮೀಪದ ಮೂಲವಾದ

ನೀಲಿ ಪ್ಲಾಂಟರು, ಜಮೀನ್ದಾರ ಅಥವಾ ಸಾಲಿಗ-ಇವರಮೇಲೆ ವ್ಯಕ್ತವಾಗುತ್ತಿತ್ತು. ಕಾನೂನು ಪಾಲನೆಯ ಹೆಸರಿನಲ್ಲಿ ವಸಾಹತುಶಾಹೀ ಕೃಷಿಕ ವ್ಯವಸ್ಥೆಯನ್ನು ಪ್ರೋತ್ಸಾಹಿಸಲು ಬ್ರಿಟಿಷರು ಮಾಡುತ್ತಿದ್ದ ಪ್ರಯತ್ನಗಳನ್ನೂ ಅವರು ದೃಢತೆಯಿಂದ ಪ್ರತಿಭಟಿಸಿದರು. ಹೀಗೆ ಹೊಸದಾಗಿ ವಿದ್ಯಾವಂತರಾದ ಅಥವಾ ಮೇಲುವರ್ಗದ ಭಾರತೀಯರಿಗಿಂತ ಮಿಗಿಲಾಗಿ ಅಜ್ಞಾನಿಗಳೂ ಅನಕ್ಷರಸ್ಥರೂ ಆಗಿದ್ದ ಸಾಮಾನ್ಯ ಜನರು ಬ್ರಿಟಿಷ್ ವಸಾಹತುಶಾಹಿಯು ತಂದೊಡ್ಡಿದ್ದ ವಿಪತ್ತನ್ನು ಅರ್ಥಮಾಡಿ ಕೊಂಡಿದ್ದರು. ಆದರೆ ಅವರ ಹೋರಾಟಗಳೆಲ್ಲಕ್ಕೂ ಸೋಲೇ ವಿಧಿಯಾಗಿತ್ತು. ಅವರ ಆತ್ಮಶ್ರದ್ಧೆ, ಧೈರ್ಯ, ವೀರ, ಅಪೂರ್ವ ಬಲಿದಾನ ಮಾಡುವುದರಲ್ಲಿ ಅವರಿಗಿದ್ದ ಸಂತೋಷ-ಇವು ಜಗತ್ತಿನಾದ್ಯಂತ ಹರಡಿದ್ದ ಸಾಮ್ರಾಜ್ಯದ ಅತ್ಯಾಧುನಿಕ ಆಯುಧ ಗಳಿಗಾಗಲಿ, ಸಂಪನ್ಮೂಲಗಳಿಗಾಗಲಿ ಸಾಟಿಯಾಗಿರಲಿಲ್ಲ. ಅವರಲ್ಲಿ ನೂತನ ಭಾವನೆ ಯಿರಲಿಲ್ಲ. ವಸಾಹತುಶಾಹಿಯು ಉತ್ಪಾದಿಸಿದ ನೂತನ ಸಾಮಾಜಿಕ ಶಕ್ತಿಗಳ ವಿಶ್ಲೇಷಣೆಯಮೇಲೆ ಆಧಾರಗೊಂಡ ನೂತನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕಾರ್ಯಕ್ರಮ ಅವರಲ್ಲಿ ಇರಲಿಲ್ಲ. ಸಮಾಜದ ಒಂದು ವಾಸ್ತವ ಕಲ್ಪನೆಯನ್ನಾಗಲಿ, ವ್ಯಾಪಕ ಪ್ರಮಾಣದಲ್ಲಿ ಜನತೆಯನ್ನು ಒಂದುಗೂಡಿಸುವ ನೂತನ ಜೀವನ ಮಾರ್ಗದ ಕಲ್ಪನೆಯನ್ನಾಗಲಿ ಅವರು ತಳೆದಿರಲಿಲ್ಲ. ಚಲ್ಲಾಪಿಲ್ಲಿ ಯಾದ, ವಿರಳವಾದ, ಬಿಡಿಬಿಡಿಯಾದ ದಂಗೆಗಳು, ಅವೆಷ್ಟೇ ಲೆಕ್ಕವಿಲ್ಲದಷ್ಟಿರಲಿ, ಆಧುನಿಕ ಸಾಮ್ರಾಜ್ಯ ಶಾಹಿಯನ್ನು ಸೋಲಿಸಲು ಅಸಮರ್ಥವಾದುವು. ಅದಕ್ಕೆ ಆಧುನಿಕ ಚಿಂತನೆ ಮತ್ತು ವಿಶ್ಲೇಷಣೆಯಮೇಲೆ, ಸಮಾಜದ ನೂತನವಾದೊಂದು ನೋಟದ ಮೇಲೆ, ರಾಷ್ಟ್ರವ್ಯಾಪಿಯಾದ ರಾಜಕೀಯ ಚಟುವಟಿಕೆಯನ್ನು ರೂಪಿಸಲು ಸಮರ್ಥವಾದ ನೂತನ ಆದರ್ಶಗಳು ಮತ್ತು ಪಕ್ಷಗಳ ಆಧಾರದಮೇಲೆ ನಿಂತ ಹೋರಾಟ ಅಗತ್ಯವಾಗಿತ್ತು. 20ನೆಯ ಶತಮಾನದಲ್ಲಿ ರೈತಜನರ ಅತೃಪ್ತಿಯ ಜೊತೆಗೆ ಸಾಮಾನ್ಯವಾದ ಸಾಮ್ರಾಜ್ಯಶಾಹೀ ವಿರೋಧಿ ಅತೃಪ್ತಿಯೂ ಅವರ ರಾಜಕೀಯ ಚಟುವಟಿಕೆಯೂ ಹೆಚ್ಚು ವ್ಯಾಪಕವಾದ ರಾಷ್ಟ್ರೀಯ ಚಳುವಳಿ ಮತ್ತು ಆಧುನಿಕ ಕಿಸಾನ್ ಚಳುವಳಿಗಳಲ್ಲಿ ವ್ಯಕ್ತವಾದಾಗ ಅದು ಸಾಧಿತವಾಯಿತು. ಆದರೂ 19 ನೆಯ ಶತಮಾನದ ಜನತಾ ಚಳುವಳಿಗಳೂ ದಂಗೆಗಳೂ ಭಾರತೀಯರಲ್ಲಿ ಸುಪ್ತವಾಗಿ ಅಡಗಿದ್ದ, ಸಾಮ್ರಾಜ್ಯಶಾಹಿಗೆ ವಿರುದ್ಧವಾದ ಪ್ರತಿಭಟನೆಯ ಅಪಾರ ಶಕ್ತಿಯನ್ನು ತೆರೆದು ತೋರಿಸಿದುವು.

### *(ಆ) ಆಧುನಿಕ ರಾಜಕೀಯ ಹಾಗೂ ನೂತನ ರಾಜಕೀಯ ಸಂಸ್ಥೆಗಳು*

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ರಾಷ್ಟ್ರೀಯವಾದ ರಾಜಕೀಯ ಪ್ರಜ್ಞೆ ಅರಳಿತು. ಒಂದು ವ್ಯವಸ್ಥಿತವಾದ ರಾಷ್ಟ್ರೀಯ ಚಳುವಳಿಯ ಸ್ಥಾಪನೆ ಹಾಗೂ ಬೆಳವಣಿಗೆ ಕಂಡುಬಂದದ್ದು ಆಗಲೇ. ಆಧುನಿಕ ಭಾರತದ ವಿದ್ಯಾವಂತ ವರ್ಗದ ಜನರು ದೇಶದಲ್ಲಿ ರಾಜಕೀಯ ಶಿಕ್ಷಣವನ್ನು ಹರಡಲು ಹಾಗೂ ರಾಜಕೀಯ ಚಟುವಟಿಕೆಯನ್ನು ಪ್ರಾರಂಭಿಸಲು ರಾಜಕೀಯ ಸಂಸ್ಥೆಗಳನ್ನು ಸ್ಥಾಪಿಸಿದರು. ಈ ಕೆಲಸಕ್ಕೆ ಹೊಸ ರಾಜಕೀಯ ವಿಚಾರಗಳು, ವಾಸ್ತವತೆಯ ಬುದ್ಧಿಪೂರ್ವಕ ಅರಿವು,

ನೂತನ ಸಾಮಾಜಿಕ ಮತ್ತು ರಾಜಕೀಯ ಧ್ಯೇಯಗಳು, ಹೋರಾಟ ಮತ್ತು ಪ್ರತಿಭಟನೆಗೆ ನೂತನ ಶಕ್ತಿ ಸಾಮರ್ಥ್ಯಗಳು, ರಾಜಕೀಯ ವ್ಯವಸ್ಥೆಯ ನೂತನ ತಂತ್ರ, ಇತ್ಯಾದಿ ಅಂಶಗಳು ಆಧಾರವಾಗಲಿದ್ದುವು. ಆದರ್ಶ, ನೀತಿ, ಸಂಘಟನೆ ಮತ್ತು ನಾಯಕತ್ವಗಳಲ್ಲಿ ಒಂದು ತಿರುವನ್ನೇ ಅದು ತೋರಿಸಲಿತ್ತು. ಕೆಲಸವೇನೋ ಬಹಳ ಕಷ್ಟದ್ದು. ಏಕೆಂದರೆ ಭಾರತೀಯರಿಗೆ ಆಧುನಿಕ ರಾಜಕೀಯ ಚಟುವಟಿಕೆಗಳು ಸಂಪೂರ್ಣವಾಗಿ ಅಪರಿಚಿತವಾಗಿದ್ದುವು. ಜನರು ತಮ್ಮ ಆಳುಗರಿಗೆದುರಾಗಿ ರಾಜಕೀಯವಾಗಿ ಸಂಘಟಿತರಾಗಬಹುದು ಎಂಬ ಕಲ್ಪನೆಯೇ ನೂತನವಾಗಿತ್ತು. ಆದ್ದರಿಂದ ಈ ಮೊದಮೊದಲಿನ ಸಂಸ್ಥೆಗಳ ಮತ್ತು ರಾಜಕೀಯ ಕಾರ್ಯಕರ್ತರ ಕಾರ್ಯಚಟುವಟಿಕೆಗಳು ಬಹು ಮಂದಗತಿಯಿಂದ ಸಾಗಿದುವು. ಸಾಮಾನ್ಯ ಜನರನ್ನು ಆಧುನಿಕ ರಾಜಕೀಯದ ಪ್ರಭಾವದೊಳಕ್ಕೆ ತರಲು ಅರ್ಧ ಶತಮಾನಕ್ಕಿಂತಲೂ ಹೆಚ್ಚು ಕಾಲವೇ ಬೇಕಾಯಿತು.

ರಾಜಕೀಯ ಸುಧಾರಣೆಗಳಿಗಾಗಿ ಚಳುವಳಿಯನ್ನು ಪ್ರಾರಂಭಿಸಿದ ಮೊದಲ ಭಾರತೀಯ ನಾಯಕರಲ್ಲಿ ರಾಜಾ ರಾಮ ಮೋಹನ ರಾಯ್ ಒಬ್ಬರು. ಪತ್ರಿಕಾ ಸ್ವಾತಂತ್ರ್ಯ, ನ್ಯಾಯದರ್ಶಿ ಮಂಡಲಿಯಿಂದ ವಿಚಾರಣೆ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಬೇರ್ಪಡಿಕೆ, ಉನ್ನತ ಅಧಿಕಾರಗಳಿಗೆ ಭಾರತೀಯರ ನೇಮಕ, ಜಮೀನ್ದಾರರ ದಬ್ಬಾಳಿಕೆಯಿಂದ ರೈತನ ರಕ್ಷಣೆ, ಭಾರತೀಯ ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿ-ಇವುಗಳಿಗಾಗಿ ಅವರು ಹೋರಾಡಿದರು. ಬ್ರಿಟಿಷ್ ಆಳಿಕೆಯ ಸಮಯ ಮುಗಿದು ಸ್ವತಂತ್ರ ಭಾರತವು ಉದಯವಾಗುತ್ತದೆ ಎಂಬ ಆಸೆಯ ಆಧಾರದ ಮೇಲೆಯೇ ತಮ್ಮ ಸಮಸ್ತ ಚಟುವಟಿಕೆಗಳನ್ನೂ ನೆಲೆಗೊಳಿಸಿದರು. ಅವರು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ತೀವ್ರವಾದ ಆಸಕ್ತಿ ವಹಿಸಿದರು. ಎಲ್ಲೆಲ್ಲೂ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ರಾಷ್ಟ್ರೀಯತೆಗಳನ್ನೇ ಬೆಂಬಲಿಸಿದರು.

ರಾಮ ಮೋಹನರ ಪರಂಪರೆಯನ್ನು ಅವರ ಮರಣಾನಂತರ ಡೆರೋಜಿಯನ್ನರು (Derozians)ಎಂಬ ತೀವ್ರಗಾಮಿಗಳಾದ ಯುವಕರು ಮುಂದುವರಿಸಿದರು. ಅವರಿಗೆ ಆ ಹೆಸರು ಬಂದದ್ದು ಅವರ ಪ್ರಸಿದ್ಧ ಆಂಗ್ಲೋ-ಇಂಡಿಯನ್ ಉಪಾಧ್ಯಾಯ ಹೆನ್ರಿ ವಿವಿಯನ್ ಡೆರೋಜಿಯೋ (Henry Vivian Derozio)ನಿಂದ. ಅವನು ತನ್ನ ಶಿಷ್ಯರಲ್ಲಿ, ಫ್ರಾನ್ಸಿನ ಮಹಾಕ್ರಾಂತಿ, ಟಾಮ್ ಪೇಯ್ನ್ (Tom Paine) ಮತ್ತು ಜೆರ್ರಿ ಬೆಂಥಾಮ್ (Jerry Bentham)ರ ಭಾವನೆಗಳಿಂದ ಆಧಾರಗೊಂಡ ಸ್ವಾತಂತ್ರ್ಯ ಮತ್ತು ರಾಷ್ಟ್ರಭಕ್ತಿಗಳ ಉಜ್ವಲವಾದ ಪ್ರೇಮವನ್ನು ಪ್ರಚೋದಿಸಿದನು. ಆಧುನಿಕ ಭಾವನೆಗಳನ್ನೂ ಭಾರತಕ್ಕೆ ಅವುಗಳ ಅನ್ವಯವನ್ನೂ ಚರ್ಚಿಸಲು ಅಸಂಖ್ಯಾತವಾದ ಸಾರ್ವಜನಿಕ ಸಂಸ್ಥೆಗಳನ್ನೂ, ಈ ವಿಚಾರಗಳನ್ನು ಪ್ರಸಾರಮಾಡಲು ಅನೇಕ ವರ್ತಮಾನ ಪತ್ರಿಕೆಗಳು ಮತ್ತು ನಿಯತಕಾಲಿಕಗಳನ್ನು ಡೆರೋಜಿಯನ್ನರು ಪ್ರಾರಂಭಿಸಿದರು. ಹೀಗೆ ಆಧುನಿಕ ರಾಜಕೀಯ ಪ್ರಜ್ಞೆಯ ಬೀಜವನ್ನು ರಾಜಾ ರಾಮ ಮೋಹನರಾಯ್ ಮತ್ತು ಡೆರೋಜಿಯನ್ನರು 1820 ಮತ್ತು 1830ರ ಸುಮಾರಿನಲ್ಲಿ ಬಿತ್ತಿದರು.

ಭಾರತದಲ್ಲಿ ಪ್ರಾರಂಭವಾದ ಮೊದಲನೆಯ ರಾಜಕೀಯ ಸಂಸ್ಥೆ 1837ರಲ್ಲಿ

ಕಲ್ಕತ್ತದಲ್ಲಿ ಸ್ಥಾಪಿತವಾದ ನೆಲದೊಡೆಯರ ಸಂಘ (Landholders' Society).ಆದರೆ ಅದನ್ನು ಪ್ರಾರಂಭಿಸಿದ್ದು ಬಂಗಾಳ, ಬಿಹಾರ ಮತ್ತು ಒರಿಸ್ಸಾಗಳ ಜಮೀನ್ದಾರರ ವರ್ಗಹಿತಾಸಕ್ತಿಗಳ ರಕ್ಷಣೆ ಎಂಬ ಕಿರಿದಾದ ಉದ್ದೇಶದಿಂದ. 1843ರಲ್ಲಿ "ಬಂಗಾಳ ಬ್ರಿಟಿಷ್ ಇಂಡಿಯನ್ ಸೊಸೈಟಿ" (Bengal British Indian Society)ಯು ಇನ್ನೂ ವ್ಯಾಪಕವಾದ ಉದ್ದೇಶಗಳಿಂದ ವ್ಯವಸ್ಥೆಗೊಂಡಿತು. 1851ರಲ್ಲಿ ಎರಡೂ ಸಂಸ್ಥೆಗಳು ಒಂದುಗೂಡಿ "ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್" (British India Association)ರೂಪುಗೊಂಡಿತು. ಅದೇ ಕಾಲಕ್ಕೆ 1852ರಲ್ಲಿ "ಮದರಾಸ್ ನೇಟಿವ್ ಅಸೋಸಿಯೇಷನ್" (Madras Native Association) ಮತ್ತು "ಬೊಂಬಾಯಿ ಅಸೋಸಿಯೇಷನ್" (Bombay Association)ಗಳೂ ಸ್ಥಾಪಿತವಾದುವು. ಅಂಥವೇ ಸಂಘಗಳು, ಕೂಟಗಳು ರಾಷ್ಟ್ರಾದ್ಯಂತ ಸಣ್ಣಪುಟ್ಟ ನಗರಗಳಲ್ಲೂ ರಚಿತವಾದುವು. ಹೆಚ್ಚು ಕಡಮೆ ಅವೆಲ್ಲವುಗಳಲ್ಲಿ ಪ್ರಧಾನರಾಗಿದ್ದವರು ಶ್ರೀಮಂತ ವಣಿಕ ಅಥವಾ ಜಮೀನ್ದಾರಿ ವರ್ಗದ ಜನ. ಹಾಗಾಗಿ ಆ ಸಂಸ್ಥೆಗಳು ಲಕ್ಷಣದಲ್ಲಿ ಸ್ಥಳೀಯವಾಗಿ ದ್ದುವು. ಅವರು ರಾಜಕೀಯ ಮತ್ತು ಆರ್ಥಿಕ ಬೇಡಿಕೆಗಳನ್ನು ಬ್ರಿಟಿಷ್ ಪಾರ್ಲಿಮೆಂಟಿ ನೆದುರು ಮಂಡಿಸುತ್ತಿದ್ದರು ಮತ್ತು ಮುಖ್ಯವಾಗಿ ಆಡಳಿತ ಸುಧಾರಣೆಗಳಿಗಾಗಿ, ಆಡಳಿತಾಧಿಕಾರಗಳಲ್ಲಿ ಭಾರತೀಯರನ್ನೇ ಹೆಚ್ಚುಹೆಚ್ಚಾಗಿ ನೇಮಿಸಿಕೊಳ್ಳಲಿಕ್ಕಾಗಿ, ಶಿಕ್ಷಣದ ಪ್ರಸಾರಕ್ಕಾಗಿ, ಸರಕಾರದಲ್ಲಿ ಭಾರತೀಯರನ್ನು ಜೊತೆಗೂಡಿಸಿಕೊಳ್ಳು ವುದಕ್ಕಾಗಿ ಮತ್ತು ಭಾರತೀಯ ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿಗಾಗಿ ಕೆಲಸಮಾಡುತ್ತಿದ್ದರು.

1857 ರ ಕ್ರಾಂತಿಯು ವಿಫಲವಾದುದರಿಂದ ಒಂದು ವಿಷಯ ಸ್ಪಷ್ಟವಾಯಿತು. ಬೇರೂರಿದ್ದ ಮೇಲುವರ್ಗಗಳಾದ ಜಮೀನ್ದಾರರು, ರಾಜರು ಮತ್ತು ಭೂಮಾಲೀಕರ ನೇತೃತ್ವದಲ್ಲಿ ಬ್ರಿಟಿಷ್ ಆಳಿಕೆಯ ವಿರುದ್ಧವಾಗಿ ನಡೆಯುತ್ತಿದ್ದ ಸಾಂಪ್ರದಾಯಿಕ ರೀತಿಯ ರಾಜಕೀಯ ಪ್ರತಿಭಟನೆ ಯಶಸ್ವಿಯಾಗಲಾರದು, ವಸಾಹತುಶಾಹಿ ಗೆದುರಾದ ಆ ಪ್ರತಿಭಟನೆ ನೂತನವಾದ ಕಾಲುವೆಗಳಲ್ಲಿ ಹರಿಯಬೇಕು-ಎಂಬುದೇ ಅದು. ಇದು ಒಂದು ಕಡೆಯಾದರೆ, ಇನ್ನೊಂದು ಕಡೆ ನಾವು ಮೊದಲೇ ನೋಡಿರುವಂತೆ, ಬ್ರಿಟಿಷ್ ಆಳಿಕೆ ಮತ್ತು ನೀತಿಗಳ ಲಕ್ಷಣ 1858 ರ ನಂತರ ಪ್ರಧಾನವಾದ ಒಂದು ಪರಿವರ್ತನೆಯನ್ನು ಕಂಡಿತು. ಅದು ಹೆಚ್ಚುಹೆಚ್ಚಾಗಿ ಪ್ರಗತಿ ವಿರೋಧಿಯಾಯಿತು. ಭಾರತದ ವಿದ್ಯಾವಂತ ವರ್ಗವು ಕ್ರಮೇಣ, ಆದರೆ ಹೆಚ್ಚುಹೆಚ್ಚಾಗಿ ಬ್ರಿಟಿಷ್ ನೀತಿಗಳನ್ನು ಟೀಕಿಸತೊಡಗಿತು, ಬ್ರಿಟಿಷ್ ಆಳಿಕೆಯ ಸುಲಿಗೆಯ ಸ್ವರೂಪವನ್ನು ಗ್ರಹಿಸತೊಡಗಿತು. ವಸಾಹತುಶಾಹಿಗೆ ವಿರುದ್ಧವಾಗಿ ಆಧುನಿಕ ಸುಶಿಕ್ಷಿತ ವರ್ಗವು ತೋರಿಸಿದ ಪ್ರತಿಕ್ರಿಯೆ, ಕೃಷಿವರ್ಗವು ಸಹಜ ಪ್ರವೃತ್ತಿಯಿಂದ ತೋರಿಸಿದ ಪ್ರತಿಕ್ರಿಯೆಯಂತಲ್ಲದೆ, ಶಂಕೆಯಿಂದ ಕೂಡಿದುದಾಗಿತ್ತು. ಅದರ ಕಾದಾಟ ಸ್ವಭಾವ ಮೃದುವಾಗಿತ್ತು, ಅಷ್ಟು ವೈಜ್ಞಾನಿಕವೂ ಆಗಿರಲಿಲ್ಲ. ಭಾರತೀಯ ಬುದ್ಧಿಜೀವಿವರ್ಗದ ಅರಿವು ಬೆಳೆಯುವುದಕ್ಕೆ ಬಹಳಕಾಲ ಹಿಡಿಯಿತು. ಆದರೆ ಒಮ್ಮೆ ಅರಿಯುವಿಕೆಯ ಪ್ರಕ್ರಿಯೆ ಪ್ರಾರಂಭವಾದಮೇಲೆ, ಅದು ಆಧುನಿಕ ಚಿಂತನೆಯ ಆಧಾರದಮೇಲೆ ನಿಂತಿದ್ದುದರಿಂದಾಗಿ, ಸಾಮ್ರಾಜ್ಯಶಾಹಿಯ

ನಿಜಸ್ವರೂಪದೊಳಕ್ಕೆ ಆಳವಾಗಿ ಇಳಿದು ಅರ್ಥಮಾಡಿಕೊಂಡಿತು, ಕೊನೆಗೆ ಆಧುನಿಕ ರಾಜಕೀಯ ಚಟುವಟಿಕೆಯಾಗಿ ಪರಿವರ್ತನೆಗೊಂಡಿತು.

ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಿಗೆ, ಆಗ ಇದ್ದ ರಾಜಕೀಯ ಸಂಸ್ಥೆಗಳು ಬದಲಾದ ಪರಿಸ್ಥಿತಿಗಳಲ್ಲಿ ಸಹಾಯವಾಗುವುದಕ್ಕೆ ಸಾಧ್ಯವಿಲ್ಲದಷ್ಟು ಮಟ್ಟಿಗೆ ಸಂಕುಚಿತವಾಗಿ ಕಲ್ಪಿತವಾಗಿವೆ ಎಂಬ ವಿಷಯ ಮನವರಿಕೆಯಾಯಿತು. ಉದಾಹರಣೆಗೆ, ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್ ಸಂಘವು ಹೆಚ್ಚಾಗಿ ಜಮೀನ್ದಾರರ ಆಸಕ್ತಿಗಳನ್ನು ಇಟ್ಟುಕೊಂಡು, ಪರಿಣಾಮವಾಗಿ ಆಳುವಶಕ್ತಿಯೊಂದಿಗೆ ತನ್ನನ್ನು ಸಮೀಕರಿಸಿಕೊಂಡಿತ್ತು. ಆದರೆ ನೂತನ ರಾಜಕೀಯವು ಅಧಿಕಾಧಿಕವಾಗಿ ಬ್ರಿಟಿಷ್ ಆಳಿಕೆಯ ವಿಮರ್ಶಕ ಮನೋಭಾವದ ಆಧಾರದಮೇಲೆ ನಿಲ್ಲಬೇಕಾಗಿತ್ತು. ಆದ್ದರಿಂದ ಅವರು ಹೊಸ ಮಾದರಿಯ ರಾಷ್ಟ್ರೀಯತಾ ರಾಜಕೀಯ ವ್ಯವಸ್ಥೆಯ ಕಡೆಗೆ ತಡವರಿಸುತ್ತಾ ನಡೆದರು.

1866 ರಲ್ಲಿ ದಾದಾಭಾಯಿ ನವರೋಜಿ ಅವರು ಲಂಡನ್ನಿನಲ್ಲಿ "ಈಸ್ಟ್ ಇಂಡಿಯಾ ಅಸೋಸಿಯೇಷನ್" (East India Association) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಭಾರತೀಯರಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಚರ್ಚಿಸಿ ಬ್ರಿಟಿಷ್ ಸಾರ್ವಜನಿಕಾಭಿಪ್ರಾಯದ ಮೇಲೆ ಪ್ರಭಾವ ಬೀರುವುದು ಅದರ ಉದ್ದೇಶ. ಆ ಸಂಸ್ಥೆಯ ಶಾಖೆಗಳನ್ನು ಭಾರತದ ಪ್ರಮುಖ ನಗರಗಳಲ್ಲಿ ತೆರೆಯಲಾಯಿತು. ಶೀಘ್ರದಲ್ಲಿಯೇ ದಾದಾಭಾಯಿ ನವರೋಜಿ ತಮ್ಮ ಸಮಕಾಲೀನರಿಗೂ ಭಾರತೀಯರ ಮುಂದಿನ ಪೀಳಿಗೆಗಳಿಗೂ "ಭಾರತದ ಮಹಾಪುರುಷ" ಎಂದು ಪ್ರಸಿದ್ಧರಾಗಲಿದ್ದರು. 1825 ರಲ್ಲಿ ಹುಟ್ಟಿದ ಅವರು ವ್ಯವಹಾರದಲ್ಲಿ ಯಶಸ್ಸು ಗಳಿಸಿದರು. ಆದರೆ ತಮ್ಮ ಜೀವನ ಹಾಗೂ ಇಡೀ ಸಂಪತ್ತನ್ನು ರಾಷ್ಟ್ರೀಯ ಚಳುವಳಿಗೆ ಅರ್ಪಿಸಿದರು. ಅವರ ಮಹತ್ವಪೂರ್ಣವಾದ ಕೊಡುಗೆ ಬಂದದ್ದು, ಬ್ರಿಟಿಷ್ ಆಳಿಕೆಯನ್ನು ಅವರು ಆರ್ಥಿಕವಾಗಿ ವಿಶ್ಲೇಷಣೆ ಮಾಡಿದುದರಲ್ಲಿ. ಭಾರತದ ಬಡತನ ಮತ್ತು ಆರ್ಥಿಕ ಹಿಂದುಳಿಕೆ, ಸ್ಥಳೀಯ ಪರಿಸ್ಥಿತಿಗಳಲ್ಲಿ ಅಂತರ್ಗತವಾಗಿಲ್ಲ, ಆದರೆ ಭಾರತದಿಂದ ಸಂಪತ್ತು ಮತ್ತು ಬಂಡವಾಳವನ್ನು ಕೊಳ್ಳೆಹರಿಯಿಸುತ್ತಿದ್ದ ವಸಾಹತುಶಾಹಿ ಆಡಳಿತವೇ ಅದಕ್ಕೆ ಕಾರಣ ಎಂದು ಅವರು ತೋರಿಸಿಕೊಟ್ಟರು. ಜೀವನ ಪೂರ್ತಿಯಾಗಿ ದಾದಾಭಾಯಿಯವರು ಯುವಕರೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು. ತೀವ್ರಗಾಮಿಯಾದ ದಿಕ್ಕಿನಲ್ಲಿ ತಮ್ಮ ಚಿಂತನೆ ಮತ್ತು ರಾಜಕೀಯ ವಿಚಾರಗಳನ್ನು ಒಂದೇ ಸಮನಾಗಿ ಬೆಳೆಸಿಕೊಂಡರು.

ಜಸ್ಟಿಸ್ ರಾನಡೆ, ಗಣೇಶ ವಾಸುದೇವ ಜೋಶಿ, ಎಸ್.ಎಚ್. ಚಿಪ್ಳುಣಕರ್ ಮತ್ತು ಇತರರು 1870 ರಲ್ಲಿ "ಪೂನಾ ಸಾರ್ವಜನಿಕ ಸಭೆ" (Poona Sarvajanika Sabha) ಯನ್ನು ರೂಪಿಸಿದರು. ಮುಂದಿನ ಇಪ್ಪತ್ತು ವರ್ಷಗಳ ಕಾಲ ಸಕ್ರಿಯವಾಗಿ ರಾಜಕೀಯ ಶಿಕ್ಷಣವನ್ನು ಸಭೆ ನಿರ್ವಹಿಸಿತು.

1876 ರಿಂದ 1880 ರ ವರೆಗೆ ನಡೆದ ಲಿಟ್ಟನನ (Lytton) ವೈಸರಾಯಿ ಅಧಿಕಾರಾವಧಿಯಲ್ಲಿ ಸ್ಪಷ್ಟವಾಗಿಯೇ ಜಾರಿಗೆ ತಂದ ಪ್ರಗತಿ ವಿರೋಧಿ ಮತ್ತು ಭಾರತ ವಿರೋಧಿ ಕ್ರಮಗಳು ಭಾರತ ರಾಷ್ಟ್ರೀಯತಾ ಚಟುವಟಿಕೆಯ ಮಂದಗತಿ

ಯನ್ನು ಚುರುಕುಗೊಳಿಸಿದುವು. ಭಾರತೀಯ ಬಟ್ಟೆ ಕೈಗಾರಿಕೆ ಉದಯೋನ್ಮುಖ ವಾಗುತ್ತಿರುವುದನ್ನು ಸಹಿಸದ ಲ್ಯಂಕಾಷೈರ್ ತಯಾರಿಕೆಗಾರರ ಮಾತ್ಸರ್ಯವನ್ನು ತೃಪ್ತಿಪಡಿಸುವುದಕ್ಕಾಗಿ ಬ್ರಿಟಿಷ್ ಬಟ್ಟೆಗಳ ಮೇಲೆ ಆಮದು ಸುಂಕವನ್ನು ತೆಗೆದು ಹಾಕಿದ್ದು; ಆಫ್‌ಘಾನೀಸ್ತಾನಕ್ಕೆ ಎದುರಾಗಿ ಆಕ್ರಮಣಕಾರೀ ಹಾಗೂ ವಿಸ್ತರಣ ಧ್ಯೇಯದ ಯುದ್ಧ ನಡೆಸಿ ಅದರ ವೆಚ್ಚವನ್ನು ದೇಶದ ಬೊಕ್ಕಸಕ್ಕೆ ಹೇರಿದ್ದು; ನಿಶ್ಶಸ್ತ್ರೀಕರಣ ಕಾಯದೆ (Arms Act) ಯನ್ನು ಜಾರಿಗೆ ತಂದು ಭಾರತೀಯ ಜನರು ಯಾವುದೇ ಬಗೆಯ ಪ್ರತಿಭಟನೆ ತೋರಿಸುವುದಿರಲಿ, ಆತ್ಮರಕ್ಷಣೆ ಮಾಡಿಕೊಳ್ಳಲು ಕಲಿಯುವುದೂ ಅಸಾಧ್ಯವನ್ನಾಗಿ ಮಾಡಿದ್ದು; ದೇಶಭಾಷಾ ವೃತ್ತಪತ್ರಿಕೆಗಳ ಶಾಸನ (Vernacular Press Act) ವನ್ನು ತಂದು, ಬ್ರಿಟಿಷ್ ಆಳಿಕೆಯು ಹೆಚ್ಚುಹೆಚ್ಚಾಗಿ ವಿಮರ್ಶೆಗೊಳಗಾಗುತ್ತಿರುವುದನ್ನು ತಡೆದದ್ದು; ಲಕ್ಷಾಂತರ ಜನರು ಕ್ಷಾಮಕ್ಕೆ ತುತ್ತಾಗಿ ಸಾಯುತ್ತಿದ್ದಾಗ, ದೆಹಲಿಯಲ್ಲಿ ವೈಭವಪೂರ್ಣವಾಗಿ ಚಕ್ರವರ್ತಿಯ ದರ್ಬಾರು ಏರ್ಪಾಟುಮಾಡಿದ್ದು; ಕೊನೆಯದಾಗಿ, ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ಸ್ಪರ್ಧಿಸಲು ಗರಿಷ್ಠ ವಯೋಮಿತಿಯನ್ನು 21 ರಿಂದ 19 ಕ್ಕೆ ಇಳಿಸಿ, ಭಾರತೀಯರು ಸಿವಿಲ್ ಸರ್ವಿಸ್ ಪ್ರವೇಶಿಸಲು ಅವಕಾಶಗಳನ್ನು ಇನ್ನೂ ಕಡಮೆ ಮಾಡಿದ್ದು-ಈ ಕ್ರಮಗಳು ಬ್ರಿಟಿಷ್ ಆಳಿಕೆಯ ಸುಲಿಗೆ ಮತ್ತು ವಸಾಹತುಶಾಹೀ ಸ್ವರೂಪವನ್ನು ತೆರೆದು ತೋರಿಸಿದುವು. ಈ ಕ್ರಮಗಳ ವಿರುದ್ಧವಾಗಿ ದೇಶಾದ್ಯಂತ ಪ್ರತಿಭಟನೆಗಳನ್ನು ಪ್ರದರ್ಶಿಸಲಾಯಿತು. ಭಾರತದ ಕೈಗಾರಿಕೆಗಳನ್ನು ವಿದೇಶೀ ಆಕ್ರಮಣಕೋರರಿಂದ ರಕ್ಷಿಸುವ ಸಲುವಾಗಿ 1870 ರ ಸುಮಾರಿನಲ್ಲಿ ಸ್ವದೇಶೀ ಸಿದ್ಧಾಂತವನ್ನು ಮೊದಲು ಬೋಧಿಸಲಾಯಿತು.

ಭಾರತೀಯ ಯುವಕರಲ್ಲಿ ನೂತನ ರಾಜಕೀಯ ಮನೋಭಾವ ಮೊದಲು ವ್ಯಕ್ತವಾದದ್ದು ಬಂಗಾಳದಲ್ಲಿ. ಸಾಂಪ್ರದಾಯಿಕವೂ ಜಮೀನ್ದಾರರ ಪರವೂ ಆಗಿದ್ದ ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್, ಹೊಸ ಮಧ್ಯಮವರ್ಗದ ಜನ ಮತ್ತು ವಿದ್ಯಾವಂತ ಜನರಿಗೆ ಹಿಡಿಸಲಿಲ್ಲ, ಏಕೆಂದರೆ ಅವರು ಈಗ ಜಮೀನ್ದಾರರೊಂದಿಗೆ ಸ್ಪರ್ಧಿಸುವುದರಲ್ಲಿ ತಾವೇ ಜನತಾ ನಾಯಕರು ಎಂದು ಘೋಷಿಸಿಕೊಂಡರು. ಭಾರತವನ್ನು ಎಂದೆಂದಿಗೂ ಬ್ರಿಟನ್ನು ಆಳಲೇಬೇಕು ಎಂಬ ಸಿದ್ಧಾಂತವನ್ನು ಒಪ್ಪಿಕೊಳ್ಳಲು ಅವರು ನಿರಾಕರಿಸಿದರು. ಆನಂದ ಮೋಹನ್ ಬೋಸ್ ಮತ್ತು ಸುರೇಂದ್ರನಾಥ ಬ್ಯಾನರ್ಜಿ ಇವರ ನೇತೃತ್ವದಲ್ಲಿ ಅವರು 1876ರ ಜುಲೈ ತಿಂಗಳಲ್ಲಿ "ಇಂಡಿಯನ್ ಅಸೋಸಿಯೇಷನ್" (Indian Association) ಸ್ಥಾಪಿಸಿದರು. ಚಳುವಳಿಗಾಗಿ ಈ ಸಂಘವು ಕೈಗೆತ್ತಿಕೊಂಡ ಮೊದಲನೆಯ ವಿಚಾರವೆಂದರೆ ಸಿವಿಲ್ ಸರ್ವಿಸ್ ಪರೀಕ್ಷೆಗಳಲ್ಲಿ ಸುಧಾರಣೆ. ಸಂಘವು ಸುರೇಂದ್ರನಾಥ ಬ್ಯಾನರ್ಜಿಯವರನ್ನು ದೇಶದ ಬೇರೆಬೇರೆ ಭಾಗಗಳಿಗೆ ಚಳುವಳಿಗೆ ಬೆಂಬಲ ಕೋರಿ ಪ್ರಚಾರ ಮಾಡಲು ವಿಶೇಷ ರಾಯಭಾರಿಯಾಗಿ ಕಳುಹಿಸಿತು. ಬಹುಶಃ ಅಖಿಲ ಭಾರತ ಜನಪ್ರಿಯತೆ ಯನ್ನು ಗಳಿಸಿದ ಮೊತ್ತಮೊದಲನೆಯ ಭಾರತೀಯರೆಂದರೆ ಸುರೇಂದ್ರನಾಥ ಬ್ಯಾನರ್ಜಿ ಎಂದು ಕಾಣುತ್ತದೆ. ವಿಶಾಲವಾದ ರಾಜಕೀಯ ಚಳುವಳಿಯ ಪ್ರವಾಹ ದೊಳಕ್ಕೆ ಸಾಮಾನ್ಯ ಜನರನ್ನು ತರಲು ಇಂಡಿಯನ್ ಅಸೋಸಿಯೇಷನ್ನಿನ

ನಾಯಕರು, ಜಮೀನ್ದಾರರ ವಿರುದ್ಧ ಗೇಣಿದಾರರ ಹಕ್ಕು ಸ್ಥಾಪಿಸಲು, ವಿದೇಶೀ ಟೀ ಪ್ಲಾಂಟರರಿಗೆದುರಾಗಿ ಪ್ಲಾಂಟೇಷನ್ ಕೆಲಸಗಾರರ ಹಕ್ಕುಗಳನ್ನು ಸ್ಥಾಪಿಸಲು ಚಳುವಳಿಗಳನ್ನು ಹೂಡಿದರು. ಸಂಘವು ಬಂಗಾಳದ ಬೇರೆಬೇರೆ ನಗರಗಳಲ್ಲಿ ಗ್ರಾಮಗಳಲ್ಲಿ, ಹಾಗೆಯೇ ಬಂಗಾಳದಿಂದ ಹೊರಗೆ ಅನೇಕ ಪಟ್ಟಣಗಳಲ್ಲಿ ಶಾಖೆಗಳನ್ನು ತೆರಯಿತು.

ಭಾರತದ ಇತರ ಭಾಗಗಳಲ್ಲಿಯೂ ಯುವಕ ಶಕ್ತಿಗಳು ಕಾರ್ಯತತ್ಪರವಾಗಿದ್ದುವು. 1884 ರಲ್ಲಿ ಎಂ. ವೀರರಾಘವಾಚಾರಿ, ಜಿ. ಸುಬ್ರಮಣಿಯ ಅಯ್ಯರ್, ಆನಂದಾಚಾರ್ಲು ಮತ್ತಿತರು "ಮದರಾಸ್ ಮಹಾಜನ ಸಭಾ" (Madras Mahajan Sabha) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಬೊಂಬಾಯಿಯಲ್ಲಿ ಫಿರೋಜ್ ಷಹಾ ಮೆಹ್ತಾ, ಕೆ.ಟಿ. ತೆಲಂಗ್ ಮತ್ತು ಇತರರು 1885 ರಲ್ಲಿ "ಬೊಂಬಾಯಿ ಪ್ರೆಸಿಡೆನ್ಸಿ ಅಸೋಸಿಯೇಷನ್" (Bombay Presidencey Association) ಸ್ಥಾಪಿಸಿದರು.

## *(ಇ) ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆ*

ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಿಗೆ ಹೆಚ್ಚುಹೆಚ್ಚಾಗಿ ಅಖಿಲ ಭಾರತ ವ್ಯಾಪ್ತಿಯುಳ್ಳ ಸಂಸ್ಥೆಯೊಂದರ ಅಗತ್ಯ ಮನವರಿಕೆಯಾಯಿತು. ಇದು ವಿವಿಧ ಮನೋಭಾವಗಳ ಸಂಗಮಕ್ಕೆ ಸಮಾನವಾದ ಒಂದು ರಂಗವನ್ನು ನಿರ್ಮಿಸಿ, ಕಾರ್ಯಚಟುವಟಿಕೆಗೆ ಒಂದು ಸಾಮಾನ್ಯ ಕಾರ್ಯಕ್ರಮವನ್ನು ರೂಪಿಸುವುದಕ್ಕೆ ಮಾತ್ರವಲ್ಲ, ವಿಶಾಲ ತಳಪದಿಯ ಸ್ವಾತಂತ್ರ್ಯ ಹೋರಟವನ್ನು ರೂಪಿಸಲು ಅಗತ್ಯವಾದ ಸಾರ್ವಜನಿಕ ಶಿಕ್ಷಣವನ್ನು ವ್ಯಾಪಕವಾಗಿ ಕೈಗೊಳ್ಳುವುದಕ್ಕೂ ಅಗತ್ಯವಾಗಿತ್ತು. ಅಂಥದೊಂದು ಸಂಸ್ಥೆಗೆ ಸೂಕ್ತವಾದ ಸಾಮಾಜಿಕ ತಳಹದಿ ಈಗ ಇದ್ದಿತು. ಸಾಕಷ್ಟು ಅನುಭವವೂ ಸಂಚಿತವಾಗಿತ್ತು. ರಾಷ್ಟ್ರದ ಅನೇಕ ಭಾಗಗಳಿಂದ ಅನೇಕ ಭಾರತೀಯರು-ಪಶ್ಚಿಮ ಭಾರತದ ದಾದಾಭಾಯಿ ನವರೋಜಿ, ಜಸ್ಟಿಸ್ ರಾನಡೆ, ಫಿರೋಜ್ ಷಹಾ ಮೆಹತಾ, ಕೆ.ಟಿ. ತೆಲಂಗ್, ರಹಿಮುತುಲ್ಲಾ ಮಹಾಮದ್ ಸಯಾನಿ, ಝುವೇರಿ ಲಾಲ್ ಉಮಾಶಂಕರ್ ಯಾಜ್ಞಿಕ್ ಮತ್ತು ಬದ್ರುದ್ದೀನ್ ತ್ಯಾಬ್ಜಿ; ದಕ್ಷಿಣ ಭಾರತದ ಜಿ. ಸುಬ್ರಮಣಿಯ ಅಯ್ಯರ್, ಎಸ್. ಸುಬ್ರಮಣಿ ಅಯ್ಯರ್ ಮತ್ತು ಆನಂದಾಚಾರ್ಲು; ಪೂರ್ವ ಭಾರತದ ಡಬ್ಲ್ಯು.ಸಿ. ಬ್ಯಾನರ್ಜಿ, ಸುರೇಂದ್ರನಾಥ ಬ್ಯಾನರ್ಜಿ, ಆನಂದ ಮೋಹನ್ ಬೋಸ್, ಲಾಲ್ ಮೋಹನ್ ಘೋಷ್ ಮತ್ತು ಕಾಳೀಚರಣ ಬ್ಯಾನರ್ಜಿ-ಇವರೆಲ್ಲರೂ ಏಕಕಾಲಕ್ಕೆ ಅಖಿಲ ಭಾರತ ರಾಷ್ಟ್ರೀಯ ಸಂಸ್ಥೆಯೊಂದನ್ನು ರೂಪಿಸುವ ಆಲೋಚನೆ ಮಾಡತೊಡಗಿದ್ದರು. 1883 ರ ಡಿಸೆಂಬರಿನಲ್ಲಿ ಇಂಡಿಯನ್ ಅಸೋಸಿಯೇಷನ್ ಒಂದು ಅಖಿಲ ಭಾರತ ರಾಷ್ಟ್ರೀಯ ಸಮ್ಮೇಳನವನ್ನು ಸೂಚಿಸಿತ್ತು. ಆದರೆ ಪ್ರಯತ್ನವು ಅಷ್ಟಾಗಿ ಯಶಸ್ವಿಯಾಗಿರಲಿಲ್ಲ. ಈ ವಿಚಾರಕ್ಕೆ ರಾಷ್ಟ್ರೀಯವಾದೀ ರಾಜಕೀಯ ನಾಯಕರ ಬೊಂಬಾಯಿ ಗುಂಪು ಹೆಚ್ಚು ಖಚಿತವಾದ ರೂಪು ಕೊಟ್ಟಿತು. ಇಂಗ್ಲಿಷ್‌ನವನೂ ನಿವೃತ್ತ ಸಿವಿಲ್ ಅಧಿಕಾರಿಯೂ ಆಗಿದ್ದ ಎ.ಓ.ಹ್ಯೂಮ್ (A.O.Hume) ಎಂಬುವನೊಂದಿಗೆ ಈ ಗುಂಪು ಸಹಕರಿಸಿ 1885 ರ ಡಿಸೆಂಬರ್ ತಿಂಗಳ ಕೊನೆಯ ದಿನಗಳಲ್ಲಿ ಭಾರತದ ಬೇರೆಬೇರೆ ಭಾಗಗಳ ರಾಜಕೀಯ ನಾಯಕರನ್ನು ಬರಮಾಡಿ, ಒಟ್ಟು ಸೇರಿಸುವ

ಪ್ರಯತ್ನಮಾಡಿದರು. ಈ ನಾಯಕರು "ಭಾರತ ರಾಷ್ಟ್ರೀಯ ಕಾಂಗ್ರೆಸ್" (Indian National Congress) ನ್ನು ಸ್ಥಾಪಿಸಬೇಕೆಂದೂ, ಮೊದಲಿಗೆ ಡಬ್ಲ್ಯು.ಸಿ. ಬ್ಯಾನರ್ಜಿಯವರು ಅದರ ಅಧ್ಯಕ್ಷರಾಗಿರಬೇಕೆಂದೂ ನಿರ್ಧರಿಸಿದರು.

ಕಾಂಗ್ರೆಸಿನ ಸ್ಥಾಪನೆಯನ್ನು ಪ್ರೋತ್ಸಾಹಿಸಿದುದರಲ್ಲಿ ಹ್ಯೂಮನ ಮುಖ್ಯ ಉದ್ದೇಶ, ಸುಶಿಕ್ಷಿತ ಭಾರತೀಯರಲ್ಲಿ ಬೆಳೆಯುತ್ತಿದ್ದ ಅತೃಪ್ತಿಗೆ ಒಂದು ಬಿಡುಗಂಡಿಯನ್ನು ಒದಗಿಸುವುದು ಅಥವಾ ಅದಕ್ಕೆ ಒಂದು 'ರಕ್ಷಕ ಕವಾಟ'ವನ್ನು ನಿರ್ಮಿಸುವುದು ಎಂದು ಹೇಳಲಾಗಿದೆ. ಅತೃಪ್ತ ರಾಷ್ಟ್ರೀಯ ವಿದ್ಯಾವಂತ ವರ್ಗವು ಅತೃಪ್ತ ಕೃಷಿಕ ವರ್ಗದೊಂದಿಗೆ ಬೆರೆಯುವುದನ್ನು ನಿವಾರಿಸಲು ಅವನು ಅಪೇಕ್ಷಿಸಿದನು. ಮೃದುವಾದ ರಾಜಕೀಯ ಚಳುವಳಿಯನ್ನು ಪೋಷಿಸುವುದರ ಮೂಲಕ, ಅದು ಉಲ್ಬಣಗೊಂಡು ಹತೋಟಿ ಮೀರುವ ಸಾಧ್ಯತೆಯನ್ನು ತಪ್ಪಿಸಬಹುದೆಂದು ಆಶಿಸಿದನು. ಹ್ಯೂಮ್ ಮುಂದೆ ಹೀಗೆ ಬರೆಯಲಿದ್ದನು: "ಚಳುವಳಿಗೆ ಮೂಲ ಪ್ರಚೋದನೆಯನ್ನು ಕೊಟ್ಟವರಿಗೆ ಬೇರೆ ದಾರಿಯೇ ಉಳಿದಿರಲಿಲ್ಲ. ಉದ್ರೇಕವು.... ತೀವ್ರವಾಗಿ ಉಲ್ಬಣಗೊಳ್ಳುತ್ತಿದ್ದ ಒತ್ತಡದೊಂದಿಗೆ ಕಾರ್ಯತತ್ಪರವಾಗಿತ್ತು. ಅದು ತನ್ನ ಫಲಗಳನ್ನು, ಆಗಲೇ ಪ್ರಾರಂಭಮಾಡಿದ್ದಂತೆ, ಒಳಗೇ ಕೊರೆಯಲು ಬಿಡುವುದಕ್ಕೆ ಬದಲಾಗಿ ಸ್ಪಷ್ಟವಾದ ಸಾಂವಿಧಾನಿಕವಾದ ಮಾರ್ಗಗಳಲ್ಲಿ ಹರಿಯಲು ಬಿಡುವುದು ಅತ್ಯಂತ ಮುಖ್ಯವಾದ ವಿಚಾರವಾಗಿತ್ತು."

ಈ ವಿವರಣೆ ಸಾಲದು. ಅಷ್ಟುಮಾತ್ರವಲ್ಲ, ಇದು ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆಗೆ ವಿವರಣೆ ಎಂಬ ತಪ್ಪು ಭಾವನೆಗೆಡೆಗೊಡುತ್ತದೆ. ಹೆಚ್ಚೆಂದರೆ ಇದು ಇಡೀ ಕಥೆಯಲ್ಲಿ ಹ್ಯೂಮನ ಪಾತ್ರ ಏನಿತ್ತು ಎಂಬುದನ್ನು ಸ್ವಲ್ಪಮಟ್ಟಿಗೆ ವಿವರಿಸುತ್ತದೆ ಅಷ್ಟೆ. ಅಖಿಲ ಭಾರತ ರಾಜಕೀಯ ಸಂಘವೊಂದರ ನಿರ್ಮಾಣಕ್ಕಾಗಿ ಚಟುವಟಿಕೆಯಿಂದ ದುಡಿಯುತ್ತಿದ್ದ ಭಾರತೀಯರು ಬ್ರಿಟಿಷ್ ಆಸಕ್ತಿಗಳಿಗಾಗಿ ಭಾರತವನ್ನು ದೋಚುವ ನೀತಿಗೆ ಹೆಚ್ಚು ಹೆಚ್ಚು ವಿರೋಧ ಮನೋಭಾವ ಬೆಳೆಸಿಕೊಂಡ ನೂತನ ಸಾಮಾಜಿಕ ಶಕ್ತಿಗಳ ಪ್ರತಿನಿಧಿಗಳಾಗಿದ್ದರು. ಭಾರತದ ರಾಜಕೀಯ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಹೋರಾಡುವ ಒಂದು ಸಂಸ್ಥೆ ಅವರಿಗೆ ಅಗತ್ಯವಾಗಿತ್ತು. ಅವರು ಉನ್ನತಮಟ್ಟದ ಚಾರಿತ್ರ್ಯವುಳ್ಳ ರಾಷ್ಟ್ರಭಕ್ತರಾಗಿದ್ದರು, ಯಾವುದೇ ರೀತಿಯಲ್ಲೂ ವಿದೇಶೀ ಸರಕಾರದ ಕೈಗೊಂಬೆಗಳಾಗಿರಲಿಲ್ಲ. ಅವರು ಹ್ಯೂಮನೊಂದಿಗೆ ಸಹಕರಿಸಿದ್ದಕ್ಕೆ ಕಾರಣ, ಮೊದಲ ಮೊದಲ ಪ್ರಯತ್ನಗಳಲ್ಲೇ ಅಧಿಕಾರಿಗಳ ವಿರೋಧವನ್ನು ಕಟ್ಟಿಕೊಳ್ಳಲು ಅವರು ಇಷ್ಟಪಡಲಿಲ್ಲವಾದದ್ದು. ಒಬ್ಬ ನಿವೃತ್ತ ಸಿವಿಲ್ ಅಧಿಕಾರಿಯು ಸಕ್ರಿಯವಾಗಿ ಭಾಗವಹಿಸುವುದರಿಂದಾಗಿ ಅಧಿಕಾರಿಗಳ ಅನುಮಾನ ತಿಳಿಯಾಗಬಹುದೆಂದು ಅವರು ಆಶಿಸಿದರು. ಹ್ಯೂಮನು ಕಾಂಗ್ರೆಸನ್ನು ಒಂದು 'ರಕ್ಷಕ ಕವಾಟ'ವನ್ನಾಗಿ ಉಪಯೋಗಿಸಲು ಇಚ್ಛಿಸಿದ್ದರೆ, ಮೊದಮೊದಲ ಕಾಂಗ್ರೆಸ್ ನಾಯಕರು ಅವನನ್ನು ಒಂದು 'ವಿದ್ಯುದ್‌ವಾಹಕ'ದಂತೆ ಬಳಸಿಕೊಳ್ಳಬಹುದೆಂದು ಆಶಿಸಿದರು. ಮುಂದೆ 1913 ರಲ್ಲಿ ಗೋಪಾಲಕೃಷ್ಣ ಗೋಖಲೆ ಹೀಗೆ ಸೂಚಿಸಿದರು:

> ಯಾವನೇ ಭಾರತೀಯನು ಭಾರತ ರಾಷ್ಟ್ರೀಯ ಕಾಂಗ್ರೆಸನ್ನು ಪ್ರಾರಂಭಿಸುವುದು ಸಾಧ್ಯವಿರಲಿಲ್ಲ...ಒಂದು ವೇಳೆ ಯಾವನಾದರೂ ಭಾರತೀಯನು....ಇಡೀ

> ಭಾರತವನ್ನು ವ್ಯಾಪಿಸಿಕೊಳ್ಳುವ....ಅಂಥದೊಂದು ಚಳುವಳಿಯನ್ನು ಪ್ರಾರಂಭಿಸಲು ಮುಂದೆ ಬಂದಿದ್ದರೆ ಅಧಿಕಾರಿಗಳು, ಅದು ಅಸ್ತಿತ್ವಕ್ಕೆ ಬರಲು ಬಿಡುತ್ತಿರಲಿಲ್ಲ....ಕಾಂಗ್ರೆಸಿನ ಸ್ಥಾಪಕನು ಒಬ್ಬ ಶ್ರೇಷ್ಠ ಇಂಗ್ಲಿಷ್ ಮನುಷ್ಯನೂ ಪ್ರಸಿದ್ಧನಾದ ಮಾಜೀ ಅಧಿಕಾರಿಯೂ ಆಗಿರದಿದ್ದರೆ, ಆ ಕಾಲದಲ್ಲಿ ರಾಜಕೀಯ ಚಟುವಟಿಕೆಗಳ ಬಗೆಗೆ ಎಷ್ಟು ಮಟ್ಟಿನ ಅವಿಶ್ವಾಸವಿದ್ದಿತೆಂದರೆ, ಒಡನೆಯೇ ಅದನ್ನು ಅಡಗಿಸಲು ಒಂದಲ್ಲ ಒಂದು ದಾರಿಯನ್ನು ಕಂಡುಹಿಡಿಯುತ್ತಿದ್ದರು.

ಅದು ಹೇಗೇ ಇರಲಿ, 1885 ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆಯಿಂದಾಗಿ, ಭಾರತದ ಸ್ವಾತಂತ್ರ್ಯ ಹೋರಾಟವನ್ನು ಚಿಕ್ಕದಾದ, ಅಳುಕಿನಿಂದ ಕೂಡಿದ, ಅಬ್ಬರವಿಲ್ಲದ ಆದರೆ ಸುವ್ಯವಸ್ಥಿತವಾದ ರೀತಿಯಲ್ಲಿ ಪ್ರಾರಂಭಮಾಡಿದಂತಾಯಿತು. ವರ್ಷದಿಂದ ವರ್ಷಕ್ಕೆ ಅದು ಪ್ರಬಲವಾಗುತ್ತಾ ಕೊನೆಗೆ ಭಾರತದ ಜನರನ್ನು ವಿದೇಶೀ ಆಳಿಕೆಯ ವಿರುದ್ಧ ಬಲಿಷ್ಠವಾದ ಉಗ್ರವಾದ ಹೋರಾಟಗಳಲ್ಲಿ ತೊಡಗಿಸಲಿತ್ತು.

1885 ರಿಂದ 1905 ರ ವರೆಗಿನ ವರ್ಷಗಳಲ್ಲಿ ರಾಷ್ಟ್ರೀಯತಾ ಪ್ರಜ್ಞೆಯನ್ನು ಹರಡಲು ಭಾರತ ರಾಷ್ಟ್ರೀಯ ಕಾಂಗ್ರೆಸ್ ಒಂದೇ ಏಕೈಕ ಅಥವಾ ಅತಿ ಮುಖ್ಯ ಮಾಧ್ಯಮವಾಯಿತು ಎಂದು ಭಾವಿಸುವುದು ತಪ್ಪಾಗುತ್ತದೆ. ಈ ಅವಧಿಯಲ್ಲಿ ರಾಷ್ಟ್ರೀಯತೆಯ ಅಭಿವೃದ್ಧಿ ಮತ್ತು ಅಭಿವ್ಯಕ್ತಿಗಳಿಗೆ ಇತರ ಅನೇಕ ಕಾಲುವೆಗಳೂ ಇದ್ದುವು. ಸ್ಥಳೀಯ ಮತ್ತು ಪ್ರಾಂತೀಯವಾದ ಅಸಂಖ್ಯಾತ ರಾಜಕೀಯ ಸಂಘ ಸಂಸ್ಥೆಗಳು ದಿನದಿನವೂ ರಾಜಕೀಯ ಚಳುವಳಿಗಳನ್ನು ನಡೆಸುತ್ತಲೇ ಇದ್ದುವು. ಪ್ರತಿವರ್ಷವೂ ಪ್ರಾಂತೀಯ ಸಮ್ಮೇಳನವು ಜರುಗುತ್ತಿದ್ದಿತು, ಹೆಚ್ಚುಹೆಚ್ಚು ಪ್ರಮಾಣದಲ್ಲಿ ಜನಸಾಮಾನ್ಯರು ಅದರಲ್ಲಿ ಭಾಗವಹಿಸುತ್ತಿದ್ದರು. ರಾಷ್ಟ್ರೀಯ ವರ್ತಮಾನ ಪತ್ರಿಕೆಗಳಲ್ಲಿ ಹೆಚ್ಚಿನವು ರಾಷ್ಟ್ರೀಯ ಮನೋಧರ್ಮವನ್ನು ರೂಪಿಸುವ ಹಾಗೂ ಪ್ರಸಾರಮಾಡುವ ಕೆಲಸದಲ್ಲಿ ತೊಡಗಿದುವು. ಆ ಕಾಲದ ಅನೇಕ ವೃತ್ತಪತ್ರಿಕೆಗಳನ್ನು ವ್ಯವಹಾರ ಸಾಹಸವಾಗಿ ಪ್ರಾರಂಭಿಸಿರಲಿಲ್ಲ, ಬದಲಿಗೆ ರಾಷ್ಟ್ರೀಯತಾ ಚಟುವಟಿಕೆಯ ಅಂಗಗಳಾಗಿಯೇ ಮೊದಲಿಡಲಾಗಿತ್ತು, ಅವುಗಳ ಮಾಲಿಕರು ಹಾಗೂ ಸಂಪಾದಕರು ಅನೇಕವೇಳೆ ವೈಯಕ್ತಿಕವಾಗಿ ಅಪಾರ ತ್ಯಾಗ ಮಾಡಬೇಕಾಗಿತ್ತು. ಈ ರಾಷ್ಟ್ರೀಯ ವರ್ತಮಾನ ಪತ್ರಿಕೆಗಳಲ್ಲಿ ಹೆಚ್ಚಿನವನ್ನು ರಾಷ್ಟ್ರೀಯ ಕಾಂಗ್ರೆಸ್ ಅಸ್ತಿತ್ವಕ್ಕೆ ಬರುವುದಕ್ಕೆ ಮುಂಚೆಯೇ ಸ್ಥಾಪಿಸಲಾಗಿತ್ತು. **ಅಮೃತ ಬಜಾರ್ ಪತ್ರಿಕಾ, ಇಂಡಿಯನ್ ಮಿರರ್, ಸಂಜೀವನಿ, ಬೆಂಗಾಲೀ**-ಇವು ಬಂಗಾಳಿ ಭಾಷೆಯಲ್ಲಿ ಪ್ರಕಟವಾಗುತ್ತಿದ್ದುವು. ಮದರಾಸಿನ **ಹಿಂದು, ಸ್ವದೇಶ ಮಿತ್ರನ್, ಆಂಧ್ರ ಪ್ರಕಾಶಿಕಾ** ಮತ್ತು **ಕೇರಳ ಪತ್ರಿಕಾ**; ಬೊಂಬಾಯಿನ **ಮರಾಠಾ, ಕೇಸರಿ, ಇಂದು ಪ್ರಕಾಶ, ಸುಧಾರಕ**; ಉತ್ತರ ಪ್ರದೇಶದಲ್ಲಿ **ಅಡ್ವೊಕೇಟ್, ಹಿಂದೂಸ್ಥಾನೀ** ಮತ್ತು **ಅಜಾದ್**; ಪಂಜಾಬಿನಲ್ಲಿ **ಟ್ರಿಬ್ಯೂನ್, ಅಖ್ಬರ್-ಇ-ಆಮ್, ಕೋಹಿನೂರ್**-ಇವು ಆ ಕಾಲದ ಬಹು ಮುಖ್ಯವಾದ ಕೆಲವು ರಾಷ್ಟ್ರೀಯ ವೃತ್ತಪತ್ರಿಕೆಗಳು.

## ಮೊದಮೊದಲ ರಾಷ್ಟ್ರೀಯತಾವಾದಿಗಳ ಕಾರ್ಯಯೋಜನೆ ಮತ್ತು ಚಟುವಟಿಕೆಗಳು

ಮೊದಮೊದಲಿನ ಭಾರತದ ರಾಷ್ಟ್ರೀಯ ನಾಯಕರ ಅಭಿಪ್ರಾಯದಲ್ಲಿ ಆಗ ಇನ್ನೂ ರಾಷ್ಟ್ರದ ರಾಜಕೀಯ ವಿಮೋಚನೆಗಾಗಿ ನೇರವಾದ ಹೋರಾಟ ನಡೆಸುವುದು ಇತಿಹಾಸದ ಕಾರ್ಯನಿಯೋಜನೆಯಲ್ಲಿ ಇರಲಿಲ್ಲ. ಆ ನಿಯೋಜನೆಯಲ್ಲಿದ್ದದ್ದು ರಾಷ್ಟ್ರೀಯತಾ ಭಾವನೆಯ ಉದ್ಬೋಧನೆ, ಆ ಭಾವನೆಯ ಕ್ರೋಢೀಕರಣ, ರಾಷ್ಟ್ರೀಯತಾ ರಾಜಕೀಯದ ಶಿಖರಸ್ಥಿತಿಗೆ ಭಾರೀ ಸಂಖ್ಯೆಯ ಭಾರತೀಯರನ್ನು ತರುವುದು ಮತ್ತು ರಾಜಕೀಯ, ರಾಜಕೀಯ ಚಳುವಳಿ ಮತ್ತು ಹೋರಾಟದ ವಿಷಯಗಳಲ್ಲಿ ಅವರಿಗೆ ಶಿಕ್ಷಣ ಕೊಡುವುದು-ಈ ವಿಚಾರಗಳು. ಈ ನಿಟ್ಟಿನಲ್ಲಿ ಮೊದಲನೆಯ ಮುಖ್ಯ ಕರ್ತವ್ಯ, ರಾಜಕೀಯ ಪ್ರಶ್ನೆಗಳಲ್ಲಿ ಸಾರ್ವಜನಿಕ ಆಸಕ್ತಿಯನ್ನು ಮೂಡಿಸುವುದು ಹಾಗೂ ದೇಶದಲ್ಲಿ ಸಾರ್ವಜನಿಕ ಅಭಿಪ್ರಾಯನ್ನು ರೂಪಿಸುವುದು. ಎರಡನೆಯದಾಗಿ, ಜನತಾ ಬೇಡಿಕೆಗಳನ್ನು ರಾಷ್ಟ್ರವ್ಯಾಪೀ ಆಧಾರದ ಮೇಲೆ ಖಚಿತಪಡಿಸಿ, ಮೂಡುವ ಸಾರ್ವಜನಿಕಾಭಿಪ್ರಾಯವು ಅಖಿಲ ಭಾರತ ದೃಷ್ಟಿಯನ್ನು ಹೊಂದಿರುವಂತೆ ಮಾಡುವುದು. ಎಲ್ಲಕ್ಕಿಂತ ಹೆಚ್ಚಾಗಿ ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಲ್ಲಿ ಮತ್ತು ರಾಜಕೀಯ ಕಾರ್ಯಕರ್ತರು ಮತ್ತು ಮುಖಂಡರಲ್ಲಿ ರಾಷ್ಟ್ರ ಐಕ್ಯತೆಯ ಭಾವನೆಯನ್ನು ಮೂಡಿಸುವುದು ಆದ್ಯ ಕರ್ತವ್ಯವಾಗಿತ್ತು. ಭಾರತ ಇನ್ನೂ "ನಿರ್ಮಾಣವಾಗುತ್ತಿರುವ ದೇಶ", ಭಾರತ ರಾಷ್ಟ್ರೀಯತ್ವ ಎನ್ನುವುದು ಕ್ರಮೇಣ ಅಸ್ತಿತ್ವಕ್ಕೆ ಬರುತ್ತಿದೆ, ಆದ್ದರಿಂದ ಅದು ಈಗಾಗಲೇ ಸಿದ್ಧವಾಗಿರುವ ವಿಚಾರ ಎಂದು ಇಟ್ಟುಕೊಳ್ಳುವಂತಿಲ್ಲ ಎಂಬುದನ್ನು ಮೊದಮೊದಲಿನ ರಾಷ್ಟ್ರೀಯತಾವಾದಿಗಳು ಪೂರ್ಣವಾಗಿ ತಿಳಿದುಕೊಂಡಿದ್ದರು. ರಾಜಕೀಯ ನಾಯಕರು ಪ್ರಾಂತ, ಜಾತಿ ಅಥವಾ ಧರ್ಮದ ವಿವಕ್ಷೆಯಿಲ್ಲದೆ ನಿರಂತರವಾಗಿ ರಾಷ್ಟ್ರೈಕ್ಯದ ವಿಕಾಸ ಮತ್ತು ಕ್ರೋಢೀಕರಣಗಳಿಗಾಗಿ ಶ್ರಮಿಸಲೇಬೇಕಾಗಿತ್ತು. ಈ ನಿಟ್ಟಿನಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ವಿನೀತವಾಗಿ ತನ್ನ ಪ್ರಯತ್ನವನ್ನು ಪ್ರಾರಂಭಿಸಿತು. ದೇಶದ ಬೇರೆಬೇರೆ ಭಾಗಗಳ ಸಕ್ರಿಯ ರಾಷ್ಟ್ರೀಯತಾವಾದಿಗಳ ನಿಕಟ ಸಂಪರ್ಕ ಮತ್ತು ಸ್ನೇಹಯುತ ಸಂಬಂಧಗಳನ್ನು ಸಾಧಿಸಲು ಪ್ರಯತ್ನಿಸಿತು. ಅಂದಿನ ರಾಷ್ಟ್ರೀಯತಾವಾದಿಗಳ ಆರ್ಥಿಕ ಮತ್ತು ರಾಜಕೀಯ ಬೇಡಿಕೆಗಳು ಒಂದು ಸಮಾನ ಆರ್ಥಿಕ ಮತ್ತು ರಾಜಕೀಯ ಕಾರ್ಯಕ್ರಮಗಳ ಆಧಾರದಮೇಲೆ ಭಾರತದ ಜನರನ್ನು ಒಂದುಗೂಡಿಸುವ ಉದ್ದೇಶದಿಂದಲೇ ರೂಪುಗೊಂಡುವು.

## ಸಾಮ್ರಾಜ್ಯಶಾಹಿಯನ್ನು ಕುರಿತ ಆರ್ಥಿಕ ವಿಮರ್ಶೆ

ಮೊದಮೊದಲು ರಾಷ್ಟ್ರೀಯ ನಾಯಕರ ರಾಜಕೀಯ ಕಾರ್ಯಚಟುವಟಿಕೆಗಳಲ್ಲಿ ಬಹುಶಃ ಅತ್ಯಂತ ಮುಖ್ಯವಾಗಿದ್ದದ್ದು, ಸಾಮ್ರಾಜ್ಯಶಾಹಿಯನ್ನು ಕುರಿತು ಅವರು ನಡೆಸಿದ ಆರ್ಥಿಕ ವಿಮರ್ಶೆ. ಸಮಕಾಲಿಕವಾದ ಮೂರು ಬಗೆಯ ಆರ್ಥಿಕ ಸುಲಿಗೆಗಳನ್ನೂ ಅವರು ಗಮನಕ್ಕೆ ತಂದುಕೊಂಡರು. ಅವು ವಾಣಿಜ್ಯ, ಕೈಗಾರಿಕ



ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಮೊದಲನೇ ಅಧಿವೇಶನದ ಸದಸ್ಯರು (1885)



ಪುಣೆಯಲ್ಲಿ ಹೋಮ್‌ರೂಲ್ ಲೀಗಿನ ಮೆರವಣಿಗೆ



ಗೋಪಾಲಕೃಷ್ಣ ಗೋಖಲೆ



ಅರವಿಂದ ಘೋಷ್



ಲಾಲಾ ಲಜಪತ್ ರಾಯ್, ಬಾಲ ಗಂಗಾಧರ್ ತಿಲಕ್ ಮತ್ತು ಬಿಪಿನ್ ಚಂದ್ರ ಪಾಲ್

# Proclamation.

**Whereas** the Government has thought fit to effectuate the Partition of Bengal in spite of the universal protest of the Bengali nation, we hereby pledge and proclaim that we as a people shall do everything in our power to counteract the evil effects of the dismemberment of our Province and to maintain the integrity of our race. So help us God.

Dated this First day of November
in the year Nineteen Hundred
and Five and given under




ಬಂಗಾಳ ವಿಭಜನೆ ವಿರುದ್ಧ ಘೋಷಣೆ

ಮತ್ತು ಹಣಕಾಸು ವ್ಯವಹಾರಗಳ ಮೂಲಕ ನಡೆಯುತ್ತಿದ್ದಂಥವು. ಬ್ರಿಟಿಷ್ ಆರ್ಥಿಕ ಪ್ರಭುತ್ವದ ಸಾರ ಅಡಗಿರುವುದು ಭಾರತದ ಅರ್ಥವ್ಯವಸ್ಥೆಯನ್ನು ಬ್ರಿಟಿಷ್ ಅರ್ಥವ್ಯವಸ್ಥೆಗೆ ಅಧೀನಗೊಳಿಸಿರುವುದರಲ್ಲಿ ಎಂಬುದನ್ನು ಅವರು ನಿಚ್ಚಳವಾಗಿ ಅರಿತುಕೊಂಡರು. ವಸಾಹತುಶಾಹೀ ಅರ್ಥವ್ಯವಸ್ಥೆಯ ಮೂಲ ಲಕ್ಷಣಗಳನ್ನು ಭಾರತದಲ್ಲಿ ಬೆಳೆಸಲು ಬ್ರಿಟಿಷರು ಮಾಡಿದ ಪ್ರಯತ್ನಗಳನ್ನು ಅವರು ಉಗ್ರವಾಗಿ ವಿರೋಧಿಸಿದರು. ಭಾರತವನ್ನು ಕಚ್ಚಾವಸ್ತುಗಳನ್ನು ಒದಗಿಸುವ ದೇಶವಾಗಿ, ಬ್ರಿಟಿಷ್ ಉತ್ಪಾದನೆಗಳಿಗೆ ಮಾರುಕಟ್ಟೆಯಾಗಿ, ವಿದೇಶೀ ಬಂಡವಾಳವನ್ನು ಹೂಡಲು ತಕ್ಕ ಕ್ಷೇತ್ರವಾಗಿ ಪರಿವರ್ತಿಸುವುದೇ ಬ್ರಿಟಿಷರಿಗಿದ್ದ ಉದ್ದೇಶ. ಈ ವಸಾಹತುಶಾಹೀ ರೂಪದ ಮುಖ್ಯ ಆರ್ಥಿಕ ನೀತಿಗಳೆಲ್ಲದರ ವಿರುದ್ಧವಾಗಿಯೂ ಅವರು ಚಳುವಳಿಗಳನ್ನು ಏರ್ಪಡಿಸಿದರು. ಅಲ್ಲದೆ, ಆರ್ಥಿಕ ಜೀವನದ ಪ್ರತಿಯೊಂದು ರಂಗದಲ್ಲಿಯೂ ಇಂಗ್ಲೆಂಡಿನ ಮೇಲ ಭಾರತದ ಆರ್ಥಿಕ ಅವಲಂಬನೆಯನ್ನು ಕಡಮೆ ಮಾಡುವುದನ್ನು ಮತ್ತು ಕಡಿದೇಹಾಕುವುದನ್ನು ಒತ್ತಾಯಪಡಿಸಿದರು.

ಮೊದಮೊದಲಿನ ರಾಷ್ಟ್ರೀಯವಾದಿಗಳು ಒಂದೇ ಸಮನಾಗಿ ಭಾರತದಲ್ಲಿ ಹೆಚ್ಚುತ್ತಿರುವ ಬಡತನವನ್ನು ಕುರಿತು ಮಾತನಾಡಿದರು ಮತ್ತು ಬರೆದರು. ಅದಕ್ಕೂ ಬ್ರಿಟಿಷರು ಭಾರತವನ್ನು ಆರ್ಥಿಕವಾಗಿ ಸುಲಿಗೆ ಮಾಡುತ್ತಿರುವುದಕ್ಕೂ ಸಂಬಂಧ ಗೊಳಿಸಿದರು. ದಾದಾಭಾಯಿ ನವರೋಜಿ ಹೇಳಿದರು: "ಭಾರತೀಯರು ಜೀತಗಾರ ರಾಗಿದ್ದಾರೆ, ಅವರು ಅಮೆರಿಕನ್ ಗುಲಾಮಗಿರಿಗಿಂತ ನೀಚ ಸ್ಥಿತಿಯಲ್ಲಿದ್ದಾರೆ. ಏಕೆಂದರೆ ಕೊನೆಯಪಕ್ಷ ಗುಲಾಮರನ್ನು ಅವರ ಒಡೆಯರು ತಮ್ಮ ಆಸ್ತಿ ಎಂಬುದರಿಂದಾಗಿಯಾದರೂ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರು." ಬ್ರಿಟಿಷ್ ಆಡಳಿತವು "ಶಾಶ್ವತವಾದ, ಹೆಚ್ಚುತ್ತಲಿರುವ, ದಿನದಿನವೂ ಅಧಿಕವಾಗುತ್ತಿರುವ ವಿದೇಶೀ ಆಕ್ರಮಣ" ಎಂದು ಅವರು ಘೋಷಿಸಿದರು. ಅದು "ದೇಶವನ್ನು ನಿಧಾನ ವಾಗಿದ್ದರೂ ಸಂಪೂರ್ಣವಾಗಿ ನಾಶಮಾಡುತ್ತಿದೆ" ಎಂದು ತೋರಿಸಿಕೊಟ್ಟರು.

ಭಾರತದ ಪರಂಪರಾಗತ ಕುಶಲಕೈಗಾರಿಕೆಗಳನ್ನು ನಾಶಮಾಡಿದುದಕ್ಕೆ ಮತ್ತು ಆಧುನಿಕ ಕೈಗಾರಿಕೆಗಳ ಅಭಿವೃದ್ಧಿಯನ್ನು ತಡೆದುದಕ್ಕೆ ಸರಕಾರದ ಆರ್ಥಿಕ ನೀತಿಗಳನ್ನು ಮೊದಲಿನ ರಾಷ್ಟ್ರೀಯತಾವಾದಿಗಳು ಕಟುವಾಗಿ ಟೀಕಿಸಿದರು. ಅವರಲ್ಲಿ ಅನೇಕರು ಭಾರತೀಯ ರೈಲ್ವೆ, ಪ್ಲಾಂಟೇಷನ್ನುಗಳು ಮತ್ತು ಕೈಗಾರಿಕೆಗಳ ಮೇಲೆ ಹೂಡುವುದಕ್ಕಾಗಿ ವಿದೇಶೀ ಬಂಡವಾಳವನ್ನು ಭಾರೀ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುವುದನ್ನು ವಿರೋಧಿಸಿದರು. ಅದು ಭಾರತೀಯ ಬಂಡವಾಳಗಾರರನ್ನು ತುಳಿಯುವುದಕ್ಕೆ, ಭಾರತದ ಅರ್ಥವ್ಯವಸ್ಥೆಯ ಮತ್ತು ರಾಜಕೀಯದ ಮೇಲೆ ಬ್ರಿಟಿಷ್ ಹತೋಟಿಯನ್ನು ಹೆಚ್ಚು ಮಾಡುವುದಕ್ಕೆ ದಾರಿಮಾಡುತ್ತದೆ ಎಂದು ಅವರು ಭಾವಿಸಿದರು. ವಿದೇಶೀ ಬಂಡವಾಳವನ್ನು ಉಪಯೋಗಿಸುವುದು ಈ ಪೀಳಿಗೆಗೆ ಮಾತ್ರವಲ್ಲದೆ ಮುಂದೆ ಬರಲಿರುವ ತಲೆಮಾರಿನವರಿಗೂ ತೀವ್ರವಾದ ಆರ್ಥಿಕ ಹಾಗೂ ರಾಜಕೀಯ ಅಪಾಯವನ್ನು ಒಡ್ಡುತ್ತದೆ ಎಂಬುದು ಅವರ ನಂಬಿಕೆ ಯಾಗಿತ್ತು. ವಿದೇಶೀ ಬಂಡವಾಳವನ್ನು ಹೊರಗೇ ಇಡುವುದಕ್ಕಾಗಿ ಸೂಕ್ತ ಆಡಳಿತ ಕ್ರಮಗಳನ್ನು ಕೈಗೊಳ್ಳಬೇಕೆಂದು ಅವರು ಒತ್ತಾಯಪಡಿಸಿದರು.

ಆಗಿನ ರಾಷ್ಟ್ರೀಯವಾದಿಗಳು ಬಡತನದ ನಿವಾರಣೆಗೆ ಸೂಚಿಸಿದ ಮುಖ್ಯವಾದ ಪರಿಹಾರ ಭಾರತೀಯ ಜೀವನವನ್ನು ಎಲ್ಲ ಕ್ಷೇತ್ರಗಳಲ್ಲಿಯೂ ಆಧುನೀಕರಿಸುವುದು, ಅದರಲ್ಲೂ ಆಧುನಿಕ ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವುದು. ಆದರೆ ಕ್ಷಿಪ್ರವಾದ ಕೈಗಾರಿಕೋದ್ಯಮೀಕರಣವೆಂದರೆ, ಅದಕ್ಕೆ ಸರಕಾರದ ನೆರವು ಹಾಗೂ ಸುಂಕದರದ ರಕ್ಷಣೆಯನ್ನು ಕುರಿತ ಒಂದು ನೀತಿ ಇವು ಅತ್ಯಾವಶ್ಯಕವಾಗಿದ್ದುವು. ಸರಕಾರದ ನೆರವಿನ ನಿಯಂತ್ರಿತವಾದ ಬ್ಯಾಂಕುಗಳ ಮೂಲಕ ಸಬ್ಸಿಡಿಗಳನ್ನು ನೀಡುವುದು, ಸಾಲ ಕೊಡುವುದು, ಗ್ಯಾರಂಟಿ ಕೊಡುವುದು, ಪೊರದೇಶದಿಂದ ಸಾಲ ತೆಗೆದು ಕೊಂಡು ಭಾರತದಲ್ಲಿ ಸಾಲ ಕೊಡುವುದು ಮುಂತಾದುವುಗಳ ಮೂಲಕ ಆಧುನಿಕ ಕೈಗಾರಿಕೆಗಳಿಗೆ ಸರಕಾರವು ನೆರವಾಗಬೇಕು ಎಂದು ಅವರು ಒತ್ತಾಯ ಮಾಡಿದರು. ಹಾಗೆಯೇ ಉಕ್ಕು ಮತ್ತು ಗಣಿಗಾರಿಕೆಗಳಲ್ಲಿ ಸರಕಾರದ ಮಾಲಕತ್ವದಲ್ಲಿನ ಕೈಗಾರಿಕೆಗಳನ್ನು ಸ್ಥಾಪಿಸುವುದು ಅಗತ್ಯವಾಗಿತ್ತು. ಏಕೆಂದರೆ ಅವುಗಳನ್ನು ನಿರ್ವಹಿಸಲು ಭಾರತೀಯ ಬಂಡವಾಳಗಾರರಿಗೆ ಶಕ್ತಿಯಿರಲಿಲ್ಲ, ಆದರೆ ಕೈಗಾರಿಕಾಭಿವೃದ್ಧಿಗೆ ಅವು ಆವಶ್ಯಕವಾಗಿದ್ದುವು. ಕೈಗಾರಿಕೆಗೆ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ಹೊಸಹೊಸ ವಿಷಯಗಳನ್ನು ಸಂಗ್ರಹಿಸಿ, ಪ್ರಚಾರಪಡಿಸಿ, ತಾಂತ್ರಿಕ ಶಿಕ್ಷಣವನ್ನು ಹೆಚ್ಚುಮಾಡಿ ಸರಕಾರ ಇದನ್ನು ಸಾಧಿಸಬೇಕಾಗಿತ್ತು.

ಭಾರತೀಯ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಸಾಧನವಾಗಿ ಸ್ವದೇಶೀ ಭಾವನೆಯನ್ನು ಅವರು ಜನಪ್ರಿಯಗೊಳಿಸಿದರು. ಅನೇಕಾನೇಕ ಸ್ವದೇಶೀ ಮಾರಾಟ ಮಳಿಗೆಗಳನ್ನು ತೆರೆಯಲಾಯಿತು. ಗಣೇಶ ವಾಸುದೇವ ಜೋಶಿ 1877 ರ ಚಕ್ರವರ್ತಿ ದರಬಾರಿಗೆ ನಿರ್ಮಲವಾದ, ಕೈಯಲ್ಲೇ ನೂತ ಖಾದಿಯ ವಸ್ತ್ರಗಳನ್ನೇ ಧರಿಸಿ ಹೋದರು. 1896 ರಲ್ಲಿ ಮಹಾರಾಷ್ಟ್ರದಲ್ಲಿ ಪ್ರಬಲವಾದ ಒಂದು ಸ್ವದೇಶೀ ಚಳುವಳಿಯನ್ನು ವ್ಯವಸ್ಥೆಗೊಳಿಸಲಾಯಿತು. ಅದರಲ್ಲಿ ವಿದ್ಯಾರ್ಥಿಗಳು ಬಹಿರಂಗವಾಗಿ ವಿದೇಶೀ ಬಟ್ಟೆಗಳನ್ನು ಸುಟ್ಟುಹಾಕಿದರು.

ಆಮದುಗಳ ಮೇಲೆ ಸುಂಕವನ್ನು ತೆಗೆದುಹಾಕಿದುದರ ವಿರುದ್ಧವಾಗಿ 1875 ರಿಂದ 1880 ರ ವರೆಗೆ ಮತ್ತು ಹತ್ತಿಯ ಮೇಲೆ ಎಕ್ಸೈಸ್ ತೆರಿಗೆ ವಿಧಿಸಿದುದರ ವಿರುದ್ಧ 1894 ರಲ್ಲಿ ಮತ್ತು 1896 ರಲ್ಲಿ ರಾಷ್ಟ್ರೀಯತಾವಾದಿಗಳು ಒಂದು ಬಲಯುತವಾದ ಅಖಿಲ ಭಾರತ ವ್ಯಾಪ್ತಿಯ ಚಳುವಳಿಯನ್ನು ವ್ಯವಸ್ಥೆಗೊಳಿಸಿದರು. ದೇಶಾದ್ಯಂತ ರಾಷ್ಟ್ರೀಯಭಾವನೆಗಳನ್ನು ಪ್ರಚೋದಿಸುವುದರಲ್ಲಿ ಮತ್ತು ಭಾರತದಲ್ಲಿ ಬ್ರಿಟಿಷ್ ಆಳಿಕೆಯ ನಿಜವಾದ ಧ್ಯೇಯಗಳು ಮತ್ತು ಉದ್ದೇಶಗಳನ್ನು ಕುರಿತು ಜನರಿಗೆ ಶಿಕ್ಷಣ ಕೊಡುವುದರಲ್ಲಿ ಈ ಚಳುವಳಿ ಬಹಳ ಮಹತ್ವಪೂರ್ಣವಾದ ಪಾತ್ರ ವಹಿಸಿತು. 1896 ರ ಜನವರಿ 28 ರಂದು ಪೂನಾದಿಂದ **ಕೇಸರಿ** ಹೀಗೆ ಬರೆಯಿತು: "ನಿಜವಾಗಿಯೂ ಭಾರತವನ್ನು ಯೂರೋಪಿನವರು ಮಾತ್ರವೇ ಮೇಯುವುದಕ್ಕಾಗಿ ಮೀಸಲಾಗಿಟ್ಟಿರುವ ಹುಲ್ಲುಗಾವಲಿನಂತೆ ಪರಿಗಣಿಸಲಾಗುತ್ತಿದೆ." ಭಾರತ ರಾಷ್ಟ್ರೀಯ ಕಾಂಗ್ರೆಸಿನ ಮಾಜೀ ಅಧ್ಯಕ್ಷರಾಗಿದ್ದ ಪಿ. ಆನಂದಾಚಾರ್ಲು ಹೇಳಿದರು: "ಭಾರತವನ್ನು ಅನ್ಯದೇಶಗಳ ಪ್ರವೇಶದ ವಿರುದ್ಧವಾಗಿ ಬ್ರಿಟಿಷ್ ಅಧಿಕಾರಶಾಹಿಯ ಬಲಿಷ್ಠ ತೋಳುಗಳು ರಕ್ಷಿಸಿವೆ. ಆದರೆ ಅದೇ ಸಮಯದಲ್ಲಿ, ಇಂಗ್ಲಿಷ್ ಹಾಗೂ

ಭಾರತದ ಆಸಕ್ತಿಗಳ ನಡುವೆ ಘರ್ಷಣೆ ಉಂಟಾದಾಗ ಅಂತಹ ವಿಷಯಗಳಲ್ಲಿ ಭಾರತಕ್ಕೆ ರಕ್ಷಣೆಯೇ ಇಲ್ಲವಾಗಿದೆ. (ತಮಿಳು ಗಾದೆಯೊಂದು ಹೇಳುವಂತೆ) ಬೇಲಿಯೇ ಹೊಲವನ್ನು ಮೇಯುತ್ತಿದೆ."

ರಾಷ್ಟ್ರೀಯವಾದಿಗಳು ಅಧಿಕ ಪ್ರಮಾಣದ ನೆಲಗಂದಾಯದ ಹೇರಿಕೆಯ ವಿರುದ್ಧವಾಗಿ ಒಂದೇಸಮನೆ ಚಳುವಳಿ ನಡೆಸಿದರು. ಸರಕಾರವೇ ಸ್ಥಾಪಿಸಿರುವ ಕೃಷಿ ಬ್ಯಾಂಕುಗಳ ಮೂಲಕ ಕೃಷಿಕ ವರ್ಗದವರಿಗೆ ಅಗ್ಗವಾಗಿ ಸಾಲ ಸಿಕ್ಕುವಹಾಗೆ ಮಾಡಬೇಕೆಂದೂ, ಅಧಿಕ ಪ್ರಮಾಣದ ನೀರಾವರಿ ಸೌಲಭ್ಯಗಳನ್ನು ಒದಗಿಸಬೇಕೆಂದೂ ಅವರು ಸರಕಾರವನ್ನು ಒತ್ತಾಯಪಡಿಸಿದರು. ಅವರಲ್ಲಿ ಕೆಲವರು ಸರಕಾರವು ಉಳಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದ ಅರೆ-ಊಳಿಗಮಾನ್ಯ ಪದ್ಧತಿಯ ಕೃಷಿಕ ಸಂಬಂಧಗಳನ್ನು ಕೂಡ ಟೀಕಿಸಿದರು. ಪ್ಲಾಂಟೇಷನ್ ಕೂಲಿಗಾರರ ಕೆಲಸದ ಪರಿಸ್ಥಿತಿಗಳನ್ನು ಉತ್ತಮಪಡಿಸಬೇಕೆಂದು ಚಳುವಳಿ ಹೂಡಿದರು. ಪ್ರಸ್ತುತ ಇದ್ದ ತೆರಿಗೆ ಹಾಗೂ ವೆಚ್ಚಗಳ ಮಾದರಿಯಲ್ಲಿ ತೀವ್ರವಾದ ಬದಲಾವಣೆಯಾಗಬೇಕೆಂದು ಒತ್ತಾಯಮಾಡಿದರು. ಆಗ ಇದ್ದ ತೆರಿಗೆ ವ್ಯವಸ್ಥೆಯು ಬಡವರ ಮೇಲೆ ಭಾರೀ ಹೊರೆಯನ್ನು ಹಾಕಿ, ಶ್ರೀಮಂತರ ಅದರಲ್ಲೂ, ವಿದೇಶೀಯರ ಮೇಲೆ ಬಹಳ ಸ್ವಲ್ಪ ಹಾಕಿದೆ ಎಂದು ತೋರಿಸಿಕೊಟ್ಟರು. ಆದ್ದರಿಂದ ಕೆಳವರ್ಗದ ಹಾಗೂ ಕೆಳಮಧ್ಯಮ ವರ್ಗದ ಜನರ ಮೇಲೆ ತೀವ್ರವಾಗಿ ಹೊಡೆತ ಉಂಟುಮಾಡಿದ್ದ ಉಪ್ಪಿನ ತೆರಿಗೆ ಮುಂತಾದ ಕೆಲವು ತೆರಿಗೆಗಳನ್ನು ತೆಗೆದುಹಾಕಬೇಕೆಂದು ಅವರು ಒತ್ತಾಯ ಮಾಡಿದರು. ಪ್ರಸ್ತುತ ಇದ್ದ ವೆಚ್ಚದ ಸ್ವರೂಪವೂ ಬ್ರಿಟನ್ನಿನ ಸಾಮ್ರಾಜ್ಯಶಾಹೀ ಅಗತ್ಯಗಳನ್ನು ಪೂರೈಸುವ ದೃಷ್ಟಿಯನ್ನು ತಾಳಿದ್ದಿತೇ ಹೊರತು ಭಾರತೀಯರ ಅಭಿವೃದ್ಧಿ ಮತ್ತು ಯೋಗಕ್ಷೇಮಗಳ ದೃಷ್ಟಿ ಅದಕ್ಕಿರಲಿಲ್ಲ ಎಂದು ಅವರು ಹೇಳಿದರು. ಏಷ್ಯಾ ಮತ್ತು ಆಫ್ರಿಕಾಗಳಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸೇನೆಯ ಮೇಲೆ ಮಾಡುತ್ತಿದ್ದ ಅಧಿಕ ಪ್ರಮಾಣದ ವೆಚ್ಚವನ್ನು ಖಂಡಿಸಿದರು. ರಾಷ್ಟ್ರದ ಆರ್ಥಿಕ ಅಭಿವೃದ್ಧಿಯ ಮಟ್ಟಕ್ಕೆ ಯಾವುದೇ ಮಟ್ಟದಲ್ಲೂ ಸಮ ಪ್ರಮಾಣದಲ್ಲಿ ಇರದಷ್ಟು ಮಟ್ಟಿಗೆ ಅಧಿಕ ವೇತನಗಳನ್ನು ಸಿವಿಲ್ ಅಧಿಕಾರಿಗಳಿಗೆ ನೀಡುತ್ತಿದ್ದುದನ್ನೂ ಅವರು ಟೀಕಿಸಿದರು. ಉತ್ಪನ್ನವಸ್ತುಗಳನ್ನು ಆಮದು ಮಾಡಿಕೊಳ್ಳಲು, ಕಚ್ಚಾವಸ್ತುಗಳನ್ನು ರಫ್ತು ಮಾಡಲು ವಿದೇಶ ವಾಣಿಜ್ಯವನ್ನೂ ರೈಲ್ವೆಗಳನ್ನೂ ಅಭಿವೃದ್ಧಿಪಡಿಸಲು ರೂಪಿಸಿದ ಸರಕಾರೀ ನೀತಿಗಳನ್ನು ಟೀಕಿಸಿದರು. ವ್ಯಾಪಾರ ಮತ್ತು ಸಾರಿಗೆ ನೀತಿಗಳು ಆಂತರಿಕ ಆರ್ಥಿಕ ಅಭಿವೃದ್ಧಿಯತ್ತ ತಿರುಗಬೇಕು ಎಂದು ಹೇಳಿದರು.

ಸಾಮ್ರಾಜ್ಯಶಾಹೀ ವಿರೋಧೀ ಟೀಕೆಗಳ ಬತ್ತಳಿಕೆಯಲ್ಲಿ ರಾಷ್ಟ್ರೀಯತಾವಾದಿಗಳು ಇಟ್ಟುಕೊಂಡಿದ್ದ ಅತ್ಯಂತ ಶಕ್ತಿಪೂರ್ಣವಾದ ಅಸ್ತ್ರಗಳಲ್ಲಿ ಒಂದು, ಭಾರತದ ಸಂಪತ್ತು ಇಲ್ಲಿಂದ ಹೊರಕ್ಕೆ ಹರಿದುಹೋಗುತ್ತಿದೆ ಎಂಬುದು. ಭಾರತದ ಬಂಡವಾಳ ಮತ್ತು ಸಂಪತ್ತಿನ ಬಹು ಭಾಗವನ್ನು ಒಂದೇ ಸಮನಾಗಿ ಬ್ರಿಟನ್ನಿಗೆ ಕಳುಹಿಸಲಾಗುತ್ತಿದೆ, ಅದು ಸಾಲಗಳಿಗೆ ತೆತ್ತ ಬಡ್ಡಿಯ ರೂಪದಲ್ಲಿ, ಭಾರತದಲ್ಲಿ ಹೂಡಿದ ಬ್ರಿಟಿಷ್ ಬಂಡವಾಳವು ಗಳಿಸಿದ ಲಾಭದ ರೂಪದಲ್ಲಿ ಹಾಗೂ ಇಲ್ಲಿ ಕೆಲಸ ಮಾಡುತ್ತಿರುವ

ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳ ವೇತನಗಳ ಮತ್ತು ನಿವೃತ್ತಿ ವೇತನಗಳ ರೂಪದಲ್ಲಿ ಹರಿದುಹೋಗುತ್ತಿದೆ ಎಂದು ಅವರು ತೋರಿಸಿಕೊಟ್ಟರು. ಅನ್ಯದೇಶ ವೊಂದು ಭಾರತವನ್ನು ಆರ್ಥಿಕವಾಗಿ ಸುಲಿಗೆಮಾಡುತ್ತಿರುವ ರೀತಿಯನ್ನು ಕಣ್ಣಿಗೆ ಕಟ್ಟುವಂತೆ, ಖಚಿತವಾದ ರೂಪದಲ್ಲಿ ಸಂಪತ್ತಿನ ಆ ಹರಿವು ತೋರಿಸುತ್ತಿತ್ತು. ಅದನ್ನು ವಿರೋಧಿಸಿ ರಾಷ್ಟ್ರೀಯತಾವಾದಿಗಳು ಸಾಮ್ರಾಜ್ಯಶಾಹೀ ಅರ್ಥನೀತಿಯ ತಿರುಳನ್ನೇ ಕೆದಕಿ ಪ್ರಶ್ನಿಸಿದರು. ಅದು ವಸಾಹತುಶಾಹೀ ಸುಲಿಗೆ ಇರುವುದನ್ನು ಸಾಮಾನ್ಯ ಮನುಷ್ಯನು ಅರ್ಥಮಾಡಿಕೊಳ್ಳುವುದರ ಸಂಕೇತವಾಗಿತ್ತು.

ಆ ದಿನಗಳಲ್ಲಿ ಬ್ರಿಟಿಷ್ ಆಳಿಕೆಯು ಭಾರತದ ಜನರ ಜೀವನಕ್ಕೆ ಸಂಪತ್ತಿಗೆ ಭದ್ರತೆಯನ್ನು ಒದಗಿಸಿದೆ ಎಂಬುದೊಂದು ಕೂಗು ಏಳುತ್ತಿತ್ತು. ಇದನ್ನು ಪ್ರಶ್ನಿಸುತ್ತಾ ದಾದಾಭಾಯಿ ನವರೋಜಿ ಹೇಳಿದರು:

"ಭಾರತದಲ್ಲಿ ಜನರ ಜೀವನಕ್ಕೆ ಆಸ್ತಿಪಾಸ್ತಿಗಳಿಗೆ ಭದ್ರತೆಯಿದೆ ಎನ್ನುವುದು ಕಲ್ಪನೆ. ನಿಜದಲ್ಲಿ ಅಂಥದೇನೂ ಇಲ್ಲ. ಒಂದರ್ಥದಲ್ಲಿ ಅಥವಾ ಒಂದು ರೀತಿಯಲ್ಲಿ ಜನಜೀವನಕ್ಕೆ ಭದ್ರತೆಯೊದಗಿದೆ. ಅದರಲ್ಲಿ ಪರಸ್ಪರ ಹಿಂಸೆಯ ಅಥವಾ ದೇಶೀಯ ದರೋಡೆಕೋರರ ಭೀತಿಯ ಹಾಗೂ ಅರಕ್ಷಣೆಯ ಭಾವವಿಲ್ಲ. ಆದರೆ ಇಂಗ್ಲೆಂಡಿನ ಹಿಡಿತದಿಂದ ಸೊತ್ತುಸೊದೆಗಳಿಗೆ ರಕ್ಷಣೆ ಇಲ್ಲವಾಗಿದೆ, ಪರಿಣಾಮವಾಗಿ ಬದುಕಿಗೂ ಭದ್ರತೆಯಿಲ್ಲವಾಗಿದೆ. ಇಂದು ಭಾರತದ ಸಂಪತ್ತು ಸುರಕ್ಷಿತವಾಗಿಲ್ಲ. ನಿಜವಾಗಿಯೂ ಸುರಕ್ಷಿತವಾಗಿರುವುದು, ಉತ್ತಮ ರೀತಿಯಲ್ಲಿ ಭದ್ರವಾಗಿರುವುದು ಇಂಗ್ಲೆಂಡು. ಅದು ಸುಕ್ಷೇಮವಾಗಿದೆ, ಒಂದು ವರ್ಷಕ್ಕೆ 3,00,00,000 ಪೌಂಡು ಅಥವಾ 4,00,00,000 ಪೌಂಡುಗಳಂತೆ ಯಾವ ಯೋಚನೆಯೂ ಇಲ್ಲದೆ ಸುರಕ್ಷಿತವಾಗಿ ಇಲ್ಲಿಂದ ಕೊಂಡೊಯ್ಯುತ್ತಿದೆ ಮತ್ತು ಇಲ್ಲೇ ನುಂಗುತ್ತಿದೆ. ಆದ್ದರಿಂದ ಭಾರತ ತನ್ನ ಸೊತ್ತುಸೊದೆಗಳ ಅಥವಾ ಬದುಕಿನ ಭದ್ರತೆಯನ್ನು ಸವಿಯುತ್ತಿಲ್ಲ ಎಂದು ಹೇಳುವ ಸಾಹಸ ಮಾಡುತ್ತಿದ್ದೇನೆ. ಭಾರತದ ಲಕ್ಷಾಂತರ ಜನರಿಗೆ ಇಂದು ಜೀವನವೆಂದರೆ ಕೇವಲ 'ಅರೆಹೊಟ್ಟೆ' ಅಥವಾ ಉಪವಾಸ ಅಥವಾ ಕ್ಷಾಮ ಮತ್ತು ರೋಗ."

ತಾವು ಬಂದದ್ದರಿಂದ ಈ ದೇಶದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗಳು ಸಮರ್ಪಕವಾಗಿ ನೆಲೆಗೊಂಡುವು ಎಂದೂ ಬ್ರಿಟಿಷರು ಸೂಚಿಸಲು ಪ್ರಯತ್ನಿಸಿದರು. ಅದನ್ನು ವಿಕಟವಾಗಿ ಹಂಗಿಸಿ ತಿರಸ್ಕರಿಸುತ್ತಾ ದಾದಾಭಾಯಿ ಹೇಳಿದರು:

"ಒಂದು ಹೇಳಿಕೆಯಿದೆ: 'ದಯವಿಟ್ಟು ಬೆನ್ನ ಮೇಲೆ ಹೊಡೆ, ಹೊಟ್ಟೆಯ ಮೇಲೆ ಬೇಡ' ಎಂಬುದಾಗಿ. ದೇಶೀಯ ದಬ್ಬಾಳಿಕೆಯಲ್ಲಿ ಜನರು ಆಗಾಗ ಬೆನ್ನ ಮೇಲೆ ಸ್ವಲ್ಪಮಟ್ಟಿನ ಹೊಡೆತವನ್ನು ಅನುಭವಿಸುತ್ತಿದ್ದರೂ, ತಾವು ಉತ್ಪಾದಿಸಿದು ದನ್ನು ತಾವೇ ಇಟ್ಟುಕೊಂಡು ತಿನ್ನುತ್ತಾರೆ. ಬ್ರಿಟಿಷ್ ಇಂಡಿಯನ್ ದಬ್ಬಾಳಿಕೆ ಯಲ್ಲಾದರೋ ವ್ಯಕ್ತಿ ಶಾಂತಿಯಿಂದಿದ್ದಾನೆ, ಅವನಿಗೆ ಹಿಂಸೆಯಿಲ್ಲ, ಅವನ ಜೀವನಾಧಾರ ಕಣ್ಣಿಗೆ ಕಾಣದಂತೆ, ಶಾಂತಿಯುತವಾಗಿ, ಸೂಕ್ಷ್ಮವಾಗಿ ಕೊಚ್ಚಿ ಹೋಗುತ್ತಿದೆ-ಅವನು ಶಾಂತಿಯಿಂದಲೇ ಉಪವಾಸಮಾಡುತ್ತಾನೆ ಮತ್ತು ಶಾಂತಿಯಿಂದಲೇ ನಾಶವಾಗುತ್ತಿದ್ದಾನೆ, ಕಾನೂನು ಸುವ್ಯವಸ್ಥೆ ಮಾತ್ರ ಅವನ ಪಾಲಿಗಿದೆ."

ಸಂಗ್ರಹವಾಗಿ ಹೇಳಬೇಕಾದರೆ ಇಷ್ಟು: ಆರ್ಥಿಕ ಪ್ರಶ್ನೆಗಳನ್ನು ಕುರಿತ ಚಳುವಳಿಯು, ಬ್ರಿಟಿಷ್ ಆಡಳಿತವು ಭಾರತದ ಸುಲಿಗೆಯ ಮೇಲೆ ಆಧಾರಗೊಂಡಿದೆ ಎಂಬ ಅಖಿಲ ಭಾರತ ಅಭಿಪ್ರಾಯವನ್ನು ಬೆಳೆಯಿಸುವುದಕ್ಕೆ ಎಡೆಮಾಡಿತು. ಭಾರತದ ಆರ್ಥಿಕ ಹಿಂದುಳಿಕೆ ಮತ್ತು ಅನಭಿವೃದ್ಧಿಗಳಿಗೆ ಅದು ಕಾರಣವಾಗುತ್ತಿದೆ ಎಂಬುದು ಎಲ್ಲರಿಗೂ ಸ್ಪಷ್ಟವಾಯಿತು. ಬ್ರಿಟಿಷ್ ಆಳಿಕೆಯಿಂದ ಪರೋಕ್ಷವಾಗಿ ಉಂಟಾಗಿರಬಹುದಾದ ಯಾವುದೇ ಅನುಕೂಲತೆಗಳಿಗಿಂತ ಈ ಅನನುಕೂಲತೆಗಳು ವಿಪರೀತವಾಗಿದ್ದುವು.

## *ಆಡಳಿತ ಸುಧಾರಣೆಗಳು*

ಮೊದಮೊದಲ ರಾಷ್ಟ್ರೀಯವಾದಿಗಳು ಒಂದೊಂದೇ ಆಡಳಿತ ಕ್ರಮವನ್ನು ನಿರ್ಭೀತಿಯಿಂದ ವಿಮರ್ಶಿಸಿದರು. ಭ್ರಷ್ಟಾಚಾರ, ಅಸಮರ್ಪಕತೆ, ದಬ್ಬಾಳಿಕೆಗಳಿಂದ ತುಂಬಿದ ಆಡಳಿತ ವ್ಯವಸ್ಥೆ ಸುಧಾರಣೆಗೊಳ್ಳಬೇಕೆಂದು ಅವಿರತವಾಗಿ ಶ್ರಮಿಸಿದರು. ಅವರು ಚಳುವಳಿ ಹೂಡಿದ ಅತ್ಯಂತ ಮುಖ್ಯವಾದ ಆಡಳಿತ ಸುಧಾರಣೆ ಆಡಳಿತದ ಉನ್ನತಾಧಿಕಾರಗಳಿಗೆ ಭಾರತೀಯರನ್ನು ನೇಮಿಸುವ ವಿಚಾರವಾದದ್ದು. ಈ ಬೇಡಿಕೆಯನ್ನು ಆರ್ಥಿಕ, ರಾಜಕೀಯ ಮತ್ತು ನೈತಿಕ ಆಧಾರಗಳ ಮೇಲೆ ಮಂಡಿಸಲಾಯಿತು. ಆರ್ಥಿಕವಾಗಿ ನೋಡಿದರೆ, ಯೂರೋಪಿಯನರಿಗೆ ಕೊಡುತ್ತಿದ್ದ ಅಧಿಕ ವೇತನಗಳು ಭಾರತದ ಹಣಕಾಸಿನ ಪರಿಸ್ಥಿತಿಯಮೇಲೆ ಭಾರೀ ಹೊರೆಯಾಗಿದ್ದುವಲ್ಲದೆ, ಸಂಪತ್ತಿನ ಹೊರ ಹರಿವಿಗೆ ಪೋಷಕವಾಗಿದ್ದುವು. ಏಕೆಂದರೆ ಆ ವೇತನಗಳ ಬಹುಭಾಗ ಬ್ರಿಟನ್ನಿಗೆ ರಫ್ತಾಗುತ್ತಿದ್ದಿತು. ರಾಜಕೀಯವಾಗಿ, ಯೂರೋಪಿಯನ್ ಸಿವಿಲ್ ಅಧಿಕಾರಿಗಳು ಭಾರತೀಯ ಅಗತ್ಯಗಳನ್ನು ಕಡೆಗಣಿಸುತ್ತಿದ್ದರು, ವಿಶೇಷವಾಗಿ ಭಾರತೀಯ ಬಂಡವಾಳಗಾರರನ್ನು ತಿರಸ್ಕರಿಸಿ ಯೂರೋಪಿಯನ್ ಬಂಡವಾಳಗಾರರಿಗೆ ಪಕ್ಷಪಾತ ತೋರಿಸುತ್ತಿದ್ದರು. ಇನ್ನು ನೈತಿಕವಾಗಿ ಹೇಳುವುದಾದರೆ, ಅತ್ಯುನ್ನತನಾದ ಭಾರತೀಯನನ್ನು ತನ್ನದೇ ದೇಶದಲ್ಲಿ ಶಾಶ್ವತವಾಗಿ ಅತಿ ಕುಬ್ಜನಾಗುವಂತೆ ಮಾಡಿ ಅವನ ಭಾರತೀಯತ್ವವನ್ನೇ ಅದು ಕುಗ್ಗಿಸಿದ್ದಿತು. ಇದರ ಜೊತೆಯಲ್ಲೇ ಮೊದಲ ರಾಷ್ಟ್ರೀಯವಾದಿಗಳು ಸರಕಾರದ ಕೆಳಹಂತಗಳ ಅಲ್ಪ ವೇತನದ ನೌಕರರಿಗೆ ಅಧಿಕ ವೇತನ ನೀಡಬೇಕೆಂದು ಒತ್ತಾಯಮಾಡಿದರು. ಅಧಿಕ ಪ್ರಮಾಣದ ಭ್ರಷ್ಟಾಚಾರ ಮತ್ತು ಅಸಮರ್ಪಕತೆಗಳು ಕೆಳಹಂತಗಳಲ್ಲಿ ಕಂಡುಬರುತ್ತಿರುವುದಕ್ಕೆ ಕಾರಣ, ತಳಪದಿಯ ಪಂತದಲ್ಲಿ ಕೊಡುತ್ತಿರುವ ಅತ್ಯಲ್ಪ ವೇತನ ಎಂದು ಅವರು ನಂಬಿದ್ದರು.

ಸಾಮಾನ್ಯ ಜನರ ಬಗೆಗ ಪೋಲೀಸರು ಮತ್ತು ಸರಕಾರೀ ಏಜೆಂಟರು ತೋರಿಸುತ್ತಿದ್ದ ತುಳಿತದ, ದಬ್ಬಾಳಿಕೆಯ ವರ್ತನೆಯನ್ನು ರಾಷ್ಟ್ರೀಯವಾದಿಗಳು ಒಂದೇ ಸಮನೆ ಕಟುವಾಗಿ ಖಂಡಿಸಿ ವಿರೋಧಿಸಿದರು. ರಾಷ್ಟ್ರೀಯ ವೃತ್ತಪತ್ರಿಕೆಗಳು ದಿನದಿನವೂ ಅಂತಹ ನಿರಂಕುಶ ವರ್ತನೆಯ ಅಸಂಖ್ಯಾತ ನಿದರ್ಶನಗಳನ್ನು ಬೆಳಕಿಗೆ ತರುತ್ತಿದ್ದುವು. ಜನರಿಗೆ ದಬ್ಬಾಳಿಕೆಯಿಂದ ಮತ್ತು ಪೋಲೀಸರ ನಡತೆಯಿಂದ ರಕ್ಷಣೆ ದೊರಕುವಂತೆ ಕಾರ್ಯಾಂಗವು ನ್ಯಾಯಾಂಗದಿಂದ ಬೇರೆಯಾಗತಕ್ಕದ್ದು ಎಂದು ಅವರು ಒತ್ತಾಯಮಾಡಿದರು. ನ್ಯಾಯಾಂಗದ ವಿಳಂಬ ಸೂತ್ರ ಹಾಗೂ ದುಬಾರಿ

ವೆಚ್ಚಗಳನ್ನೂ ಖಂಡಿಸಿದರು. ಯೂರೋಪಿಯನನೊಂದಿಗೆ ಭಾರತೀಯನು ವಿವಾದದಲ್ಲಿ ತೊಡಗಿದ್ದ ಸಂದರ್ಭಗಳಲ್ಲಿ, ಪ್ರತಿಸಲವೂ ನ್ಯಾಯವನ್ನು ಯೂರೋಪಿಯನನಿಗೆ ಅನುಕೂಲವಾಗುವಂತ ಅಡ್ಡದಾರಿಗೆಳೆಯುವುದನ್ನು ಖಂಡಿಸಿ, ನ್ಯಾಯದೆದುರು ಸಮಾನತೆ ಎಂಬ ತತ್ವ ಯೂರೋಪಿಯನರಿಗೂ ಅನ್ವಯವಾಗಬೇಕೆಂದು ಒತ್ತಿ ಹೇಳಿದರು. ಜನರು ಆಯುಧ ಧರಿಸಬಾರದೆಂದು ವಿಧಿಸಿರುವ ನೀತಿಯನ್ನು ವಿರೋಧಿಸಿ, ಎಲ್ಲ ಜನರಿಗೂ ಸಶಸ್ತ್ರರಾಗಿರಲು ಹಕ್ಕಿದೆ ಎಂದು ವಾದಿಸಿದರು. ಭಾರತದ ನೆರೆ ದೇಶಗಳ ಮೇಲೆ ಆಕ್ರಮಣಕಾರೀ ನೀತಿಯನ್ನು ತಾಳಿರುವುದನ್ನು ಆಕ್ಷೇಪಿಸಿದರು. ಬರ್ಮಾ ದೇಶವನ್ನು ಕೂಡಿಸಿಕೊಂಡದ್ದನ್ನೂ, ಅಫ್ಘಾನೀಸ್ತಾನದ ಮೇಲೆ ಮುತ್ತಿಗೆ ಹಾಕಿದುದನ್ನೂ, ವಾಯುವ್ಯಭಾರತದ ಬುಡಕಟ್ಟು ಜನರನ್ನು ಅಡಗಿಸಿದುದನ್ನೂ ಅವರು ಖಂಡಿಸಿದರು.

ಭಾರತದಲ್ಲಿ ಜನಹಿತ ಕಾರ್ಯಗಳು ಇದ್ದ ಅತಿ ಕೆಳಗಿನ ಮಟ್ಟವನ್ನು ರಾಷ್ಟ್ರೀಯವಾದಿಗಳು ಟೀಕಿಸಿದರು. ಸರಕಾರ ಜನಹಿತ ಕಾರ್ಯಗಳನ್ನು ಹೆಚ್ಚು ಪಡಿಸಲು ತಕ್ಕ ಕ್ರಮಗಳನ್ನು ಕೈಕೊಳ್ಳಬೇಕು. ಆದರಲ್ಲೂ ಜನಸಾಮಾನ್ಯರಲ್ಲಿ ವಿದ್ಯಾಭ್ಯಾಸವನ್ನು ಪ್ರಸಾರಮಾಡುವುದು ಅತ್ಯಂತ ಅಗತ್ಯವಾದ ವಿಚಾರ ಎಂದು ಅವರು ಹೇಳಿದರು. ಹಾಗೆಯೇ, ತಾಂತ್ರಿಕ ಮತ್ತು ಉನ್ನತ ಶಿಕ್ಷಣ ಸೌಲಭ್ಯಗಳು ಹೆಚ್ಚಬೇಕು, ವೈದ್ಯಕೀಯ ಮತ್ತು ಆರೋಗ್ಯರಕ್ಷಣಾ ಸೌಲಭ್ಯಗಳು ಅಧಿಕವಾಗಬೇಕು ಎಂದು ಒತ್ತಾಯ ಮಾಡಿದರು. ಎಲ್ಲಕ್ಕಿಂತ ಮಿಗಿಲಾಗಿ, ನಾವು ಆಗಲೇ ನೋಡಿದಂತ, ಭಾರತದ ಕೈಗಾರಿಕೆಗಳು ಮತ್ತು ಕೃಷಿಯನ್ನು ಅಭಿವೃದ್ಧಿಪಡಿಸಲು ಚುರುಕಾದ ಆಡಳಿತಕ್ರಮಗಳನ್ನು ಕೈಗೊಳ್ಳಬೇಕು ಎಂದು ಒತ್ತಿ ಹೇಳಿದರು.

ದಕ್ಷಿಣ ಆಫ್ರಿಕಾ, ಮಲಯಾ, ಮಾರಿಷಸ್, ಫಿಜಿ, ವೆಸ್ಟ್ ಇಂಡೀಸ್ ಮತ್ತು ಬ್ರಿಟಿಷ್ ಗಯಾನಾ ಮುಂತಾದ ಬ್ರಿಟಿಷ್ ವಸಾಹತುಗಳಿಗೆ ಹೋಗಿ ನೆಲೆಸಿದ್ದ ಭಾರತೀಯರ ಹಿತರಕ್ಷಣೆಯ ವಿಚಾರವನ್ನು ರಾಷ್ಟ್ರೀಯ ನಾಯಕರು ಕೈಗೆತ್ತಿಕೊಂಡರು. ಆ ದೇಶಗಳಲ್ಲಿ ಅವರನ್ನು ಅತಿರೇಕದ ಜನಾಂಗ ಪಕ್ಷಪಾತ ಮತ್ತು ಇತರ ರೀತಿಯ ದಮನಗಳಿಗೆ ಒಳಪಡಿಸಲಾಗಿತ್ತು. ಹೆಚ್ಚಿನ ಸಂದರ್ಭಗಳಲ್ಲಿ ಅವರ ಸ್ಥಿತಿ ಗುಲಾಮರದಕ್ಕಿಂತ ಉತ್ತಮವಾದುದೇನಾಗಿರಲಿಲ್ಲ. ರಾಷ್ಟ್ರೀಯವಾದಿಗಳು 1893 ರ ನಂತರ ದಕ್ಷಿಣ ಆಫ್ರಿಕಾದಲ್ಲಿ ಮೋಹನದಾಸ ಕರಮಚಂದ ಗಾಂಧೀ ಅವರು ಮಾನವ ಹಕ್ಕುಗಳಿಗಾಗಿ ನಡೆಸುತ್ತಿದ್ದ ಜನತಾ ಹೋರಾಟಕ್ಕೆ ಪೂರ್ಣ ಬೆಂಬಲಕೊಟ್ಟರು.

ಭಾರತೀಯ ನಾಯಕರು ಪ್ಲಾಂಟೇಷನ್ ಕೆಲಸಗಾರರ ಪರವಾಗಿಯೂ ಹೋರಾಡಿದರು. ವಿದೇಶೀಯ ಪ್ಲಾಂಟರರ ಕೈಗೆ ಸಿಕ್ಕಿದ್ದ ಕೆಲಸಗಾರರು ಅತ್ಯಲ್ಪ ಸಂಬಳದ ಮೇಲೆ ಹೆಚ್ಚುಕಡಮೆ ಗುಲಾಮಗಿರಿಗೆ ಸಮನಾದ ಸ್ಥಿತಿಯಲ್ಲಿದ್ದರು. ಅದೇ ಸಮಯದಲ್ಲಿ, ಭಾರತೀಯ ಕಾರ್ಖಾನೆಗಳ ಮತ್ತು ಗಣಿಗಳ ಕೆಲಸಗಾರರ ಪರವಾಗಿ ಆ ನಾಯಕರು ಚಳುವಳಿ ಹೂಡಲಿಲ್ಲವೆಂಬುದನ್ನು ಗಮನಿಸಬಹುದು. ಆ ಕೆಲಸಗಾರರೂ ಕ್ರೂರವಾದ ರೀತಿಯ ಸುಲಿಗೆಗೆ ಪಕ್ಕಾಗಿದ್ದವರೇ. ಆದರೆ ಆ ಸಂದರ್ಭದಲ್ಲಿ ಭಾರತೀಯ ನಾಯಕರು ಭಾರತದ ಬಂಡವಾಳಗಾರರ ಹಿತಕ್ಕೆ ಆದ್ಯತೆ ಕೊಟ್ಟರು. ಒಮ್ಮೆ ವಿದೇಶೀ ನಿಯಂತ್ರಣ ತಪ್ಪಿತೆಂದಮೇಲೆ ಭಾರತೀಯ ಬಂಡವಾಳಗಾರನು ತಾನೇ ತನ್ನ

ಕೆಲಸಗಾರರ ಹಿತಗಳನ್ನು ರಕ್ಷಿಸುತ್ತಾನೆ ಎಂದು ಅವರು ನಿರೀಕ್ಷಿಸಿದ್ದಂತೆ ಕಾಣುತ್ತದೆ.

## *ನಾಗರಿಕ ಹಕ್ಕುಗಳ ರಕ್ಷಣೆ*

ರಾಜಕೀಯ ಅರಿವಿದ್ದ ಭಾರತೀಯರು ಮೊದಲಿನಿಂದಲೂ ಆಧುನಿಕ ಪೌರ ಹಕ್ಕುಗಳ ಬಗೆಗೆ ತೀವ್ರವಾಗಿ ಆಕರ್ಷಿತರಾಗಿದ್ದರು. ವಾಕ್ ಸ್ವಾತಂತ್ರ್ಯ, ಆಲೋಚನಾ ಸ್ವಾತಂತ್ರ್ಯ ಮತ್ತು ಸಂಘ ಸ್ವಾತಂತ್ರ್ಯ-ಇವೇ ಆ ಹಕ್ಕುಗಳು. ಆದ್ದರಿಂದ ಸರಕಾರವು ಈ ಹಕ್ಕುಗಳನ್ನು ಮೊಟಕುಗೊಳಿಸಲು ಪ್ರಯತ್ನಿಸಿದಾಗಲೆಲ್ಲ ಅವರು ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದರು. 1878 ರ ವರ್ನಾಕ್ಯುಲರ್ ಪ್ರೆಸ್ ಆಕ್ಟ್ (ದೇಶೀಯ ಭಾಷೆಗಳ ಪತ್ರಿಕಾ ಶಾಸನ) ಭಾರತೀಯ ಭಾಷೆಗಳ ಸ್ವಾತಂತ್ರ್ಯಕ್ಕೆ ತಡೆಯೊಡ್ಡಿತು. 1880 ರಲ್ಲಿ ಅದನ್ನು ಹಿಂತೆಗೆದುಕೊಳ್ಳುವವರೆಗೂ ಅದನ್ನು ಕಟುವಾಗಿ ಅವರು ವಿರೋಧಿಸಿದರು. ಅದೇ ರೀತಿ 1890 ರಲ್ಲಿ ಅಧಿಕೃತ ರಹಸ್ಯಗಳನ್ನು ರಕ್ಷಿಸುವುದೆಂಬ ಸೋಗಿನಲ್ಲಿ ವೃತ್ತಪತ್ರಿಕೆಗಳು ಮಾಡುತ್ತಿದ್ದ ವಿಮರ್ಶೆಯನ್ನು ತಡೆಯಲು ಮಾಡಿದ ಪ್ರಯತ್ನವನ್ನು ಬಹಳ ದೃಢವಾಗಿ ವಿರೋಧಿಸಲಾಯಿತು.

ಈ ವಿಷಯವಾಗಿ ಅತ್ಯಂತ ನಾಟಕೀಯವಾದ ಘಟನೆಯೊಂದು ನಡೆಯಿತು. ಅದು ಬಿ.ಜಿ. ತಿಲಕ್ ಮತ್ತು ಇತರ ಹಲವು ನಾಯಕರನ್ನೂ, ವೃತ್ತಪತ್ರಿಕೆಗಳ ಸಂಪಾದಕರನ್ನೂ ಬಂಧಿಸಿದುದು. ಬ್ರಿಟಿಷ್ ಇಂಡಿಯನ್ ಸರಕಾರದ ವಿರುದ್ಧ ಅಸಂತೋಷದ ಭಾವನೆಯನ್ನು ಹರಡುತ್ತಿದ್ದರೆಂಬುದು ಅವರ ಮೇಲೆ ಹೊರಿಸಿದ ಆರೋಪಣೆ. ಆಗಲೇ ಪ್ರಮುಖ ರಾಷ್ಟ್ರೀಯವಾದಿ ನಾಯಕರಾಗಿದ್ದ ತಿಲಕರಿಗೆ 18 ತಿಂಗಳ ಕಾಲ ಸಶ್ರಮ ಕಾರಾಗೃಹವಾಸದ ಅನಾಗರಿಕ ಶಿಕ್ಷೆ ವಿಧಿಸಲಾಯಿತು. ನಾಟು ಸಹೋದರರೆಂಬ ಪೂನಾದ ಇಬ್ಬರು ಸೋದರರಿಗೆ ವಿಚಾರಣೆಯನ್ನು ನಡೆಸದೆಯೇ ಗಡೀಪಾರು ಶಿಕ್ಷೆ ವಿಧಿಸಿದರು. ಅನೇಕ ಇತರ ಪತ್ರಿಕಾ ಸಂಪಾದಕರಿಗೂ ಅಂತಹುದೇ ಶಿಕ್ಷೆಗಳಾದುವು. ರಾಷ್ಟ್ರೀಯ ಪತ್ರಿಕೆಗಳೂ ರಾಜಕೀಯ ಸಂಸ್ಥೆಗಳೂ ಪೌರಸ್ವಾತಂತ್ರ್ಯದ ಮೇಲೆ ಮಾಡಿದ ಈ ದಾಳಿಯ ವಿರುದ್ಧ ತೀವ್ರ ಹೋರಾಟಕ್ಕೆ ಸಿದ್ಧವಾಗಿ ನಿಂತುವು. ರಾಷ್ಟ್ರವ್ಯಾಪಿಯಾದ ಚಳುವಳಿಯನ್ನು ವ್ಯವಸ್ಥೆಗೊಳಿಸಲಾಯಿತು. ಇದಕ್ಕಿದ್ದಂತೆ ತಿಲಕರು ಅತ್ಯಂತ ಜನಪ್ರಿಯರಾದ ಅಖಿಲ ಭಾರತ ನಾಯಕರಾದರು, ಜನತೆ ಅವರಿಗೆ "ಲೋಕಮಾನ್ಯ" ಎಂಬ ಬಿರುದನ್ನು ನೀಡಿತು.

ಈಗ ಸರಕಾರವು ವಾಕ್ ಸ್ವಾತಂತ್ರ್ಯವನ್ನೂ ಪತ್ರಿಕಾ ಸ್ವಾತಂತ್ರ್ಯವನ್ನೂ ಅಡಗಿಸಲು ಹಾಗೂ ಪೋಲೀಸ್ ಪಡೆಯ ಅಧಿಕಾರಗಳನ್ನು ಹೆಚ್ಚಿಸಲು ನೂತನ ಶಾಸನಗಳನ್ನು ಜಾರಿಗೆ ತಂದಿತು. ಈಗ ರಾಷ್ಟ್ರೀಯ ಕಾರ್ಯಕರ್ತರನ್ನು ಕುರಿತು ಗೂಂಡಾಗಳು ಮತ್ತು ದುಷ್ಟವ್ಯಕ್ತಿಗಳಂತೆಯೇ ವ್ಯವಹರಿಸಬಹುದಾಗಿತ್ತು. ಈ ಕಾನೂನುಗಳ ಬಗೆಗೆ ರಾಷ್ಟ್ರವ್ಯಾಪಿಯಾದ ವಿರೋಧವನ್ನು ವ್ಯಕ್ತಪಡಿಸುವ ಚಳುವಳಿಯನ್ನು ವ್ಯವಸ್ಥೆಮಾಡ ಲಾಯಿತು. ವಾಸ್ತವವಾಗಿ ಆ ಸಮಯದಿಂದ ಮುಂದಕ್ಕೆ ಪೌರಸ್ವಾತಂತ್ರ್ಯಗಳಿಗಾಗಿ ಹೋರಾಟವು, ಸ್ವಾತಂತ್ರ್ಯ ಹೋರಾಟದ ಅವಿಭಾಜ್ಯ ಅಂಗವೇ ಆಗಿ ಪರಿಣಮಿಸಿತು.

## ಸಾಂವಿಧಾನಿಕ ಸುಧಾರಣೆಗಳು ಮತ್ತು ಸ್ವಯಮಾಡಳಿತ

ಮೊದಲಿನಿಂದಲೂ ರಾಷ್ಟ್ರೀಯವಾದಿಗಳು, ಭಾರತವು ಪ್ರಜಾಸತ್ತಾತ್ಮಕ ಸ್ವಯಮಾಡಳಿತದತ್ತ ಕ್ರಮೇಣ ಮುನ್ನಡೆಯಬೇಕು ಎಂದು ನಂಬಿದ್ದರು. ಆದರೆ ಈ ಗುರಿಯನ್ನು ತಕ್ಷಣವೇ ಪೂರೈಸಬೇಕೆಂದು ಅವರು ಒತ್ತಾಯ ಮಾಡಲಿಲ್ಲ. ಬದಲಾಗಿ ಸ್ವಾತಂತ್ರ್ಯದತ್ತ ಒಂದೊಂದೇ ಹೆಜ್ಜೆಯನ್ನು ಮುಂದಿಡುವ ಮಾರ್ಗವನ್ನು ಸೂಚಿಸಿದರು. ಅವರಿಗೆ ತಕ್ಷಣವೇ ಬೇಕಾಗಿದ್ದ ರಾಜಕೀಯ ಬೇಡಿಕೆಗಳು ಬಹಳ ಮಿತವಾಗಿದ್ದುವು. ಪ್ರಾರಂಭಕ್ಕೆ ಸರಕಾರದಲ್ಲಿ ಹೆಚ್ಚಿನ ಪಾಲು ಕೊಡಬೇಕೆಂದು ಅವರು ತತ್‌ಕ್ಷಣದ ಬೇಡಿಕೆಯಾಗಿತ್ತು. ಇರುವ ಶಾಸನ ಸಭೆಗಳನ್ನು ವಿಸ್ತರಿಸಿ ಸುಧಾರಿಸುವುದರಿಂದ ಇದನ್ನು ಮಾಡಬಹುದಾಗಿತ್ತು. 1861 ರ ಇಂಡಿಯನ್ ಕೌನ್ಸಿಲ್ ಆಕ್ಟ್‌ನಿಂದ ಶಾಸನಸಭೆಗಳಿಗೆ ಕೆಲವರು ಅಧಿಕಾರಿಗಳಲ್ಲದವರನ್ನು ನಾಮಕರಣ ಮಾಡಲು ಅವಕಾಶವಿತ್ತು. ಈ ಅಧಿಕಾರಿಗಳಲ್ಲದ, ನಾಮಕರಣಗೊಂಡ ಸದಸ್ಯರು ಸಾಮಾನ್ಯವಾಗಿ ಜಮೀನ್ದಾರರು ಮತ್ತು ದೊಡ್ಡದೊಡ್ಡ ವರ್ತಕರು. ಅವರು ಸಂಪೂರ್ಣವಾಗಿ ಸರಕಾರೀ ಅಧಿಕಾರಿಗಳ ದಾರಿಯನ್ನೇ ತುಳಿದಿದ್ದವರು. ಉದಾಹರಣೆಗೆ 1888 ರಲ್ಲಿ ಅವರು ಉಪ್ಪಿನ ತೆರಿಗೆಯ ಹೆಚ್ಚಳವನ್ನು ಸ್ವಲ್ಪವೂ ಸಂಕೋಚವಿಲ್ಲದೆ ಬೆಂಬಲಿಸಿದರು. ಅವರನ್ನು ಅನೇಕವೇಳೆ ಕಾಂಗ್ರೆಸ್ ವೇದಿಕೆಯಿಂದ "ಥಳುಕಿನ ವಂಚಕರು" ಮತ್ತು "ಅದ್ಭುತ ಅನಾಮಧೇಯರು" ಎಂಬ ಮಾತುಗಳಿಂದ ಅಪಹಾಸ್ಯ ಮಾಡುತ್ತಿದ್ದರು. ರಾಷ್ಟ್ರೀಯವಾದಿಗಳು ಸಭೆಗಳ ಅಧಿಕಾರಗಳನ್ನು ಹೆಚ್ಚುಮಾಡಬೇಕೆಂದೂ, ಸದಸ್ಯರಿಗೆ ಆಯವ್ಯಯವನ್ನು ಚರ್ಚಿಸುವ, ದಿನದಿನದ ಆಡಳಿತವನ್ನು ಪ್ರಶ್ನಿಸಿ ವಿಮರ್ಶಿಸುವ ಅಧಿಕಾರಗಳನ್ನು ಹೆಚ್ಚುಮಾಡಬೇಕೆಂದೂ ಒತ್ತಾಯಪಡಿಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಜನತೆಯ ಚುನಾಯಿತ ಪ್ರತಿನಿಧಿಗಳಿಗೆ ಕೌನ್ಸಿಲುಗಳಲ್ಲಿ ಸದಸ್ಯತ್ವ ಕೊಡಬೇಕೆಂದು ಕೇಳಿದರು.

ಜನತೆಯ ಒತ್ತಡದಿಂದಾಗಿ ಸರಕಾರವು ಹಳೆಯ ಅವಕಾಶಗಳಿಗೆ ತಿದ್ದುಪಡಿ ಮಾಡಿ 1892 ರ ಇಂಡಿಯನ್ ಕೌನ್ಸಿಲ್ ಆಕ್ಟ್ ಶಾಸನವನ್ನು ಹೊಸದಾಗಿ ಜಾರಿಗೆ ತಂದಿತು. ಈ ಶಾಸನವು ಅಧಿಕಾರಿಗಳಲ್ಲದ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿತು. ಅವರಲ್ಲಿ ಕೆಲವರನ್ನು ಪರೋಕ್ಷ ಚುನಾವಣೆಯಿಂದ ಆರಿಸಬಹುದೆಂದಾಯಿತು. ಸದಸ್ಯರಿಗೆ ಆಯವ್ಯಯ ಪತ್ರದ ಮೇಲೆ ಮಾತನಾಡುವ ಸ್ವಾತಂತ್ರ್ಯ ಸಿಕ್ಕಿತು, ಆದರೆ ಅದರ ಮೇಲೆ ಮತನೀಡುವ ಸ್ವಾತಂತ್ರ್ಯವಲ್ಲ. ಇಷ್ಟು ಅಲ್ಪವಾದ ಸುಧಾರಣೆ ಭಾರತೀಯರಿಗೆ ತೀವ್ರ ಅತೃಪ್ತಿಯನ್ನು ಉಳಿಸಿತು. ಅದರಲ್ಲಿ ಅವರು ತಮ್ಮ ಬೇಡಿಕೆಗಳ ಮೊದಲಿಕೆಯನ್ನು ಕಂಡರು. ಈಗ ಅವರು ಕೌನ್ಸಿಲುಗಳಲ್ಲಿ ಅಧಿಕಾರಿಗಳಲ್ಲದ ಚುನಾಯಿತ ಸದಸ್ಯರ ಬಹುಮತ ಇರಬೇಕೆಂದು ಚಳುವಳಿ ಹೂಡಿದರು. ಅದಕ್ಕಿಂತ ಹೆಚ್ಚಾಗಿ ಸಾರ್ವಜನಿಕ ಹಣದ ಮೇಲೆ ಅಧಿಕಾರಿಗಳಲ್ಲದವರ ನಿಯಂತ್ರಣ ಇರಬೇಕು ಎಂದು ಕೇಳಿದರು. "ಪ್ರಾತಿನಿಧ್ಯವಿಲ್ಲದ ತೆರಿಗೆಯಿಲ್ಲ" ಎಂಬ ಘೋಷಣೆ ಹೊರಡಿಸಿದರು. ಆದರೆ ಅದೇ ಸಮಯಕ್ಕೆ ಅವರು ತಮ್ಮ ಪ್ರಜಾಸತ್ತೆಯ ಬೇಡಿಕೆಯ ಆಧಾರವನ್ನು ವಿಸ್ತಾರಗೊಳಿಸುವುದರಲ್ಲಿ ವಿಫಲರಾದರು. ಜನಸಾಮಾನ್ಯರಿಗೆ ಅಥವಾ ಸ್ತ್ರೀಯರಿಗೆ ಮತ ಚಲಾವಣೆಯ ಹಕ್ಕನ್ನು ಅವರು ಒತ್ತಾಯ

ಮಾಡಲಿಲ್ಲ. ಆದ್ದರಿಂದ ಸ್ಪಷ್ಟವಾಗಿಯೇ ಅವರ ಬೇಡಿಕೆ ಮಧ್ಯಮ ಹಾಗೂ ಮೇಲುವರ್ಗಗಳ ಜನರಿಗೆ ಮಾತ್ರ ಪ್ರಯೋಜನಕಾರಿಯಾಗಿತ್ತು.

ಮೊದಲಿನ ರಾಷ್ಟ್ರೀಯವಾದಿಗಳು ತಮ್ಮ ರಾಜಕೀಯ ಗುರಿಗಳಲ್ಲಿ ಬಹುಮಟ್ಟಿಗೆ ಮುಂದುವರಿದದ್ದು ಶತಮಾನದ ಕೊನೆಯಲ್ಲಿ. ಈ ಅವರ ಬೇಡಿಕೆಗಳು ಸಣ್ಣಪುಟ್ಟ ಸುಧಾರಣೆಗಳಿಗಾಗಿರಲಿಲ್ಲ. ಅವರು ಸಂಪೂರ್ಣ ಸ್ವಯಮಾಡಳಿತವನ್ನು ಕೇಳಿದರು. ಸ್ವಯಮಾಡಳಿತವಿರುವ ವಸಾಹತುಗಳಾದ ಆಸ್ಟ್ರೇಲಿಯ ಮತ್ತು ಕೆನಡಾಗಳಲ್ಲಿನ ಮಾದರಿಯಂತೆ ಸಕಲ ಶಾಸಕಾಂಗ ಕಾರ್ಯಗಳು ಮತ್ತು ಹಣಕಾಸು ವಿಚಾರಗಳ ಮೇಲೆ ಪೂರ್ತಿಯಾಗಿ ಭಾರತೀಯ ನಿಯಂತ್ರಣ ಇರಬೇಕೆಂದು ಒತ್ತಾಯ ಮಾಡಿದರು. 1904 ರಲ್ಲಿ ಈ ಬೇಡಿಕೆಯನ್ನು ದಾದಾಭಾಯಿ ನವರೋಜಿ ಮಂಡಿಸಿದರು, 1905 ರಲ್ಲಿ ಕಾಂಗ್ರೆಸ್ ಅಧ್ಯಕ್ಷೀಯ ಭಾಷಣದಲ್ಲಿ ಗೋಪಾಲಕೃಷ್ಣ ಗೋಖಲೆಯವರು ಇದನ್ನು ಮಂಡಿಸಿದರು. ಈ ಬೇಡಿಕೆಗೆ ಸ್ವರಾಜ್ಯವೆಂಬ ಪದವನ್ನು ಮೊತ್ತ ಮೊದಲು ಉಪಯೋಗಿಸಿದವರು ದಾದಾಭಾಯಿ ನವರೋಜಿ. ಅದು 1906 ರ ಕಾಂಗ್ರೆಸಿನ ಕಲ್ಕತ್ತಾ ಅಧಿವೇಶನದಲ್ಲಿ. ಹೀಗಾಗಿ ಮೊದಲಿನ ರಾಷ್ಟ್ರೀಯವಾದಿಗಳಿಗೂ ನಂತರದವರಿಗೂ ರಾಷ್ಟ್ರೀಯ ರಾಜಕೀಯ ಧ್ಯೇಯದ ವಿವರಣೆಯಲ್ಲಿ ವ್ಯತ್ಯಾಸ ಇರಲಿಲ್ಲ. ವಾಸ್ತವವಾಗಿ ಅದು ಇದ್ದದ್ದು ಇಟ್ಟುಕೊಂಡ ಗುರಿಗಳ ಸಾಧನೆಗಾಗಿ ಹೋರಾಡುವ ವಿಧಾನಗಳಲ್ಲಿ ಮತ್ತು ಹೋರಾಟವು ಆಧಾರಗೊಂಡ ಸಾಮಾಜಿಕ ವರ್ಗಗಳ ಸ್ವರೂಪದಲ್ಲಿ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಭಿನ್ನತೆಯಿದ್ದದ್ದು ಗುರಿಗಳಲ್ಲಲ್ಲ, ಅವುಗಳನ್ನು ಕಾರ್ಯತಃ ಹೇಗೆ ಸಾಧಿಸಬೇಕೆಂಬುದರಲ್ಲಿ.

### ರಾಜಕೀಯ ಕಾರ್ಯವಿಧಾನಗಳು

ಮೊದಲಿನ ರಾಷ್ಟ್ರೀಯವಾದಿಗಳಿಗೆ "ಮಿತಗಾಮಿ"ಗಳು (Moderates) ಎಂಬ ಹೆಸರನ್ನು ತಂದಿತ್ತದ್ದು, ಅವರು ರಾಜಕೀಯ ಕ್ರಮಗಳಿಗೆ ಕೈಗೊಂಡ ವಿಧಾನಗಳು. ಈ ವಿಧಾನಗಳನ್ನು ಸಂಕ್ಷೇಪವಾಗಿ, ಕಾನೂನಿನ ಗತಿಯ ಚೌಕಟ್ಟಿನೊಳಗೆ ಸುವ್ಯವಸ್ಥಿತವಾಗಿ, ಮಂದವಾಗಿ ನಡೆಸಿದ ಸಾಂವಿಧಾನಿಕ ಚಳುವಳಿಗಳು, ವ್ಯವಸ್ಥಿತ ರಾಜಕೀಯ ಪ್ರಗತಿ ಎಂದು ವರ್ಣಿಸಬಹುದು. ಜನರಿಗೆ, ಆಧುನಿಕ ರಾಜಕೀಯದಲ್ಲಿ ಶಿಕ್ಷಣ ಕೊಡುವುದು, ರಾಷ್ಟ್ರವ್ಯಾಪಿಯಾಗಿ ರಾಜಕೀಯ ಪ್ರಜ್ಞೆಯನ್ನು ಪ್ರಚೋದಿಸುವುದು, ರಾಜಕೀಯ ಪ್ರಶ್ನೆಗಳಲ್ಲಿ ಒಟ್ಟಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದು-ಇವು ತಮ್ಮ ಮುಖ್ಯ ಕರ್ತವ್ಯ ಎಂದು ಅವರು ನಂಬಿದ್ದರು. ಇದನ್ನು ಸಾಧಿಸುವುದಕ್ಕಾಗಿ ಅವರು ಹಲವಾರು ಮಾರ್ಗಗಳನ್ನು ಅವಲಂಬಿಸಿದರು. ಬಹಳ ಉನ್ನತವಾದ ರಾಜಕೀಯ ಮತ್ತು ಬೌದ್ಧಿಕ ಮಟ್ಟವುಳ್ಳ ಭಾಷಣಗಳಿಂದ ಕೂಡಿದ ಸಭೆಗಳನ್ನು ಏರ್ಪಡಿಸಿದರು. ಅಲ್ಲಿ ಜನತೆಯ ಬೇಡಿಕೆಗಳನ್ನು ಕುರಿತ ನಿರ್ಣಯಗಳನ್ನು ಅಂಗೀಕರಿಸಲಾಯಿತು. ವೃತ್ತಪತ್ರಿಕೆಗಳ ಮೂಲಕ ರಾಷ್ಟ್ರೀಯವಾದಿಗಳು ಸರಕಾರದ ಬಗೆಗೆ ದಿನದಿನವೂ ವಿಮರ್ಶೆ ನಡೆಸಿದರು. ಲೆಕ್ಕವಿಲ್ಲದಷ್ಟು ಮನವಿಗಳನ್ನೂ ಜ್ಞಾಪನಗಳನ್ನೂ ಉನ್ನತ ಸರಕಾರಿ ಅಧಿಕಾರಿಗಳಿಗೂ ಬ್ರಿಟಿಷ್

ಪಾರ್ಲಿಮೆಂಟಿಗೂ ಕಳುಹಿಸಿದರು. ಈ ಬಿನ್ನಹಗಳು ಮತ್ತು ಮನವಿಗಳ ಸತ್ಯಾಂಶ ಗಳನ್ನೂ ವಾದಗಳನ್ನೂ ಬಹುಶ್ರಮದಿಂದ ಸೂಕ್ತವಾಗಿ ಜೋಡಿಸಿ ರಚಿಸಿದ ದಾಖಲೆ ಗಳಾಗಿದ್ದುವು. ತೋರಿಕೆಗೆ ಸರಕಾರವನ್ನು ಸಂಬೋಧಿಸಿ ಇವುಗಳನ್ನು ರಚಿಸಿದ್ದರೂ, ಅವುಗಳ ನಿಜವಾದ ಗುರಿ ಭಾರತದ ಜನರಿಗೆ ಆ ವಿಷಯಗಳನ್ನು ಮನದಟ್ಟು ಮಾಡಿಕೊಡುವುದಾಗಿತ್ತು. ಉದಾಹರಣೆಗೆ 1891 ರಲ್ಲಿ ಆಗ ಯುವಕರಾಗಿದ್ದ ಗೋಖಲೆಯರು, ಪೂನಾ ಸಾರ್ವಜನಿಕ ಸಭೆಯು ಬಹು ಎಚ್ಚರಿಕೆಯಿಂದ ವಿಸ್ತಾರ ವಾಗಿ ತಯಾರಿಸಿದ್ದ ಬಿನ್ನಹಪತ್ರಕ್ಕೆ ಸರಕಾರವು ಕೊಟ್ಟ ಎರಡು ಸಾಲಿನ ಉತ್ತರದ ಬಗೆಗೆ ತಮ್ಮ ತೀವ್ರ ನಿರಾಶೆಯನ್ನು ವ್ಯಕ್ತಪಡಿಸಿದಾಗ ಜಸ್ಟಿಸ್ ರಾನಡೆ, ಅವರಿಗೆ ಹೀಗೆ ಉತ್ತರಕೊಟ್ಟರು:

> "ನಮ್ಮ ದೇಶದ ಇತಿಹಾಸದಲ್ಲಿ ನಮ್ಮ ಸ್ಥಾನ ಏನು ಎಂಬುದು ನಿಮಗೆ ಇನ್ನೂ ಗೊತ್ತಾಗಿಲ್ಲ. ಈ ಮನವಿಪತ್ರಗಳನ್ನು ಸುಮ್ಮನೆ ನಾಮ ಮಾತ್ರಕ್ಕೆ ಸರಕಾರವನ್ನು ಸಂಬೋಧಿಸಿ ರಚಿಸಲಾಗುತ್ತದೆ. ವಾಸ್ತವವಾಗಿ ಅವು ಸಂಬೋಧಿ ಸುವುದು ದೇಶದ ಜನತೆಯನ್ನು. ಅವರು ಈ ವಿಚಾರಗಳಲ್ಲಿ ಹೇಗೆ ಆಲೋಚಿಸ ಬೇಕು ಎಂಬುದನ್ನು ಕಲಿಸುವುದೇ ಅವುಗಳ ಉದ್ದೇಶ. ಈ ಕೆಲಸವನ್ನು ಹಲವು ವರ್ಷಗಳ ಕಾಲ ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ ಮಾಡಬೇಕು. ಏಕೆಂದರೆ ಈ ಬಗೆಯ ರಾಜಕೀಯ ಈ ನೆಲಕ್ಕೆ ತೀರಾ ಹೊಸದು."

ಮೊದಲಿನ ರಾಷ್ಟ್ರೀಯವಾದಿಗಳಿಗಿದ್ದ ಎರಡನೆಯ ಉದ್ದೇಶ, ಅಗತ್ಯವಾಗಿದ್ದ ಬದಲಾ ವಣೆಗಳನ್ನು ಜಾರಿಗೆ ತರುವಂತೆ ಬ್ರಿಟಿಷ್ ಸರಕಾರದ ಮೇಲೂ ಬ್ರಿಟಿಷ್ ಸಾರ್ವಜನಿಕ ಅಭಿಪ್ರಾಯದ ಮೇಲೂ ಪ್ರಭಾವ ಬೀರುವುದು. ರಾಷ್ಟ್ರೀಯವಾದಿಗಳು ಮೊದಲಿಗೆ, ಭಾರತದಲ್ಲಿನ ವಾಸ್ತವ ಪರಿಸ್ಥಿತಿಗಳು ಬ್ರಿಟಿಷರಿಗೆ ನಿಜವಾಗಿಯೂ ಗೊತ್ತೇ ಇಲ್ಲ ಎಂದು ನಂಬಿದ್ದರು. ಆದ್ದರಿಂದ ಬ್ರಿಟಿಷ್ ಜನತೆಗೂ, ರಾಜಕೀಯ ಧುರೀಣರಿಗೂ ಮನವಿಗಳನ್ನೂ ಬಿನ್ನಹಗಳನ್ನೂ ಕಳಿಸುವುದರ ಮೂಲಕ ಮತ್ತು ಇಂಗ್ಲೆಂಡಿನಲ್ಲಿ ಸಕ್ರಿಯವಾದ ರಾಜಕೀಯ ಪ್ರಚಾರವನ್ನು ನಡೆಸುವುದರ ಮೂಲಕ, ಅವರು ಸತ್ಯಾಂಶವನ್ನು ತಿಳಿದುಕೊಳ್ಳುವಂತೆ ಮಾಡಲು ಪ್ರಯತ್ನಿಸಿದರು. ಪ್ರಮುಖರಾಗಿದ್ದ ಭಾರತೀಯ ನಾಯಕರನ್ನು ಬ್ರಿಟನ್ನಿಗೆ ನಿಯೋಗ ಕಳುಹಿಸಲಾಯಿತು. 1889 ರಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ಬ್ರಿಟಿಷ್ ಸಮಿತಿಯೊಂದು ರೂಪುಗೊಂಡಿತು. 1890 ರಲ್ಲಿ ಈ ಸಮಿತಿಯು **ಇಂಡಿಯಾ** ಎಂಬ ನಿಯತಕಾಲಿಕವನ್ನು ಪ್ರಾರಂಭಿಸಿತು. ದಾದಾಭಾಯಿ ನವರೋಜಿ ಅವರು ತಮ್ಮ ಜೀವನದ ಬಹುಭಾಗವನ್ನೂ, ತಮ್ಮ ವರಮಾನದ ಬಹುಭಾಗವನ್ನೂ ಬ್ರಿಟನ್ನಿನಲ್ಲಿ ಅಲ್ಲಿನ ಜನತೆ ಮತ್ತು ರಾಜಕೀಯ ವ್ಯಕ್ತಿಗಳ ನಡುವೆ ಪ್ರಚಾರಕಾರ್ಯ ಮಾಡುವುದರಲ್ಲೇ ಸವೆಸಿದರು.

ಮೊದಲಿನ ರಾಷ್ಟ್ರೀಯವಾದಿಗಳು ನ್ಯಾಯಬದ್ಧ ಚಳುವಳಿಯಲ್ಲಿ ಮಾತ್ರವೇ ನಂಬಿಕೆ ಇಟ್ಟುಕೊಂಡಿದ್ದರಾದರೂ, ಈ ಮಿತವಾದ ಆಧಾರದ ಮೇಲೆ ಕೂಡ ವರ್ತಮಾನ ಪತ್ರಿಕೆಗಳ ಮೂಲಕವಾಗಿ ಹೊರತು, ರಾಷ್ಟ್ರವ್ಯಾಪಿಯಾದ ಅಥವಾ ನಿರಂತರವಾದ ಚಳುವಳಿಗಳನ್ನು ವ್ಯವಸ್ಥೆಮಾಡುವುದಕ್ಕೆ ಅಸಮರ್ಥರಾದರು. ಇದಕ್ಕೆ ಸ್ವಲ್ಪಮಟ್ಟಿಗೆ ಕಾರಣ ಹಣದ ಮುಗ್ಗಟ್ಟು ವಿಪರೀತವಾಗಿದ್ದದ್ದು. ಪದೇಪದೇ

ಹಣವಿಲ್ಲದ ಪರಿಸ್ಥಿತಿ ಅವರಿಗೆ ಒದಗುತ್ತಿತ್ತು. ಶ್ರೀಮಂತರಾಗಿದ್ದ ಭಾರತೀಯರು-ವರ್ತಕರು, ಕೈಗಾರಿಕೋದ್ಯಮಿಗಳು ಮತ್ತು ಜಮೀನ್ದಾರರು-ಇನ್ನೂ ರಾಷ್ಟ್ರೀಯ ಚಳುವಳಿಗೆ ಆರ್ಥಿಕ ಬೆಂಬಲ ಕೊಟ್ಟಿರಲಿಲ್ಲ. ಅನೇಕ ರಾಜಕೀಯ ನಾಯಕರು ತಮ್ಮ ಸ್ವಂತದ ಸಂಪಾದನೆಯಲ್ಲೇ ಬದುಕಬೇಕಾಗಿತ್ತು. ಆ ವರಮಾನವೋ ಅತ್ಯಲ್ಪವಾಗಿರುತ್ತಿತ್ತು. ನಿದರ್ಶನಕ್ಕೆ ಹೇಳುವುದಾದರೆ ಸುರೇಂದ್ರನಾಥ ಬ್ಯಾನರ್ಜಿ ಮತ್ತು ಗೋಪಾಲಕೃಷ್ಣ ಗೋಖಲೆ ಬಹು ಅಲ್ಪ ವರಮಾನದ ಉಪಾಧ್ಯಾಯ ವೃತ್ತಿಯಿಂದ ಬದುಕುತ್ತಿದ್ದರು. ತಿಲಕರು ನ್ಯಾಯಶಾಸ್ತ್ರ ವಿದ್ಯಾರ್ಥಿಗಳಿಗಾಗಿ ಒಂದು ಖಾಸಗೀ ತರಬೇತಿ ಶಾಲೆ ನಡೆಸುತ್ತಿದ್ದರು. ಮೊದಲಿನ ರಾಷ್ಟ್ರೀಯವಾದಿಗಳಲ್ಲಿ ಹೆಚ್ಚು ಜನ ವಕೀಲರು ಮತ್ತು ಪತ್ರಿಕೋದ್ಯಮಿಗಳೇ ಪ್ರಧಾನವಾಗಿ ಇದ್ದುದಕ್ಕೆ-ಅವೆರಡೂ ಸ್ವತಂತ್ರ ವೃತ್ತಿಗಳು-ಇದು ಸ್ವಲ್ಪಮಟ್ಟಿನ ಕಾರಣವನ್ನು ಕೊಡುತ್ತದೆ.

## ಜನಸಾಮಾನ್ಯರ ಪಾತ್ರ

ಮೊದಲಿನ ರಾಷ್ಟ್ರೀಯತಾ ಚಳುವಳಿಯ ಮೂಲ ದೌರ್ಬಲ್ಯ ಇದ್ದದ್ದು ಅದು ಹಾಕಿಕೊಂಡಿದ್ದ ಸಂಕುಚಿತವಾದ ಸಾಮಾಜಿಕ ತಳಹದಿಯಲ್ಲಿ. ಇನ್ನೂ ಚಳುವಳಿ ವ್ಯಾಪಕವಾಗಿ ಜನರ ಮನಸ್ಸಿಗೆ ತಟ್ಟಿರಲಿಲ್ಲ. ಅದರ ಪ್ರಭಾವ ವಲಯವು ನಗರಗಳ ಸುಶಿಕ್ಷಿತ ಜನರಿಗೆ ಮಾತ್ರ ಸೀಮಿತವಾಗಿತ್ತು. ಮುಖಂಡತ್ವವಾದರೋ ಮುಖ್ಯವಾಗಿ ವಕೀಲರು, ಡಾಕ್ಟರು, ಪತ್ರಿಕೋದ್ಯೋಗಿಗಳು ಮತ್ತು ಉಪಾಧ್ಯಾಯರ ವರ್ಗಗಳಿಗೆ ಮೀಸಲಾಗಿದ್ದುವು. ಎಲ್ಲೋ ಕೆಲವರು ವರ್ತಕರೂ ಅವರಲ್ಲಿ ಸೇರಿರುತ್ತಿದ್ದರು.

ನಾಯಕರಿಗೆ ಸಾಮಾನ್ಯ ಜನತೆಯ ಬಗೆಗೆ ರಾಜಕೀಯ ವಿಶ್ವಾಸ ಇರಲಿಲ್ಲ. ಭಾರತದ ಜನ ಆಧುನಿಕ ರಾಜಕೀಯದಲ್ಲಿ ಭಾಗವಹಿಸಲು ಮತ್ತು ಅಂದಿನ ಅತ್ಯಂತ ಬಲಿಷ್ಠ ಸಾಮ್ರಾಜ್ಯಶಾಹಿಯೆದುರು ಹೋರಾಡಲು ಬೇಕಾಗುವ ಗುಣ ಮತ್ತು ಸಾಮರ್ಥ್ಯಗಳನ್ನು ಹೊಂದಿಲ್ಲ ಎಂದೇ ಅವರ ನಂಬಿಕೆಯಾಗಿತ್ತು. ಸಕ್ರಿಯವಾದ ರಾಜಕೀಯ ಹೋರಾಟದ ವ್ಯವಸ್ಥೆಯ ಮಾರ್ಗದಲ್ಲಿದ್ದ ಕಷ್ಟಗಳನ್ನು ವರ್ಣಿಸುತ್ತಾ, ಗೋಖಲೆ "ದೇಶದಲ್ಲಿ ಕೊನೆಯಿಲ್ಲದ ಭಾಗ ವಿಭಾಗಗಳು, ಚಿಂತನೆ ಮತ್ತು ಭಾವನೆಗಳಲ್ಲಿ ಹಳೆಯ ಮಾದರಿಗಳಿಗೇ ಜೋತುಬಿದ್ದು ಅಜ್ಞಾನಿಗಳಾದ ಅಸಂಖ್ಯಾತ ಜನವರ್ಗ, ಬದಲಾವಣೆಗಳನ್ನು ದ್ವೇಷಿಸಿ, ಅವುಗಳನ್ನು ಅರ್ಥಮಾಡಿಕೊಳ್ಳಲಾರದ ಪರಿಸ್ಥಿತಿ"ಗಳನ್ನು ಎತ್ತಿ ತೋರಿಸಿದರು. ಮಿತಗಾಮಿಗಳಾಗಿದ್ದ ನಾಯಕರು ಇಲ್ಲಿ ತೀವ್ರವಾದ ತಪ್ಪು ಮಾಡಿದರು ಎಂದು ಹೇಳಬೇಕು. ಅವರು ಜನಸಾಮಾನ್ಯರ ಸಾಮಾಜಿಕ ಸಾಂಸ್ಕೃತಿಕ ಮತ್ತು ರಾಜಕೀಯ ಹಿಂದುಳಿಕೆಯನ್ನೂ ಗಮನಿಸಿದರು. ಆದರೆ ಸಾಮ್ರಾಜ್ಯಶಾಹಿಗೆದುರಾಗಿ ದೀರ್ಘಕಾಲದ ಹೋರಾಟ ನಡೆಸಲು ಅಗತ್ಯವಾದ ವೀರ ತ್ಯಾಗಗಳು ಜನಸಾಮಾನ್ಯರಲ್ಲಿ ಮಾತ್ರವೇ ಇದ್ದುವು ಎಂಬುದನ್ನು ಅವರು ಕಾಣದಾದರು. ಅವರ ಸಾಂಸ್ಕೃತಿಕ ರಾಜಕೀಯ ಹಿಂದುಳಿಕೆಯನ್ನು ಹೋರಾಟದ ಮಾರ್ಗದಲ್ಲೇ ಜೊತೆಜೊತೆಗೇ ಪರಿಹರಿಸಬಹುದು ಎಂಬುದನ್ನೂ ಅವರು ಮನವರಿಕೆ ಮಾಡಿಕೊಳ್ಳಲಿಲ್ಲ. ಭಾರತೀಯ ಸಮಾಜದ ವಿಭಿನ್ನ ಅಂಶಗಳನ್ನು ಒಂದು ರಾಷ್ಟ್ರವಾಗಿ ಮೊದಲು ಬೆಸೆದ ನಂತರವೇ, ಸಾಮ್ರಾಜ್ಯಶಾಹಿಗೆದುರಾಗಿ

ಉಗ್ರರೀತಿಯ ಜನಸಮೂಹದ ಹೋರಾಟವನ್ನು ಪ್ರಾರಂಭಿಸಬಹುದು ಎಂಬುದನ್ನು ಅವರು ನಂಬಿದರು. ಆದರೆ ವಾಸ್ತವವಾಗಿ ಅವರು ಬಯಸಿದಂತೆ ರಾಷ್ಟ್ರವು ರೂಪುಗೊಳ್ಳಬೇಕಾಗಿದ್ದುದು, ಹೋರಾಟದ ಮಾರ್ಗದಲ್ಲಿಯೇ. ಜನ ಸಾಮಾನ್ಯರ ಬಗೆಗೆ ಈ ತಪ್ಪು ಕಲ್ಪನೆಗೆ ಕಾರಣ ಅವರೇ ಜನಸಾಮಾನ್ಯರಿಂದ ಬೇರೆಯಾಗಿದ್ದದ್ದು. ಇದರಿಂದಾಗಿ ರಾಷ್ಟ್ರೀಯತಾ ಚಳುವಳಿಯ ಮೊದಲ ಹಂತದಲ್ಲಿ ಜನಸಾಮಾನ್ಯರು ಶುದ್ಧಾಂಗವಾಗಿ ನಿಷ್ಕ್ರಿಯ ಪಾತ್ರ ವಹಿಸಬೇಕಾಯಿತು. ಅದು ರಾಜಕೀಯವಾಗಿ ಮಿತಗಾಮಿತ್ವಕ್ಕೂ ದಾರಿಮಾಡಿತು. ಜನತೆಯ ಬೆಂಬಲವಿಲ್ಲದ ಅವರು, ವಿದೇಶೀ ಆಳುಗರಿಗೆ ಸವಾಲು ಹಾಕಲು ಸಮಯ ಇನ್ನೂ ಪಕ್ವವಾಗಿಲ್ಲ ಎಂದು ಭಾವಿಸಿದರು. ಆಗಲೇ ಸವಾಲು ಹಾಕಿದರೆ ಅದು ಅಕಾಲಿಕ ಸಿಡಿತವಾಗುತ್ತದೆ ಎಂಬುದು ಅವರ ಅಭಿಮತವಾಗಿತ್ತು. ಗೋಖಲೆ ಹೇಳಿದಹಾಗೆ "ಸರಕಾರವು ಎಷ್ಟು ಅಗಾಧವಾದ ಶಕ್ತಿಯನ್ನು ಹೊಂದಿದೆ ಎಂಬುದು ನಿಮಗೆ ಗೊತ್ತಿಲ್ಲ. ನೀವು ಸೂಚಿಸುವಂತಹ ಏನನ್ನೇ ಆದರೂ ಈಗ ಕಾಂಗ್ರೆಸ್ ಕಾರ್ಯ ರೂಪಕ್ಕೆ ತಂದರೆ, ಅದನ್ನು ಐದೇ ನಿಮಿಷಗಳಲ್ಲಿ ತಲೆಕೆಳಗು ಮಾಡಿ ಉರುಳಿಸಲು ಸರಕಾರಕ್ಕೆ ಏನೇನೂ ಕಷ್ಟವಿಲ್ಲ." ಮುಂದಿನ ರಾಷ್ಟ್ರೀಯವಾದಿಗಳು ಮಿತಗಾಮಿಗಳೊಂದಿಗೆ ಭಿನ್ನಾಭಿಪ್ರಾಯ ತಳೆದದ್ದು ಈ ವಿಚಾರದಲ್ಲಿಯೇ. ಹೋರಾಟ ನಡೆಸಲು ಭಾರತದ ಜನತೆಗೆ ಇರುವ ಅಗಾಧವಾದ ಶಕ್ತಿ ಸಾಮರ್ಥ್ಯಗಳಲ್ಲಿ ಪೂರ್ಣ ನಂಬಿಕೆಯಿದ್ದ ಅವರು ಸಾಮ್ರಾಜ್ಯ ಶಾಹಿಗೆದುರಾಗಿ ಬಲವಾದ ಜನಯುದ್ಧದ ಯೋಜನೆಯನ್ನು ಸರಕಾರವು ಅಡಗಿಸಲು ಪ್ರಯತ್ನಿಸಿದರೆ, ಅದು ಚಳುವಳಿಯನ್ನು ಬುಡಮೇಲು ಮಾಡುವುದಿಲ್ಲ, ಬದಲಾಗಿ, ಜನರಿಗೆ ಪಾಠ ಕಲಿಸುತ್ತದೆ, ಸಾಮ್ರಾಜ್ಯಶಾಹಿಯನ್ನು ಕಿತ್ತೊಗೆಯುವ ಅವರ ದೃಢ ನಿರ್ಧಾರವನ್ನು ಇನ್ನೂ ಬಲಪಡಿಸುತ್ತದೆ ಎಂದು ಅವರು ನಂಬಿದರು.

ಅಂದ ಮಾತ್ರಕ್ಕೆ ಮೊದಲಿನ ರಾಷ್ಟ್ರೀಯವಾದಿಗಳು ಇಟ್ಟುಕೊಂಡಿದ್ದ ಸೀಮಿತ ಆಧಾರದಿಂದ, ಅವರು ತಮ್ಮ ಗುಂಪಿಗೆ ಸೇರಿಕೊಂಡಿದ್ದ ಸಾಮಾಜಿಕ ಪಂಗಡಗಳು ಮತ್ತು ವರ್ಗಳ ಹಿತರಕ್ಷಣೆಗಾಗಿ ಮಾತ್ರ ದುಡಿಯುವುದು ಎಂಬ ಕಿರಿದಾದ ಉದ್ದೇಶ ಇಟ್ಟುಕೊಂಡಿದ್ದರು ಎಂಬ ನಿರ್ಣಯಕ್ಕೆ ಬರುವುದು ತಪ್ಪಾಗುತ್ತದೆ. ಅವರು ಕಾರ್ಯನಿಯೋಜನೆ ಮತ್ತು ನೀತಿಗಳು ಭಾರತದ ಜನತೆಯ ಎಲ್ಲ ವರ್ಗಗಳ ಹಿತರಕ್ಷಣೆಯನ್ನೂ ಪ್ರತಿನಿಧಿಸಿದ್ದುವು, ವಸಾಹತುಶಾಹೀ ಸುಲಿಗೆಯ ವಿರುದ್ಧ ರಾಷ್ಟ್ರ ವ್ಯಾಪಿಯಾದ ಆಸಕ್ತಿಗಳನ್ನು ಹೊಂದಿದ್ದುವು, ಆದರೆ ಸಾಮ್ರಾಜ್ಯಶಾಹಿ ವಿರೋಧೀ ಹೋರಾಟದಲ್ಲಿ ಎಲ್ಲ ಜನರನ್ನೂ ತೊಡಗಿಸಲು ಅವರು ವಿಫಲರಾದರು. ಪರಿಣಾಮ ವಾಗಿ ಈ ನೀತಿಯು ಸಾಮ್ರಾಜ್ಯಶಾಹಿಯೊಂದಿಗೆ ರಾಜಿಮಾಡಿಕೊಳ್ಳಬೇಕಾಯಿತು, ಅನೇಕವೇಳೆ ಪ್ರಭುತ್ವಕ್ಕೆ ವಿಧೇಯತೆ ತೋರಿಸಬೇಕು ಎಂದು ಮಾತಾಡುವಷ್ಟರ ಮಟ್ಟಿಗೂ ಹೋಗಬೇಕಾಯಿತು.

## ಅಧಿಕಾರಿಗಳ ಮನೋಭಾವ

ಮೊದಲಿನಿಂದಲೂ ಸರಕಾರವು ರಾಷ್ಟ್ರೀಯ ಶಕ್ತಿಗಳ ವಿಕಾಸಕ್ಕೆ ವಿರೋಧಿಯಾಗಿಯೇ ಇತ್ತು. 1878 ರಲ್ಲಿ ಭಾರತೀಯ ಪತ್ರಿಕಾರಂಗವು ವಸಾಹತುಶಾಹೀ ನೀತಿಗಳನ್ನು

ಟೀಕಿಸುವ ಮೂಲಕ ರಾಷ್ಟ್ರೀಯ ಪ್ರಜ್ಞೆಯನ್ನು ಪ್ರಸಾರಮಾಡಲು ಹೊರಟಾಗ ಸರಕಾರ ಅದರ ಮೇಲೆ ಬರಸಿಡಿಲಿನಂತೆ ಎರಗಿತು. ಇಂಡಿಯನ್ ನ್ಯಾಷನಲ್ ಕಾಂಗ್ರೆಸಿನ ಸ್ಥಾಪನೆಯನ್ನು ಡಫ್ರಿನ್ ಶಂಕೆಯಿಂದಲೇ ನೋಡಿದ್ದನು. "ಸರಕಾರದ ಕರ್ತವ್ಯಗಳು ಮತ್ತು ನೀತಿಗಳನ್ನೂ, ಮಂಜೂರುಮಾಡಲು ಅಸಾಧ್ಯವಾದ ಬೇಡಿಕೆಗಳನ್ನು ರೂಪಿಸುವುದನ್ನೂ" ಅವನು ಗಮನಿಸಿದ್ದನು. ಕಾಂಗ್ರೆಸ್ಸು ರಾಜಕೀಯ ವಿಚಾರಗಳಿಗೆ ಬದಲಾಗಿ ಸಾಮಾಜಿಕ ವಿಚಾರಗಳಿಗೆ ಮನಗೊಡುವುದು ಒಳ್ಳೆಯದೆಂದು ಹ್ಯೂಮನಿಗೆ ಸೂಚಿಸಿ ಡಫ್ರಿನ್ ಚಳುವಳಿಯ ಗಮನವನ್ನು ಬೇರೆಡೆಗೆ ತಿರುಗಿಸಲು ಯತ್ನಿಸಿದನು.* ಆದರೆ ಕಾಂಗ್ರೆಸ್ ನಾಯಕರು ಬದಲಾವಣೆ ಮಾಡಲು ಒಪ್ಪಲಿಲ್ಲ. ಇನ್ನೂ ಬ್ರಿಟಿಷ್ ಅಧಿಕಾರಿಗಳು ತಮ್ಮ ವಿರೋಧವನ್ನು ಸ್ಪಷ್ಟವಾಗಿ ತೆರೆದು ತೋರಿಸುತ್ತಿರಲಿಲ್ಲ. ರಾಷ್ಟ್ರೀಯ ಕಾಂಗ್ರೆಸ್ಸು ಎಲ್ಲೋ ಬೆರಳೆಣಿಕೆಯಷ್ಟು ಜನ ರಾಜಕೀಯ ಪ್ರಜ್ಞೆಯಿದ್ದ ಭಾರತೀಯರನ್ನು ಸೇರಿಸಿಕೊಂಡು ಶೈಕ್ಷಣಿಕವಾದ ಚರ್ಚೆಗಳಲ್ಲಿ ತೊಡಗಿರುತ್ತದೆ ಎಂದು ಅವರು ನಿರೀಕ್ಷಿಸಿದ್ದರು. ರಾಷ್ಟ್ರೀಯ ನಾಯಕರಲ್ಲಿ ಅತ್ಯಂತ ಪ್ರತಿಭಾವಂತರಾಗಿದ್ದ ಕೆಲವರನ್ನು ಲೆಜಿಸ್ಲೇಟಿವ್ ಕೌನ್ಸಿಲಿನ ಹಾಗೂ ನ್ಯಾಯಾಂಗ ಮತ್ತಿತರ ಕ್ಷೇತ್ರಗಳ ಅಧಿಕ ವೇತನದ ಸ್ಥಾನಗಳಿಗೆ ನೇಮಿಸಿಕೊಳ್ಳುವುದಕ್ಕೂ ಅವರು ಸಮ್ಮತಿಯುಳ್ಳವರಾಗಿದ್ದರು.

ಆದರೆ ಒಂದು ವಿಷಯ ಬೇಗನೆ ಸ್ಪಷ್ಟವಾಯಿತು. ರಾಷ್ಟ್ರೀಯ ಕಾಂಗ್ರೆಸ್ಸಾಗಲಿ, ಇತರ ರಾಷ್ಟ್ರೀಯ ಸಂಸ್ಥೆಗಳು, ವ್ಯಕ್ತಿಗಳು ಹಾಗೂ ವೃತ್ತಪತ್ರಿಕೆಗಳಾಗಲಿ, ಅಂತಹ ಸೀಮಿತವಾದ ಪಾತ್ರವನ್ನು ಒಪ್ಪಿಕೊಳ್ಳಲು ಸಿದ್ಧರಾಗಿರಲಿಲ್ಲ. ವೃತ್ತಪತ್ರಿಕೆಗಳು ಜನಸಾಮಾನ್ಯರಿಗೆ ಮುಟ್ಟುತ್ತಿದ್ದುವು, ಕಾಂಗ್ರೆಸ್ ಭಾರತೀಯ ಭಾಷೆಗಳಲ್ಲಿ ಕರಪತ್ರಗಳನ್ನು ಪ್ರಕಟಿಸಲು ತೊಡಗಿತ್ತು. ಸಾರ್ವಜನಿಕ ಸಭೆಗಳಲ್ಲಿ ರಾಷ್ಟ್ರೀಯತಾ ಸಂದೇಶವನ್ನು ಬೋಧಿಸುವ ಕೆಲಸ ಪ್ರಾರಂಭವಾಗಿತ್ತು. ಜನಸಾಮಾನ್ಯರಲ್ಲಿ ರಾಜಕೀಯಪ್ರಜ್ಞೆ ಹರಡುವುದನ್ನು ಬ್ರಿಟಿಷರು ಸಹಿಸದಾದರು, ಅವರ ದೃಷ್ಟಿಯಲ್ಲಿ ಅದು ರಾಜದ್ರೋಹವಲ್ಲದೆ ಬೇರೆಯಾಗಿರಲಿಲ್ಲ. ರಾಷ್ಟ್ರೀಯ ಆರ್ಥಿಕ ಚಳುವಳಿಯು ಸಾಮ್ರಾಜ್ಯಶಾಹಿಯ ನಿಜವಾದ ಸುಲಿಗೆಕೋರ ಮುಖವನ್ನು ಬಯಲಿಗೆಳೆಯಿತು. ಭಾರತದ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದ ಜಾರ್ಜ್ ಹ್ಯಾಮಿಲ್ಟನ್ 1900ರಲ್ಲಿ ದಾದಾಭಾಯಿ ನವರೋಜಿ ಅವರಿಗೆ ಆಕ್ಷೇಪಿಸಿ ಹೀಗೆ ಬರೆದನು: "ನೀವು ಬ್ರಿಟಿಷ್ ಆಳಿಕೆಗೆ ಪ್ರಾಮಾಣಿಕವಾಗಿ ಬೆಂಬಲ ಕೊಡುತ್ತೀರೆಂದು ಹೇಳಿಕೊಳ್ಳುತ್ತೀರಿ; ಆದರೆ ಆ ಆಳಿಕೆಯಿಂದ ಬೇರ್ಪಡಿಸುವುದಕ್ಕೆ ಸಾಧ್ಯವೇ ಇಲ್ಲದ ಪರಿಸ್ಥಿತಿಗಳು ಮತ್ತು ಪರಿಣಾಮಗಳನ್ನು ಮಾತ್ರ ಉಗ್ರವಾಗಿ ತಿರಸ್ಕರಿಸುತ್ತೀರಿ." ಇದಕ್ಕಿಂತ ಮುಂಚೆ 1886 ರಲ್ಲಿ ಡಫ್ರಿನ್ ರಾಷ್ಟ್ರೀಯ ಪತ್ರಿಕೋದ್ಯಮದ ಪಾತ್ರವನ್ನು ಕುರಿತು ಹೀಗೆ ಬರೆದಿದ್ದನು: "ಈ

---

*ಡಫ್ರಿನ್ನನ ಬುದ್ಧಿವಾದದ ಮೇರೆಗೆ ಕಾಂಗ್ರೆಸ್ಸು ಸಾಮಾಜಿಕ ವಿಚಾರಗಳಿಂದ ರಾಜಕೀಯ ವಿಚಾರಗಳತ್ತ ತಿರುಗಿತು ಎಂಬುದಾಗಿ ವ್ಯಾಪಕವಾಗಿ ಪ್ರಚಾರವಾಗಿರುವ ಅಭಿಪ್ರಾಯವನ್ನು ತಿದ್ದಿಕೊಳ್ಳಬೇಕು. ಈ ತಪ್ಪು ಅಭಿಪ್ರಾಯವನ್ನು ಮೊದಲಸಾರಿ ಡಬ್ಲ್ಯು.ಸಿ. ಬ್ಯಾನರ್ಜಿ ಅವರು 1898 ರಲ್ಲಿ ಒಂದು ಪುಸ್ತಕದ ಮುನ್ನುಡಿಯಲ್ಲಿ ಸೂಚಿಸಿದರು. ಆಗಿನಿಂದ ಇತರ ಲೇಖಕರು ಅದನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಡಫ್ರಿನನ ಖಾಸಗೀ ಕಾಗದಪತ್ರಗಳಿಂದ ಸತ್ಯಾಂಶವು ಬ್ಯಾನರ್ಜಿಯವರ ದುರ್ಬಲ ಸ್ಮೃತಿಗೆ ವ್ಯತಿರಿಕ್ತವಾದ ಸ್ವರೂಪದ್ದಾಗಿತ್ತೆಂದು ತಿಳಿದುಬರುತ್ತದೆ.

ರೀತಿಯಾಗಿ ಈ ಪತ್ರಿಕೆಗಳನ್ನು ಓದುವ ಜನರ ಮನಸ್ಸಿನಲ್ಲಿ.....ನಾವೆಲ್ಲರೂ ಸಾಮಾನ್ಯವಾಗಿ ಮಾನವತೆಯ, ವಿಶೇಷವಾಗಿ ಭಾರತದ ಶತ್ರುಗಳು ಎಂಬ ಪ್ರಾಮಾಣಿಕವಾದ ನಂಬಿಕೆ ಹುಟ್ಟುತ್ತಿದೆ."

ಈಗ ಬ್ರಿಟಿಷ್ ಅಧಿಕಾರಿಗಳು ಬಹಿರಂಗವಾಗಿಯೇ ರಾಷ್ಟ್ರೀಯ ಕಾಂಗ್ರೆಸನ್ನೂ ಇತರ ರಾಷ್ಟ್ರೀಯತಾ ವಕ್ತಾರರನ್ನೂ ಟೀಕಿಸಿ ಖಂಡಿಸತೊಡಗಿದರು. ರಾಷ್ಟ್ರೀಯತಾ ವಾದಿಗಳಿಗೆ "ಕೃತಘ್ನ ಬಾಬುಗಳು", "ರಾಜದ್ರೋಹಿ ಬ್ರಾಹ್ಮಣರು" ಮತ್ತು "ಕ್ರೂರಿಗಳಾದ ದುಷ್ಟರು" ಎಂಬುದಾಗಿ ಹೆಸರು ಹಚ್ಚಲಾಯಿತು. ಕಾಂಗ್ರೆಸನ್ನು "ರಾಜದ್ರೋಹದ ಕಾರ್ಖಾನೆ" ಎಂದೂ ಕಾಂಗ್ರೆಸಿಗರನ್ನು "ಅಧಿಕಾರದಲ್ಲಿ ನಿರಾಶೆ ಗೊಂಡ ಅಭ್ಯರ್ಥಿಗಳು ಮತ್ತು ತಮ್ಮನ್ನಲ್ಲದೆ ಬೇರೆ ಯಾರನ್ನೂ ಪ್ರತಿನಿಧಿಸದ ಅತೃಪ್ತ ವಕೀಲರು" ಎಂದೂ ವರ್ಣಿಸಲಾಯಿತು. 1887 ರಲ್ಲಿ ಒಂದು ಬಹಿರಂಗ ಭಾಷಣದಲ್ಲಿ ಡಫ್ರಿನನು ರಾಷ್ಟ್ರೀಯ ಕಾಂಗ್ರೆಸ್ಸು "ಜನತೆಯಲ್ಲಿ ಸೂಕ್ಷ್ಮದರ್ಶಕದಿಂದ ನೋಡಬೇಕಾದಷ್ಟು ಅಲ್ಪಸಂಖ್ಯಾತರನ್ನು ಮಾತ್ರ ಪ್ರತಿನಿಧಿಸುತ್ತಿದೆ" ಎಂದು ಹಳಿದನು. ಕಾಂಗ್ರೆಸ್ ನಾಯಕರು "ರಾಜದ್ರೋಹದಿಂದ ಮತ್ತು ಇಬ್ಬಂದಿ ಲಕ್ಷಣದಿಂದ ಕೂಡಿದವರು" ಎಂದು ಜಾರ್ಜ್ ಹ್ಯಾಮಿಲ್ಟನ್ ಆಪಾದಿಸಿದನು. ಬ್ರಿಟಿಷ್ ಆಳಿಕೆಯನ್ನು ಬಯಲಿಗೆಳೆದುದಕ್ಕಾಗಿ ಅವನು ದಾದಾಭಾಯಿ ನವರೋಜಿ ಯವರ ಮೇಲೆ ಎಷ್ಟು ವಿಷಕಾರಿದನೆಂದರೆ, ಆ ಮಹಾನಾಯಕನನ್ನು ತೀರಾ ಕೆಳಮಟ್ಟದಲ್ಲಿ ಬಯ್ಯಲು ಮುಂದಾದನು. ಇಂಗ್ಲೆಂಡಿನಲ್ಲಿ ವಾಸಿಸಿದುದರಿಂದ ಮತ್ತು ತೀವ್ರಗಾಮಿಗಳೂ ಸಮಾಜವಾದಿಗಳೂ ಆಗಿದ್ದ ಬ್ರಿಟಿಷ್ ನಾಯಕರೊಂದಿಗೆ ಸಹವಾಸ ಮಾಡಿದ್ದರಿಂದ "ಮೊದಲು ಇದ್ದಿರಬಹುದಾದಷ್ಟು ವಿವೇಕ ಮತ್ತು ಬುದ್ಧಿಶಕ್ತಿಗಳನ್ನೂ ಅವರು ಕಳೆದುಕೊಂಡಿದ್ದಾರೆ" ಎಂದು ಹೀನಾಯವಾಗಿ ಟೀಕಿಸಿದನು. ವೈಸರಾಯ್ ಆಗಿದ್ದ ಕರ್ಜನ್ (Curzon) 1900 ರಲ್ಲಿ "ಕಾಂಗ್ರೆಸ್ಸು ತನ್ನ ಅವಸಾನದತ್ತ ತತ್ತರಿಸುತ್ತಿದೆ. ಭಾರತದಲ್ಲಿರುವಾಗಲೇ ನಾನೇ ಅದರ ಶಾಂತಿಯುತವಾದ ಮರಣಕ್ಕೆ ನೆರವಾಗಬೇಕು ಎಂಬುದೇ ನನ್ನ ಮಹತ್ವದ ಆಕಾಂಕ್ಷೆಗಳಲ್ಲಿ ಒಂದು" ಎಂದು ಘೋಷಿಸಿದನು. ಅವನು ಕಾಂಗ್ರೆಸನ್ನು "ಆ ಕೊಳಕುವಸ್ತು" ಎಂದು ಬಣ್ಣಿಸಿದನು. ಕೆಲವರು ಬ್ರಿಟಿಷ್ ಪ್ರಚಾರಕರು ಕಾಂಗ್ರೆಸ್ಸು ರಷ್ಯನ್ ಚಿನ್ನವನ್ನು ಪಡೆಯುತ್ತಿದೆ ಎಂದೂ ಆಪಾದಿಸಿದ್ದುಂಟು!

ಅಧಿಕಾಧಿಕವಾಗಿ ಬೆಳೆಯುತ್ತಿದ್ದ ರಾಷ್ಟ್ರೀಯತಾ ಚಳುವಳಿಯನ್ನು ಎದುರಿಸಲು ಬ್ರಿಟಿಷ್ ಅಧಿಕಾರಿಗಳು ತಮ್ಮ "ಒಡೆದು ಆಳು"ವ ನೀತಿಯನ್ನು ಇನ್ನಷ್ಟು ಬಲವಾಗಿ ಮುನ್ನೂಕಿದರು. ಭಾರತದ ಜನ ಹೆಚ್ಚುಹೆಚ್ಚು ಐಕ್ಯತೆ ಸಾಧಿಸಿದಂತೆಲ್ಲಾ ತಮ್ಮ ಆಳಿಕೆಗೆ ಗಂಡಾಂತರ ಹೆಚ್ಚು ಎಂದು ಅವರಿಗೆ ಮನವರಿಕೆಯಾಯಿತು. 1897 ರಲ್ಲಿ ವೈಸರಾಯ್ ಆಗಿದ್ದ ಎಲ್ಗಿನ್ನನಿಗೆ (Elgin) ಜಾರ್ಜ್ ಹ್ಯಾಮಿಲ್ಟನ್ ಹೀಗೆ ಬರೆದನು: "ನಮ್ಮ ಆಳಿಕೆಗೆ ವಿರುದ್ಧವಾಗಿ ದಿನೇದಿನೇ ಬಲಗೊಳ್ಳುತ್ತಿರುವ ದೇಶೀಯ ಅಭಿಪ್ರಾಯ, ಜನಾಂಗಗಳು ಮತ್ತು ಧರ್ಮಗಳ ಐಕ್ಯತೆಯಿಂದಾಗಿ ನನಗೆ ಮುಂದೇನಾಗಬಹುದೆಂದು ಹೆದರಿಕೆಯುಂಟಾಗಿದೆ." ಆದ್ದರಿಂದ ಬ್ರಿಟಿಷ್ ಅಧಿಕಾರಿ ಗಳು ಸಯ್ಯಿದ್ ಅಹಮದ್ ಖಾನ್ ಮತ್ತು ರಾಜ ಶಿವಪ್ರಸಾದ್ ಮೊದಲಾದ ಬ್ರಿಟಿಷ್

ಪರವಾಗಿದ್ದ ವ್ಯಕ್ತಿಗಳಿಗೆ ಕಾಂಗ್ರೆಸ್ ವಿರೋಧೀ ಚಳುವಳಿಯೊಂದನ್ನು ಪ್ರಾರಂಭಿಸಲು ಪ್ರೋತ್ಸಾಹಕೊಟ್ಟರು. ಅಲ್ಲದೆ, ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಒಂದು ಬಿರುಕನ್ನು ಉಂಟುಮಾಡಲೂ ಅವರು ಪ್ರಯತ್ನಿಸಿದರು. ಸರಕಾರೀ ಕೆಲಸಗಳಿಗೆ ಅವಕಾಶ ಸಿಕ್ಕುವುದರ ಬಗೆಗೆ ವಿದ್ಯಾವಂತ ಭಾರತೀಯರಲ್ಲಿ ಹೊಗೆಯಾಡುತ್ತಿದ್ದ ಜಾತೀಯ ವೈರವನ್ನು ಊದಿ ಉರಿಯೆಬ್ಬಿಸಿದರು. 1857ರ ಕ್ರಾಂತಿಯಾದೊಡನೆಯೇ ಮುಸ್ಲಿಂ ಮೇಲುವರ್ಗದವರನ್ನು ಅದುಮಿಟ್ಟು ಹಿಂದೂ ಮಧ್ಯಮ ಮತ್ತು ಮೇಲುವರ್ಗದವರಿಗೆ ಪಕ್ಷಪಾತ ತೋರಿಸಿದ ಹಾಗೆಯೇ, 1870 ರ ನಂತರ ರಾಷ್ಟ್ರೀಯ ಚಳುವಳಿಯ ವಿರುದ್ಧವಾಗಿ ಮುಸ್ಲಿಂ ಮೇಲುವರ್ಗ ಮತ್ತು ಮಧ್ಯಮವರ್ಗದವರನ್ನು ತಿರುಗಿಸಲು ಪ್ರಯತ್ನಿಸಿದರು. ಹಿಂದಿ ಮತ್ತು ಉರ್ದುಗಳ ವಿಚಾರವಾಗಿದ್ದ ಭಿನ್ನಾಭಿಪ್ರಾಯವನ್ನು ಅವರು ಜಾತೀಯತಾ ದ್ವೇಷಗಳನ್ನು ಉಲ್ಬಣಗೊಳಿಸುವುದಕ್ಕಾಗಿ ಬಹಳ ಜಾಣತನದಿಂದ ಉಪಯೋಗಿಸಿಕೊಂಡರು. ಹಿಂದೂಗಳು ಪ್ರಾರಂಭಿಸಿದ್ದ ಗೋರಕ್ಷಣಾ ಚಳುವಳಿಯನ್ನೂ ಹಾಗೆಯೇ ಬಳಸಿಕೊಳ್ಳಲಾಯಿತು. ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಆಗಿದ್ದ ಕಿಂಬರ್ಲಿ (Kimberley), ವೈಸರಾಯ್ ಆಗಿದ್ದ ಲ್ಯಾನ್ಸ್‌ಡೌನ್ (Lansdowne)ನಿಗೆ 1893 ರ ಆಗಸ್ಟ್ 25 ರಂದು ಈ ಕ್ರಮವು "ಹಿಂದೂಗಳು ಮತ್ತು ಮುಸ್ಲಿಮರು ಒಂದಾಗಬಹುದಾಗಿದ್ದ ಎಲ್ಲ ಸಂದರ್ಭಗಳನ್ನೂ ನಿವಾರಿಸುತ್ತದೆ. ಭಾರತದ ಜನತೆಯ ಐಕ್ಯಕ್ಕಾಗಿ ಕಾಂಗ್ರೆಸ್ಸು ನಡೆಸುತ್ತಿರುವ ಚಳುವಳಿಯ ಬುಡವನ್ನೇ ಕತ್ತರಿಸುತ್ತದೆ." ಬ್ರಿಟಿಷರ "ಒಡೆದು ಆಳು" ನೀತಿಯು ಹಿಂದೂ ಮುಸ್ಲಿಂ ಭಿನ್ನತೆಗೆ ಮಾತ್ರ ಸೀಮಿತವಾಗಿರಲಿಲ್ಲ. ಪರಂಪರಾಗತವಾಗಿ ಊಳಿಗಮಾನ್ಯ ಪದ್ಧತಿಯನ್ನು ಅನುಸರಿಸುತ್ತ ಬಂದಿದ್ದವರನ್ನು ನೂತನ ಬುದ್ಧಿಜೀವಿ ವರ್ಗದವರ ವಿರುದ್ಧವಾಗಿ, ಒಂದು ಪ್ರಾಂತವನ್ನು ಇನ್ನೊಂದು ಪ್ರಾಂತದ ವಿರುದ್ಧವಾಗಿ, ಒಂದು ಜಾತಿಯನ್ನು ಇನ್ನೊಂದು ಜಾತಿಯ ವಿರುದ್ಧವಾಗಿ, ಒಂದು ಪಂಗಡವನ್ನು ಇನ್ನೊಂದರ ವಿರುದ್ಧವಾಗಿ ನಿಲ್ಲಿಸಲು ಅವರು ಪ್ರಯತ್ನಿಸಿದರು. ರಾಷ್ಟ್ರೀಯವಾದಿಗಳಲ್ಲಿಯೇ ತೀರಾ ಸಂಪ್ರದಾಯವಾದಿಗಳಾಗಿದ್ದವರೊಂದಿಗೆ ಅಥವಾ ಮಿತಗಾಮಿಗಳಾಗಿದ್ದವರೊಂದಿಗೆ ಹೆಚ್ಚು ಸ್ನೇಹ ಬೆಳೆಸಿಕೊಂಡು ಅವರ ನಡುವೆಯೇ ಒಡಕು ಉಂಟುಮಾಡುವ ಪ್ರಯತ್ನಕ್ಕೂ ಕೈಹಾಕಿದರು. 1870 ಮತ್ತು 1880 ರ ಸುಮಾರಿನಲ್ಲಿ ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್ ಮೊದಲಾದ ಹಿರಿಯ ಸಂಸ್ಥೆಗಳ ಸದಸ್ಯರನ್ನು ಒಲಿಸಿಕೊಂಡು 'ತೀವ್ರಗಾಮಿ'ಗಳಾದ ಕಾಂಗ್ರೆಸ್ ನಾಯಕರ ವಿರುದ್ಧವಾಗಿ ನಿಲ್ಲಿಸಲು ಪ್ರಯತ್ನಿಸಲಾಯಿತು. 1890 ರಲ್ಲಿ ಹಿಂದಿನ ತೀವ್ರಗಾಮಿಗಳಾಗಿದ್ದ ಡಬ್ಲ್ಯು.ಸಿ. ಬ್ಯಾನರ್ಜಿ, ಜಸ್ಟಿಸ್ ರಾನಡೆ, ಗೋಖಲೆ ಮತ್ತಿತರರನ್ನು 'ಉಗ್ರಗಾಮಿ'ಗಳೆನಿಸಿದ ದಾದಾಭಾಯಿ ನವರೋಜಿ, ಸುರೇಂದ್ರನಾಥ ಬ್ಯಾನರ್ಜಿ ಮುಂತಾದ ನಾಯಕರಿಂದ ಬೇರ್ಪಡಿಸಲು ಪ್ರಯತ್ನ ನಡೆಯಿತು. 1905 ರ ನಂತರ ಮಿತಗಾಮಿಗಳಿಗೂ ಉಗ್ರಗಾಮಿಗಳಿಗೂ ನಡುವೆ ಕಾಂಗ್ರೆಸ್ಸಿನಲ್ಲೇ ಭಿನ್ನಾಭಿಪ್ರಾಯಗಳು ಉಂಟಾದಾಗ ಬ್ರಿಟಿಷ್ ಆಳುಗರು ಅಲ್ಲಿ ಒಂದು ಒಡಕನ್ನು ಉಂಟುಮಾಡಲು ವ್ಯರ್ಥವಾದ ಪ್ರಯತ್ನ ಮಾಡಿದರು.

ಬ್ರಿಟಿಷ್ ಅಧಿಕಾರಿಗಳು ರಾಷ್ಟ್ರೀಯತೆಯ ಬೆಳವಣಿಗೆಯನ್ನು ಹತ್ತಿಕ್ಕಲು ಒಂದು ಕಡೆ ಕಣ್ಣಿಗೆ ಕಾಣುವಂತಹ ರಿಯಾಯಿತಿಗಳನ್ನು ತೋರಿಸಿ, ಇನ್ನೊಂದು ಕಡೆ ದಯೆ ದಾಕ್ಷಿಣ್ಯವಿಲ್ಲದೆ ತುಳಿದು 'ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ತಿ' ನೀತಿಯನ್ನು ಅನುಸರಿಸಿದರು. ಸಿವಿಲ್ ಸರ್ವಿಸಿಗೆ ಸೇರಿಕೊಳ್ಳಲು ಗರಿಷ್ಠ ವಯೋಮಿತಿಯಲ್ಲಿ ರಿಯಾಯಿತಿ ತೋರಿಸಿ, ಇತರ ಸರಕಾರೀ ಹುದ್ದೆಗಳನ್ನು ಹೆಚ್ಚಾಗಿ ಭಾರತೀಯರಿಗೆ ಕೊಡುವ ಆಸೆ ತೋರಿಸಿ, ಸ್ಥಳೀಯ ಪುರಸಭಾ ಆಡಳಿತದ ವ್ಯಾಪ್ತಿಯನ್ನು ವಿಶಾಲಗೊಳಿಸಿ, 1892 ರ 'ಇಂಡಿಯನ್ ಕೌನ್ಸಿಲ್ಸ್ ಆಕ್ಟ್'ನ್ನು ಜಾರಿಗೆ ತಂದು ರಾಷ್ಟ್ರೀಯತಾ ಮನೋಭಾವವಿದ್ದ ಜನರಲ್ಲಿ ಹೆಚ್ಚು ಮಿತಗಾಮಿಗಳಾಗಿದ್ದವರನ್ನು ಒಲಿಸಿಕೊಳ್ಳಲಾಯಿತು. ಅದರ ಜೊತೆಜೊತೆಗೇ ದುರ್ಬಲ ಹೃದಯಿಗಳಾಗಿದ್ದವರನ್ನು ಹೆದರಿಸಲು ದಮನದ ನೀತಿಯನ್ನು ಅನುಸರಿಸಲಾಯಿತು. 1898 ರಲ್ಲಿ ವೈಸರಾಯ್ ಎಲ್ಗಿನ್ ಬಹಿರಂಗವಾಗಿಯೇ ಈ ಘೋಷಣೆಯ ಮೂಲಕ ಭಾರತೀಯರನ್ನು ಬೆದರಿಸಲು ಪ್ರಯತ್ನಿಸಿದನು: "ಭಾರತವನ್ನು ಕತ್ತಿಯ ಅಲಗಿನಿಂದ ಗೆಲ್ಲಲಾಯಿತು, ಕತ್ತಿಯ ಮೂಲಕವೇ ಉಳಿಸಿಕೊಳ್ಳಲಾಗುತ್ತದೆ." ನಾವು ಆಗಲೇ ನೋಡಿದಂತೆ ಪಶ್ಚಿಮ ಭಾರತದಲ್ಲಿ ತಿಲಕರನ್ನೂ ಇತರ ಪತ್ರಿಕೋದ್ಯೋಗಿಗಳನ್ನೂ ಬಂಧಿಸುವುದರ ಮೂಲಕ ರಾಷ್ಟ್ರೀಯತಾವಾದಿಗಳ ವಿರುದ್ಧವಾಗಿ ಪ್ರಬಲವಾದ ಮುತ್ತಿಗೆ ಹಾಕಲಾಯಿತು. 1898 ರಲ್ಲಿ ಪತ್ರಿಕಾ ಸ್ವಾತಂತ್ರ್ಯ ಹಾಗೂ ವಾಕ್ ಸ್ವಾತಂತ್ರ್ಯಗಳನ್ನು ಮೊಟಕುಮಾಡುವ ಶಾಸನಗಳನ್ನು ಹೊರಡಿಸಲಾಯಿತು; ಹಾಗೆಯೇ ಕಾನೂನುಗಳ ಮೂಲಕ ಪೋಲೀಸರ ಹಾಗೂ ನ್ಯಾಯಾಧೀಶರುಗಳ ಅಧಿಕಾರವನ್ನು ಹೆಚ್ಚಿಸಲಾಯಿತು.

ಶಿಕ್ಷಣದ ಹರಡಿಕೆಯೇ ರಾಷ್ಟ್ರೀಯತೆಯೇ ಬೆಳವಣಿಗೆಗೆ ಮುಖ್ಯವಾದೊಂದು ಕಾರಣ ಎಂದು ಬ್ರಿಟಿಷ್ ಅಧಿಕಾರಿಗಳು ನಂಬಿದ್ದರು. ಈಗ ಅದರ ಮೇಲೆ ಹೆಚ್ಚಿನ ಸರಕಾರೀ ನಿಯಂತ್ರಣವನ್ನು ಹೇರಲು, ಅದರ ಆಧುನಿಕ ಉದಾರ ಲಕ್ಷಣವನ್ನು ಬದಲಾಯಿಸಲು ಹಂಚಿಕೆಗಳನ್ನು ಹಾಕಿದರು. ಜಾರ್ಜ್ ಹ್ಯಾಮಿಲ್ಟನನು 1899 ರಲ್ಲಿ ವೈಸರಾಯಿಗೆ ಈ ಹಂಚಿಕೆಗಳನ್ನು ವಿವರಿಸಿದನು. ಅವನು ಹೇಳಿದನು, ಮೊದಲನೆಯದಾಗಿ, ಸರಕಾರವು "ಶಿಕ್ಷಣದ ಮೇಲೆ, ಅದರ ವ್ಯವಸ್ಥೆಯ ಮತ್ತು ಪಠ್ಯಪುಸ್ತಕಗಳ ಮೇಲೆ ಹೆಚ್ಚಿನ ಹತೋಟಿ ಇಟ್ಟುಕೊಳ್ಳಬೇಕು." 1903 ರ ಶಿಕ್ಷಣ ಶಾಸನದ ಮೂಲಕ ಇದನ್ನು ಸಾಧಿಸಲು ಯತ್ನಿಸಲಾಯಿತು. ಶಾಲಾ ಕಾಲೇಜುಗಳನ್ನು ಸರಕಾರೀ ತನಿಖೆಗೆ ಒಳಪಡಿಸುವ ಮೂಲಕ ಉಪಾಧ್ಯಾಯರ ಮೇಲೆ ಕಟ್ಟುನಿಟ್ಟಾದ ನಿಯಂತ್ರಣ ಇಟ್ಟುಕೊಳ್ಳಲಾಯಿತು. ಎರಡನೆಯದಾಗಿ, ಧಾರ್ಮಿಕ ವಿಶ್ವಸ್ಥ ಮಂಡಲಿಗಳು ನಡೆಸುತ್ತಿದ್ದ ಖಾಸಗೀ ಕಾಲೇಜುಗಳಿಗೆ ಹೆಚ್ಚು ಪ್ರೋತ್ಸಾಹ ಕೊಡಲು ಸರಕಾರವು ನಿರ್ಧರಿಸಿತು. ವಿವೇಚನಾಯುಕ್ತ, ಪ್ರಜಾಸತ್ತಾತ್ಮಕ ಮತ್ತು ರಾಷ್ಟ್ರೀಯತಾ ಭಾವನೆಗಳನ್ನು ಹರಡಲು ದಾರಿಮಾಡಿದ್ದ ಆಧುನಿಕ ಜಾತ್ಯತೀತ ಶಿಕ್ಷಣದ ಸ್ಥಾನದಲ್ಲಿ ಧಾರ್ಮಿಕ ಹಾಗೂ ನೈತಿಕ ಶಿಕ್ಷಣದ ಮೇಲೆ ಆಧಾರಗೊಂಡ ವ್ಯವಸ್ಥೆಯೊಂದನ್ನು ಇಡಲು ಪ್ರಯತ್ನಿಸಲಾಯಿತು. ಭಾರತೀಯ ಧರ್ಮಗಳು ಮತ್ತು ಭಾರತೀಯ ಸಂಸ್ಕೃತಿಯ ಭವ್ಯತೆ - ಇವುಗಳ ಮೇಲೆ ಆಧಾರಗೊಂಡಿದ್ದರೂ ಈ ನೂತನ ಪದ್ಧತಿ

ಪ್ರಗತಿವಿರೋಧಿಯಾಗಿತ್ತು. ಕಾರಣ, ಯುವಕರಲ್ಲಿ ಒಂದು ಮುನ್ನೋಟ ಹಾಗೂ ಆಧುನಿಕ ಸತ್ವಗಳನ್ನು ಬೆಳೆಯಿಸಲು ಅದು ಅಸಮರ್ಥವಾಗಿದ್ದುದು. ಈ ನೀತಿಯೂ ಒಂದು ವಿಚಾರವನ್ನು ತೋರಿಸಿಕೊಟ್ಟಿತು. 19 ನೆಯ ಶತಮಾನದ ಕೊನೆಯ ವೇಳೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯು ಸಾಮಾಜಿಕವಾಗಿಯೂ ಬೌದ್ಧಿಕವಾಗಿಯೂ ಪ್ರಗತಿ ವಿರೋಧಿಯಾಗಿದ್ದ, ಪ್ರಚಾರ ತಪ್ಪಿಹೋಗುತ್ತಿರುವ ಶಕ್ತಿಗಳೊಂದಿಗೆ ಸೇರಿಕೊಳ್ಳಲು ಇಷ್ಟಪಟ್ಟಿತ್ತು. ಧರ್ಮಜಾಗೃತಿ ಮತ್ತು ಸಾಂಪ್ರದಾಯಿಕತೆಗಳ ಬಗೆಗೆ ಯಾವುದೇ ಬಗೆಯಾಗಿ ಅದಕ್ಕೆ ತೀವ್ರ ಆಕ್ಷೇಪವಿರಲಿಲ್ಲ. ಸಾಮ್ರಾಜ್ಯಶಾಹೀ ಆಡಳಿತ ಚೌಕಟ್ಟಿನಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಾಂಪ್ರದಾಯಿಕತೆಗೆ ಅವಕಾಶ ಕಲ್ಪಿಸಬಹುದಾಗಿತ್ತು. ಆದರೆ ಎಲ್ಲಕ್ಕಿಂತ ಮಿಗಿಲಾಗಿ ಅದು ಆಧುನಿಕ ಭಾವನೆಗಳ ಹರಡಿಕೆಯ ವಿಚಾರವಾಗಿ ಹೆದರಿತು.

## ವಿಮರ್ಶಾತ್ಮಕ ಮೌಲ್ಯಮಾಪನ

ಆಮೇಲೆ ಬಂದ ವಿಮರ್ಶಕರು, ಮೊದಮೊದಲಿನ ರಾಷ್ಟ್ರೀಯತಾವಾದಿಗಳು ಅಷ್ಟಾಗಿ ವಾಸ್ತವಿಕ ಯಶಸ್ಸನ್ನು ಸಾಧಿಸಲಿಲ್ಲ ಎಂದು ಟೀಕಿಸಿದರು. ಅವರು ಯಾವುದಕ್ಕಾಗಿ ಹೋರಾಡಿದರೋ ಆ ಸುಧಾರಣೆಗಳಲ್ಲಿ ಎಲ್ಲೋ ಕೆಲವನ್ನು ಮಾತ್ರ ಕಾರ್ಯಗತ ಗೊಳಿಸಲಾಯಿತು. ವಿದೇಶೀ ಆಳುಗರು ಅವರನ್ನು ತಿರಸ್ಕಾರದಿಂದ ನೋಡುತ್ತಿದ್ದರು, ಅವರ ರಾಜಕೀಯವನ್ನು ಓೀಯಾಳಿಸುತ್ತಿದ್ದರು. ಮುಂದೆ ಲಜಪತರಾಯ್ ಬರೆದರು: "ರಿಯಾಯಿತಿಗಳಿಗಾಗಿ ಮತ್ತು ಅನ್ಯಾಯಗಳ ಪರಿಹಾರಗಳಿಗಾಗಿ ಇಪ್ಪತ್ತು ವರ್ಷಗಳಿಗಿಂತ ಹೆಚ್ಚುಕಾಲ ವ್ಯರ್ಥವಾಗಿ ಹೋರಾಡಿದ ಮೇಲೆ ಅವರಿಗೆ ರೊಟ್ಟಿಗೆ ಬದಲಾಗಿ ಕಲ್ಲು ಸಿಕ್ಕಿತು." ವಾಸ್ತವವಾಗಿ ಸರಕಾರವು ಹೆಚ್ಚು ಉದಾರವಾಗುವುದಕ್ಕೆ ಬದಲಾಗಿ, ಹೆಚ್ಚು ಪ್ರಗತಿ ವಿರೋಧಿಯೂ ನಿರಂಕುಶವೂ ಆಯಿತು. ಅಲ್ಲದೆ ಮೊದಮೊದಲಿನ ರಾಷ್ಟ್ರೀಯ ಚಳುವಳಿ ಸಾಮಾನ್ಯ ಜನತೆಯಲ್ಲಿ ಬೇರುಬಿಡಲು ಅಸಮರ್ಥವಾಯಿತು. ಅಪಾರವಾದ ಆಸೆಯಿಂದ ಅದಕ್ಕೆ ಸೇರಿಕೊಂಡಿದ್ದವರಿಗೂ ಕೂಡ ಹೆಚ್ಚು ಹೆಚ್ಚು ಭ್ರಮ ಹರಿಯಿತು. ಅದನ್ನು ಟೀಕಿಸಿದವರು ಅದರ ರಾಜಕೀಯವನ್ನು "ಸ್ಥಗಿತವಾಗುವ, ಅರೆಮನಸ್ಸಿನ" ರಾಜಕೀಯವೆಂದು ಮೂದಲಿಸಿ ದರು. ಅದರ ವಿಧಾನಗಳನ್ನು ಪ್ರಾರ್ಥನೆ ಮತ್ತು ಮನವಿಗಳ ಮೂಲಕ ಮಾಡುವ ಭಿಕ್ಷೆ, ಯಾಚನೆ ಎಂದು ಹೀಯಾಳಿಸಿದರು. ಎಲ್ಲೋ ಕೆಲವರು ಬೆರಳೆಣಿಕೆಯಷ್ಟು ಜನರನ್ನು ಬಿಟ್ಟು, ಮಿಕ್ಕ ಮೊದಲ ರಾಷ್ಟ್ರೀಯ ವಾದಿಗಳು ವೈಯುಕ್ತಿಕವಾಗಿ ಏನನ್ನೂ ತ್ಯಾಗಮಾಡಿರಲಿಲ್ಲ, ಅವರಿಗೆ ವೈಯಕ್ತಿಕವಾಗಿ ಆಗಿದ್ದ ಕಷ್ಟ ಬಹಳ ಕಡಮೆ ಎಂದು ತೋರಿಸಿಕೊಟ್ಟರು. ಅಲ್ಲದೆ ಅವರ ಕಾರ್ಯ ನಿಯೋಜನೆಯು ಬಂಡವಾಳಶಾಹಿಯ ಕಿರಿದಾದ ಮಿತಿಗಳ ಒಳಗೇ ಸೀಮಿತವಾಗಿತ್ತು. ಅವರು ಬಂಡವಾಳಶಾಹಿಯ ದಾರಿಯಲ್ಲಲ್ಲದ ಬೇರೆ ರೀತಿಯಾಗಿ ಭಾರತದ ಅಭಿವೃದ್ಧಿಯನ್ನು ಮುಂಗಾಣುವುದು ಸಾಧ್ಯವೇ ಆಗಲಿಲ್ಲ. ಇದರಿಂದ ಸಾಮಾನ್ಯ ಜನತೆಯಲ್ಲಿ ಅವರು ನಿಲುವು ಪ್ರಿಯವಾದದ್ದು ಬಹಳ ಕಡಮೆ-ಪ್ರಮಾಣದಲ್ಲಿ. ಆ ಜನರನ್ನು ರಾಜಕೀಯಕ್ಕೆ ಸಕ್ರಿಯವಾಗಿ ಸೇರುವಂತ ಮಾಡಿದುದಂತೂ ಇನ್ನೂ ಕಡಮೆ.

ಆದರೆ, ಮೊದಲ ರಾಷ್ಟ್ರೀಯ ಚಳುವಳಿ ವಿಫಲವಾಯಿತು ಎಂದು ವಿಮರ್ಶಕರು ಹೇಳುವುದು ಪೂರ್ತಿ ಸರಿಯಲ್ಲ. ನಿಜ, ವಾಸ್ತವವಾಗಿ ಅವರು ಸಾಧಿಸಿದ್ದು ಬಹಳ ಅಲ್ಪ. 20 ನೆಯ ಶತಮಾನದ ವೇಳೆಗಾಗಲೇ, ಬ್ರಿಟಿಷ್ ಆಳಿಕೆಯ ಲಕ್ಷಣ ದಲ್ಲುಂಟಾದ ಬದಲಾವಣೆಗಳಿಂದಾಗಿ ಅವರ ರಾಜಕೀಯ ಕಲ್ಪನೆಗಳು ಮತ್ತು ದೃಷ್ಟಿಕೋನ ಇವು ಕಾಲದಲ್ಲಿ ಹಿಂದಾಗಿದ್ದುವು. ಒಂದು ಅಖಿಲ ಭಾರತ ವ್ಯಾಪ್ತಿಯ ಸಾಂವಿಧಾನಿಕ ಚಳುವಳಿಯನ್ನು ನಿರ್ವಹಿಸಲೂ ಕೂಡ ಅವರು ಸಮರ್ಥರಾಗಲಿಲ್ಲ. ಯುವಕರಿಗೆ ಅವರಲ್ಲಿ ಆಕರ್ಷಣೆಯಿರಲಿಲ್ಲ. ಜನಸಾಮಾನ್ಯರಿಗೋ ಅವರ ವ್ಯವಸ್ಥೆಯಾಗಲಿ ಪ್ರಚಾರವಾಗಲಿ ತಲುಪಲೇ ಇಲ್ಲ. 1905 ರ ವೇಳೆಗೆ ಅವರು ತಮ್ಮ ರಾಜಕೀಯ ಬೆಳವಣಿಗೆಯ ಮಿತಿಗಳನ್ನು ಮುಟ್ಟಿಬಿಟ್ಟಿದ್ದರು.

ಆದರೆ ಚಾರಿತ್ರಕವಾಗಿ ನೋಡಿದರೆ, ಮೊದಲಿನ ರಾಷ್ಟ್ರೀಯತಾವಾದಿಗಳ ರಾಜಕೀಯ ದಾಖಲೆ ಅಷ್ಟು ದುರ್ಬಲವಾಗಿಲ್ಲ. ಅದಕ್ಕೆ ಬದಲು ಅವರು ಕೈಕೊಂಡ ಕೆಲಸದಲ್ಲಿದ್ದ ಅಗಾಧವಾದ ಕಷ್ಟಪರಂಪರೆಗಳನ್ನು-ಗಮನಕ್ಕೆ ತಂದುಕೊಂಡಾಗ ಅದು ಉಜ್ವಲವಾಗಿಯೇ ಕಾಣುತ್ತದೆ. ವಾಸ್ತವವಾಗಿ ಮುಂದಿನ ರಾಷ್ಟ್ರೀಯ ಚಳುವಳಿಯ ಮುಂದುವರಿದ ಹಂತಗಳಿಗೆ, ವಿಶಾಲವಾದ ಅರ್ಥದಲ್ಲಿ ದಾರಿಮಾಡಿದ್ದು ಅವರ ಸಾಧನೆಗಳೇಯೆ. ಆ ಪ್ರಕ್ರಿಯೆಯಲ್ಲಿ ತಮ್ಮದೇ ವಿಧಾನಗಳನ್ನು ಅವು ಚಾರಿತ್ರಕವಾಗಿ ಹಿಂದೆ ಬೀಳಿಸಿಕೊಂಡುವು. ಹೀಗೆ ಮೊದಲಿನ ರಾಷ್ಟ್ರೀಯವಾದಿಗಳು ಆ ಕಾಲದ ಅತ್ಯಂತ ಪ್ರಗತಿಪರ ಶಕ್ತಿಯನ್ನು ಪ್ರತಿನಿಧಿಸಿದ್ದರು. ಅವರು ಭಾರತದ ರಾಜಕೀಯದಲ್ಲಿ ನಿರ್ಣಾಯಕವಾದ ಒಂದು ರೂಪಾಂತರವು ಸಾಧ್ಯವಾಗುವಂತೆ ಮಾಡಿದರು.

ವ್ಯಾಪಕವಾದ ರಾಜಕೀಯ ಜಾಗೃತಿಯನ್ನು ಉಂಟುಮಾಡುವುದರಲ್ಲಿ ಅವರು ಯಶಸ್ವಿಯಾದರು. ಭಾರತೀಯ ಮಧ್ಯಮವರ್ಗ ಮತ್ತು ಕೆಳಮಧ್ಯಮವರ್ಗದವರಲ್ಲಿ ಹಾಗೂ ಸುಶಿಕ್ಷಿತ ವರ್ಗದಲ್ಲಿ ತಾವು ಒಂದು ರಾಷ್ಟ್ರಕ್ಕೆ-ಭಾರತ ರಾಷ್ಟ್ರಕ್ಕೆ-ಸೇರಿದವರು ಎಂಬ ಭಾವನೆ ಜಾಗ್ರತವಾಗುವಂತೆ ಮಾಡಿದರು. ಭಾರತದ ಜನರು ಸಮಾನ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಆಸಕ್ತಿಗಳ ಗಂಟು ತಮ್ಮನ್ನು ಬಂಧಿಸಿರುವುದನ್ನು ಅರಿತುಕೊಳ್ಳುವಂತೆ, ಸಾಮ್ರಾಜ್ಯಶಾಹಿಯಲ್ಲಿ ತಮ್ಮೆಲ್ಲರಿಗೂ ಸಮಾನ ಶತ್ರುವು ಇರುವುದನ್ನು ತಿಳಿದುಕೊಳ್ಳುವಂತ ಮಾಡಿ, ಅವರನ್ನು ಒಂದು ರಾಷ್ಟ್ರೀಯತ್ವದಲ್ಲಿ ಬೆಸೆಯಲು ನೆರವಾದರು. ಪ್ರಜಾಸತ್ತೆಯ ಹಾಗೂ ಪೌರ ಸ್ವಾತಂತ್ರ್ಯದ ಭಾವನೆಗಳನ್ನು ಅವರು ಜನಪ್ರಿಯಗೊಳಿಸಿದರು. ರಾಷ್ಟ್ರೀಯ ಕಾಂಗ್ರೆಸ್ಸು ಮತ್ತಿತರ ರಾಷ್ಟ್ರೀಯ ಸಂಸ್ಥೆಗಳನ್ನು ಸ್ಥಾಪಿಸಿ ಕಟ್ಟುವಾಗಲೇ ಭಾರತದ ಜನ ಪ್ರಜಾಸತ್ತೆ ಎಂದರೇನೆಂಬುದರ ವಾಸ್ತವ ಪರಿಜ್ಞಾನವನ್ನು ಪಡೆದದ್ದು. ಅದು ಆಳುಗರು ಒಂದೇ ಸಮನೆ ಭಾರತೀಯರು ಕೇವಲ 'ಧರ್ಮಶೀಲವಾದ' ಅಥವಾ 'ಓರಿಯಂಟಲ್' ಪ್ರಭುತ್ವದಲ್ಲಿರಲು ಮಾತ್ರ ಅರ್ಹರು ಎಂದು ಹೇಳುತ್ತಿದ್ದ ಕಾಲ. ಅಲ್ಲದೆ ರಾಷ್ಟ್ರೀಯವಾದಿಗಳಾಗಿದ್ದ ಅನೇಕ ರಾಜಕೀಯ ಕಾರ್ಯಕರ್ತರಿಗೆ ಆಧುನಿಕ ರಾಜಕೀಯದಲ್ಲಿ ಶಿಕ್ಷಣ ಕೊಡಲಾಯಿತು. ಜನರೂ ಆಧುನಿಕ ರಾಜಕೀಯದ ಕಲ್ಪನೆಗಳು ಮತ್ತು ಭಾವನೆಗಳನ್ನು ಚೆನ್ನಾಗಿ ಪರಿಚಯ ಮಾಡಿಕೊಂಡರು.

ಅವರು ಮಾಡಿದ್ದರಲ್ಲಿ ಅತ್ಯಂತ ಮುಖ್ಯವಾದ ಸಾಹಸವೆಂದರೆ, ಭಾರತದಲ್ಲಿನ ಬ್ರಿಟಿಷ್ ಸಾಮ್ರಾಜ್ಯಶಾಹಿಯ ನಿಜವಾದ ಸ್ವರೂಪವನ್ನು ಬಯಲಿಗೆಳೆದದ್ದು. ಹೆಚ್ಚು ಕಡಮೆ ಪ್ರತಿಯೊಂದು ಮುಖ್ಯ ಆರ್ಥಿಕ ವಿಷಯವನ್ನೂ ಅವರು ದೇಶವು ರಾಜಕೀಯವಾಗಿ ಪರಾಧೀನವಾಗಿರುವುದರೊಂದಿಗೆ ಸಂಬಂಧಗೊಳಿಸಿದರು. ಆದ್ದರಿಂದ ಅವರು ರಾಜಕೀಯದಲ್ಲಿ ಮತ್ತು ರಾಜಕೀಯ ಕಾರ್ಯವಿಧಾನಗಳಲ್ಲಿ ಮಿತಗಾಮಿಗಳಾಗಿದ್ದರೂ ಭಾರತದ ವಾಸ್ತವ ಸ್ವರೂಪದ ಅತ್ಯಂತ ಮುಖ್ಯವಾದ ರಾಜಕೀಯ ಮತ್ತು ಆರ್ಥಿಕ ಮುಖವನ್ನು ಬೆಳಕಿಗೊಡ್ಡಿದರು. ಭಾರತವನ್ನು ವಿದೇಶೀ ಶಕ್ತಿಯು ಆರ್ಥಿಕ ಸುಲಿಗೆಯ ಉದ್ದೇಶದಿಂದ ಆಳುತ್ತಿದೆ ಎಂಬುದೇ ಅದು. ಸರಕಾರ ಯಾವುದೇ ಇರಲಿ, ಅದರ ಧರ್ಮಶೀಲ ಲಕ್ಷಣದಲ್ಲಿ ಎಲ್ಲಿಯವರೆಗೆ ಜನ ಮೂಲಭೂತವಾಗಿ ನಂಬಿಕೆ ಇಟ್ಟುಕೊಂಡಿರುತ್ತಾರೋ ಅಲ್ಲಿಯವರೆಗೆ ಅದು ಭದ್ರವಾಗಿರುತ್ತದೆ, ಅಥವಾ ಅದು ಮುಂದುವರಿಯಲು ಜನ ಬೆಂಬಲ ಕೊಡುತ್ತಾರೆ. ಇದು ಆಡಳಿತಕ್ಕೆ ನ್ಯಾಯ ಬದ್ಧತೆಯನ್ನು, ಹಿಡಿತತೆಯನ್ನು ಕೊಡುತ್ತದೆ. ಇದೇ ಅದರ ನೈತಿಕ ತಳಹದಿ. ಮೊದಲಿನ ರಾಷ್ಟ್ರೀಯತಾವಾದಿಗಳು ನಡಸಿದ ಆರ್ಥಿಕ ಚಳುವಳಿ ಈ ನೈತಿಕ ತಳಹದಿಯನ್ನು ಸಂಪೂರ್ಣವಾಗಿ ಸಿಡಿಸಿ ಹಾಳುಮಾಡಿತು. ಆ ಆಳಿಕೆಯ ಧರ್ಮಶೀಲತೆಯಲ್ಲಿ ಜನರಿಗಿತ್ತ ವಿಶ್ವಾಸವನ್ನು ಕೊರೆದು ಸವೆಸಿತು. ಬೌದ್ಧಿಕ ಅಶಾಂತಿಯಿದ್ದ ಈ ಕಾಲದಲ್ಲಿ ಒಮ್ಮೆ ಈ ಆಧಾರಭೂತವಾದ ಕೆಲಸ ನಡೆದುಹೋದಮೇಲೆ, ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ತೀವ್ರವಾಗಿ ಬಯಲಿಗೆಳೆಯುವ ಕ್ರಿಯೆ ರಾಜಕೀಯ ಕ್ಷೇತ್ರಕ್ಕೂ ಹರಡುವುದು ಅನಿವಾರ್ಯವೇ ಆಯಿತು. ಹೋರಾಟದ ಆಧಾರವನ್ನು ವಿಸ್ತಾರಗೊಳಿಸುರುದು, ಅದರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಗುರಿಗಳಲ್ಲಿ ತೀವ್ರಗತಿಯ ಬದಲಾವಣೆಯುಂಟುಮಾಡುವುದು, ಜನಸಮೂಹದ ಚಳುವಳಿಗಳನ್ನು ವ್ಯವಸ್ಥೆಗೊಳಿಸುವುದು-ಈ ಹೋರಾಟ ಮುಂದೆ ಬರುವುದು ಸಾಧ್ಯವಿತ್ತು, ಬಂದಿತು. ಒಮ್ಮೆ ಮುಖ್ಯ ಪ್ರಶ್ನೆಗಳು ತೀರ್ಮಾನವಾದುವೆಂದಮೇಲೆ ರಾಜಕೀಯ ಹೋರಾಟದ ಶಕ್ತಿಗಳು ಮತ್ತು ಯುಕ್ತಿಗಳನ್ನು ತಿಳಿದುಕೊಳ್ಳುವುದರಲ್ಲಿ ಇದ್ದಿರಬಹುದಾದ ತಪ್ಪುಗಳನ್ನು ಯಾವಾಗಲೂ ತಿದ್ದಿಕೊಳ್ಳಬಹುದಾಗಿತ್ತು. ಈ ಸಂದಿಗ್ಧವೂ ಪೀಠಿಕಾಪ್ರಾಯವೂ ಆದ ತಮ್ಮ ರಾಜಕೀಯ ಕಾರ್ಯದ ಲಕ್ಷಣವನ್ನು ಮೊದಲ ರಾಷ್ಟ್ರೀಯತಾವಾದಿಗಳು ಚೆನ್ನಾಗಿ ಬಲ್ಲವರಾಗಿದ್ದರು. ಉದಾಹರಣೆಗೆ, ಡಿ.ಇ. ವಾಚಾ (D.E. Wacha) ಅವರಿಗೆ 1905 ರ ಜನವರಿ 12 ರಂದು ಬರೆದ ಪತ್ರದಲ್ಲಿ ದಾದಾಭಾಯಿ ನವರೋಜಿ ಹೀಗೆ ಬರೆದರು:

> "ಈಗ ತಾನೇ ಮೇಲೆ ಬರುತ್ತಿರುವ ಪೀಳಿಗೆಯಲ್ಲಿ ತನ್ನ ಮಾರ್ಗ ಮಂದಗತಿಯದು, ನಿಧಾನವಾದದ್ದು ಎಂಬ ಭಾವನೆಯುಂಟುಮಾಡಿ ಕಾಂಗ್ರೆಸ್ಸು ತನ್ನ ವಿರುದ್ಧವಾಗಿ ಅತೃಪ್ತಿ ಮತ್ತು ಅಸಹನೆಯನ್ನು ಮೂಡಿಸಿಕೊಳ್ಳುತ್ತಿಲ್ಲ, ಅದೇ ಕಾಂಗ್ರೆಸ್ಸು ಸಾಧಿಸಿರುವ ಅತ್ಯುತ್ತಮ ಫಲ. ಇದು ಅದರದೇ ವಿಕಾಸ ಮತ್ತು ಪ್ರಗತಿ... (ಈಗಿರುವ ಕೆಲಸ) ಅಗತ್ಯವಾಗಿರುವ ಕ್ರಾಂತಿಯನ್ನು ರೂಪಿಸುವುದು - ಅದುಶಾಂತಿಯುತವಾಗಿರಲಿ, ಅಥವಾ ಹಿಂಸಾತ್ಮಕವಾಗಿರಲಿ. ಕ್ರಾಂತಿಯ ಲಕ್ಷಣವು ಬ್ರಿಟಿಷ್ ಸರಕಾರದ ಬುದ್ಧಿವಂತಿಕೆ ಅಥವಾ ಮೂರ್ಖತನವನ್ನು

ಅವಲಂಬಿಸುತ್ತದೆ, ಹಾಗೆಯೇ ಬ್ರಿಟಿಷ್ ಜನರು ಕೈಗೊಳ್ಳುವ ಕ್ರಮಗಳನ್ನೂ."

1858 ರಿಂದ 1905 ರವರೆಗಿನ ಕಾಲಾವಧಿಯು ಭಾರತದ ರಾಷ್ಟ್ರೀಯತೆಯ ಬೀಜಾವಧಿ. ಮೊದಮೊದಲಿನ ರಾಷ್ಟ್ರೀಯವಾದಿಗಳು ಬೀಜಗಳನ್ನು ಚೆನ್ನಾಗಿ ಆಳವಾಗಿ ನೆಟ್ಟರು. ತಮ್ಮ ರಾಷ್ಟ್ರೀಯತೆಯನ್ನು ತೇಲಿಕೆಯ ಭಾವನೆಗಳು ಮತ್ತು ತಾತ್ಕಾಲಿಕವಾದ ಭಾವೋದ್ವೇಗಗಳ ಮೇಲೆ ಅಥವಾ ಸ್ವಾತಂತ್ರ್ಯ ಮತ್ತು ಸ್ವರಾಜ್ಯಗಳನ್ನು ಕುರಿತ ಹಕ್ಕುಗಳ ಅಸ್ಪಷ್ಟ ವಿಚಾರಗಳಮೇಲೆ ಕಟ್ಟದೆ, ಅವರು ಅದನ್ನು ಆಧುನಿಕ ಸಾಮ್ರಾಜ್ಯಶಾಹಿಯ ಕಟು ವಿಶ್ಲೇಷಣೆಯಮೇಲೆ ನಿಲ್ಲಿಸಿದರು; ಭಾರತೀಯ ಹಿತಾಸಕ್ತಿಗಳಿಗೂ ಬ್ರಿಟಿಷ್ ಆಳಿಕೆಗೂ ಇದ್ದ ಪ್ರಧಾನ ವಿರೋಧದ ಮೇಲೆ ನಿಲ್ಲಿಸಿದರು. ಇದರ ಫಲವಾಗಿ ಅವರು ಜನರ ವಿವಿಧ ಭಾಗಗಳನ್ನು ಒಡೆಯದೆ ಒಂದುಗೂಡಿಸಿದ ಒಂದು ಸಮಾನ ರಾಜಕೀಯ ಮತ್ತು ಆರ್ಥಿಕ ಕಾರ್ಯ ನಿಯೋಜನೆಯನ್ನು ವಿಕಾಸಗೊಳಿಸಿದರು. ಮುಂದೆ ಭಾರತೀಯರು ಈ ಕಾರ್ಯ ನಿಯೋಜನೆಯನ್ನು ಹಿಡಿದುಕೊಂಡು ಪ್ರಬಲವಾದ ಹೋರಾಟಗಳನ್ನು ಹೂಡ ಬಹುದಾಗಿತ್ತು.

ಆದ್ದರಿಂದ ಇಷ್ಟು ಹೇಳಬಹುದು: ಅವರ ಸೋಲುಗಳು ಏನೇ ಇರಲಿ, ಮೊದಲಿನ ರಾಷ್ಟ್ರೀಯತಾವಾದಿಗಳು ರಾಷ್ಟ್ರೀಯ ಚಳುವಳಿಯು ಬೆಳೆಯುವುದಕ್ಕೆ ಬಲವಾದ ತಳಹದಿಯನ್ನು ಹಾಕಿದರು. ಆಧುನಿಕ ಭಾರತದ ನಿರ್ಮಾಪಕರಲ್ಲಿ ಅವರಿಗೆ ಬಹಳ ಉನ್ನತವಾದ ಒಂದು ಸ್ಥಾನ ಮೀಸಲಾಗಬೇಕು. ಈ ಮಹಾನ್ "ಮಿತಗಾಮಿ"ಗಳಲ್ಲಿ ಕೊನೆಯವರಾದ ಗೋಪಾಲಕೃಷ್ಣ ಗೋಖಲೆ ಅವರು ಭಾರತದ ರಾಷ್ಟ್ರೀಯತೆಯನ್ನು ಸ್ಥಾಪಿಸಿದ ಪಿತಾಮಹರ ಪಾತ್ರವನ್ನು ಮೌಲ್ಯಮಾಪನ ಮಾಡುತ್ತಾ ಹೇಳಿದಂತೆ:

> "ನಾವು ಒಂದು ರಾಷ್ಟ್ರದ ಪ್ರಗತಿಯ ಒಂದು ಹಂತದಲ್ಲಿದ್ದೇವೆ. ಈಗ ನಮ್ಮ ಸಾಧನೆ ಬಹಳ ಚಿಕ್ಕದಾಗಿರುವುದು ಅನಿವಾರ್ಯ. ನಮಗೆ ಪದೇಪದೇ ನಿರಾಶೆಗಳುಂಟು, ನಮ್ಮ ಸಾಧನೆಯನ್ನು ಅವು ಪರೀಕ್ಷಿಸುವುದುಂಟು. ಈ ಹೋರಾಟದಲ್ಲಿ ನಮಗೆ ಕೊಡಬೇಕೆಂದು ವಿಧಿಗೆ ಅನ್ನಿಸಿರುವ ಸ್ಥಾನ ಇದು. ಈ ಸ್ಥಾನಕ್ಕೆ ಯುಕ್ತವಾದ ಕೆಲಸವನ್ನು ನಾವು ನಿರ್ವಹಿಸಿದಾಗಲೇ ನಮ್ಮ ಜವಾಬ್ದಾರಿ ತೀರುವುದು. ಮುಂದಿನ ಪೀಳಿಗೆಯ ನಮ್ಮ ರಾಷ್ಟ್ರದ ಪ್ರಜೆಗಳಿಗೆ ತಮ್ಮ ಯಶಸ್ಸು ಗಳ ಮೂಲಕವೇ ಭಾರತಕ್ಕೆ ಸೇವೆ ಸಲ್ಲಿಸುವ ಅವಕಾಶ ದೊರಕುತ್ತದೆನ್ನುವುದರಲ್ಲಿ ಸಂದೇಹವೇ ಇಲ್ಲ. ಈ ಪೀಳಿಗೆಯ ನಾವಾದರೋ ಮುಖ್ಯವಾಗಿ ಸೋಲು ಗಳಿಂದಲೇ ಭಾರತಮಾತೆಯನ್ನು ಸೇವಿಸುವ ಅವಕಾಶದಿಂದಲೇ ತೃಪ್ತಿಪಟ್ಟು ಕೊಳ್ಳಬೇಕು. ಏಕೆಂದರೆ ಇದು ಕಠಿಣವಾದರೂ ಈ ಸೋಲುಗಳಿಂದಲೇ ಬಲವು ಉದಿಸುತ್ತದೆ, ಅದರಿಂದಲೇ ಕೊನೆಗೆ ಮಹಾಕಾರ್ಯಗಳೂ ಸಾಧಿತವಾಗುತ್ತವೆ."

# III

# ಹೋರಾಟಸ್ವರೂಪದ ರಾಷ್ಟ್ರೀಯತೆಯ ಯುಗ

19 ನೆಯ ಶತಮಾನದ ಉತ್ತರಾರ್ಧದಲ್ಲಿ ಜನರ ರಾಷ್ಟ್ರೀಯತಾ ಪ್ರಜ್ಞೆ ಸ್ಥಿರವಾದ ಗತಿಯಲ್ಲಿ ಬೆಳೆಯುತ್ತಿತ್ತು. ಆದರೆ ನಾಯಕರಿಗೆ ಬ್ರಿಟಿಷ್ ಆಳುಗರಿಂದ ಯಾವುದೇ ರೀತಿಯ ರಿಯಾಯಿತಿಗಳು ಸಿಕ್ಕಲಿಲ್ಲ. ವಸಾಹತುಶಾಹೀ ಸುಲಿಗೆ ಮಾತ್ರ ದೇಶದಲ್ಲಿ ಮುಂದುವರಿದಿತ್ತು.

ವ್ಯವಹಾರ ಮತ್ತು ವಾಣಿಜ್ಯಗಳಲ್ಲಿ ಸಾಕಾದಷ್ಟು ಅವಕಾಶಗಳನ್ನು ಪಡೆಯದೇ, ಮಧ್ಯಮವರ್ಗದ ಸುಶಿಕ್ಷಿತ ಯುವಕರು ಹೆಚ್ಚುಹೆಚ್ಚಾಗಿ ಪಬ್ಲಿಕ್ ಸರ್ವಿಸ್ ಕಡೆಗೆ ಮತ್ತು ವಕೀಲವೃತ್ತಿಯ ಕಡೆಗೆ ತಿರುಗಿದರು. ಅವರಲ್ಲಿ ಸ್ವಲ್ಪ ಉದ್ಯಮಶೀಲರಾಗಿದ್ದವರು ಪತ್ರಿಕೋದ್ಯಮವನ್ನು ಹಿಡಿದರು. ಪಬ್ಲಿಕ್ ಸರ್ವಿಸ್‌ಗಳಲ್ಲಿಯೂ ಅವಕಾಶಗಳು ತುಂಬ ಮಿತವಾಗಿದ್ದುವು. ಉದಾಹರಣೆಗೆ, 1903 ರಲ್ಲಿ ತಿಂಗಳಿಗೆ 75 ರೂಪಾಯಿ ಗಳಿಗಿಂತ ಹೆಚ್ಚು ವೇತನ ಬರುವ ಹುದ್ದೆಗಳಲ್ಲಿದ್ದ ಭಾರತೀಯರ ಸಂಖ್ಯೆ ಕೇವಲ 16 ಸಾವಿರ. ವಕೀಲವೃತ್ತಿಯಲ್ಲಿಯೋ, ವಿಫಲತೆಗಳೇ ಹೇರಳ. ಪತ್ರಿಕೋದ್ಯಮವು ಆಗಿನ್ನೂ ಆಕರ್ಷಕವಾದ, ಆದರೆ ಅನಿಶ್ಚಿತ ವೃತ್ತಿಯಾಗಿತ್ತು. ಸಮಸ್ಯೆಯ ತಿರುಳು ಇಷ್ಟೆ. ನಿರುದ್ಯೋಗಿ ಪದವೀಧರರ ಸಂಖ್ಯೆಯಲ್ಲ, ಬದಲಿಗೆ ಪರೀಕ್ಷೆಗಳಲ್ಲಿ ಅನುತ್ತೀರ್ಣವಾಗುವುದರಿಂದ ಆಗುತ್ತಿದ್ದ ಅಪಾರವಾದ ನಷ್ಟ. ಕ್ಷೋಭೆಯು ಬಹಳವಾಗಿ ಇದ್ದದ್ದು ಈ 'ನೌಕರಿಗೆ ಅನರ್ಹರಾದ' ಯುವಜನರಲ್ಲಿ.

ಶತಮಾನದ ಮುಗಿವಿನ ವೇಳೆಗೆ ಕ್ಷೋಭೆ ಮತ್ತು ಅತೃಪ್ತಿಗಳು ಹಳ್ಳಿಗಳಲ್ಲಿನ ಶ್ರೀಮಂತರು, ರೈತರು ಹಾಗೂ ಕಾರ್ಮಿಕರುಗಳಲ್ಲಿ ಕಂಡುಬಂದುವು. ಆದ್ದರಿಂದ ಸರಕಾರವನ್ನು ಸುಧಾರಣೆಗಳಿಗಾಗಿ ಒತ್ತಾಯಮಾಡುತ್ತಾ ಬೇಡಿಕೆಗಳನ್ನು ಸಲ್ಲಿಸು ತ್ತಲೇ ಮುಂದುವರಿದಿದ್ದ 'ಮಿತಗಾಮಿ' ನಾಯಕರ ಜನಪ್ರಿಯತೆ ಕಡಮೆಯಾಗುತ್ತ ಬಂದದ್ದರಲ್ಲಿ ಆಶ್ಚರ್ಯವಿಲ್ಲ. ಬೇಡಿಕೆಗಳಲ್ಲಿ ತೀವ್ರಗಾಮಿಗಳಾಗಿ, ಹೆಚ್ಚು ಹೋರಾಟ ಸ್ವರೂಪದ ರಾಷ್ಟ್ರೀಯತೆಯಲ್ಲಿ ನಂಬಿಕೆ ತಳೆದ ಅನೇಕಾನೇಕ ನಾಯಕರು ಕಾಣಿಸಿ ಕೊಂಡರು. ಇವರನ್ನು 'ತೀವ್ರಗಾಮಿ'ಗಳು ಎಂದು ಕರೆಯಲಾಯಿತು. ಮಿತಗಾಮಿ ನಾಯಕರಿಗೆ ವಿದ್ಯಾವಂತ ವರ್ಗ ಹಾಗೂ ನಗರಗಳ ಮಧ್ಯಮವರ್ಗಗಳ ಜನ ಬೆಂಬಲ ಕೊಟ್ಟಿದ್ದರೆ, ಇವರಿಗೆ ಕೆಳ ಮಧ್ಯಮವರ್ಗದಲ್ಲಿ ಅಪಾರವಾದ ಜನಪ್ರಿಯತೆ ದೊರಕಿತು. ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ಕೃಷಿಕರ ಒಂದು ವರ್ಗವೂ ಇವರಿಗೆ ಬೆಂಬಲವಾಯಿತು.

ಪ್ರಾರಂಭದಲ್ಲಿ ಇದಕ್ಕೆ ಬಂಗಾಳದಲ್ಲಿ ರಾಜನಾರಾಯಣ್ ಬೋಸ್ ಮತ್ತು

ಬಂಕಿಮ್‌ಚಂದ್ರ ಚಟರ್ಜಿ, ಮಹಾರಾಷ್ಟ್ರದಲ್ಲಿ ವಿಷ್ಣುಶಾಸ್ತ್ರಿ ಚಿಪ್ಳುಣಕರ್ ಮುಂತಾದವರು ನಾಯಕರಾದರು. ಬಂಕಿಮ ಚಂದ್ರರು ತಾಯ್ನಾಡಿಗೆ ಅರ್ಪಿಸಿದ ಗೀತೆ 'ವಂದೇ ಮಾತರಂ' ದೇಶಾಭಿಮಾನ ಮತ್ತು ಆತ್ಮಸಮರ್ಪಣೆಗಳ ವೀರಗೀತೆಯಾಯಿತು. ಇತಿಹಾಸ ಮತ್ತು ಹಿಂದೂಧರ್ಮಗಳಿಗೆ ಅವರು ನೀಡಿದ ನೂತನ ವ್ಯಾಖ್ಯಾನಗಳು ರಾಷ್ಟ್ರ ಮನೋಧರ್ಮದಲ್ಲಿ ಮುಖ್ಯವಾದ ಗುರುತುಗಳಾದುವು.

ರಾಷ್ಟ್ರೀಯತಾ ಚಳುವಳಿಯ ಮೊದಲ ಹಂತದ ಕಾಲದಲ್ಲಿ ಪಡೆದ ಅನುಭವವೂ ನಾಯಕರಿಗ. ಒಂದು ನೆಲೆಯನ್ನೂ, ಪಕ್ವತೆಯನ್ನೂ ಒದಗಿಸಿತ್ತು ಎನ್ನುವುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಆತ್ಮಗೌರವ ಮತ್ತು ಭರವಸೆಗಳನ್ನು ಅವರು ಬೆಳೆಸಿಕೊಂಡಿದ್ದರು. ತಮ್ಮನ್ನು ಆಳಿಕೊಳ್ಳಲು ತಾವು ಸಮರ್ಥರಾಗಿರುವ ನಂಬಿಕೆ ಅವರಲ್ಲಿತ್ತು; ತಮ್ಮ ದೇಶದ ಭವಿಷ್ಯದ ವಿಕಾಸದಲ್ಲಿ ಶ್ರದ್ಧೆಯನ್ನು ಅವರು ತಳೆದಿದ್ದರು. ಸ್ವಾಮಿ ವಿವೇಕಾನಂದರು ರಾಜಕೀಯ ನಾಯಕರಾಗಿರಲಿಲ್ಲ. ಆದರ ಅವರು ವ್ಯಕ್ತಿ ತನ್ನ ಸಾಮರ್ಥ್ಯದಲ್ಲಿ ದೃಢನಂಬಿಕ ತಳಯಬೇಕಂಬುದನ್ನು ಒತ್ತಿ ಹೇಳಿದರು. ಅವರು ಘೋಷಿಸಿದರು: "ಈ ಜಗತ್ತಿನಲ್ಲಿ ಪಾಪವೇನಾದರೂ ಇದ್ದರೆ, ದೌರ್ಬಲ್ಯವೇ ಅದು; ಎಲ್ಲ ದೌರ್ಬಲ್ಯವನ್ನೂ ನಿವಾರಿಸಿ, ದೌರ್ಬಲ್ಯವೇ ಪಾಪ, ದೌರ್ಬಲ್ಯವೇ ಮೃತ್ಯು... ಸತ್ಯದ ಒರಗಲ್ಲು ಇಲ್ಲಿದೆ... ನಿಮ್ಮನ್ನು ದೈಹಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ, ದುರ್ಬಲರನ್ನಾಗಿ ಮಾಡುವ ಯಾವುದನ್ನೇ ಆಗಲಿ ವಿಷದಂತೆ ತಿರಸ್ಕರಿಸಿ, ಅದರಲ್ಲಿ ಜೀವವಿಲ್ಲ, ಅದು ಸತ್ಯವಾಗಿರುವುದು ಸಾಧ್ಯವಿಲ್ಲ."

ಹಿಂದಿನ ಭವ್ಯ ವೈಭವಗಳನ್ನು ಹಗಲುಗನಸು ಕಾಣುತ್ತಾ ಕುಳಿತಿರುವುದರ ವಿರುದ್ಧ ಬಹಿರಂಗವಾಗಿ ಧೈರ್ಯವಾಗಿ ಮಾತನಾಡಿದ ಮೊದಲಿಗರು ವಿವೇಕಾನಂದರು. ಅವರು ಭಾರತ ರಾಷ್ಟ್ರವು ತನ್ನ ಭವಿಷ್ಯವನ್ನು ದೃಢತೆಯಿಂದಲೂ ದರ್ಶನದಿಂದಲೂ ಕಟ್ಟಬೇಕು ಎಂದು ಆಶಿಸಿದರು. "ಭಗವಂತ, ಗತಕಾಲದ ಮೇಲೆಯೇ ಶಾಶ್ವತವಾಗಿ ಜೀವಿಸಬೇಕೆಂಬ ಮನೋಭಾವದಿಂದ ನಮ್ಮ ನೆಲ ವಿಮುಕ್ತವಾಗುವುದಾದರೂ ಎಂದು ?" ಎಂದರು ಅವರು. "ಮತವು ಹೊಟ್ಟೆಗೆ ಇಲ್ಲದವರಿಗ ಎಂದಲ್ಲ; ಅದು ಮಾನವ ಕುಲಕೋಟಿಯ ಯೋಗಕ್ಷೇಮಕ್ಕಾಗಿ" ಎಂದು ಅವರು ಘೋಷಿಸಿದರು. ಪಶ್ಚಿಮ ದೇಶಗಳಲ್ಲಿ ಅವರು ಮಾಡಿದ ಎರಡೂ ಪ್ರವಾಸಗಳು ಪೂರ್ವದೇಶಗಳ ಪ್ರತ್ಯಾಕ್ರಮಣಕ್ಕಾಗಿ ಸೇತುಮಾರ್ಗವನ್ನು ನಿರ್ಮಿಸಿದರ, ಮಹಿಳೆಯರು, ಜಾತಿ ಬಹಿಷ್ಕೃತರು ಮತ್ತು ದಲಿತರ ಉದ್ಧಾರಕ್ಕಾಗಿ ಅವರು ಕೈಗೊಂಡ ಕೆಲಸಗಳು ರಾಷ್ಟ್ರೀಯತಗ ವಿಶಾಲವಾದ ತಳಹದಿಯನ್ನು ಒದಗಿಸಿದುವು.

ಅನೇಕ ವಿದೇಶೀ ರಾಷ್ಟ್ರಗಳಲ್ಲಿ ನಡದ ಘಟನೆಗಳೂ ಭಾರತೀಯರಲ್ಲಿ ಬಿರುಸಾದ ರಾಷ್ಟ್ರೀಯತಾ ಭಾವನೆ ಉಕ್ಕಲು ನೆರವಾದವು. ವಿಶೇಷವಾಗಿ, 1868 ರ ನಂತರ ಜಪಾನು ಆಧುನಿಕ ಬಲಿಷ್ಠ ರಾಷ್ಟ್ರವಾಗಿ ಉದಿಸಿದ್ದು ಭಾರತೀಯರಿಗೆ ಹೊಸದೊಂದು ಆಸೆಯನ್ನು ತಂದುಕೊಟ್ಟಿತ್ತು. ಹಿಂದುಳಿದ ಏಷ್ಯನ್ ರಾಷ್ಟ್ರವೊಂದು ತನ್ನದೇ ಸ್ವಂತ ಪ್ರಯತ್ನಗಳಿಂದ ಅಭಿವೃದ್ಧವಾಗಬಹುದು, ಬಲಿಷ್ಠವಾಗಬಹುದು ಎಂಬುದನ್ನು ಜಪಾನು ತೋರಿಸಿಕೊಟ್ಟಿತು. 50 ವರ್ಷಗಳಿಗಿಂತಲೂ ಕಡಮೆ ಕಾಲದಲ್ಲಿ ಜಪಾನು ಒಂದು ಕೈಗಾರಿಕಾ ರಾಷ್ಟ್ರವೂ, ಪ್ರಬಲವಾದ ಮಿಲಿಟರಿ ಶಕ್ತಿಯೂ ಆಗಿ

ಪರಿಣಮಿಸಿತ್ತು. ಸಾರ್ವತ್ರಿಕವಾದ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತಂದುದಲ್ಲದೆ ಸಮರ್ಪಕವೂ ಆಧುನಿಕವೂ ಆದ ಆಡಳಿತ ವ್ಯವಸ್ಥೆಯನ್ನು ರೂಪುಗೊಳಿಸಿತ್ತು. ಭಾರತ ಅನುಸರಿಸಬೇಕಾದ ಮಾದರಿ ಇಲ್ಲಿತ್ತು. ಅದೇ ರೀತಿ 1896 ರಲ್ಲಿ ಇಥಿಯೋಪಿಯದೆದುರಿಗೆ ಇಟಲಿಯು ಸೋತದ್ದು, 1905 ರಲ್ಲಿ ರಷ್ಯಾದ ಮೇಲೆ ಜಪಾನು ಗೆದ್ದದ್ದು ಇವು ಬಿಳಿಯರ ಇತರ ಜನಾಂಗಗಳ ಮೇಲಣ ಸಾರ್ವಭೌಮತ್ವ ವನ್ನು ಸುಳ್ಳಾಗಿಸಿದುವು.

ಐರ್ಲೆಂಡ್, ರಷ್ಯಾ, ಈಜಿಪ್ಟ್, ಟರ್ಕಿ ಮತ್ತು ಚೈನಾ ದೇಶಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಜನತೆ ನಡೆಸಿದ ಹೋರಾಟಗಳು ಭಾರತೀಯರಿಗೆ ಒಂದು ಅಂಶವನ್ನು ಮನದಟ್ಟು ಮಾಡಿದುವು. ತನ್ನ ತತ್ತ್ವಗಳಿಗಾಗಿ ಕಷ್ಟವನ್ನು ಅನುಭವಿಸಲು ಸಿದ್ಧವಾಗಿರುವ ಒಂದು ಏಕೀಕೃತ ರಾಷ್ಟ್ರವು, ಅತ್ಯಂತ ಬಲಿಷ್ಠವಾದ ಸರಕಾರವನ್ನೇ ಆಗಲಿ, ಎದುರಿಸಿ ಹೋರಾಡುವುದು ಸಾಧ್ಯ ಎಂಬುದೇ ಅದು.

ಆದರೆ ತೀವ್ರಗಾಮಿಗಳಲ್ಲಿ ಬಹು ಪ್ರಸಿದ್ಧರಾದ ನಾಯಕರು ಬಾಲಗಂಗಾಧರ ತಿಲಕ್. ಆಮೇಲೆ ಅವರು ಲೋಕಮಾನ್ಯ ತಿಲಕ್ ಎಂದೇ ಹೆಸರಾದರು. ತಿಲಕ್ ಹುಟ್ಟಿದ್ದು 1866 ರಲ್ಲಿ. ಬೊಂಬಾಯಿ ವಿಶ್ವವಿದ್ಯಾನಿಲಯದಿಂದ ಪದವಿ ಪಡೆದು ತಮ್ಮ ಜೀವನವನ್ನು ಸಂಪೂರ್ಣವಾಗಿ ದೇಶದ ಸೇವೆಗೆ ಅವರು ಮೀಸಲಿಟ್ಟರು. ಅವರು ಪತ್ರಿಕೋದ್ಯಮದಲ್ಲಿ ತಮಗಿದ್ದ ಅಪಾರವಾದ ಸೂಕ್ಷ್ಮಗ್ರಹಣಶಕ್ತಿಯನ್ನು ತಮ್ಮ ರಾಜಕೀಯ ಉದ್ದೇಶಗಳ ಪರವಾಗಿ ಜನಾಭಿಪ್ರಾಯವನ್ನು ರೂಢಿಸುವ ಕಾರ್ಯಕ್ಕೆ ಬಹು ಚೆನ್ನಾಗಿ ಉಪಯೋಗಿಸಿಕೊಂಡರು. ಸಿ.ಜಿ. ಅಗರ್‌ಕರ್ ಅವರೊಂದಿಗೆ ತಿಲಕರು **ಮರಾಠಾ** ಎಂಬ ಹೆಸರಿನ ಇಂಗ್ಲಿಷ್ ಪತ್ರಿಕೆಯನ್ನೂ, **ಕೇಸರಿ** ಎಂಬ ಮರಾಠೀ ಪತ್ರಿಕೆಯನ್ನೂ ಸ್ಥಾಪಿಸಿದರು. 1889 ರಿಂದ ತಿಲಕರು ತಾವೇ ಕೇಸರಿಯ ಸಂಪಾದಕರಾದರು. ಆ ಪತ್ರಿಕೆಯು ರಾಷ್ಟ್ರೀಯತೆಗಾಗಿ ಹೋರಾಡುವ ಅತಿಪ್ರಮುಖ ಪತ್ರಿಕೆಯಾಗಿ ಪರಿಣಮಿಸಿತು. ಜನರು ನಿರ್ಭೀತರಾಗಿ, ಸ್ವಾರ್ಥರಹಿತ ರಾಗಿ, ಅಭಿಮಾನಿಗಳಾಗಿ ಮತ್ತು ಆತ್ಮಭರವಸೆಯುಳ್ಳವರಾಗಿರಬೇಕು ಎಂದು ಅವರು ಬರೆದರು, ಭಾಷಣ ಮಾಡಿದರು. ಜನಸಾಮಾನ್ಯರಲ್ಲಿ ರಾಷ್ಟ್ರೀಯತಾ ಭಾವನೆಗಳನ್ನು ಪ್ರಚುರಗೊಳಿಸುವುದಕ್ಕಾಗಿ ಅವರು ಸಾಂಪ್ರದಾಯಿಕವಾದ ಗಣೇಶ ಉತ್ಸವಗಳಲ್ಲಿ ಭಾಗವಹಿಸಿದರು, ಶಿವಾಜಿ ಉತ್ಸವಗಳನ್ನು ವ್ಯವಸ್ಥೆಗೊಳಿಸಿದರು.

ಮಹಾರಾಷ್ಟ್ರದ ರೈತರು ಕ್ಷಾಮವೋ, ರೋಗವೋ, ಮತ್ತೊಂದೋ ಕಾರಣದಿಂದ ಬೆಳೆ ತಪ್ಪಿಹೋದ ಸಂದರ್ಭಗಳಲ್ಲಿ ಕಂದಾಯ ಕೊಡುವುದನ್ನು ನಿಲ್ಲಿಸಬೇಕೆಂದು ಅವರಿಗೆ ಬುದ್ಧಿ ಹೇಳಿದ ಮೊದಲ ವ್ಯಕ್ತಿ ತಿಲಕರೇ. ಭಾರತದ ಮಿಲ್ ಬಟ್ಟೆಗಳ ಮೇಲೆ ವೈಸರಾಯ್ ಎಲ್ಗಿನ್ ಸುಂಕವನ್ನು ಹೇರಿದಾಗ ಬ್ರಿಟಿಷ್ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶೀ ವಸ್ತುಗಳನ್ನು ಬಳಸಬೇಕೆಂದು ಅವರು ಕರೆ ನೀಡಿದರು.

ಬ್ರಿಟಿಷ್ ಅಧಿಕಾರಿಗಳು ಇದರಿಂದ ಗೊಂದಲಕ್ಕೆ ಬಿದ್ದದ್ದು ಅನಿರೀಕ್ಷಿತವಲ್ಲ. 1897 ರಲ್ಲಿ ಅವರು ತಿಲಕರನ್ನು ಬಂಧಿಸಿದರು. ಸರಕಾರದ ವಿರುದ್ಧ ದ್ವೇಷ ಮತ್ತು ಅವಿಶ್ವಾಸಗಳನ್ನು ಹರಡುತ್ತಿದ್ದಾರೆ ಅದು ಪ್ಲೇಗ್ ಅಧಿಕಾರಿಗಳಾದ ರ್‍ಯಾಂಡ್ ಮತ್ತು ಆರ್ಸ್ಟ್‌ರನ್ನು ಕೊಲೆ ಮಾಡಲು ದಾರಿ ಮಾಡಿದೆ ಎಂದು ಅವರ ಮೇಲೆ ಆರೋಪ

ಹೊರಿಸಿದರು. ತಿಲಕರು ಮಾಡಿದ ಆತ್ಮಸಮರ್ಥನೆ ದಿಟ್ಟತನದ್ದಾಗಿತ್ತು. ಅದರಲ್ಲಿ ಅಳುಕಿರಲಿಲ್ಲ. ಕ್ಷಮಾಯಾಚನೆ ಮಾಡಲು ಅವರು ನಿರಾಕರಿಸಿದರು. 18 ತಿಂಗಳ ಕಾಲದ ಸಶ್ರಮ ಕಾರಾಗೃಹ ಶಿಕ್ಷೆಯನ್ನು ಸಂತೋಷ ಅಭಿಮಾನಗಳಿಂದ ಒಪ್ಪಿಕೊಂಡರು. ಅವರ ಮಾದರಿ ಮತ್ತು ತ್ಯಾಗ ದೇಶಾದ್ಯಂತ ವಿದ್ಯುತ್ ಪರಿಣಾಮವನ್ನು ಬೀರಿದುವು. ನೂತನ ರಾಷ್ಟ್ರೀಯತೆಯ ಸಜೀವ ಸಂಕೇತವಾದರು ತಿಲಕ್.

ಲೋಕಮಾನ್ಯ ತಿಲಕರ ಜೊತೆಗೆ, ರಾಷ್ಟ್ರೀಯತೆಯ ಈ ಉಗ್ರಪಂಥದ ಇನ್ನಿತರ ಪ್ರಮುಖ ನಾಯಕರು ಬಿಪಿನ್ ಚಂದ್ರಪಾಲ್, ಅರಬಿಂದೋ ಘೋಷ್ ಮತ್ತು ಲಾಲಾ ಲಜಪತರಾಯ್. ಅವರ ಕಾರ್ಯನಿಯೋಜನೆಯಲ್ಲಿ ಮೂರು ಅಂಶಗಳಿದ್ದುವು. ಎಲ್ಲಕ್ಕಿಂತ ಮೊದಲು, ಭಾರತೀಯರು ತಾವೇ ಶ್ರಮಿಸಿ ತಮ್ಮ ಸ್ವಾತಂತ್ರ್ಯವನ್ನು ಪಡೆಯಬೇಕು, ವಿದೇಶೀ ಆಳಿಕೆಯಲ್ಲಿ ಅವರು ಬಲಾತ್ಕಾರವಾಗಿ ವಹಿಸಿಕೊಳ್ಳಬೇಕಾಗಿ ಬಂದಿರುವ ಅಪಮಾನದ ನೆಲೆಯಿಂದ ಮೇಲೆ ಏರಬೇಕು ಎಂದು ಅವರು ಅಪೇಕ್ಷಿಸಿದರು. ಈ ಗುರಿಯ ಸಾಧನೆಗಾಗಿ ಯಾವ ತ್ಯಾಗವೂ ದೊಡ್ಡದಲ್ಲ, ಯಾವ ಬವಣೆಯೂ ಹೆಚ್ಚಲ್ಲ. ಆದ್ದರಿಂದ ಸ್ವದೇಶದಲ್ಲಿ ತಯಾರಾದ ವಸ್ತುಗಳನ್ನೇ ಬಳಸಬೇಕು, ವಿದೇಶೀ ವಸ್ತುಗಳನ್ನು ಬಹಿಷ್ಕರಿಸಿದರೂ ಸರಿ ಎಂದು ಅವರು ಮನವಿ ಮಾಡಿಕೊಂಡರು. ಎರಡನೆಯದಾಗಿ, ಭಾರತಕ್ಕೆ ವಿದೇಶೀಯರ ನೆರವಾಗಲಿ 'ಧರ್ಮಶೀಲ ನಿರ್ದೇಶನ'ವಾಗಲಿ ಅಗತ್ಯ ಎಂಬುದನ್ನು ಸಂಪೂರ್ಣವಾಗಿ ಸುಳ್ಳೆಂದು ದೃಢಪಡಿಸಿದರು. ವಿದೇಶೀ ಆಳಿಕೆಯನ್ನು ಅವರು ದ್ವೇಷಿಸಿದರು. ಸ್ವರಾಜ್ಯ ಅಥವಾ ಪೂರ್ಣ ಸ್ವಾತಂತ್ರ್ಯವೊಂದೇ ಹೋರಾಟಕ್ಕೆ ಅರ್ಹವಾದ ಗುರಿ ಎಂದು ಸಾರಿದರು. ಕೊನೆಯದಾಗಿ, ಜನಸಾಮಾನ್ಯರ ಶಕ್ತಿಯಲ್ಲಿ ಅವರಿಗೆ ಅಚಲವಾದ ವಿಶ್ವಾಸವಿತ್ತು, ಸಾಮೂಹಿಕ ಚಟುವಟಿಕೆಯ ಮೂಲಕವಾಗಿ ಸ್ವಾತಂತ್ರ್ಯವನ್ನು ಗಳಿಸಲು ಅವರು ಸಿದ್ಧರಾದರು.

### *ಬಂಗಾಳದ ವಿಭಜನೆ ಮತ್ತು ಅದಕ್ಕೆ ಬಂಗಾಳೀ ಪ್ರತಿಕ್ರಿಯೆ*

ಕರ್ಜನನು (Curzon) ಚಿತ್ರವನ್ನು ಪ್ರವೇಶಿಸಿದಾಗ ಉಗ್ರಪಂಥದ ಉದ್ರೇಕ ಆಗಲೇ ಕೆಲಸ ಮಾಡಲು ತೊಡಗಿತ್ತು. ಅವನ ನೀತಿ ಅದರ ವಿಕಾಸವನ್ನು ಇನ್ನಷ್ಟು ಚುರುಕುಗೊಳಿಸಿತು ಅಷ್ಟೆ. ಆಗ ಪ್ರಚಲಿತವಾಗಿದ್ದ ಸ್ವಯಮಾಡಳಿತ, ಶಿಕ್ಷಣ ಸ್ವಾಯತ್ತತೆ ಮತ್ತು ಪತ್ರಿಕಾ ಸ್ವಾತಂತ್ರ್ಯ ಎಂಬ ಆದರ್ಶಗಳ ಎದುರಾಗಿ ಅವನು ತಿರುಗಿಬಿದ್ದನು. ಕಲ್ಕತ್ತಾ ಕಾರ್ಪೊರೇಷನಿನಲ್ಲಿದ್ದ ಭಾರತೀಯರ ಸಂಖ್ಯೆಯನ್ನು ತಗ್ಗಿಸಿದನು. ಶಿಕ್ಷಣ ಸುಧಾರಣೆಗಳೆಂಬ ಹೆಸರಿನಲ್ಲಿ ಭಾರತೀಯ ವಿಶ್ವವಿದ್ಯಾನಿಲಯಗಳ ಮೇಲೆ ಅಧಿಕೃತ ನಿಯಂತ್ರಣವನ್ನು ಹೆಚ್ಚುಮಾಡಿದನು. ಕರ್ಜನನೇ ನೇಮಿಸಿದ ಒಂದು ವಿಶ್ವವಿದ್ಯಾನಿಲಯ ಆಯೋಗವು ಎರಡನೆಯ ದರ್ಜೆಯ ಕಾಲೇಜುಗಳನ್ನೂ ನ್ಯಾಯಶಾಸ್ತ್ರ ತರಗತಿಗಳನ್ನೂ ಮುಚ್ಚುವಿಕೆ, ಶುಲ್ಕಗಳ ಹೆಚ್ಚಳ, ಸೆನೆಟ್ ಸದಸ್ಯರ ಕಾರ್ಯಾವಧಿ ಹಾಗೂ ಸಂಖ್ಯೆಗಳ ಇಳಿತಾಯ, ಶಿಕ್ಷಣ ಇಲಾಖೆಯ ಮೇಲೆ ಹೆಚ್ಚು ಬಿಗಿಯಾದ ಹಿಡಿತ, ಮಂಜೂರಾತಿಯ ಮೇಲೆ ವ್ಯಾಪಕವಾದ ಅಧಿಕಾರಗಳು - ಈ ವಿಚಾರಗಳನ್ನು ಶಿಫಾರಸು ಮಾಡಿತು. ನ್ಯಾಯಶಾಸ್ತ್ರ ತರಗತಿಗಳನ್ನೂ ಎರಡನೆಯ

ದರ್ಜೆಯ ಕಾಲೇಜುಗಳನ್ನೂ ಮುಚ್ಚುವುದೆಂದರೆ, ಅವುಗಳಲ್ಲಿ ಪಾಠ ಹೇಳುತ್ತಿದ್ದ ವರಿಗೆ, ಅವುಗಳನ್ನು ನಡೆಸುತ್ತಿದ್ದವರಿಗೆ ಕೆಲಸ ಕಳೆದು ಹೋಗುವುದು ಮಾತ್ರವಲ್ಲ, ಉನ್ನತ ಶಿಕ್ಷಣವನ್ನಾಗಲಿ ವಕೀಲಿ ವೃತ್ತಿಯನ್ನಾಗಲಿ ಹಿಡಿಯಬೇಕೆಂಬ ಅಪೇಕ್ಷೆಯಿರುವ ಭಾರತೀಯರಿಗೆ ಅವಕಾಶಗಳು ಸ್ಥಗಿತವಾಗುತ್ತಿದ್ದುವು ಎಂದರ್ಥ. ಶುಲ್ಕ ಹೆಚ್ಚಾದು ದರಿಂದ ಗುಮಾಸ್ತ ಕೆಲಸ ಹಾಗೂ ಉಪಾಧ್ಯಾಯ ಕೆಲಸ ಹಿಡಿಯಲು ಬಡವರಾದ ವರಿಗೆ ದಾರಿ ಕಟ್ಟಿಹೋಗುತ್ತಿತ್ತು. ಮಿತಗಾಮಿಗಳು ಮಸೂದೆಯನ್ನು ವಿರೋಧಿಸಿ ದರು. ಆದರೆ ಕರ್ಜನ್ ಯಾವ ರಿಯಾಯಿತಿಯನ್ನೂ ತೋರಿಸಲಿಲ್ಲ. ರಾಷ್ಟ್ರೀಯ ಶಿಕ್ಷಣಕ್ಕೆ ಬೇಡಿಕೆ ಬಲವಾಯಿತು.

ಕರ್ಜನನು ಜಾರಿಗೆ ತಂದ ಭಾರತೀಯ ಅಧಿಕಾರಿಕ ರಹಸ್ಯಗಳ ತಿದ್ದುಪಡಿ ಶಾಸನದ (Indian Official Secrets (Amendment) Act) ಉದ್ದೇಶ ದಮನಕಾರಿ ಗಳಾಗಿದ್ದ ಅಧಿಕಾರಿಗಳನ್ನು ಸಾರ್ವಜನಿಕ ಟೀಕೆಗಳಿಂದ ರಕ್ಷಿಸುವುದಾಗಿತ್ತು. ಅದು ಲಿಟ್ಟನನ (Lytton) ನೀತಿಯ ಮುಂದುವರಿಕೆಯಾಗಿದ್ದು, ಪರಿಣಾಮದಲ್ಲಿ ಪತ್ರಿಕೆ ಗಳನ್ನು ಮುಂಚೆಗಿಂತಲೂ ಹೆಚ್ಚು ರಾಷ್ಟ್ರೀಯವಾಗಿ ಮಾಡಿತು. ಕರ್ಜನ್ ವಿದೇಶೀ ನಿಯೋಗಗಳ ಮೇಲೆ, ದೆಹಲಿ ದರ್ಬಾರು ಮತ್ತು ಟಿಬೇಟಿಯನ್ ದಂಡಯಾತ್ರೆಗಳ ಮೇಲೆ ಭಾರತದ ಹಣವನ್ನು ಧಾರಾಳವಾಗಿ ಖರ್ಚುಮಾಡಿದನು. ನೆಲಗಂದಾಯ ವನ್ನು ಕಡಮೆಮಾಡಲು ಅವನು ಒಪ್ಪಲಿಲ್ಲ. ಕೊನೆಗೆ ಬಂದಿತು, ಬಂಗಾಳದ ವಿಭಜನೆ. ಹಿಡಿತಕ್ಕೆ ಸಿಕ್ಕದಷ್ಟು ದೊಡ್ಡದಾಗಿರುವ ಪ್ರಾಂತದಲ್ಲಿ ಉತ್ತಮ ರೀತಿಯಲ್ಲಿ ಆಡಳಿತ ನಡೆಸುವುದಕ್ಕಾಗಿ ಇದು ಅಗತ್ಯ ಎಂದು ಮೇಲಿಂದಮೇಲೆ ಹೇಳಿ ಕೊಳ್ಳಲಾಯಿತು. ಆದರೆ ನಿಜವಾಗಿ ಅದರ ಉದ್ದೇಶ ಉಗ್ರಗಾಮಿಗಳಾಗಿದ್ದ ಬಂಗಾಳಿ ರಾಷ್ಟ್ರೀಯತಾವಾದಿಗಳನ್ನು ಅಡಗಿಸುವುದು. ಆಡಳಿತದ ಅನುಕೂಲತೆ ಮತ್ತು ಅಸ್ಸಾಮಿನ ಅಭಿವೃದ್ಧಿ ಈ ಪಂಚಿಕೆಯ ಅಂಗೀಕೃತ ಉದ್ದೇಶಗಳಾಗಿದ್ದುವು. ಆದರೆ ಮಧ್ಯೆ ರಾಜಕೀಯ ನುಸುಳಿತ್ತು. "ಕಲ್ಕತ್ತೆಯ ಹಾನಿಕಾರಕ ಪ್ರಭಾವದಿಂದ" ಪೂರ್ವ ಭಾಗದ ಜಿಲ್ಲೆಗಳನ್ನು ವಿಮುಕ್ತಗೊಳಿಸುವ ವಿಚಾರವಾಗಿಯೂ, "ಮುಸ್ಲಿಮರಿಗೆ ಅಧಿಕತರವಾದ ನ್ಯಾಯ ಒದಗಿಸುವ" ವಿಚಾರವಾಗಿಯೂ ಅಧಿಕಾರಿಗಳು ಮಾತನಾಡಿದರು. ಫ್ರೇಸರ್ (Fraser) ಮತ್ತು ರಿಸ್ಲೇ (Risley) ಆಗ ಉಗ್ರಗಾಮಿತ್ವದ ಬಿಸಿಯೇರಿದ್ದ ಬಖಾರ್‌ಗಂಜ್ ಮತ್ತು ಫರೀದ್‌ಪುರಗಳನ್ನು ಬಿಟ್ಟುಬಿಡಬೇಕೆಂದು ಅಪೇಕ್ಷಿಸಿದರು.

ಇದಕ್ಕೆ ವ್ಯಾಪಕವಾದ ವಿರೋಧ ತಲೆದೋರಿತು. ಕಾಂಗ್ರೆಸ್ಸು ಈ ಯೋಜನೆಯನ್ನು "ಅಸಂಬದ್ಧ" ಎಂದಿತು. ಇದಕ್ಕೆ ಎರಡು ಬದಲಿ ಮಾರ್ಗಗಳನ್ನು ಸೂಚಿಸಲಾಯಿತು. ಒಂದೇ ಬಂಗಾಳವನ್ನು ಒಬ್ಬ ಗವರ್ನರನ ಅಧೀನದಲ್ಲಿಡುವುದು, ಇಲ್ಲವೇ ಬಂಗಾಳಿ ಮಾತಾಡುವ ಜನರನ್ನು ವಿಭಾಗಿಸದೆ, ಹಿಂದಿ ಮತ್ತು ಒರಿಯಾ ಭಾಷೆಗಳನ್ನಾಡುವ ಜನರನ್ನು ಬೇರೆ ಮಾಡುವುದು. ಕರ್ಜನನು ಈ ವಿರೋಧವನ್ನು ಬಂಗಾಳಿ ಬಾಬುಗಳ ಪೊಳ್ಳುಮಾತುಗಳೆಂದು ಅಲಕ್ಷಿಸಿ ಅತ್ತ ನೂಕಿದನು. ಇದರಿಂದ ಬಂಗಾಳದ ವಿಭಜನೆ ರಾಜಕೀಯವಾಗಿ ಅಪೇಕ್ಷಣೀಯ ಎಂಬುದು ಸಮರ್ಥಿತವಾಗುತ್ತಿತ್ತು ಅಷ್ಟೆ. ಸರಕಾರವು ಮಣಿದದ್ದೇ ಆದರೆ ಭಾರತದ ಪೂರ್ವಭಾಗದಲ್ಲಿ ಅಧಿಕವಾದ

ತೊಂದರೆಯು ಮೂಲವೊಂದು ಭದ್ರವಾಗಿ ನಿಂತಂತಾಗುತ್ತಿತ್ತು.

1904 ರಲ್ಲಿ ಪೂರ್ವ ಬಂಗಾಳಕ್ಕೆ ಭೇಟಿ ನೀಡಿದ್ದಾಗ ಕರ್ಜನ್ ಮೊದಲಿನ ಯೋಜನೆಯನ್ನು ವಿಸ್ತರಿಸಿದನು. ಈಗ ಬಂಗಾಳವು ಒಟ್ಟಿನಲ್ಲಿ ಹದಿನೈದು ಜಿಲ್ಲೆಗಳನ್ನು ಕಳೆದುಕೊಳ್ಳಲಿತ್ತು. ಅದರ ಜನಸಂಖ್ಯೆ 54 ದಶಲಕ್ಷಕ್ಕೆ ಇಳಿಯುತ್ತಿತ್ತು. ರಿಸ್ಲೇ ಹೀಗೆ ಬರೆದನು: "ಒಗ್ಗಟ್ಟಾದ ಬಂಗಾಳವು ನಿಜವಾಗಿಯೂ ಒಂದು ಶಕ್ತಿ. ಆದರೆ ಅದನ್ನು ಒಡೆದರೆ ಶಕ್ತಿ ಅನೇಕ ಮುಖವಾಗಿ ಕೆಳಗಿಳಿಯುತ್ತದೆ. ...ನಮ್ಮ ಮುಖ್ಯ ಧ್ಯೇಯಗಳಲ್ಲಿ ಒಂದು, ನಮ್ಮ ಆಳಿಕೆಗೆ ವಿರುದ್ಧವಾಗಿರುವ ಬಲಿಷ್ಠವಾದ ಅಂಗ ಯಾವುದಾದರೂ ಇದ್ದರೆ, ಮೊದಲು ಅದನ್ನು ಒಡೆದು ಆ ಮೂಲಕ ದುರ್ಬಲಗೊಳಿಸುವುದು." "ಬಂಗಾಳಿಗಳಿಗೆದುರಾಗಿ ಒಂದು ಪ್ರಬಲ ಆಘಾತವನ್ನೊಡ್ಡುವುದು ಎನ್ನುವ ಅಪೇಕ್ಷೆ ಮಿಕ್ಕೆಲ್ಲವನ್ನೂ ಮೀರಿಸಿತ್ತು" ಎಂದು ಲಾರ್ಡ್ ಹಾರ್ಡಿಂಜ್ (Lord Hardinge) ಆಮೇಲೆ ಒಪ್ಪಿಕೊಂಡನು. ಆದರೆ ಬಂಗಾಳಿ ಜನತೆಯ ಒಕ್ಕೊರಲಿನ ವಿರೋಧದಲ್ಲಿ ಅಧಿಕಾರಿಗಳ ಹಂಚಿಕೆಗಳೆಲ್ಲವೂ ಮುಳುಗಿಹೋಗಬೇಕಾಯಿತು. ಜಮೀನ್ದಾರರು, ವಕೀಲರು, ವರ್ತಕರು, ನಗರಗಳ ಬಡಜನರು, ಕಾರ್ಮಿಕರು ಎಲ್ಲರಿಗಿಂತ ಮಿಗಿಲಾಗಿ ವಿದ್ಯಾರ್ಥಿಗಳು-ಇವರೆಲ್ಲರ ಏಕೀಕೃತ ವಿರೋಧದ ಎದುರಿಗೆ ಅವು ನಿಲ್ಲುವಂತಿರಲಿಲ್ಲ. ಅತ್ಯಂತ ಸೂಕ್ಷ್ಮ ಸಂವೇದನೆಯುಳ್ಳವರೂ ಅಭಿಮಾನಿಗಳೂ ಆದ ಜನರ ಭಾವನೆಗಳನ್ನು ಅಧಿಕಾರಿಗಳೂ ಕ್ರೂರವಾಗಿ ಹೊಸಕಿಹಾಕಿದ್ದರು.

### *ವಿಭಜನ-ವಿರೋಧೀ ಚಳುವಳಿ*

ಸೆಕ್ರೆಟರಿ ಆಫ್ ಸ್ಟೇಟ್ ಅಧಿಕಾರಿಯ ಒಲ್ಲದ ಮನಸ್ಸಿನ ಅನುಮತಿಯನ್ನು ಪಡೆದು ಕರ್ಜನನು 1905 ರ ಜುಲೈ ತಿಂಗಳಲ್ಲಿ ಯೋಜನೆಯನ್ನು ಪ್ರಕಟಿಸಿದನು. ತಾನು ಯಾವುದನ್ನು ನಾಶಮಾಡಲು ಪ್ರಯತ್ನಿಸಿದ್ದನೋ ಆ ಐಕ್ಯತೆಯನ್ನು ತಾನೇ ಉಂಟುಮಾಡಿದಂತಾಯಿತು ಎಂದು ಆಗ ಅವನಿಗೆ ಗೊತ್ತಾಯಿತು. ಬಂಗಾಳೀ ಜನತೆಯ ಎಲ್ಲ ವರ್ಗಗಳೂ, ಇಡೀ ರಾಷ್ಟ್ರದ ನಾಯಕರೆಲ್ಲರೂ ಒಂದಾಗಿ ಸೇರಿ ಚಳುವಳಿ ನಡೆಸಿದರು. ಮೊದಲ ಹಂತಗಳಲ್ಲಿ ಸುರೇಂದ್ರನಾಥ ಬ್ಯಾನರ್ಜಿಯವರಂತಹ ಮಿತಗಾಮಿಗಳು ನಾಯಕತ್ವ ವಹಿಸಿದ್ದರೂ, ಬೇಗನೆ ಹೆಚ್ಚು ಉಗ್ರಗಾಮಿಗಳಾದ ಬಿಪಿನ್ ಚಂದ್ರಪಾಲ್, ಅಶ್ವಿನೀಕುಮಾರ್ ದತ್ತ ಮತ್ತು ಅರವಿಂದ ಘೋಷ್ ಮೊದಲಾದವರು ಚಳುವಳಿಯನ್ನು ತಮ್ಮ ಹತೋಟಿಗೆ ತಂದುಕೊಂಡರು. ಗ್ರಾಮೀಣ ಜನತೆಯನ್ನು ಮುಟ್ಟಿದ್ದರೂ ಮುಖ್ಯವಾಗಿ ಅದು ಇನ್ನೂ ನಗರ ಚಳುವಳಿಯಾಗಿತ್ತು.

1905 ರ ಆಗಸ್ಟ್ 7 ರಂದು ಕಲ್ಕತ್ತದ ಪುರಸಭೆಯಲ್ಲಿ ಬೃಹತ್ ಸಭೆಯೊಂದನ್ನು ನಡೆಸುವುದರ ಮೂಲಕ ಚಳುವಳಿ ಪ್ರಾರಂಭವಾಯಿತು. ಬ್ರಿಟಿಷ್ ವಸ್ತುಗಳನ್ನು ಬಹಿಷ್ಕರಿಸಬೇಕೆಂಬ ನಿರ್ಣಯ ಅಲ್ಲಿ ಅಂಗೀಕೃತವಾಯಿತು. ವಿಭಜನೆಯನ್ನು ಜಾರಿಗೆ ತಂದ ಅಕ್ಟೋಬರ್ 16ನೆಯ ದಿನವನ್ನು ರಾಷ್ಟ್ರೀಯ ಶೋಕದಿನ ಎಂದು ಕರೆಯಲಾಯಿತು. ಅಂದು ಸಾರ್ವತ್ರಿಕ ಹರತಾಳ ನಡೆಯಿತು. ಜನ ಅಂದು

ಉಪವಾಸ ಮಾಡಿದರು, ಘೋಷಣೆಗಳನ್ನು ಕೂಗುತ್ತಾ, ರಾಷ್ಟ್ರಭಕ್ತಿಗೀತೆಗಳನ್ನು ಹಾಡುತ್ತಾ ಗಂಗೆಯಲ್ಲಿ ಸ್ನಾನಮಾಡಲು ಬರಿಗಾಲಿನಲ್ಲಿ ನಡೆಯುತ್ತಾ ಹೋದರು. ಹಿಂದೂಗಳು ಮತ್ತು ಮುಸ್ಲಿಮರು-ಬಂಗಾಳಿಗಳೆಲ್ಲರ ಸೋದರತ್ವದ ಸಂಕೇತವಾಗಿ ಪರಸ್ಪರ ರಕ್ಷಾಬಂಧನ ಕಟ್ಟಿದರು.

ರವೀಂದ್ರನಾಥರ ಸ್ವದೇಶೀ ಗೀತೆಗಳು ಜನತೆಯ ಅಳಲು ಮತ್ತು ಕ್ರೋಧಗಳಿಗೆ ಅಭಿವ್ಯಕ್ತಿ ಕೊಟ್ಟುವು. ಅವುಗಳ ಒಂದೊಂದು ಪಲುಕಿನಲ್ಲೂ ನೆಲದ ಮೇಲಿನ ಪ್ರೀತಿ, ವಿಭಾಗ ಹೊಂದಿ ಹೊರಟುಹೋಗುತ್ತಿರುವವರ ಬಗೆಗಿನ ಅಕ್ಕರೆಗಳು ಉಸಿರಾಡಿದುವು. ಬಂಗಾಳಿಗಳೆಲ್ಲರೂ ಪ್ರತಿಭಟಿಸಲು, ಸಂಕಟ ಅನುಭವಿಸಲು ಮತ್ತು ಬಲಿದಾನ ಮಾಡಲು ಒಬ್ಬ ವ್ಯಕ್ತಿಯಂತೆ ಮಲೆತು ನಿಂತರು. ಗ್ರಾಮಾಂತರ ಜಿಲ್ಲೆಗಳಾದ ಬಾರಿಸಾಲ್ ಮತ್ತು ಮೈಮೆನ್‌ಸಿಂಗ್‌ಗಳಿಗೂ ರಾಷ್ಟ್ರಪ್ರೇಮದ ಜ್ವಾಲೆ ಬಹುಬೇಗ ತಾಕಿತು. ವಾರಣಾಸಿಯ ಕಾಂಗ್ರೆಸಿನ ಅಧ್ಯಕ್ಷ ಪೀಠದಿಂದ ಮಾತನಾಡುತ್ತಾ ಗೋಖಲೆ ಈ ವಿಭಜನೆಯನ್ನು ಕುರಿತು "ಅದು ಕ್ರೂರವಾದ ತಪ್ಪು" ಎಂದೂ "ಅಧಿಕಾರಶಾಹೀ ಆಳಿಕೆಯ ಇಂದಿನ ಪರಿಸ್ಥಿತಿಯ ಅತಿ ಕೆಟ್ಟ ಲಕ್ಷಣಗಳು, ಸಾರ್ವಜನಿಕ ಅಭಿಪ್ರಾಯದ ಬಗೆಗೆ ಅದು ತಾಳಿರುವ ತೀವ್ರ ತಾತ್ಸಾರ, ಮೇಲ್ಪಟ್ಟದ ಬುದ್ಧಿವಂತಿಕೆಗೆ ಬದಲು ಅದರ ಒರಟು ಆಡಂಬರ, ಜನತೆಯು ಅತ್ಯಂತ ಪ್ರೀತಿಯಿಂದ ಪೋಷಿಸಿಕೊಂಡಿರುವ ಭಾವನೆಗಳಿಗೆ ನಿರ್ದಾಕ್ಷಿಣ್ಯ ನಿರ್ಲಕ್ಷ್ಯ... ಆಳಲ್ಪಡುತ್ತಿರುವವರ ಹಿತಕ್ಕಿಂತಲೂ ಆಳುವವರ ಹಿತವನ್ನು ಅದು ಗಮನಿಸುತ್ತಿರುವ ಶೀತಲ ಪ್ರವೃತ್ತಿ-ಇವುಗಳಿಗೆ ಪೂರ್ಣ ನಿದರ್ಶನವಾಗಿದೆ" ಎಂದು ಹೇಳಿದರು.

1905 ರಲ್ಲಿ ಜನತೆಯ ಭಾವನೆಗಳಿಂದಾಗಿ ಉದಿಸಿದ ಸ್ವದೇಶೀ ಹಾಗೂ ವಿದೇಶೀ ವಸ್ತು ಬಹಿಷ್ಕಾರ ಎಂಬ ಕಲ್ಪನೆಗಳು ಹೊಸವೇನಲ್ಲ. ಅಮೆರಿಕನರು, ಐರಿಷ್ ಜನರ, ಚೀನಿಯರು-ಇವರು ಅವುಗಳನ್ನು ಮೊದಲೇ ಅನುಸರಿಸಿದ್ದರು. ಭಾರತೀಯ ಕೈಗಾರಿಕೆಯ ಅಭಿವೃದ್ಧಿಗೆ ಶುದ್ಧಾಂಗವಾಗಿ ಆರ್ಥಿಕವಾದ ಕ್ರಮ ಸ್ವದೇಶಿ. ಇದನ್ನು ಮಹಾರಾಷ್ಟ್ರದ ಗೋಪಾಲರಾವ್ ದೇಶಮುಖ್, ಜಿ.ವಿ. ಜೋಶಿ ಮತ್ತು ಎಂ.ಜಿ. ರಾನಡೆ; ಬಂಗಾಳದ ರಾಜನಾರಾಯಣಬೋಸ್, ನಬಗೋಪಾಲಮಿತ್ರ ಮತ್ತು ಠಾಕೂರರ ಮನೆತನ-ಇವರು ಉಪದೇಶಿಸಿದ್ದರು. ಇದೇ ರೀತಿ ಭೋಲಾನಾಥ ಚಂದ್ರ 1870 ರಲ್ಲಿ, ಬ್ರಿಟಿಷ್ ಜನತೆಯ ಮೇಲೆ ಆರ್ಥಿಕ ಒತ್ತಡ ತರುವ ಸಲುವಾಗಿ ಬಹಿಷ್ಕಾರವನ್ನು ಶಿಫಾರಸುಮಾಡಿದ್ದರು. 1896 ರಲ್ಲಿ ತಿಲಕರು ಪೂರ್ಣ ಪ್ರಮಾಣದ ಬಹಿಷ್ಕಾರ (Boycott)ಚಳುವಳಿಯನ್ನೇ ನಡೆಸಿದ್ದರು. ಸ್ವದೇಶಿಯೂ, ವಿದೇಶೀ ವಸ್ತು ಬಹಿಷ್ಕಾರವೂ ಪರಸ್ಪರ ಪೂರಕವಾದುವು. ಒಂದಿಲ್ಲದೆ ಇನ್ನೊಂದು ಯಶಸ್ವಿಯಾಗುತ್ತಿರಲಿಲ್ಲ.

ವಿಭಜನ-ವಿರೋಧೀ ಚಳುವಳಿಯಿಂದಾಗಿ ಈ ಹಳೆಯ ಕಲ್ಪನೆಗಳಿಗೆ ಹೊಸ ಚೈತನ್ಯ ಮೂಡಿತು. ಆದರೆ ಮಿತಗಾಮಿಗಳಿಗೂ ತೀವ್ರಗಾಮಿಗಳಿಗೂ ಇದ್ದ ಭಿನ್ನಾಭಿಪ್ರಾಯವನ್ನು ಅದು ಬೆಳಕಿಗ ತಂದಿತು. ಮುಂಬಯಿಯ ಮಿತಗಾಮಿಗಳು ಸ್ವದೇಶೀ ತತ್ವವನ್ನು ಸ್ವಾಗತಿಸಿದರೂ, ರಾಜಕೀಯದ ಸಾಮಾನ್ಯ ಅಸ್ತ್ರವಾಗಿ ವಿದೇಶೀ ವಸ್ತು ಬಹಿಷ್ಕಾರದ ತತ್ವವನ್ನು ವಿರೋಧಿಸಿದರು. "ಇನ್ನೊಬ್ಬನನ್ನು ಘಾಸಿಗೊಳಿಸ

ಬೇಕೆಂಬ ಸೇಡಿನ ಭಾವನೆ" ಇರುವುದರಿಂದಲೂ, "ನಮ್ಮ ನಮ್ಮಲ್ಲಿಯೇ ಅನಾವಶ್ಯಕವಾದ ಅಸಮಾಧಾನಗಳನ್ನು ಹುಟ್ಟಿಸುವುದಾದ್ದರಿಂದಲೂ" ಗೋಖಲೆ 'ಬಹಿಷ್ಕಾರ' ಎಂಬ ಶಬ್ದವನ್ನೇ ಕೈಬಿಡಬೇಕೆಂದರು. ಆ ಕ್ಷಣದಲ್ಲಿ ನಡೆದಿರುವ ಅನ್ಯಾಯವನ್ನು ಸರಿಪಡಿಸಬೇಕೆಂದು ಹೋರಾಡುವುದಕ್ಕೆ ಬಹಿಷ್ಕಾರ ಒಂದು ವಿಶೇಷ ಕ್ರಮ ಎಂದು ಸುರೇಂದ್ರನಾಥ ಬ್ಯಾನರ್ಜಿ ಭಾವಿಸಿದರು. ವಿಭಜನೆಯನ್ನು ನಿರರ್ಥಕಗೊಳಿಸಿದರೆ ಆ ಶಬ್ದದ ಪ್ರಯೋಗ ನಿಂತುಹೋಗುತ್ತದೆ ಎಂದು ಅವರು ಆಶಿಸಿದರು. ಲಜಪತರಾಯ್ ಇನ್ನೂ ತೀವ್ರಗಾಮಿಗಳಾಗಿದ್ದರು. ಬ್ರಿಟಿಷರ ಗಮನವನ್ನು ಭಾರತೀಯರ ದುಃಖ ಸಂಕಟಗಳ ಕಡೆಗೆ ತಿರುಗುವಂತೆ ಮಾಡಬೇಕಾದರೆ, ಅವರ ಖಜಾನೆಗೇ ನೇರವಾಗಿ ಬೆದರಿಕೆಯೊಡ್ಡಬೇಕು ಎಂದರವರು. ತಿಲಕ್, ಪಾಲ್ ಮತ್ತು ಅರಬಿಂದೋ ಇವರಿಗಾದರೋ 'ಬಾಯ್ಕಾಟ್' (ಬಹಿಷ್ಕಾರ) ಎಂಬ ವಿಚಾರ ಅನೇಕ ಅಂಶಗಳನ್ನು ಒಳಗೊಂಡಿತ್ತು; ಮ್ಯಾಂಚೆಸ್ಟರಿನ ಮೇಲೆ ಹಾಕಿದ ಆರ್ಥಿಕ ಒತ್ತಡ, ಸಾಮ್ರಾಜ್ಯಶಾಹಿಯ ವಿರುದ್ಧ ರಾಜಕೀಯ ಚಳುವಳಿ, ಸ್ವರಾಜ್ಯದ ಗಳಿಕೆಗೆ ಬೇಕಾದ ಸ್ವಸಂಪೂರ್ಣತೆಯಲ್ಲಿ ಶಿಕ್ಷಣ, ಇತ್ಯಾದಿ.

ತಾತ್ಕಾಲಿಕವಾಗಿ ಭಿನ್ನಾಭಿಪ್ರಾಯಗಳನ್ನು ಸಮಾಧಾನಪಡಿಸಿಕೊಳ್ಳಲಾಯಿತು. ವಿಭಜನ-ವಿರೋಧೀ ಚಳುವಳಿಯು ಸ್ವದೇಶೀ ಚಳುವಳಿಯಾಗಿ ಬೆಳೆದು ಚಲ್ಲಾಪಿಲ್ಲಿಯಾಗಿದ್ದ ಮತ್ತು ದುರ್ಬಲವಾಗಿದ್ದ ಶಕ್ತಿಗಳಿಗ ಒಂದು ನೂತನ ಶಕ್ತಿಯನ್ನೂ ಹುರುಪನ್ನೂ ಉಂಟುಮಾಡಿತು. ಬಂಗಾಳದ ಘಟನೆಗಳು ಅನೇಕ ಕಾಂಗ್ರೆಸ್ ನಾಯಕರು ಬ್ರಿಟಿಷರ ನ್ಯಾಯಯುತ ವರ್ತನ ಹಾಗೂ ಬಿನ್ನಹಗಳು, ಮನವಿಗಳು, ಪತ್ರಿಕಾ ಲೇಖನಗಳು ಸಭೆಗಳ ಮೂಲಕ ಮಿತಗಾಮಿಗಳು ಸಾಂವಿಧಾನಿಕವಾಗಿ ನಡೆಸುತ್ತಿದ್ದ ಚಳುವಳಿ ವಿಧಾನಗಳ ಸಮರ್ಪಕತೆ ಇವುಗಳಲ್ಲಿ ಇಟ್ಟಿದ್ದ ನಂಬಿಕೆಗಳನ್ನು ಅಲುಗಾಡಿಸಿದುವು. ಸ್ವದೇಶೀ ಚಳುವಳಿಯು ಜಾತಿ ಪಂಥಗಳ ಭೇದವಿಲ್ಲದೆ ಹೊಸ ಹೊಸ ಜನವರ್ಗಗಳನ್ನು ರಾಜಕೀಯಕ್ಕೆಳೆಯಿತು. ಪತ್ರಿಕೆಗಳಿಗೆ ಖಂಡಿತವಾದಿಗಳಾಗಿರಲು, ವಿದ್ಯಾರ್ಥಿಗಳಿಗೆ ಕ್ರಾಂತಿಯೇಳಲು, ಹಿಂದೂ ಮತ್ತು ಮುಸ್ಲಿಮರಿಗೆ ಸಹಕರಿಸಲು, ಪ್ರತಿಯೊಬ್ಬರಿಗೂ ತಮ್ಮ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯ ಮೇಲೆ ಚಿಂತನೆ ನಡೆಸಲು, ಹೆದರಿಕಯನ್ನು ಕೊಡವಿಹಾಕಲು, ಅಧಿಕಾರಿಗಳ ಮಾತನ್ನು ನಿರಾಕರಿಸಲು, ಲಾಠಿ ಹೊಡೆತವನ್ನಾಗಲಿ, ಸೆರೆಮನೆ ವಾಸವನ್ನಾಗಲಿ, ಕೊನೆಗೆ ಗಲ್ಲುಶಿಕ್ಷೆಯನ್ನಾಗಲಿ ರಾಷ್ಟ್ರಸೇವೆಯಲ್ಲಿ ಗಳಿಸಿಕೊಂಡ ಪರಮಗೌರವವೆಂಬಂತೆ ಸ್ವಾಗತಿಸಲು ಅದು ಕಲಿಸಿಕೊಟ್ಟಿತು.

ಬಂಗಾಳದ ವಿಭಜನೆ ಹಾಗೂ ಸರಕಾರವು ಕೈಕೊಂಡ ದಬ್ಬಾಳಿಕೆಯ ಕ್ರಮಗಳ ವಿರುದ್ಧ ವಾರಣಾಸಿಯ ಕಾಂಗ್ರೆಸ್ ಸಮ್ಮೇಳನ ತೀವ್ರ ವಿರೋಧ ವ್ಯಕ್ತಪಡಿಸಿತು. ಬಂಗಾಳದಲ್ಲಿ ಸ್ವದೇಶೀ ಮತ್ತು ಬಹಿಷ್ಕಾರ ಕ್ರಮಗಳು ನಡೆಯಲೆಂದು ಅನುಮೋದಿಸಿತು. ಅದು ಬಹಿಷ್ಕಾರ ಕ್ರಮವನ್ನು ಇಡೀ ಭಾರತಕ್ಕೆ ಅನುಮತಿಸಲಿಲ್ಲ. ಆದರೆ ಲಜಪತರಾಯ್ ಇತರ ಪ್ರಾಂತಗಳೂ ಬಂಗಾಳದ ಮಾದರಿಯನ್ನು ಅನುಸರಿಸಬೇಕೆಂದು ಕರೆಕೊಟ್ಟರು. ತಿಲಕರು ಸ್ವದೇಶೀ, ವಿದೇಶೀ ವಸ್ತು ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣಗಳ ಮೂಲ ಗುರಿ ಸ್ವರಾಜ್ಯದ ಸಾಧನೆ ಎಂದು ಒತ್ತಿ

ಹೇಳಿದರು. ಇಡೀ ಬಂಗಾಳ ಪೂರ್ತಿಯಾಗಿ ಮತ್ತು ಭಾರತದ ಅನೇಕ ಪ್ರಮುಖ ನಗರಗಳಲ್ಲಿ ಪಟ್ಟಣಗಳಲ್ಲಿ ಸಾರ್ವಜನಿಕ ಸಭೆಗಳು ನಡೆದು ಬಹಿಷ್ಕಾರ ಮತ್ತು ಸ್ವದೇಶೀ ಕರೆ ನೀಡಿದುವು. ಅದಕ್ಕೆ ಎರಡು ಮುಖಗಳಿದ್ದುವು. ಒಂದು ಕಡೆ ಬ್ರಿಟಿಷ್ ವಸ್ತುಗಳನ್ನು ಬಹಿರಂಗವಾಗಿ ಸುಡಲಾಗುತ್ತಿತ್ತು, ಅವುಗಳನ್ನು ಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಲಾಗುತ್ತಿತ್ತು. ಇನ್ನೊಂದು ಕಡೆ ಸ್ವದೇಶೀ ವಸ್ತುಗಳ ಉತ್ಪಾದನೆ ಮತ್ತು ಮಾರಾಟಗಳನ್ನು ಹೆಚ್ಚುಮಾಡಲು ಬಿರುಸಾದ ಕ್ರಮ ಕೈಗೊಳ್ಳಲಾಗುತ್ತಿತ್ತು. ಸಿಹಿ ತಿಂಡಿ ಮಾಡುವವರು ವಿದೇಶೀ ಸಕ್ಕರೆ ಬಳಸುವುದಿಲ್ಲ ವೆಂದರು, ಬಟ್ಟೆ ತೊಳೆಯುವವರು ವಿದೇಶೀ ಬಟ್ಟೆಗಳನ್ನು ತೊಳೆಯುವುದರ ವಿರುದ್ಧವಾದರು. ಪುರೋಹಿತರು ವಿದೇಶೀ ವಸ್ತುಗಳನ್ನು ಉಪಯೋಗಿಸಿ ಪೂಜೆ ಮಾಡುವುದಿಲ್ಲ ಎಂದು ಪಟ್ಟುಹಿಡಿದರು. ದಕ್ಷಿಣದ ಮತ್ತು ಬಂಗಾಳದ ಸ್ತ್ರೀಯರು ವಿದೇಶೀ ಬಳೆಗಳನ್ನೂ ಗಾಜಿನ ಪಾತ್ರೆಗಳನ್ನೂ ತ್ಯಜಿಸಿದರು. ವಿದ್ಯಾರ್ಥಿಗಳು ವಿದೇಶೀ ಕಾಗದವನ್ನು ಬಳಸಲು ನಿರಾಕರಿಸಿದರು. ಡಾಕ್ಟರರು, ವಕೀಲರು ಕೂಡ ಬ್ರಿಟಿಷ್ ಉತ್ಪಾದನೆಗಳನ್ನು ಮಾರುತ್ತಿದ್ದವರಿಗೆ ಸಹಕಾರ ನೀಡಲಿಲ್ಲ. ಪಿಕೆಟಿಂಗ್ ಜೊತೆಗೆ ಸಾಂಪ್ರದಾಯಿಕ ವಿಧಾನದ ಸಾಮಾಜಿಕ ಬಹಿಷ್ಕಾರವೂ ಸೇರುತ್ತಿತ್ತು. ಬಾರಿಸಾಲ್ ನಂತಹ ಕೆಲವು ಸ್ಥಳಗಳಲ್ಲಿ ವರ್ತಕರು ಉಪ್ಪು ಮತ್ತು ಬಟ್ಟೆಗಳನ್ನು ನಾಶಮಾಡಲು ಸ್ವ-ಇಚ್ಛೆಯಿಂದ ಒಪ್ಪಿಗೆ ಕೊಟ್ಟರು. ಅದಕ್ಕಾಗಿ ಪುಂಡುದಂಡನೆಯ ಪೋಲೀಸರಿಂದ ಶಿಕ್ಷೆಯನ್ನು ಆಹ್ವಾನಿಸಿಕೊಂಡರು.

ಚಳುವಳಿಯು ತನ್ನ ವಾಸ್ತವ ಮುಖದಲ್ಲಿ ಗೃಹಕೈಗಾರಿಕೆಗಳಿಗೂ, ಅನೇಕ ಬಗೆಯ ದೊಡ್ಡ ಪ್ರಮಾಣದ ಉದ್ಯಮಗಳಿಗೂ ಒಂದು ಪ್ರಚೋದನೆಯನ್ನು ಕೊಟ್ಟಿತ್ತು. ಎಲ್ಲೆಲ್ಲೂ ಸ್ವದೇಶೀ ಬಟ್ಟೆ ಗಿರಣಿಗಳು, ಬೆಂಕಿ ಪೊಟ್ಟಣ ಮತ್ತು ಸೋಪು ಕಾರ್ಖಾನೆಗಳು, ಮಡಕೆ ಕುಡಿಕೆಗಳು ಮತ್ತು ಚರ್ಮಗಾರಿಕೆಗಳ ಕಾರ್ಖಾನೆಗಳು ತಲೆಯತ್ತಿದುವು. ಆಚಾರ್ಯ ಪಿ.ಸಿ. ರೇ ತಮ್ಮ ಬೆಂಗಾಲ್ ಕೆಮಿಕಲ್ ಸ್ವದೇಶೀ ಮಳಿಗೆಯನ್ನು ತೆರೆದರು. ಅದು ಬಹು ಬೇಗ ಪ್ರಸಿದ್ಧಿಪಡೆಯಿತು. ಗುರುದೇವ ಠಾಕೂರರೇ ಒಂದು ಸ್ವದೇಶೀ ಮಳಿಗೆಯನ್ನು ಸ್ಥಾಪಿಸಲು ನೆರವಾದರು. ಟಾಟಾ ಐರನ್ ಅಂಡ್ ಸ್ಟೀಲ್ ಕಂಪನಿಯ ಇಡೀ ಬಂಡವಾಳವನ್ನು ಭಾರತೀಯರೇ, ಯಾವುದೇ ಬಗೆಯ ಸರಕಾರ ಹಾಗೂ ವಿದೇಶೀ ನೆರವಿಲ್ಲದ ಮೂರೇ ತಿಂಗಳಲ್ಲಿ ತುಂಬಿದರು. ಭಾರೀ ಜಮೀನ್ದಾರರು ಮತ್ತು ವರ್ತಕರು ರಾಜಕೀಯ ನಾಯಕ ರೊಂದಿಗೆ ಜೊತೆಗೂಡಿ, ಬ್ಯಾಂಕುಗಳನ್ನೂ ಜೀವವಿಮಾ ಕಂಪನಿಗಳನ್ನೂ ಸ್ಥಾಪಿಸಿದರು. ಉಗಿಹಡಗು ಸಂಚಾರದ ವ್ಯವಹಾರಗಳನ್ನು ಪ್ರಾರಂಭಿಸಿದರು.

ಸ್ವದೇಶೀ ಚಳುವಳಿಯು ಸಂಸ್ಕೃತಿಯ ಕ್ಷೇತ್ರದಲ್ಲೂ ಹೊಸ ಚಾಲನೆಗಳನ್ನು ಉಂಟುಮಾಡಿತು. ಕಟ್ಟಾಸೆಯಿಂದ ಕೂಡಿದ, ಆದರ್ಶ ಭಾವನೆಯು ತುಂಬಿದ ಮಾದರಿಯ ಕಾವ್ಯ, ಗದ್ಯ ಮತ್ತು ಪತ್ರಿಕೋದ್ಯಮ - ಇವು ಉದಿಸಿದುವು. ರವೀಂದ್ರನಾಥ ಠಾಕೂರ್, ರಜನೀಕಾಂತ ಸೇನ್, ಮುಕುಂದ ದಾಸ್ ಮೊದಲಾದ ಕವಿಗಳು ರಚಿಸಿದ ರಾಷ್ಟ್ರಭಕ್ತಿಗೀತಗಳು ಆ ಕಾಲಕ್ಕೆ ಅತ್ಯಂತ ಪರಿಣಾಮಕಾರಿ ಯಾಗಿದ್ದುವು ಮಾತ್ರವಲ್ಲದೆ, ಶಾಶ್ವತವಾಗಿ ಬಲೆಬಾಳುವ ಸಾಹಿತ್ಯಕ ಗುಣವನ್ನೂ

ಒಳಗೊಂಡಿದ್ದುವು. ಬಂಗಾಳದಲ್ಲಿ ಅವುಗಳನ್ನು ಇಂದಿಗೂ ಹಾಡುತ್ತಾರೆ. ಸ್ವದೇಶೀ ಮತ್ತು ರಾಷ್ಟ್ರೀಯತಾ ಚಳುವಳಿಗಳ ಫಲವಾದ ರಾಜಕೀಯ ಪತ್ರಿಕೋದ್ಯಮವು ಸ್ವಾತಂತ್ರ್ಯ, ಸ್ವರಾಜ್ಯ ಮತ್ತು ಆತ್ಮಾವಲಂಬನಗಳ ಬಗೆಗೆ ಕೆಲವು ಶ್ರೇಷ್ಠ ಕೃತಿಗಳನ್ನು ನಿರ್ಮಿಸಿತು.

ಬಹಿಷ್ಕಾರ ಮತ್ತು ಸ್ವದೇಶೀ ಆಚರಣೆಗಳನ್ನು ತಿಲಕರು ಪಶ್ಚಿಮ ಭಾರತಕ್ಕೆ ಒಯ್ದರು. ಪೂನಾದಲ್ಲಿ ಒಂದು ಭಾರೀ ಪ್ರಮಾಣದ ವಿದೇಶೀ ವಸ್ತ್ರದಹನ ಕಾಂಡವನ್ನು ಅವರೇ ನಿಂತು ನಡೆಸಿದರು. ಸ್ವದೇಶೀ ವಸ್ತು ಪ್ರಚಾರಿಣೀ ಸಭೆಯ ಮುಖ್ಯರಾಗಿ ಅವರು ಒಂದು ಸಹಕಾರೀ ಮಳಿಗೆಯನ್ನು ತೆರೆದರು. ಮುಂಬಯಿ ಮಿಲ್ ಮಾಲೀಕರನ್ನು ದುಬಾರಿಯಲ್ಲದ ದರಗಳಲ್ಲಿ ಧೋತಿಗಳನ್ನು ಒದಗಿಸುವಂತೆ ಪ್ರೇರಿಪಿಸಿದರು. ಪೂನಾದಲ್ಲಿ ಒಂದು ಸ್ವದೇಶೀ ನೆಯ್ಗೆ ಕಂಪೆನಿಯು ರೂಪುಗೊಂಡಿತು.

ವಿದೇಶೀ ಸಕ್ಕರೆಯ ಬಳಕೆಯ ವಿರುದ್ಧವಾದ ಒಂದು ಭಾರೀ ಚಳುವಳಿಯ ಅಲ ಇಡೀ ಪಂಜಾಬನ್ನು ರಭಸದಿಂದ ಕೊಚ್ಚಿಹಾಕಿತು. ವಿದೇಶೀ ಸಕ್ಕರೆಯ ಆಮದು ಸ್ಥಳೀಯ ಸಕ್ಕರೆ ಕೈಗಾರಿಕೆಯನ್ನೂ ಕಬ್ಬಿನ ಬೆಳೆಯನ್ನೂ ಕುಂಠಿತಗೊಳಿಸಿತ್ತು. ರಾವಲ್ಪಿಂಡಿಯ ವರ್ತಕರು ವಿದೇಶೀ ಸಕ್ಕರೆಯನ್ನು ಮಾರುವುದಿಲ್ಲ ಎಂದು ಪ್ರತಿಜ್ಞೆ ಮಾಡಿದರು, ಮುಲ್ತಾನಿನ ಬ್ರಾಹ್ಮಣ ಪುರೋಹಿತರು ಅದನ್ನು ಒಳಗೊಂಡ ನೈವೇದ್ಯಗಳನ್ನು ದೇವಾಲಯಗಳಲ್ಲಿ ಬಹಿಷ್ಕರಿಸಿದರು. ಚಳುವಳಿ ಹರಿದ್ವಾರ, ದೆಹಲಿ, ಕಾಂಗ್ರಾ ಮತ್ತು ಜಮ್ಮುಗಳಿಗೆ ಹರಡಿತು. ದೆಹಲಿಯಲ್ಲಿ ಸ್ವದೇಶೀ ಚಳುವಳಿಯ ಜೀವನಾಡಿ ಆಗಿದ್ದವರು, ಸಯ್ಯದ್ ಹೈದರ್ ರೆಜಾ (Sayyad Haider Reza). ಚಿದಂಬರಂ ಪಿಳ್ಳೈ ಮದರಾಸ್ ಪ್ರಾಂತದ ಕೋರಮಂಡಲ ಕರಾವಳಿಯ ಟ್ಯೂಟಿಕಾರಿನ್‌ನಲ್ಲಿ ಸ್ವದೇಶೀ ಸ್ಟೀಮ್ ನ್ಯಾವಿಗೇಷನ್ ಕಂಪೆನಿಯನ್ನು ಸ್ಥಾಪಿಸಿದರು.

### *ಕದನರೂಪದ ರಾಷ್ಟ್ರೀಯತಾ ಚಳುವಳಿಯ ಬೆಳವಣಿಗೆ*

ಸ್ವದೇಶೀ ತತ್ವದ ಪ್ರಕಾರ ಜನರು ರಾಷ್ಟ್ರೀಯ ಮಟ್ಟದಲ್ಲಿ ಶಿಕ್ಷಣ ಪಡೆಯಬೇಕಾಗಿತ್ತು. ರಾಷ್ಟ್ರೀಯ ಶಿಕ್ಷಣದ ಯೋಜನೆಯನ್ನು 1898 ರಲ್ಲಿ **ಡಾನ್** (Dawn) ಪತ್ರಿಕೆಯ ಸಂಪಾದಕರಾಗಿದ್ದ ಸತೀಶಚಂದ್ರ ಮುಖರ್ಜಿ ರೂಪಿಸಿದ್ದರು. ಬ್ರಿಟಿಷ್ ಮಾದರಿಯ ವಿದ್ಯಾಭ್ಯಾಸ ರಾಷ್ಟ್ರ-ವಿರೋಧಿ ಎಂದು ಭಾವಿಸಲಾಯಿತು. ಭಾರತದ ಪರಿಸ್ಥಿತಿಗಳ ಮತ್ತು ಸಂಸ್ಕೃತಿಯ ಯಾವುದೇ ಸಂಬಂಧವಿಲ್ಲದ ಅನ್ಯಜ್ಞಾನವನ್ನು ಗೊತ್ತುಗುರಿ ಯಿಲ್ಲದ ಬಾಯಿಪಾಠ ಮಾಡುವುದಾಗಿತ್ತು ಆ ವಿದ್ಯಾಭ್ಯಾಸ. ಇಂಗ್ಲಿಷ್ ಮಾಧ್ಯಮವು ಕಲಿಕೆಯ ಆನಂದವನ್ನು ಕೊಂದಿತು, ಸ್ವತಂತ್ರ ಆಲೋಚನೆಯನ್ನು ನಿರುತ್ಸಾಹ ಗೊಳಿಸಿತು, ಸೃಷ್ಟ್ಯಾತ್ಮಕ ಬರವಣಿಗೆಯನ್ನು ತಡೆಗಟ್ಟಿತು. ಇದರಿಂದ ಬಿಡುಗಡೆಯ ದಾರಿಯನ್ನು ರವೀಂದ್ರನಾಥ ಟಾಗೋರ್ ಅವರು ಶಾಂತಿ ನಿಕೇತನವನ್ನು ಸ್ಥಾಪಿಸಿ ತೋರಿಸಿದರು. ಕರ್ಜನನು ಜಾರಿಗೆ ತಂದ ಭಾರತೀಯ ವಿಶ್ವವಿದ್ಯಾನಿಲಯಗಳ ಶಾಸನ (Indian Universities Act) ವೂ, ವಿದ್ಯಾರ್ಥಿಗಳು ರಾಜಕೀಯ ಪ್ರದರ್ಶನ ಗಳಲ್ಲಿ ಭಾಗವಹಿಸುವುದನ್ನು ನಿಷೇಧಿಸಬೇಕೆಂದು ಜಿಲ್ಲಾ ಮ್ಯಾಜಿಸ್ಟ್ರೇಟರುಗಳಿಗೆ

ಕಾರ್ಲೈಲ್ ಕಳುಹಿಸಿದ ಪರಿಪತ್ರವೂ ರಾಷ್ಟ್ರೀಯ ಶಿಕ್ಷಣ ಮಂಡಳಿಯ ಸ್ಥಾಪನೆಯನ್ನು (National Council of Education) ಪ್ರಚೋದಿಸಿದುವು. ಬೆಂಗಾಲ್ ನ್ಯಾಷನಲ್ ಕಾಲೇಜನ್ನು (Bengal National College) 1906 ರಲ್ಲಿ ಪ್ರಾರಂಭಿಸಲಾಯಿತು. ಅರವಿಂದರು ಅದರ ಪ್ರಿನ್ಸಿಪಾಲರಾದರು. ಅದರ ಪಾಠ್ಯಕ್ರಮದಲ್ಲಿ ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳು, ಅವಕ್ಕೆ ಸೂಕ್ತವಾಗಿದ್ದ ಸ್ಥಾನವನ್ನು ಪಡೆದುವು; ಆದರೆ ಭಾರತೀಯವಾದ ಅಂಶಗಳಿಗೆ ಅಲ್ಲಿ ಪ್ರಾಮುಖ್ಯವಿತ್ತು. ಅದರ ಗುರಿ ಭಾರತೀಯ ವಿಜ್ಞಾನಿಗಳನ್ನು, ಚರಿತ್ರಕಾರರನ್ನು ಮತ್ತು ಕೈಗಾರಿಕೋದ್ಯಮಿಗಳನ್ನು ತಯಾರುಮಾಡುವುದಾಗಿದ್ದರೂ, ಪ್ರಧಾನವಾಗಿದ್ದ ಧ್ಯೇಯ ರಾಷ್ಟ್ರಪ್ರೇಮವನ್ನು ಅವರಲ್ಲಿ ಪ್ರಚೋದಿಸುವುದು. ಅದು ಸ್ವಾತಂತ್ರ್ಯವು ಹಬ್ಬಿ ಪರಡಲು ಸೂಕ್ತವಾದ ಸಾಂಸ್ಕೃತಿಕ ನೆಲವನ್ನು ಹಸನುಮಾಡಲಿತ್ತು. ಸ್ಥಳೀಯ ಭಾರತೀಯ ಭಾಷೆಯೇ ಅಲ್ಲಿ ಮುಖ್ಯ ಶಿಕ್ಷಣ ಮಾಧ್ಯಮ. ಬೆಂಗಾಲ್ ಟಕ್ನಿಕಲ್ ಇನ್‌ಸ್ಟಿಟ್ಯೂಟ್ ಆದುವರೆಗೆ ಅಲಕ್ಷ್ಯಕ್ಕೆ ಗುರಿಯಾಗಿದ್ದ ತಾಂತ್ರಿಕ ಶಿಕ್ಷಣಕ್ಕೆ ಪ್ರಾಧಾನ್ಯವಿತ್ತಿತ್ತು. ಮುಂದುವರಿದ ವಿಧಾನಗಳ ಪರಿಚಯ ಪಡೆಯಲಿಕ್ಕಾಗಿ ವಿದ್ಯಾರ್ಥಿಗಳನ್ನು ಜಪಾನಿಗೆ ವೇತನ ಕೊಟ್ಟು ಕಳುಹಿಸಲಾಯಿತು. ರಾಷ್ಟ್ರಾದ್ಯಂತ ಹಲವಾರು ರಾಷ್ಟ್ರೀಯ ಶಾಲೆಗಳು ಉದಿಸಿದುವು.

ಟಾಗೋರ್ ಅವರು **ಆತ್ಮಶಕ್ತಿ**ಯ ತತ್ವವನ್ನು ಬೋಧಿಸಿದರು. ಅದರ ಮುಖ್ಯ ಗುರಿ ಹಳ್ಳಿಗಳ ಸಾಮಾಜಿಕ ಹಾಗೂ ಆರ್ಥಿಕ ಪುನರುದಯ. ಅಶ್ವಿನೀಕುಮಾರ ದತ್ತ ಅವರು ಬಾರಿಸಾಲ್‌ನಲ್ಲಿ ನಾಮಶೂದ್ರರ ಜಾತೀಯ ದೌರ್ಬಲ್ಯಗಳನ್ನು ತೊಡೆದುಹಾಕಿ, ಆ ತತ್ವಕ್ಕೆ ಒಂದು ವಾಸ್ತವಿಕವಾದ ಸ್ವರೂಪವನ್ನಿತ್ತರು. ಈ ದುರ್ಬಲತೆಯ ಜೊತೆಗೆ ಬಾಲ್ಯವಿವಾಹ, ವರದಕ್ಷಿಣೆ ಪದ್ಧತಿ ಮತ್ತು ವಿಪರೀತ ಕುಡಿತ ಮುಂತಾದ ಇತರ ಕೆಡುಕುಗಳನ್ನು ನಿರ್ಮೂಲಮಾಡಲು ಅವರು ಯತ್ನಿಸಿದರು. ತೀವ್ರ ಪಂಥದವರಾದರೋ ಒಟ್ಟಿನಲ್ಲಿ ರಾಜಕೀಯ ಸ್ವಾತಂತ್ರ್ಯವೇ ಅತ್ಯಂತ ಮುಖ್ಯವಾದದ್ದು ಎಂದು ಭಾವಿಸಿದರು.

"ನಮ್ಮ ರಾಷ್ಟ್ರವು ಒಂದು ಮರದಂತಿದೆ", ತಿಲಕರು ಕೇಸರಿಯಲ್ಲಿ ಬರೆದರು: "ಅದರ ಕಾಂಡ ಸ್ವರಾಜ್ಯ, ಕೊಂಬೆಗಳು ಸ್ವದೇಶೀ ಮತ್ತು ವಿದೇಶೀ ವಸ್ತು ಬಹಿಷ್ಕಾರ." ವಾಸ್ತವವಾಗಿ ಸ್ವದೇಶಿಯು ಸ್ವರಾಜ್ಯಕ್ಕೆ ದಾರಿ. ಆದ್ದರಿಂದ ವಿಭಜನ-ವಿರೋಧೀ ಸ್ವರೂಪದ ಚಳುವಳಿಯನ್ನು ಎಲ್ಲ ಬಗೆಯ ವಿದೇಶೀ ಆಡಳಿತದ ವಿರುದ್ಧವಾದ ನಿಷ್ಕ್ರಿಯ ಪ್ರತಿಭಟನೆಯಾಗಿ ವಿಸ್ತರಿಸಬೇಕಾಗಿತ್ತು. ಅದರ ಅರ್ಥ ಬ್ರಿಟಿಷ್ ವಸ್ತುಗಳು ಮತ್ತು ಶಾಲೆಗಳ ಬಹಿಷ್ಕಾರ ಮಾತ್ರವಲ್ಲ, ನ್ಯಾಯಾಲಯ ಗಳು, ಪುರಸಭೆಗಳು, ಶಾಸನಸಭೆಗಳು, ಸಂಕ್ಷೇಪವಾಗಿ ಹೇಳಬೇಕೆಂದರೆ, ಸರಕಾರ ದೊಂದಿಗೆ ಎಲ್ಲ ಸಂಬಂಧಗಳನ್ನೂ ಬಹಿಷ್ಕರಿಸುವುದಾಗಿತ್ತು. ಬ್ರಿಟಿಷ್ ಘನತೆಯ ಬುಡಕ್ಕೇ ಪೆಟ್ಟು ಕೊಟ್ಟು, ಅದರ ಮೋಹಕತೆಯನ್ನು ತೊಲಗಿಸಬೇಕಾಗಿತ್ತು. ಬ್ರಿಟಿಷ್ ವಾಣಿಜ್ಯವು ಸುಲಿಗೆ ಮಾಡುವುದನ್ನು, ಬ್ರಿಟಿಷ್ ಅಧಿಕಾರಶಾಹಿಯು ಭಾರತದ ಜನರನ್ನು ತುಳಿಯುವುದನ್ನು ಒಂದು ಯೋಜಿತ ರೀತಿಯಲ್ಲಿ ನಿರಾಕರಿಸುವುದರ ಮೂಲಕ ಆಡಳಿತವು ಅಸಾಧ್ಯವಾಗುವಂತೆ ಮಾಡಬೇಕಿತ್ತು.

ತೀವ್ರವಾದಿಗಳು ಬಹಿರಂಗ ಹೋರಾಟಕ್ಕೆ ಕಾಂಗ್ರೆಸಿನ ಮನವೊಲಿಸುವು

ದಕ್ಕಿಂತಲೂ ಮುಂಚಿತವಾಗಿ ರೈತರನ್ನೂ ಕಾರ್ಮಿಕರನ್ನೂ ಚಳುವಳಿಗೆ ಎಳೆಯ ಬೇಕಾಗಿತ್ತು. ಸ್ವದೇಶೀ ಸಂದೇಶವು ಜನಸಾಮಾನ್ಯರನ್ನು ತಲುಪತೊಡಗಿತು. ತಮ್ಮ ಯೋಗಕ್ಷೇಮ ಮತ್ತು ಅಭ್ಯುದಯಗಳಿಗೆ ನೇರವಾಗಿ ಸಂಬಂಧಪಟ್ಟಿದ್ದುದರಿಂದ ಅದು ಅವರಿಗೆ ಅರ್ಥಪೂರ್ಣವಾಗಿ ಕಂಡಿತು. ತಾತ್ವಿಕವೂ ಅಸ್ಪಷ್ಟವೂ ಆದ ರಾಜಕೀಯ ಕಲ್ಪನೆಗಳು ಆ ಫಲವನ್ನು ಕೊಡುತ್ತಿರಲಿಲ್ಲ. ತೀವ್ರಗಾಮಿಗಳೇನಾದರೂ ರೈತರನ್ನು 'ಗುತ್ತಿಗೆಯಿಲ್ಲ' ಎಂಬ ಚಳುವಳಿಯನ್ನು, ಕಾರ್ಮಿಕರನ್ನು ಬಂಡವಾಳಗಾರರೆದುರಾಗಿ ಚಳುವಳಿಯನ್ನು ಪ್ರಾರಂಭಿಸಿರೆಂದು ಕರೆಕೊಟ್ಟಿದ್ದರೆ, ಅವರು ಇನ್ನೂ ಹೆಚ್ಚು ತೀವ್ರ ರೀತಿಯಲ್ಲಿ ಪ್ರತಿಕ್ರಿಯೆ ತೋರಿಸುತ್ತಿದ್ದರೇನೋ. ಇದು ನಡೆಯದಿದ್ದರೂ ರೈತರು ಮತ್ತು ಕಾರ್ಮಿಕರ ಪಾತ್ರ ಇಲ್ಲಿ ಬಹಳ ಮಹತ್ವ ಪೂರ್ಣವಾಗಿತ್ತು. ಬಿಹಾರದ ಚಂಪಾರಣ್ಯದಲ್ಲಿ ನೀಲಿ ಬೆಳೆಯುವ ರೈತರು ದಂಗೆಯೆದ್ದರು. ಅಸ್ಸಾಂ ಮತ್ತು ಮೈಮೆನ್‌ಸಿಂಗ್‌ಗಳಲ್ಲೂ ಕ್ಷೋಭೆಗಳುಂಟಾದುವು. ಬಾರಿಸಾಲ್‌ನಲ್ಲಿ ಮುಸ್ಲಿಂ ರೈತರಿಗೆ ಅವರ ಮುಷ್ಕರಗಳಲ್ಲಿ ಅಶ್ವಿನೀಕುಮಾರ ದತ್ತ ನಾಯಕರಾಗಿದ್ದರು. ಬಂಗಾಳದಲ್ಲಿ ಮುಷ್ಕರಗಳ ಭಾರೀ ಅಲೆ ಎದ್ದು ಪೂರ್ವ ಭಾರತ ರೈಲ್ವೆ, ಕ್ಲೈವ್ ಸೆಣಬು ಕಾರ್ಖಾನೆ ಮತ್ತು ಕಬ್ಬಿಣದ ಕಾರ್ಖಾನೆಗಳನ್ನು ಆವರಿಸಿತು. ಕಲ್ಕತ್ತದ ಬಂದರು ಸ್ವಲ್ಪ ಕಾಲ ಗರಬಡಿದಂತೆ ಸ್ಥಗಿತವಾಯಿತು. ತಿಲಕರು ಮುಂಬಯಿ ಕಾರ್ಮಿಕರಿಗೆ ಒಂದು ಮನವಿ ಮಾಡಿಕೊಂಡರು. ಅದರ ಫಲವಾಗಿ, ಅವರ ಬಂಧನವಾದೊಡನೆ ಭಾರೀ ಮುಷ್ಕರ ನಡೆಯಿತು. ಟ್ಯೂಟಿಕಾರಿನ್ ಕೋರಲ್ ಮಿಲ್ ಮುಷ್ಕರವನ್ನು ಚಿದಂಬರಂ ಪಿಳ್ಳೆ ವ್ಯವಸ್ಥೆಗೊಳಿಸಿದರು.

ಈಗ ಹೋರಾಟದ ಬಹುಭಾಗದ ಭಾರವು ಯುವಜನರ ಮೇಲೆ ಬಿದ್ದಿತ್ತು. **ಸಂಧ್ಯಾ, ಜುಗಾಂತರ್, ಕೇಸರಿ** ಮತ್ತು **ಪಂಜಾಬಿ** ಮುಂತಾದ ತೀವ್ರಗಾಮಿ ಪತ್ರಿಕೆಗಳಿಂದ ಪ್ರಭಾವಿತರಾಗಿ ಅವರು ಹೋರಾಟಕ್ಕಿಳಿದರು. ವಿದ್ಯಾರ್ಥಿಗಳು, ಗುಮಾಸ್ತರು, ಉಪಾಧ್ಯಾಯ ವರ್ಗದವರು ಇವರೆಲ್ಲರನ್ನೂ ಒಳಪಡಿಸಿಕೊಂಡು ದರಲ್ಲಿ ಒಂದು ಬಗೆಯ ಹುಚ್ಚು ಸಾಹಸ ಕಂಡುಬರುತ್ತಿತ್ತು. ಬಂಗಾಳದ ಪ್ರತಿಯೊಂದು ನಗರದಲ್ಲೂ ರಾಷ್ಟ್ರೀಯ ಸ್ವಯಂಸೇವಕ ತಂಡಗಳು ರೂಪು ಗೊಂಡುವು. ಹಳದಿ ಪೇಟ, ಕೆಂಪು ಅಂಗಿಗಳನ್ನು ಧರಿಸಿ ಅವರು ಸರಕಾರಿ ಶಾಲಾ ಕಾಲೇಜುಗಳಿಂದ ಕಚೇರಿಗಳಿಂದ ಸಹಸ್ರಾರು ಸಂಖ್ಯೆಯಲ್ಲಿ ಹೊರ ನಡೆದರು. "ವಂದೇ ಮಾತರು" ಘೋಷಿಸಿದರು. ರಾಷ್ಟ್ರೀಯ ಗೀತೆಗಳನ್ನು ಹಾಡುತ್ತ ನಡೆದರು. ಅಂಗಡಿಗಳಲ್ಲಿ ಪಿಕೆಟಿಂಗ್ ನಡೆಸಿದರು, ಸ್ವದೇಶೀ ವಸ್ತುಗಳನ್ನು ಮಾರುತ್ತ ನಡೆದರು. ಯಾವ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳು ಚಳುವಳಿಯಲ್ಲಿ ಕ್ರಿಯಾತ್ಮಕ ಪಾತ್ರ ವಹಿಸಿದರೋ ಆ ಶಾಲಾ ಕಾಲೇಜುಗಳಿಗೆ ಸರಕಾರೀ ನೆರವು ನಿಂತಿತು, ವಿಶ್ವವಿದ್ಯಾ ನಿಲಯದ ಮಂಜೂರಾತಿ ತಪ್ಪಿತು. ಅಲ್ಲಿಯ ವಿದ್ಯಾರ್ಥಿಗಳು ವಿದ್ಯಾರ್ಥಿವೇತನ ಪಡೆಯಲು ಅನರ್ಹರಾದರು. ಸರಕಾರಿ ಕೆಲಸಕ್ಕೆ ಅವರು ಯೋಗ್ಯರಲ್ಲವೆನಿಸಿದರು. ಪೂರ್ವ ಬಂಗಾಳ ಮತ್ತು ಅಸ್ಸಾಂಗಳಲ್ಲಿ ಭೀತಿಯ ಅಲೆ ಭುಗಿಲೆದ್ದಿತು. ಹುಡುಗರಿಗೆ ಜುಲ್ಮಾನೆ ಹಾಕಿದರು, ಹೊರಗಟ್ಟಿದರು, ಅತಿ ಕ್ರೂರವಾಗಿ ಹೊಡೆದರು, ಸದ ಬಡಿದರು. 14 ವರ್ಷದ ಒಬ್ಬ ಹುಡುಗನನ್ನು ಬೆತ್ತದ ಚಡಿಯಿಂದ ಕ್ರೂರವಾಗಿ

ಹೊಡೆಯಬೇಕೆಂದು ಆಂಗ್ಲ ನ್ಯಾಯಾಧೀಶ ಕಿಂಗ್ಸ್‌ಫರ್ಡ್ ಆಜ್ಞೆಮಾಡಿದನು. ಅಮರಾವತಿ, ಕೊಲ್ಹಾಪುರಗಳಂತಹ ದೂರದಲ್ಲಿನ ವಿದ್ಯಾರ್ಥಿಗಳಿಗೂ ಇದೇ ಅದೃಷ್ಟ ದೊರಕಿತು. ದಬ್ಬಾಳಿಕೆ ಕ್ರೋಧಕ್ಕೆ ಎಡೆಮಾಡಿತು, ಕ್ರೋಧವು ಮತ್ತೆ ಹೆಚ್ಚು ಹೆಚ್ಚಾಗಿ ವಿನಾಶಕಾರಕ ಕೃತ್ಯಗಳಲ್ಲಿ ತೊಡಗುವಂತೆ ಮಾಡಿತು.

ಮೊದಮೊದಲಲ್ಲಿ ಮುಸ್ಲಿಮರು ಭಾರೀ ಸಂಖ್ಯೆಯಲ್ಲಿ ಭಾಗವಹಿಸಿದರು. ಮೊತ್ತಮೊದಲ ಬಾರಿಗೆ ಮುಸ್ಲಿಂ ಮಹಿಳೆಯರು ಪರದೆ ಬಿಟ್ಟು ಬಂದು ಮೆರವಣಿಗೆ ಪಿಕೆಟಿಂಗ್‌ಗಳಲ್ಲಿ ಪಾಲುಗೊಂಡರು. ಬಹಿಷ್ಕಾರವನ್ನು ಸೂಚಿಸಿದ ಮೊದಲಿಗರಲ್ಲಿ ಒಬ್ಬರು ಪಾಟ್ನಾದ ಲಿಯಾಖತ್ ಹುಸೇನ್. ಈಸ್ಟ್ ಇಂಡಿಯನ್ ರೈಲ್ವೆ ಮುಷ್ಕರವನ್ನು ವ್ಯವಸ್ಥೆಗೊಳಿಸಿದವರಲ್ಲಿ ಅವರೂ ಒಬ್ಬರು. ಆತನ ಉರ್ದು ಭಾಷೆಯ ಕರಪತ್ರಗಳು ಮುಸ್ಲಿಮರ ಭಾವನೆಗಳನ್ನು ಕುರಾನಿನ ರೀತಿಯಲ್ಲಿ ಕೆರಳಿಸಿದುವು. ಬಾರಿಸಾಲ್ ಸಮ್ಮೇಳನಕ್ಕೆ ಅಬ್ದುಲ್ ರಸೂಲ್ ಅಧ್ಯಕ್ಷರಾಗಿದ್ದರು. ಅತ್ಯಂತ ಕ್ರೂರವಾದ ಪೋಲೀಸ್ ಕಾರ್ಯಾಚರಣೆಯಿಂದ ಆ ಸಭೆಯಲ್ಲಿ ಎದುರಿಸಲಾಯಿತು. ಜಮೀನ್ದಾರರೂ ವಕೀಲರೂ ಆಗಿದ್ದ ಅಬ್ದುಲ್ ಹಲೀಂ ಘಜ್ನವೀ ಅವರು ಸ್ವದೇಶೀ ಕೈಗಾರಿಕೆಗಳನ್ನು ಪ್ರಾರಂಭಗೊಳಿಸಿದರು, ಬ್ರಿಟಿಷ್ ಚರ್ಮವಸ್ತುಗಳ ಬಹಿಷ್ಕಾರ ಚಳುವಳಿಯನ್ನು ಮುನ್ನಡೆಸಿದರು. ಅಬ್ದುಲ್ ಕಲಂ ಆಜಾದ್ ಅವರು ಅರವಿಂದರನ್ನು ಸಂಧಿಸಿ ಬಂಗಾಳದಿಂದ ಹೊರಕ್ಕೂ ಕ್ರಾಂತಿಕಾರಕ ಚಟುವಟಿಕೆಗಳನ್ನು ಹರಡಲು ನೆರವಾದರು. ತೀವ್ರಗಾಮಿಗಳಲ್ಲಿ ಕೆಲವರು ಅತಿ ಉತ್ಸಾಹದಿಂದ ಮುಸ್ಲಿಮರನ್ನು ದೂರಮಾಡಿದರು, ಹಿಂದೂ ಧಾರ್ಮಿಕ ಸಂಕೇತಗಳ ಮೇಲೆ ಅತಿರೇಕದ ಮಹತ್ವವಿತ್ತರು. ಇದು ತಪ್ಪು ನಡೆಯಾಗಿತ್ತು. ಆದರೆ ಸುರೇಂದ್ರನಾಥ ಬ್ಯಾನರ್ಜಿ, ಅಶ್ವಿನೀಕುಮಾರ ದತ್ತ ಮತ್ತು ರವೀಂದ್ರನಾಥ ಟಾಗೋರ್ ಮುಂತಾದ ನಾಯಕರು ಮತ್ತೆಮತ್ತೆ ಹಿಂದೂ-ಮುಸ್ಲಿಮರ ಐಕ್ಯತೆಯನ್ನು ಒತ್ತಿ ಹೇಳಿದರು.

ಸರಕಾರದ ದಮನಕಾರೀ ವಿಧಾನಗಳು, ಅದರಲ್ಲೂ ವಿಶೇಷವಾಗಿ ಬಾರಿಸಾಲ್ ಸಮ್ಮೇಳನದ ಪ್ರತಿನಿಧಿಗಳ ಮೇಲೆ ಪೋಲೀಸರು ನಡೆಸಿದ ಅತ್ಯಾಚಾರ-ಇವು ಹೋರಾಟವನ್ನು ಮುಂದುವರಿಸಬೇಕೆಂದು ತೀವ್ರಗಾಮಿಗಳ ನಿರ್ಧಾರವನ್ನು ಬಲಪಡಿಸಿದುವು. ಕಲ್ಕತ್ತಾ ಕಾಂಗ್ರೆಸಿನಲ್ಲಿ (1906) ದಾದಾಭಾಯಿ ನವರೋಜಿ ಅವರು, "ಸ್ವಯಮಾಡಳಿತ ಅಥವಾ ಯುನೈಟೆಡ್ ಕಿಂಗ್‌ಡಮ್ ಅಥವಾ ವಸಾಹತುಗಳಲ್ಲಿರುವಂತಹ ಸ್ವರಾಜ್ಯ"ವೇ ಕಾಂಗ್ರೆಸ್ಸಿನ ಗುರಿ ಎಂಬುದಾಗಿ ತೀವ್ರಗಾಮಿಗಳ ಭಾವನೆಯನ್ನು ಘೋಷಿಸಿದರು. ತೀವ್ರಗಾಮಿಗಳು ಸ್ವರಾಜ್ಯವನ್ನು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ಮಾಡಿದರು. ಪಂಜಾಬಿನ ಲಜಪತ್ ರಾಯ್ ಮತ್ತು ಅಜಿತ್‌ಸಿಂಗ್‌ರನ್ನು ಗಡೀಪಾರು ಮಾಡಿದುದು, ಪ್ರಚೋದಕ ಲೇಖನಗಳನ್ನು ಪ್ರಕಟಿಸಿದ್ದಕ್ಕಾಗಿ **ಸಂಧ್ಯಾ** ಮತ್ತು **ಬಂದೇ ಮಾತರಮ್** ಪತ್ರಿಕೆಗಳ ಮೇಲೆ ಕ್ರಮ ಜರುಗಿಸಿದುದು ಚಳುವಳಿಯ ಕಾವನ್ನು ಇನ್ನೂ ಹೆಚ್ಚಿಸಿದುವು. ಉಗ್ರಗಾಮಿ ಪತ್ರಿಕೆ **ಸಂಧ್ಯಾ**ದ ಸಂಪಾದಕ ಬ್ರಹ್ಮಬಾಂಧಬ್ ಉಪಾಧ್ಯಾಯ ಅವರು ವಿಚಾರಣೆಯ ನಡುವೆಯೇ ತೀರಿಕೊಂಡರು. ಬಿಪಿನ್ ಚಂದ್ರಪಾಲ್ ಅವರು ಸೆರೆಮನೆಯಲ್ಲಿದ್ದರು. ಲಜಪತ್ ರಾಯ್ ಅವರ ಬಿಡುಗಡೆಯಿಂದಲೂ, ಸುಧಾರಣೆಗಳ

ಮಾತುಕತೆಯಿಂದಲೂ ಉದ್ವೇಗ ಉಳಿಯಲಿಲ್ಲ. ತಿಲಕ್ ಮತ್ತು ಅರವಿಂದರ ತೀವ್ರಗಾಮಿ ಪಕ್ಷವು ಕಾಂಗ್ರೆಸ್ಸಿನ ಸ್ಥಳವನ್ನು ಪೂನಾದಿಂದ ಸೂರತ್‌ಗೆ ವರ್ಗಾಯಿಸಿದಾಗ ಒಂದು ನಿರ್ಧಾರಕ್ಕೆ ಬಂದೇ ತೀರಬೇಕೆಂದು ತೀರ್ಮಾನಿಸಿದರು. ಅಧ್ಯಕ್ಷ ಸ್ಥಾನಕ್ಕೆ ತಿಲಕರ ಹೆಸರನ್ನು ನಿರಾಕರಿಸಿ ರಾಷ್ ಬೆಹಾರಿ ಘೋಷ್ ಅವರನ್ನು ಆರಿಸಲಾಗಿತ್ತು. ಬಹಿಷ್ಕಾರವನ್ನು ಕುರಿತ ನಿರ್ಣಯವನ್ನು ತಣ್ಣಗಾಗಿಸಲು ಮಿತಗಾಮಿಗಳು ಮಾಡಿದ ಪ್ರಯತ್ನವೇ ಕೊನೆಯ ತಡೆಯಾಯಿತು. ಸೂರತ್ ಕಾಂಗ್ರೆಸ್ಸು ಗೊಂದಲದಲ್ಲಿ ಮುಗಿಯಿತು. ರಾಷ್ಟ್ರೀಯವಾದಿಗಳು ಪರಸ್ಪರ ಕಾದಾಡುವ ಪಕ್ಷಗಳಾಗಿ ಒಡೆದರು. ಇದು ಚಳುವಳಿಯನ್ನು ದುರ್ಬಲಗೊಳಿಸಿತು.

ತಿಲಕರು ಪ್ರತಿಕ್ರಿಯಾತ್ಮಕ ಸಹಕಾರ ನೀಡಲು ಇನ್ನೂ ಸಿದ್ಧರಾಗಿದ್ದರೂ ಕೂಡಾ, ಅರವಿಂದರು ಮಾತ್ರ ರಷ್ಯನ್ ಮಾದರಿಯ ಆಕ್ರಮಣಕಾರೀ ಪ್ರತಿಭಟನೆಯ ಪರವಾಗಿದ್ದರು. ಮುಜಫರ್‌ದಲ್ಲಿನ ಬಾಂಬ್ ಸಿಡಿತಗಳು ಹಾಗೂ ಮಣಿಕ್‌ತಲಾದಲ್ಲಿ ಭಯೋತ್ಪಾದಕ ಕೃತ್ಯಗಳು ಅವರ ಅಭಿಪ್ರಾಯ ಏನೆಂಬುದನ್ನು ಸ್ಪಷ್ಟಪಡಿಸಿದುವು. ತಿಲಕರು ಅದಕ್ಕೆ **ಕೇಸರಿ** ಯ ಮೂಲಕ ನೈತಿಕ ಬೆಂಬಲ ನೀಡಿದರು. "ಆಡಳಿತವು ರಷ್ಯನ್ ಮಾದರಿಯದಾದರೆ ಜನರೂ ರಷ್ಯನ್ ವಿಧಾನಗಳನ್ನೇ ಹಿಡಿಯಬೇಕಾಗುತ್ತದೆ" ಎಂದು ಅವರು ಬರೆದರು. ಅವರಿಗೆ ಆರು ವರ್ಷಗಳ ಕಾಲ ಮಾಂಡಲಾಯ್‌ಗೆ ಗಡೀಪಾರು ಶಿಕ್ಷೆ ವಿಧಿಸಲಾಯಿತು. **ಕಾಲ್** ಪತ್ರಿಕೆಯ ಸಂಪಾದಕ ಪರಾಂಜಪೆ ಅವರಿಗೆ ಹತ್ತೊಂಬತ್ತು ತಿಂಗಳ ಸೆರೆವಾಸದ ಶಿಕ್ಷೆಯಾಯಿತು. ಮದರಾಸಿನ ಚಿದಂಬರಂ ಪಿಳ್ಳೆ, ಆಂಧ್ರದ ಹರಿಸರ್ವೋತ್ತಮರಾವ್ ಇವರನ್ನೂ ಜೈಲಿಗೆ ಹಾಕಲಾಯಿತು. ಸರಕಾರವು ಎಲ್ಲ ವೃತ್ತಪತ್ರಿಕೆಗಳನ್ನೂ ಕತ್ತರಿಪ್ರಯೋಗಕ್ಕೊಳಪಡಿಸಿತು, ಸಾಮೂಹಿಕ ಸಭೆಗಳನ್ನು ಬಹಿಷ್ಕರಿಸಿತು, ಕ್ರಾಂತಿಕಾರಕ ಸಂಸ್ಥೆಗಳ ವಿರುದ್ಧ ನ್ಯಾಯವಿಚಾರಣೆ ಪ್ರಾರಂಭಿಸಿತು. ಅರವಿಂದರು ಪಾಂಡಿಚೆರಿಗೆ ಓಡಿಹೋದದ್ದು, ಧರ್ಮಕ್ಕಾಗಿ ರಾಜಕೀಯವನ್ನೂ ರಾಷ್ಟ್ರೀಯ ಚಳುವಳಿಯನ್ನೂ ತೊರೆಯಲು ಸಂಕಲ್ಪಿಸಿದ್ದು-ಇವುಗಳಿಂದಾಗಿ ಈ ಬಹಿರಂಗ ಚಳುವಳಿ ಕೊನೆಗೊಂಡಿತು.

ಉಗ್ರಗಾಮಿಗಳಾದ ರಾಷ್ಟ್ರೀಯವಾದಿಗಳು ರಾಷ್ಟ್ರೀಯ ಚಳುವಳಿಯ ಇತಿಹಾಸಕ್ಕೆ ಭವ್ಯವಾದ ಒಂದು ಅಧ್ಯಾಯವನ್ನು ಸೇರಿಸಿದರು. ಅದರ ಉದ್ದೇಶಗಳನ್ನು ಅವರು ಸ್ಪಷ್ಟಪಡಿಸಿದರು, ಜನರಿಗೆ ಆತ್ಮವಿಶ್ವಾಸ ಆತ್ಮಾವಲಂಬನಗಳಲ್ಲಿ ಶಿಕ್ಷಣ ಕೊಟ್ಟರು. ಅದರ ಸಾಮಾಜಿಕ ತಳಪದಿಯನ್ನು, ಕೆಳ ಮಧ್ಯಮ ವರ್ಗದ ಜನರು, ವಿದ್ಯಾರ್ಥಿಗಳು, ಯುವಕರು ಮತ್ತು ಸ್ತ್ರೀಯರನ್ನು ಒಳಗೊಳ್ಳುವಂತೆ ವಿಸ್ತಾರಗೊಳಿಸಿ ಪದಗೊಳಿಸಿದರು. ರಾಜಕೀಯ ವ್ಯವಸ್ಥೆಯ ನೂತನ ವಿಧಾನಗಳು ಮತ್ತು ರಾಜಕೀಯ ಹೋರಾಟಗಳನ್ನು ನಡೆಸುವ ನೂತನ ಪ್ರಕಾರಗಳನ್ನು ಪರಿಚಯ ಮಾಡಿಸಿದರು. ಅದೇ ಸಮಯದಲ್ಲಿ ಕೆಲವೊಂದು ಹಳೆಯ ದೌರ್ಬಲ್ಯಗಳು ಉಳಿದೇ ಇದ್ದುವು. ಜನಸಾಮಾನ್ಯರ ತಂಡ, ಕಾರ್ಮಿಕರು ಮತ್ತು ಕೃಷಿಕರು ಇನ್ನೂ ರಾಷ್ಟ್ರದ ರಾಜಕೀಯದ ಮುಖ್ಯಪ್ರವಾಹದಿಂದ ಹೊರಗೇ ಉಳಿದರು. ಸಾರ್ವತ್ರಿಕವಾದ ಹೋರಾಟಗಳನ್ನು ವ್ಯವಸ್ಥೆಗೊಳಿಸುವ ಬಗೆಗೆ ವೀರಾವೇಶದ ಮಾತುಕತೆಗಳಿದ್ದರೂ, ಅಂತಹ ಹೋರಾಟಗಳಂತೂ ಕಾಣುತ್ತಿರಲಿಲ್ಲ. ನಿಷ್ಕ್ರಿಯ ಪ್ರತಿಭಟನೆ ಮತ್ತು

ಅಸಹಕಾರಗಳು ಕೇವಲ ಭಾವನೆಗಳಾಗಿ ಉಳಿದಿದ್ದುವು. ರಾಜಕೀಯ ಹೋರಾಟದ ಪರಿಣಾಮಕಾರೀ ರೂಪಗಳನ್ನು ಕಂಡುಹಿಡಿಯುವ ಕೆಲಸ ಇನ್ನೂ ಪೂರೈಸಿರಲಿಲ್ಲ. ದೇಶದಲ್ಲಿ ಇನ್ನೂ ಒಂದು ಪರಿಣಾಮಕಾರೀ ರಾಷ್ಟ್ರೀಯ ಸಂಸ್ಥೆಯೊಂದಿರಲಿಲ್ಲ. ಬಂಡವಾಳಶಾಹಿಯ ಎಲ್ಲೆಗಳನ್ನು ದಾಟುವುದೂ ಇನ್ನೂ ಸಾಧ್ಯವಾಗಿರಲಿಲ್ಲ. ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯು ಬಂಡವಾಳಶಾಹೀ ಮಾರ್ಗಗಳಿಂದ ಬದ್ಧವಾಗಿದ ಎಂದೇ ತಿಲಕ್ ಮತ್ತು ಇತರರು ಇನ್ನೂ ಭಾವಿಸಿದ್ದರು. ಕೊನೆಯದಾಗಿ, ಮೊದಮೊದಲಿನ ಮಿತಗಾಮಿ ರಾಷ್ಟ್ರೀಯವಾದಿಗಳಂತಲ್ಲದೆ, ತೀವ್ರಗಾಮಿಗಳಾದ ರಾಷ್ಟ್ರೀಯವಾದಿಗಳು ಭಾರತವು ಅನೇಕ ಧರ್ಮಗಳು, ಮತಗಳು ಮತ್ತು ಪ್ರಾಂತ ಗಳಿಂದ ಕೂಡಿದ ದೇಶವಾಗಿರುವುದರ ಪೂರ್ಣ ಮಹತ್ವವನ್ನು ಅರಿಯದಾದರು. ಅವರ ಉಗ್ರರೀತಿಯ ಸಾಮ್ರಾಜ್ಯಶಾಹೀ ವಿರೋಧವು ರಾಷ್ಟ್ರ ಐಕ್ಯಸಾಧನೆಯಲ್ಲಿ ಒಂದು ದೊಡ್ಡ ಹೆಜ್ಜೆಯಾಗಿದ್ದರೆ, ಅವರು ಅದಕ್ಕೆ ಕೊಟ್ಟ ಮೇಲು ಜಾತಿಯ ಅಥವಾ ಹಿಂದೂ ಛಾಯೆ ರಾಷ್ಟ್ರದ ಐಕ್ಯ ಕ್ರಿಯೆಯನ್ನು ದುರ್ಬಲಗೊಳಿಸಿತು. ಮುಂದಿನ ವರ್ಷಗಳಲ್ಲಿ ಜಾತೀಯತೆಯ ವಿಷಫಲಗಳನ್ನು ಅದು ಬೆಳೆಸಲಿತ್ತು.

## ಕ್ರಾಂತಿಕಾರೀ ಭಯೋತ್ಪಾದಕ ಕೃತ್ಯಗಳ ಉದಯ ಮತ್ತು ಬೆಳವಣಿಗೆ

ರಾಷ್ಟ್ರೀಯ ಚಳುವಳಿಯ ರಭಸ, ವ್ಯಾಪಕತೆಗಳು ಎಷ್ಟೇ ಇದ್ದರೂ ಬಂಗಾಳದ ವಿಭಜನೆಯನ್ನು ಸರಕಾರ ಹಿಂತೆಗೆದುಕೊಳ್ಳಲಿಲ್ಲ. ಬದಲಿಗೆ ಅದು ಮೊದಲಿಗಿಂತಲೂ ಹೆಚ್ಚು ದಬ್ಬಾಳಿಕೆ ನಡೆಸತೊಡಗಿತು. ಈ ಎರಡು ಅಂಶಗಳು ಕ್ರಾಂತಿಯೇಳುವ ಮನೋಧರ್ಮವಿದ್ದ ಅಸಹಿಷ್ಣುಗಳಾದ ಯುವಕರ ಮನಸ್ಸಿನ ಮೇಲೆ ತತ್‌ಕ್ಷಣವೇ ಪರಿಣಾಮ ಮಾಡಿದುವು. ಉಗ್ರಗಾಮಿ ಪಂಗಡದ ನಾಯಕರಾಗಿದ್ದ ತಿಲಕರು ಮೊದಲೇ, ಅಂದರೆ, ಬಂಗಾಳ ವಿಭಜನಾ ಚಳುವಳಿಗೂ ಮುಂಚೆಯೇ ತಮ್ಮ ಕೆಲವು ಯುವಕ ಅನುಯಾಯಿಗಳ ಮನೋಭಾವಗಳನ್ನು ಕೆರಳಿಸಿದ್ದರು. ಅವರು ವೈಯಕ್ತಿಕವಾಗಿ ಭಯೋತ್ಪಾದಕ ಕೃತ್ಯಗಳಲ್ಲಿ ತೊಡಗುವುದಕ್ಕೆ ಅದಷ್ಟೇ ಸಾಕಾಗಿತ್ತು. 1897 ರಷ್ಟು ಮೊದಲೇ ಪೂನಾದ ಇಬ್ಬರು ಸೋದರರು ದಾಮೋದರ್ ಮತ್ತು ಬಾಲಕೃಷ್ಣ ಚಾಪೇಕರ್ ಎನ್ನುವವರು ಇಬ್ಬರು ಬ್ರಿಟಿಷ್ ಅಧಿಕಾರಿಗಳನ್ನು ಕೊಂದು ಹಾಕಿದರು. ಮುಂದ, ಅರವಿಂದ ಘೋಷರೇ ಕೆಲವು ಕ್ರಾಂತಿಕಾರೀ ಚಟುವಟಿಕೆಗಳ ಹಂಚಿಕೆ ಹಾಕಿದರು. ಬಂಗಾಳದ ವಿಭಜನೆಯಾದನಂತರದ ಘಟನೆಗಳು, ಅನೇಕ ಯುವಕ ಭಾರತೀಯರ ಕ್ರಾಂತಿಕಾರೀ ಭಾವನೆಗಳನ್ನು ಚುರುಕುಗೊಳಿಸಿದುವು. ಸಾಂವಿಧಾನಿಕ ಚಳುವಳಿ ಅಥವಾ ಪ್ರತಿಭಟನೆಗಳಲ್ಲಿ ಅವರಿಗ ಶ್ರದ್ಧೆ ಇಲ್ಲವಾಯಿತು. ಬ್ರಿಟಿಷರನ್ನು ಬಲಾತ್ಕಾರವಾಗಿ ಕಿತ್ತೊಗೆಯಬೇಕು ಎಂದು ಅವರು ಭಾವಿಸಿದರು. 1906 ರ ಏಪ್ರಿಲ್ 22 ರಂದು ಪ್ರಕಟಿಸಿದ ಸಂಪಾದಕೀಯದಲ್ಲಿ ಜುಗಾಂತರ್ ಈ ಪಂಥವನ್ನು ಅಭಿವ್ಯಕ್ತಪಡಿಸಿತು. ಇದು ಬಾರಿಸಾಲ್ ಸಮ್ಮೇಳನವನ್ನು ಪೋಲೀಸರು ಒಡೆದು ಚೂರುಚೂರು ಮಾಡಿದ ನಂತರ "ಪರಿಹಾರ ಜನಗಳ ಕೈಯಲ್ಲೇ ಇದೆ. ಭಾರತದಲ್ಲಿ ವಾಸಿಸುವ ಮೂವತ್ತು ಕೋಟಿ ಜನರೂ, ಈ ದಬ್ಬಾಳಿಕೆಯ ಶಾಪವನ್ನು ನಿಲ್ಲಿಸಲು ತಮ್ಮ ಅರವತ್ತು ಕೋಟಿ ಕೈಗಳನ್ನು ಮೇಲೆತ್ತಬೇಕು. ಬಲವನ್ನು

ಬಲದಿಂದಲೇ ತಡೆಯಬೇಕು."

ಆದರೆ ಈ ಯುವಕ ಭಯೋತ್ಪಾದಕರು ಹಿಂಸೆಯ ಆಧಾರದ ಮೇಲೆ, ಜನ ಸಾಮಾನ್ಯರೂ ಭಾಗವಹಿಸಿ ಇಡೀ ರಾಷ್ಟ್ರವೇ ಒಳಗೊಳ್ಳುವಂತಹ ಒಂದು ಕ್ರಾಂತಿಯನ್ನು ಯೋಜಿಸಲು ಅಥವಾ ವ್ಯವಸ್ಥೆಗೊಳಿಸಲು ಪ್ರಯತ್ನಿಸಲಿಲ್ಲ. ಐರಿಷ್ ಭಯೋತ್ಪಾದಕರ ಮತ್ತು ರಷ್ಯನ್ ನಿಹಿಲಿಸ್ಟರ ಮಾದರಿಯಲ್ಲಿ ಒಬ್ಬೊಬ್ಬರೇ ಅಧಿಕಾರಿಗಳನ್ನು ಕೊಲೆ ಮಾಡುವ ಕೆಲಸವನ್ನು ಇಚ್ಛಿಸಿದರು. ಆ ಅಧಿಕಾರಿಗಳು ತಮ್ಮ .ಭಾರತ-ವಿರೋಧೀ ಮನೋಭಾವದಿಂದಲೋ, ಅಥವಾ ದಬ್ಬಾಳಿಕೆಯ ಕ್ರಮಗಳಿಂದಲೋ ಜನರ ಅಸಮಾಧಾನಕ್ಕೆ ಪಾತ್ರರಾಗಿದ್ದವರು. ಇದರ ಧ್ಯೇಯ ವಾದರೂ ಆಳುಗರ ಮನಸ್ಸಿನಲ್ಲಿ ತೀವ್ರವಾದ ಭೀತಿಯನ್ನು ಹುಟ್ಟಿಸುವುದು, ಜನರನ್ನು ರಾಜಕೀಯವಾಗಿ ಮೇಲೆಬ್ಬಿಸುವುದು, ಅಂತಿಮವಾಗಿ ಬ್ರಿಟಿಷರನ್ನು ಭಾರತದಿಂದ ಹೊರಗಟ್ಟುವುದು. ಅದರ ಯೋಜನೆ, ವ್ಯವಸ್ಥೆ, ಸೇರ್ಪಡೆ, ಶಿಕ್ಷಣ ಇವೆಲ್ಲವೂ ಗುಪ್ತವಾಗಿದ್ದು ರಹಸ್ಯ ಚಟುವಟಿಕೆಯಾಗಿರಬೇಕಾಗಿತ್ತು. ಅದರ ಸ್ವರೂಪವೇ ಹಾಗಿತ್ತು. ಅನೇಕ ಗುಪ್ತಸಂಸ್ಥೆಗಳನ್ನು ಸ್ಥಾಪಿಸಲಾಯಿತು. ವಿಶೇಷವಾಗಿ ಬಂಗಾಳ ಮತ್ತು ಮಹಾರಾಷ್ಟ್ರಗಳಲ್ಲಿ. ಅವುಗಳಲ್ಲಿ ಹಲವು ಸಂಘಗಳು ದೈಹಿಕಶಿಕ್ಷಣ ಸಂಘಗಳು ಅಥವಾ ಸಂಸ್ಥೆಗಳ ಮುಸುಕಿನಲ್ಲಿ ನಡೆಯತೊಡಗಿದ್ದುವು. ಇವುಗಳಲ್ಲಿ ಕಲ್ಕತ್ತಾ ಮತ್ತು ಡಾಕ್ಕಾದ ಅನುಶೀಲನ್ ಸಮಿತಿ (Anusilan Samiti) ಕಲ್ಕತ್ತಾದಲ್ಲಿ ಜುಗಾಂತರ್ ಮತ್ತು ಮಹಾರಾಷ್ಟ್ರದಲ್ಲಿ ಸಾವರ್ಕರ್ ಸೋದರರು ಸ್ಥಾಪಿಸಿದ ಮಿತ್ರ ಮೇಳ (Mitra Mela) ಗಳು ಬಹಳ ಪ್ರಸಿದ್ಧವಾದುವು. ವಿ.ಡಿ. ಸಾವರ್ಕರ್ ಅವರು ವಿದೇಶಕ್ಕೆ ಹೋದಾಗ ಅವರ ಅಣ್ಣ ಗಣೇಶ, ಅಭಿನವ ಭಾರತ್ ಸೊಸೈಟಿ (Abhinav Bharat Society)ಯನ್ನು ಪ್ರಾರಂಭ ಮಾಡಿದರು. ಬಹು ಬೇಗ ಅದರ ಶಾಖೆಗಳು ಪಶ್ಚಿಮ ಭಾರತಾದ್ಯಂತ ಸ್ಥಾಪಿತವಾದುವು.

ಖುದೀರಾಮ್ ಬೋಸ್ ಮತ್ತು ಪ್ರಫುಲ್ಲ ಚಕ್ಕಿ ಎಂಬ ಇಬ್ಬರು ಯುವಕರು ಮುಜಫರ್‌ಪುರದ ಜಿಲ್ಲಾ ನ್ಯಾಯಾಧೀಶನಾಗಿದ್ದ ಕಿಂಗ್ಸ್‌ಫರ್ಡ್‌ನ ಪ್ರಾಣ ತೆಗಯಲು ಕೈಗೊಂಡ ಪ್ರಯತ್ನ ಕ್ರಾಂತಿಕಾರಿ ಭಯೋತ್ಪಾದಕ ಕೃತ್ಯಗಳ ಬಗಗ ಜನರ ತೀವ್ರ ಗಮನವನ್ನು ಸಳೆಯಿತು. ಆದರ ಆ ಉದ್ದೇಶಕ್ಕಾಗಿ ಹಾಕಿದ ಬಾಂಬು ಇಬ್ಬರು ಮುಗ್ಧರಾದ ಹೆಂಗಸರನ್ನು ಬಲಿ ತೆಗೆದುಕೊಂಡಿತು. ಖುದೀರಾಮನನ್ನು ಸೆರ ಹಿಡಿದರು. ಪ್ರಫುಲ್ಲನು ಶರಣಾಗುವುದಕ್ಕಿಂತ ಮೇಲೆಂದು ಆತ್ಮಹತ್ಯ ಮಾಡಿ ಕೊಂಡನು. ಅರವಿಂದರ ಮತ್ತು ಅವರ ಸೋದರ ಬಾರಿನ್ ಹಾಗೂ ಇತರರ ಒಳಸಂಚಿನ ಮೊಕದ್ದಮೆಯನ್ನು ಆಲೀಪುರದಲ್ಲಿ ಪ್ರಾರಂಭಿಸಲಾಯಿತು. ಜೈಲಿನ ಕಾಂಪೌಂಡಿನಲ್ಲಿಯೇ ಕ್ರಾಂತಿಕಾರಿ ಭಯೋತ್ಪಾದಕರು ಅಪ್ರೂವರನನ್ನೇ ಕೊಲೆಮಾಡಿ ದುದರಿಂದಾಗಿ ವಿಚಾರಣೆಗ ತಡಯುಂಟಾಯಿತು. ಶೋಧನೆ ಮತ್ತು ವಿಚಾರಣೆಗಳಿಗ ನೇಮಿತರಾಗಿದ್ದ ಅಧಿಕಾರಿಗಳನ್ನು ಒಬ್ಬೊಬ್ಬರನ್ನಾಗಿ ಕೊಲ್ಲಲಾಯಿತು. ಅರವಿಂದ ರನ್ನು ಬಿಡುಗಡೆ ಮಾಡಿದಾಗ, ಅವರ ಸೋದರ ಬಾರಿನ್ ಸೇರಿದಂತೆ ನಾಲ್ವರನ್ನು ಅಂಡಮಾನಿಗೆ ಕಳಿಸಲಾಯಿತು. ಇತರ ಅನೇಕರನ್ನು ದೀರ್ಘಕಾಲದ ಸೆರೆವಾಸಕ್ಕೆ ತಳ್ಳಲಾಯಿತು. ಖುದೀರಾಮನನ್ನು ನೇಣುಹಾಕಿದರು, ಅಪ್ರೂವರರನ್ನು ಕೊಲೆ

ಮಾಡಿದ ಸತ್ಯೇನ್ ಬಸು ಮತ್ತು ಕನಾಯ್ ದತ್ತರಿಗೂ ಅದೇ ಗತಿಯಾಯಿತು.

ಮಹಾರಾಷ್ಟ್ರದಲ್ಲಿನ ನಾಸಿಕ್, ಮುಂಬೈ ಮತ್ತು ಪುಣೆ ಬಾಂಬು ತಾಪವಾರಿಕಾ ಕೇಂದ್ರಗಳಾದುವು. ವೈಸ್‌ರಾಯನ ಜೀವನದ ಮೇಲೆ ಆಕ್ರಮಣ ನಡೆಸಲಾಯಿತು. ಒಂದು ಸಮಾರಂಭದಲ್ಲಿ ನಾಸಿಕ್‌ನ ಜಿಲ್ಲಾ ನ್ಯಾಯಾಧೀಶ ಜ್ಯಾಕ್‌ಸನ್ನಿನ ಮೇಲೆ ಗುಂಡು ಹಾರಿಸಲಾಯಿತು. ಇದಕ್ಕೂ ಮುಂಚೆ, ಭಾರತೀಯ ಯುವಕರನ್ನು ಅಮಾನುಷ ರೀತಿಯಲ್ಲಿ ನೇಣು ಹಾಕುತ್ತಿದ್ದ ಮತ್ತು ದೇಶಭ್ರಷ್ಟರನ್ನಾಗಿ ಮಾಡುತ್ತಿದ್ದುದರ ವಿರುದ್ಧ ಪ್ರತಿಭಟನೆಯಾಗಿ, ಲಂಡನ್ನಿನ ಇಂಡಿಯಾ ಆಫೀಸಿನ ಕರ್ಜನ್ ವೈಲಿಯನ್ನು ಎಂ.ಎಲ್. ಧಿಂಗ್ರಾ ಕೊಂದುಹಾಕಿದನು. ಅವನಿಗೆ ಮರಣದಂಡನೆಯಾಯಿತು. ಸಾಯುವುದಕ್ಕೆ ಮುಂಚೆ ಅವನು ಬರೆದನು: "ಭಾರತದಲ್ಲಿ ಅಗತ್ಯವಾಗಿರುವ ಒಂದೇ ಒಂದು ಶಿಕ್ಷಣವೆಂದರೆ ಹೇಗೆ ಸಾಯ ಬೇಕೆಂಬುದನ್ನು ಕಲಿಯುವುದು. ಅದನ್ನು ಕಲಿಸಲು ಇರುವ ಒಂದೇ ಒಂದು ಮಾರ್ಗ ಹಾಗೆ ಸಾಯುವುದೇ ಆಗಿದೆ."

ಮದರಾಸ್ ಪ್ರಾಂತದಲ್ಲಿ ಜನರು ಬಿಪಿನ್ ಚಂದ್ರಪಾಲರ ಸರಣಿ ಭಾಷಣ ಗಳಿಂದ ಉದ್ರಿಕ್ತರಾದರು. ಚಿದಂಬರಂ ಪಿಳ್ಳೆ ಸಂಪೂರ್ಣ ಸ್ವರಾಜ್ಯವನ್ನು ಕುರಿತು ಬಹಿರಂಗವಾಗಿ ಮಾತನಾಡಿದರು. ಅವರ ಬಂಧನವು ಟ್ಯುಟಿಕಾರಿನ್ ಮತ್ತು ತಿನ್ನವೆಲ್ಲಿಗಳಲ್ಲಿ ತೀವ್ರವಾದ ದಂಗೆಗಳಿಗೆ ಎಡೆಮಾಡಿತು. ಉದ್ರಿಕ್ತ ಜನರ ಮೇಲೆ ಪೋಲೀಸರು ಅಲ್ಲಿ ಗುಂಡು ಹಾರಿಸಿದರು. ತಿನ್ನವೆಲ್ಲಿಯಲ್ಲಿ ಗುಂಡು ಹಾರಿಸಲು ಆಜ್ಞೆಯಿತ್ತಿದ್ದ ಆಶ್ (Ashe) ಎಂಬ ಅಧಿಕಾರಿಯನ್ನು ಭಾರತ ಮಾತಾ ಅಸೋಸಿಯೇಷನ್ನಿನ ವಾಂಚೀ ಅಯ್ಯರ್ ಕೊಲೆ ಮಾಡಿದನು. ಆಮೇಲೆ ತಪ್ಪಿಸಿಕೊಳ್ಳಲು ಸಾಧ್ಯವಾಗದ ವಾಂಚೀ ಅಯ್ಯರ್ ತನಗೆ ತಾನೇ ಗುಂಡು ಹೊಡೆದುಕೊಂಡು ಸತ್ತನು.

ಪಂಜಾಬಿನಲ್ಲಿ ಮತ್ತೆ ಮತ್ತೆ ತಲೆದೋರುತ್ತಿದ್ದ ಕ್ಷಾಮಗಳು, ಅಧಿಕವಾಗುತ್ತಿದ್ದ ನೆಲಗಂದಾಯ ಮತ್ತು ನೀರಾವರಿ ತೆರಿಗೆಗಳ ಆಧಾರದಿಂದ ಈ ಗುಪ್ತ ಸಂಸ್ಥೆಗಳು ಪ್ರಬಲವಾದುವು. ಕಾಲುವೆ ಕಾಲೋನಿಗಳಲ್ಲಿ ನೆಲಸಿದವರು ಒಡೆತನದ ಹಕ್ಕುಗಳ ಮೇಲೆ ಇದ್ದ ತಡೆಗಳನ್ನು ಶಂಕಿಸಿದರು. ಬೆಗರ್ ಪದ್ಧತಿ ಇರಿಸುಮುರಿಸು ಉಂಟುಮಾಡಿತ್ತು. ಬಂಗಾಳದಲ್ಲಿ ನಡೆದ ಘಟನೆಗಳು ಪಂಜಾಬಿಗಳನ್ನು ಇನ್ನಷ್ಟು ಉದ್ರೇಕಗೊಳಿಸಿದುವು. 1857 ರ ಕ್ರಾಂತಿಯ 50 ನೆಯ ವಾರ್ಷಿಕ ಸಮಾರಂಭವು ಸಮೀಪಿಸುತ್ತಿತ್ತು. ಭಾಷಣಗಳಲ್ಲಿ ಪದೇಪದೇ ಸಿಖ್ ಸೇನಾ ಪಡೆಗಳು ಕ್ರಾಂತಿಯೇಳ ಬೇಕೆಂದು ಕರೆ ನೀಡಲಾಗುತ್ತಿತ್ತು. ಲಾಹೋರಿನಲ್ಲಿ ಯೂರೋಪಿಯನರ ಮೇಲೆ ಆಕ್ರಮಣಗಳು ನಡೆದುವು. ಲಜಪತರಾಯ್ ಅವರ ಪಂಜಾಬೀ ಪತ್ರಿಕೆಯನ್ನು ವಿಚಾರಣೆಗೆ ಒಳಪಡಿಸಿದುದರಿಂದಾಗಿ ರಾವಲ್ಪಿಂಡಿಯಲ್ಲಿ ದಂಗೆಗಳು ಎದ್ದುವು. ಈ ಚಳುವಳಿಯ ಹೃದಯದಂತಿದ್ದವನು ಅಜಿತ್ ಸಿಂಗ್. ಅವನಿಗೆ ಆಗ ಹೈದರ್ ಮತ್ತು ಸಯ್ಯದ್ ಹೈದರ್ ರಿಜಾರ ಬೆಂಬಲವಿತ್ತು. ಲಜಪತರಾಯ್ ಮತ್ತು ಅಜಿತ್ ಸಿಂಗರನ್ನು ಗಡೀಪಾರು ಮಾಡಿದುದರಿಂದಾಗಿ ಪರಿಸ್ಥಿತಿ ಕೊಂಚಕಾಲ ತಟಸ್ಥವಾಗಿತ್ತು.

ಆಗ ಡೆಹರಾಡೂನ್‌ನಲ್ಲಿ ಒಬ್ಬ ಗುಮಾಸ್ತರಾಗಿದ್ದ ರಾಶ್ ಬೆಹಾರಿ ಬೋಸ್

ಬಂಗಾಳಕ್ಕೂ ಪಂಜಾಬಿಗೂ ಮಧ್ಯೆ ಸಂಪರ್ಕ ಕಲ್ಪಿಸುವ ಕೊಂಡಿಯಾದರು. ಬಂಗಾಳದಲ್ಲಿ ತಯಾರಿಸಿದ ಒಂದು ಬಾಂಬನ್ನು, ದಮನ-ಮತ್ತು-ಸುಧಾರಣೆ ಎಂಬ ನೀತಿ ಇಲ್ಲಿ ಇನ್ನು ನಡೆಯದು ಎಂದು ತೋರಿಕೊಡುವ ಸಲುವಾಗಿ 1912 ರ ಡಿಸೆಂಬರ್ 23 ರಂದು ವೈಸರಾಯ್ ಲಾರ್ಡ್ ಹಾರ್ಡಿಂಜ್ ದೆಹಲಿ ನಗರವನ್ನು ಪ್ರವೇಶಿಸುತ್ತಿರುವಂತೆಯೇ ಅವನ ಮೇಲೆ ಎಸೆಯಲಾಯಿತು. ರಾಶ್ ಬಿಹಾರಿ ಬೋಸರ ಲಿಬರ್ಟಿ ಕರಪತ್ರಗಳೂ ಜುಗಾಂತರ್ ಕರಪತ್ರಗಳೂ ಕ್ರಾಂತಿಕಾರಕ ವೃತ್ತಪತ್ರಿಕೆಗಳ ಪರಂಪರೆಯನ್ನು ಮುಂದುವರಿಸಿದುವು.

ಕೆಲವರು ಕ್ರಾಂತಿಕಾರಿ ಭಯೋತ್ಪಾದಕರು ವಿದೇಶಗಳಿಗೆ ಹೋಗಿ ಯೂರೋಪಿನಲ್ಲಿ ಕೇಂದ್ರಗಳನ್ನು ಸ್ಥಾಪಿಸಿದರು. ಅವರು ಬ್ರಿಟನ್ನಿಗೆ ಸ್ನೇಹಯುತವಾಗಿರದ ರಾಷ್ಟ್ರಗಳ ಸಹಾಯ ಪಡೆಯಬೇಕು ಅಥವಾ ಆಯುಧಗಳನ್ನು ಸಂಗ್ರಹಿಸಿ ಭಾರತದಲ್ಲಿನ ತಮ್ಮ ಸಹವರ್ತಿಗಳಿಗೆ ಗುಪ್ತವಾಗಿ ಕಳುಹಿಸಬೇಕು ಎಂದು ಹಂಚಿಕೆ ಹಾಕಿದ್ದರು. ಶ್ಯಾಮಜೀ ಕೃಷ್ಣವರ್ಮ, ವಿ.ಡಿ. ಸಾವರ್ಕರ್ ಮತ್ತು ಹರದಯಾಲ್ ಇಂಗ್ಲೆಂಡಿಗೆ ಹೋದರು. ಯೂರೋಪಿನಲ್ಲಿ ಮೇಡಂ ಗಾಮಾ (Madam Gama) ಮತ್ತು ಅಜಿತ್ ಸಿಂಗ್ ಪ್ರಮುಖರಾಗಿದ್ದರು.

ನಮ್ಮ ಸ್ವಾತಂತ್ರ್ಯ ಹೋರಾಟದ ಇತಿಹಾಸಕ್ಕೆ ಈ ಭಯೋತ್ಪಾದಕ ಕ್ರಾಂತಿಕಾರಿಗಳು ವರ್ಣರಂಜಿತವೂ ಸ್ಫೂರ್ತಿದಾಯಕವೂ ಆದ ಒಂದು ಅಧ್ಯಾಯವನ್ನು ಸೇರಿಸಿದರು. ಅವರ ಪತಾಕೆಯು ಮೆಚ್ಚು ಸಾಹಸಗಳು, ದಿಟ್ಟತನದ ಯೋಜನೆಗಳು, ನಿರುದ್ವಿಗ್ನವಾದ ಕಾರ್ಯಚಟುವಟಿಕೆ, ಸಾವನ್ನು ಕುರಿತ ಅಲಕ್ಷ್ಯ-ಇವು ರಾಷ್ಟ್ರದ ನೆನಪಿನಲ್ಲಿ ಚಿರವಾಗಿ ಉಳಿಯುವಂತಹ ಸ್ಥಾನವನ್ನು ಅವರಿಗೆ ದೊರಕಿಸಿಕೊಟ್ಟುವು. ಆದರೆ ಅವರ ಆದರ್ಶ, ಅವರ ಕ್ಲೇಶ ಎಷ್ಟೇ ಇದ್ದರೂ ಸೋಲು ಅವರಿಗೆ ಸಿದ್ಧವಾದುದಾಗಿತ್ತು. ವೈಯಕ್ತಿಕವಾಗಿ ನಡೆಸಿದ ಹಿಂಸಾಕೃತ್ಯಗಳು ಎಷ್ಟೇ ವೀರತನದಿಂದ ಕೂಡಿರಲಿ, ಜನಸಾಮಾನ್ಯರನ್ನು ಆಕರ್ಷಿಸಲಿಲ್ಲ. ಅಧಿಕಾರದ ಶಿಖರದಲ್ಲಿದ್ದ ಸಾಮ್ರಾಜ್ಯಶಾಹೀ ಬಹಳ ಸುಲಭವಾಗಿ ಅವರನ್ನು ಹಿಡಿಯಬಹುದಾಗಿತ್ತು. ಒಳಸಂಚು ದ್ರೋಹದ ಮೊಕದ್ದಮೆಗಳು, ತೀವ್ರವಾದ ದಂಡನೆಗಳು, ಕ್ರೂರವಾದ ಕಾನೂನುಗಳು ಅವರ ಬೆನ್ನು ಮುರಿದುವು. ವರ್ತಮಾನ ಪತ್ರಿಕೆಯ (ಅಪರಾಧಗಳಿಗೆ ಪ್ರಚೋದನೆ) ಶಾಸನ, ಅಪರಾಧಗಳ ಕಾನೂನು ತಿದ್ದುಪಡಿ ಶಾಸನ ಸಿಡಿಮದ್ದುಗಳನ್ನು ಕುರಿತ ಶಾಸನ, ಭಾರತೀಯ ವೃತ್ತಪತ್ರಿಕಾ ಶಾಸನ-ಇವು ಅಧಿಕಾರಶಾಹಿಯ ಬತ್ತಳಿಕೆಯ ಹೊಸ ಬಾಣಗಳಾದುವು. ಎರಡನೆಯದಾಗಿ, ಬಹುಮಟ್ಟಿಗೆ ಭಯೋತ್ಪಾದಕರು ಒಂದು ಸಮಾನ ಯೋಜನೆಯಾಗಲಿ, ಒಂದು ಕೇಂದ್ರ ನಾಯಕತ್ವವಾಗಲಿ ಇಲ್ಲದ ಪರಸ್ಪರ ವಿರುದ್ಧ ಉದ್ದೇಶಗಳಿಂದ ಕೆಲಸ ಮಾಡುತ್ತಿದ್ದರು. ಮೂರನೆಯದಾಗಿ, ಜನತೆಯಲ್ಲಿ ಅವರಿಗೆ ಆಧಾರವಿರಲಿಲ್ಲ. ರಹಸ್ಯ ಸಂಸ್ಥೆಗಳಾಗಿದ್ದುದರಿಂದ ಅವರು ಜನರನ್ನು ತಮ್ಮ ನಂಬುಗೆಗೆ ತೆಗೆದುಕೊಳ್ಳಲು ಸಾಧ್ಯವಿರಲಿಲ್ಲ. ಸಮಿತಿಗಳಲ್ಲಿ ಮುಖ್ಯವಾಗಿ ಮಧ್ಯಮ ವರ್ಗದ ವಿದ್ಯಾವಂತ ಜನರು, ರೈತರು ಮತ್ತು ಕಾರ್ಮಿಕರ ಸಂಪರ್ಕವೇ ಇಲ್ಲದ ಜನ ಇದ್ದರು ಎಂಬುದನ್ನೂ ನೆನಪಿನಲ್ಲಿಡಬೇಕು. ಹಿತಗಾಮಿಗಳು ಬಹಿರಂಗವಾಗಿ ಅವರನ್ನು ಕೈಬಿಟ್ಟರು. ಅನೇಕ

ತೀವ್ರಗಾಮಿಗಳು ಅವರನ್ನು ಸ್ವೀಕರಿಸಲು ಓಂದುಮುಂದು ನೋಡುತ್ತಿದ್ದರು.

ಆದರೆ ಅಷ್ಟು ಮಟ್ಟಿಗೆ ಪೂರ್ಣವಾದ ಬಲಿದಾನ ಯಾವುದೂ ವ್ಯರ್ಥವಾಗಿ ಹೋಗುವುದಿಲ್ಲವಷ್ಟೆ. ಭಯೋತ್ಪಾದಕರನ್ನು ಕೆಲವರು ಮೂರ್ಖರು ಎಂದು ಕರೆದರೆ, ಇನ್ನು ಕೆಲವರು ವೀರರು ಎಂದರು. ದೇಶವು ಆ ಹುತಾತ್ಮರ ನೆನಪನ್ನೇ ಮೆಲುಕು ಹಾಕಿತು. ಏಕೆಂದರೆ "ನಮ್ಮ ಮಾನವತ್ವದ ಅಭಿಮಾನವನ್ನು ಅವರು ನಮಗೆ ತಂದುಕೊಟ್ಟರು."

## ಮಾರ್ಲೇ-ಮಿಂಟೋ ಸುಧಾರಣೆಗಳು

ತಾತ್ಕಾಲಿಕವಾಗಿ ಉಗ್ರಗಾಮಿ ರಾಷ್ಟ್ರೀಯವಾದಿಗಳು ಮತ್ತು ಕ್ರಾಂತಿಕಾರರು ಕೂಡಿ ಸರಕಾರವನ್ನು ಹೊಂದಾಣಿಕೆಯ ಕ್ರಮಗಳ ಬಗೆಗೆ ಆಲೋಚಿಸುವಂತೆ ಬಲಾತ್ಕಾರ ಮಾಡಿದರು. ಕಟ್ಟುನಿಟ್ಟಾದ ದಮನ ಕ್ರಮಗಳ ಜೊತೆಗೆ ಸರಕಾರವು ಮುಸ್ಲಿಂ ಬೇರ್ಪಡಿಕೆಯನ್ನು ಪ್ರೋತ್ಸಾಹಿಸಿತು. ಹಾಗೆಯೇ ಮಿತಗಾಮಿಗಳನ್ನು ತೀವ್ರಗಾಮಿಗಳಿಂದ ಬೇರ್ಪಡಿಸಲು ಕೆಲವು ಸಾಂವಿಧಾನಿಕ ಸುಧಾರಣೆಗಳ ಮೂಲಕ ಪ್ರಯತ್ನಿಸಿತು. ಕರ್ಜನನ ಉತ್ತರಾಧಿಕಾರಿಯಾಗಿ ವೈಸರಾಯ್ ಆಗಿಬಂದ ಮಿಂಟೋ (Minto) "ಒಡೆದು ಆಳು" ಆಟವನ್ನೇ ಆಡಲು ನಿರ್ಧರಿಸಿದನು. ಆಗಾಖಾನನ ನೇತೃತ್ವದಲ್ಲಿ ಮುಸ್ಲಿಂ ನಾಯಕರ ನಿಯೋಗವೊಂದು ಸಿಮ್ಲಾದಲ್ಲಿ ಆತನನ್ನು 1905 ರ ಅಕ್ಟೋಬರ್ 1ರಂದು ಭೇಟಿಮಾಡಿತು. ಮತೀಯ ಆಧಾರದ ಮತದಾನ ಮತ್ತು ವಿನಾಯಿತಿಗಳ ಬಗೆಗೆ ಆತನಿಂದ ಭರವಸೆ ಪಡೆಯಿತು. ಆದರ ಕೊನಗೆ 1909ರಲ್ಲಿ ಮಾರ್ಲೇ - ಮಿಂಟೋ ಸುಧಾರಣೆಗಳು ಜಾರಿಗೆ ಬಂದಾಗ ಅದರ ಷರತ್ತುಗಳು ಸಂತೋಷ ಉಂಟುಮಾಡಿದ್ದು ಕೆಲವರಿಗೆ ಮಾತ್ರ.

ಗವರ್ನರ್-ಜನರಲ್ಲನ ಎಕ್ಸಿಕ್ಯೂಟಿವ್ ಕೌನ್ಸಿಲಿನ ಸದಸ್ಯನಾಗಿ ಒಬ್ಬ ಭಾರತೀಯ ನನ್ನು ನೇಮಕ ಮಾಡುವುದು. ಹಾಗೆಯೇ ಮಿಕ್ಕ ಎಕ್ಸಿಕ್ಯೂಟಿವ್ ಕೌನ್ಸಿಲುಗಳಿಗೂ ಒಬ್ಬೊಬ್ಬ ಭಾರತೀಯನ ನೇಮಕ. ಕೇಂದ್ರದ ಹಾಗೂ ಸಂಸ್ಥಾನಗಳ ಶಾಸನ ಸಭೆಗಳ ಸದಸ್ಯ ಸಂಖ್ಯೆಯೂ ಹೆಚ್ಚಿತು, ಆದರೆ ಅವುಗಳ ಸ್ವರೂಪ ಹಾಗೆಯೇ ಉಳಿಯಿತು. ಅಧಿಕಾರಿಗಳ ಬಹು ಸಂಖ್ಯೆಯೂ ಕೇಂದ್ರದಲ್ಲಿ ಹಾಗೇ ಉಳಿಯಿತು. ಹೆಚ್ಚೆಂದರೆ 60 ರಲ್ಲಿ 27ಜನರನ್ನು ಚುನಾಯಿಸಬಹುದಾಗಿತ್ತು, ಅದೂ ಬಹು ಕಿರಿದಾದ ಮತದಾರ ವರ್ಗದಿಂದ. ಪ್ರಾಂತೀಯ ಶಾಸನ ಸಭೆಗಳಲ್ಲಿ ಈಗ ಅಧಿಕಾರಿಗಳಲ್ಲದವರು ಬಹು ಸಂಖ್ಯೆಯಲ್ಲಿದ್ದರೂ ಕೂಡ, ನಾಮಕರಣಗೊಂಡ ಸದಸ್ಯರು ಸಾಮಾನ್ಯವಾಗಿ ಅಧಿಕಾರಿಗಳ ಪರವಾಗಿ ಚುನಾಯಿತ ಸದಸ್ಯರ ವಿರುದ್ಧವಾಗಿಯೇ ಮತ ನೀಡುತ್ತಿದ್ದರು. ಕೇಂದ್ರ ಶಾಸನ ಸಭೆಗೆ ಮುಖ್ಯವಾಗಿ ಮೂರು ಬಗೆಯ ಮತದಾರ ವರ್ಗಗಳಿದ್ದುವು: (1) ಸಾಮಾನ್ಯ ವರ್ಗ - ಇದರಲ್ಲಿ ಪ್ರಾಂತೀಯ ಶಾಸನ ಸಭೆಗಳ ಅಧಿಕಾರಿಗಳಲ್ಲದ ಸದಸ್ಯರು ಇರುತ್ತಿದ್ದರು; (2) ಪಂಗಡ-ಮುಸ್ಲಿಮರು ಮತ್ತು ಭೂಮಾಲೀಕರು ಮುಂತಾಗಿ ವರ್ಗಗಳು ಇಲ್ಲಿ ಸೇರುತ್ತಿದ್ದುವು; (3) ವಿಶೇಷ-ಇಲ್ಲಿ ವಿಶ್ವವಿದ್ಯಾನಿಲಯಗಳು ಮತ್ತು ಚೇಂಬರ್ ಆಫ್ ಕಾಮರ್ಸ್ ಸಂಸ್ಥೆಗಳು ಸೇರುತ್ತಿದ್ದುವು. ಪ್ರಾಂತೀಯ ಕೌನ್ಸಿಲುಗಳಲ್ಲಿಯಾದರೋ ಅಧಿಕಾರಿಗಳಲ್ಲದ

ಸದಸ್ಯರನ್ನು ಚುನಾಯಿಸಬೇಕಾಗಿದ್ದುದು ಸ್ಥಳೀಯ ಸಂಸ್ಥೆಗಳು, ಭೂಮಾಲೀಕರು, ವರ್ತಕರು ಮತ್ತು ವಿಶ್ವವಿದ್ಯಾನಿಲಯಗಳು ಈ ವಂಗಡಗಳಿಂದ. ಮುಸ್ಲಿಮರು, ಭೂಮಾಲೀಕರು ಮತ್ತು ಯೂರೋಪಿಯನ್ ಬಂಡವಾಳಗಾರರಿಗೆ ಮೀಸಲು ಸ್ಥಾನಗಳಿದ್ದುವು. ಹೆಂಗಸರಿಗೆ ಮತದಾನ ಅರ್ಹತೆಯೇ ಇರಲಿಲ್ಲ. ಗವರ್ನರ್‌ಗಳು ಮತ್ತು ಗವರ್ನರ್-ಜನರಲ್ ಯಾವ ವ್ಯಕ್ತಿಯನ್ನು ಬೇಕಾದರೂ ರಾಜಕೀಯ ದೃಷ್ಟಿಯಿಂದ ಅಪೇಕ್ಷಣೀಯನಲ್ಲವೆಂದು ಬಿಟ್ಟುಬಿಡಬಹುದಾಗಿತ್ತು.

ಶಾಸನ ಸಭೆಗಳ ಅಧಿಕಾರಗಳೂ ಮಿತವಾಗಿದ್ದುವು. ಪ್ರಶ್ನೆಯನ್ನು ಕೇಳಿದ ಸದಸ್ಯನು ಮಾತ್ರವೇ ಒಂದು ಉಪಪ್ರಶ್ನೆ ಕೇಳಬಹುದಾಗಿತ್ತು. ಸೈನ್ಯ, ದೇಶೀಯ ಸಂಸ್ಥಾನಗಳು ಮುಂತಾದ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ವ್ಯವಹಾರ ಕ್ಷೇತ್ರಗಳಲ್ಲಿ ಚರ್ಚೆ-ನಿರ್ಣಯಗಳಿಗೆ ಅವಕಾಶವೇ ಇರಲಿಲ್ಲ. ಬಜೆಟ್‌ನ ಬೇರೆ ಬೇರೆ ಶೀರ್ಷಿಕೆಗಳ ಮೇಲೆ ಚರ್ಚೆ ಮತ್ತು ಮತದಾನಕ್ಕೆ ಅವಕಾಶವಿದ್ದಿತಾದರೂ ಒಟ್ಟು ಆಯವ್ಯಯದ ಮೇಲೆ ನಿರ್ಣಯ ಕೈಗೊಳ್ಳಲು ಅಥವಾ ಮತ ನೀಡಲು ಅನುಮತಿಯಿರಲಿಲ್ಲ.

ಮಿತಗಾಮಿಗಳು ರಾಜಿಮಾಡಿಕೊಳ್ಳಲು ಸಿದ್ಧರಾಗಿದ್ದರು. ಆದರೆ ಮಾರ್ಲೆ ವಂಚನೆ ಮಾಡಿದನೆಂದು ಅವರಿಗೆ ಅನಿಸಿತು. ಸುಧಾರಣೆಗಳ ಉದ್ದೇಶ ಪಾರ್ಲಿಮೆಂಟರಿ ಮಾದರಿಯ ಸರಕಾರವನ್ನು ರಚಿಸುವುದು ಎಂಬುದನ್ನು ಅವನು ಅಲ್ಲಗಳೆದನು. ವಿವೇಚನೆಯಿಲ್ಲದ ಅನರ್ಹತೆಗಳನ್ನು ಗೊತ್ತುಮಾಡುತ್ತಿದ್ದುದು, ಅತಿ ಕಿರಿದಾದ ಮತದಾರ ವರ್ಗ, ಕೇಂದ್ರದಲ್ಲಿ ಅಧಿಕಾರಿಗಳ ಬಾಹುಳ್ಯ, ಪ್ರಾಂತಗಳಲ್ಲಿ ಅಧಿಕಾರಿಗಳಲ್ಲದವರ ಬಹುಮತವೆಂಬ ಕಪಟ, ಚರ್ಚೆಗಳ ಮೇಲೆ ತಡೆಹಾಕಿದ್ದು, ಬಜೆಟ್ ಮೇಲೆ ಪ್ರಭಾವ ಬೀರಲಾಗದಂತೆ ಮಾಡಿದ್ದು-ಇವೆಲ್ಲ ಕೂಡಿ ಮಿತಗಾಮಿಗಳ ಭ್ರಮೆಯನ್ನು ಹೋಗಲಾಡಿಸಿದುವು. ಅವರು ನಿರ್ಜೀವ ವಿರೋಧ ಪಕ್ಷದಂತೆ ಮಾತ್ರ ವರ್ತಿಸಬೇಕಾಗಿತ್ತು. ಒಂದು ಪಕ್ಷವಾಗಿ ಕಾಂಗ್ರೆಸ್, ಜಾತೀಯ ಮತದಾರ ವರ್ಗ ಪದ್ಧತಿಯನ್ನು ವಿರೋಧಿಸಿತು. ಕಾಂಗ್ರೆಸಿಗರಲ್ಲಿ ಬಹು ಸಂಖ್ಯೆಯ ಜನರಿಗೆ ಮಿತಗಾಮಿ ವಿಧಾನದಲ್ಲಿ ಶ್ರದ್ಧೆ ತಪ್ಪಿತು. ಪ್ರಭಾವವು ವೇಗವಾಗಿ ಕ್ಷಯಿಸುತ್ತ ಬಂದ ಮಿತಗಾಮಿಗಳ ಮೇಲೆ ತೀವ್ರಗಾಮಿಗಳು ಉಗ್ರವಾಗಿ ರಾಜಕೀಯ ಆಕ್ರಮಣ ಮಾಡಿದರು. ಜಾತಿ, ಪಂಥ ಅಥವಾ ಭಾಷೆಯ ವಿವಕ್ಷೆಯಿಲ್ಲದೆ ವಿಶಾಲವಾದ ತಳಹದಿಯ ಮೇಲೆ ಅಖಿಲ ಭಾರತ ಮಟ್ಟದ ಎಲ್ಲ ಜನರನ್ನೂ ಕೂಡಿಸಿ ವಿಶಾಲ ರಾಷ್ಟ್ರೀಯ ಚಳುವಳಿಯನ್ನು ವ್ಯವಸ್ಥೆಗೊಳಿಸುವ ಕೆಲಸ ಮುಸ್ಲಿಂ ಬೇರ್ಪಡಿಕೆಯನ್ನು ಪ್ರೋತ್ಸಾಹಿಸಿದುದರಿಂದ ಮತ್ತಷ್ಟು ಕಷ್ಟಕರವಾಯಿತು. ಸುಧಾರಣೆಗಳ ನಿಜವಾದ ಉದ್ದೇಶವಾದರೂ ರಾಷ್ಟ್ರೀಯವಾದಿಗಳ ಶ್ರೇಣಿಗಳನ್ನು ಒಡೆದು, ಭಾರತೀಯರಲ್ಲಿ ಐಕ್ಯತೆ ಬೆಳೆಯದಂತೆ ತಡೆಯುವುದೇ ಆಗಿತ್ತು.

1911 ರಲ್ಲಿ ಲಾರ್ಡ್ ಹಾರ್ಡಿಂಜನು ಬಂಗಾಳದ ವಿಭಜನೆಯನ್ನು ರದ್ದು ಮಾಡುವುದರ ಮೂಲಕ ಭಾರತೀಯರ ಅಭಿಪ್ರಾಯವನ್ನು ಮಿದುಗೊಳಿಸಲು ಪ್ರಯತ್ನಿಸಿದನು. ಬಿಹಾರ ಮತ್ತು ಒರಿಸ್ಸಾಗಳನ್ನು ಬಂಗಾಳದಿಂದ ಬೇರ್ಪಡಿಸ ಲಾಯಿತು. ಅಸ್ಸಾಂ ಬೇರೆಯೇ ಪ್ರಾಂತವಾಯಿತು. ರಾಜಧಾನಿಯನ್ನು ದೆಹಲಿಗೆ ವರ್ಗಾಯಿಸಲಾಯಿತು.

ವಿಭಜನೆಯ ರದ್ಧತಿಯಿಂದ ಬಂಗಾಳಿಗಳ ಭಾವೋದ್ವೇಗಗಳು ಸ್ವಲ್ಪ ಮಟ್ಟಿಗೆ ಸಂತೃಪ್ತಿಗೊಂಡಿದ್ದರೂ ಕೂಡ, ಅಶಾಂತಿಯ ಮೂಲ ಕಾರಣಗಳನ್ನು ಇನ್ನೂ ಪರಿಗಣಿಸಿರಲಿಲ್ಲ. 1910 ರ ಪ್ರೆಸ್ ಆಕ್ಟ್, 1908 ರ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆಕ್ಟ್ ಪ್ರಕಾರವಾದ ವಿಶೇಷ ಕಾನೂನುಗಳು ಮುಂತಾದುವುಗಳ ಮೂಲಕ ಪ್ರದರ್ಶಿಸುತ್ತಿದ್ದ ದಬ್ಬಾಳಿಕೆ ಹಾಗೇ ಮುಂದುವರಿದಿತ್ತು, ಅದು ಕದನ ರೂಪದ ರಾಷ್ಟ್ರೀಯತೆಯ ಬೆಳವಣಿಗೆಯನ್ನು ತಡೆಯುವುದೆಂದು ನಿರೀಕ್ಷಿಸಲು ಸಾಧ್ಯವಿರಲಿಲ್ಲ.

## ಮತೀಯತೆಯ ಹುಟ್ಟು ಮತ್ತು ಬೆಳವಣಿಗೆ

ಭಾರತದ ರಾಷ್ಟ್ರೀಯ ಮನೋಧರ್ಮ ಬೆಳೆದು ವಿಕಾಸಗೊಂಡದ್ದು 19 ನೆಯ ಶತಮಾನದ ದ್ವಿತೀಯಾರ್ಧದಲ್ಲಿ. ಈ ಮೊದಲನೆಯ ಹಂತದಲ್ಲಿ ಮುಸ್ಲಿಮರಲ್ಲಿ ರಾಜಕೀಯ ಪ್ರಜ್ಞೆ ಹಿಂದೆ ಬಿದ್ದಿತ್ತು. ರಾಷ್ಟ್ರೀಯತಾ ಭಾವನೆಗಳು ಹಿಂದೂ ಗಳಲ್ಲಿಯೂ ಪಾರ್ಸೀಗಳಲ್ಲಿಯೂ ಕೆಳ ಮಧ್ಯಮ ವರ್ಗಗಳಲ್ಲಿ ಹರಡಿದುವು. ಮುಸ್ಲಿಮರ ಅದೇ ಸಾಮಾಜಿಕ ವರ್ಗದಲ್ಲಿ, ಅಷ್ಟು ಪ್ರಮಾಣದಲ್ಲಿ ಹರಡಲಿಲ್ಲ.

ಬ್ರಿಟಿಷರು ಬಂದು ಕ್ರಮೇಣ ಭಾರತದ ನೆಲದ ಮೇಲೆ ವಿದೇಶೀ ಸರಕಾರವನ್ನು ಸ್ಥಾಪನೆ ಮಾಡುವುದಕ್ಕೆ ಮುಂಚಿತವಾಗಿ ಹಲಕೆಲವು ಮತೀಯ ಭೇದಭಾವ ಗಳಿದ್ದರೂ ಹಿಂದೂಗಳು ಮತ್ತು ಮುಸ್ಲಿಮರು ಯಾವ ವಿರೋಧವಾಗಲಿ ಕಹಿ ಯಾಗಲಿ ಇಲ್ಲದೆ ಸಹಬಾಳ್ವೆ ನಡೆಸಿದ್ದರು. ಸಮಾಜದ ವಿಭಜನೆ ವರ್ಗಗಳಿಗನುಸಾರ ವಾಗಿತ್ತು. ಶ್ರೀಮಂತರು ಮತ್ತು ಬಡವರು ಇದ್ದರು; ವಿದ್ಯಾವಂತರು ಮತ್ತು ಅವಿದ್ಯಾವಂತರಿದ್ದರು; ಆಳುಗಳಿದ್ದರು, ಆಳಿಕೆಗೆ ಒಳಗಾದವರಿದ್ದರು. ಈ ವರ್ಗಗಳಲ್ಲಿ ಹಿಂದೂಗಳೂ ಮುಸ್ಲಿಮರೂ ಸೇರಿಯೇ ಇದ್ದರು. ಮೊಗಲ್ ಕಾಲದಲ್ಲಿಯೂ ಪರಿಸ್ಥಿತಿ ಹೀಗೆಯೇ ಇತ್ತು. 1857 ರ ಕ್ರಾಂತಿಯ ಅನಂತರವೂ ಹಿಂದೂಗಳೂ ಮುಸ್ಲಿಮರೂ ಜೊತೆ ಜೊತೆಯಾಗಿಯೇ ಹೋರಾಡಿದರು. ಅವರ ಕ್ರೋಧ ಇಬ್ಬರಿಗೂ ಸಮಾನನಾಗಿದ್ದ ಶತ್ರುವಿನ ಕಡೆಗೆ, ಯಾರ ಕೈಯಲ್ಲಿ ಸಮಸ್ತ ಭಾರತವು ನರಳುತ್ತಿತ್ತೋ ಆ ವಿದೇಶಿ ಆಳುಗರ ಕಡೆಗೆ ಗುರಿಕಟ್ಟಿತ್ತು.

ಕ್ರಾಂತಿಯನ್ನು ಅಡಗಿಸಿದ ಮೇಲೆ ಬ್ರಿಟಿಷರು ಮುಸ್ಲಿಮರ ಬಗೆಗೆ ಹೆಚ್ಚು ನಿಷ್ಠುರ ಕ್ರೌರ್ಯ ತೋರಿಸಿದರು. ಏಕೆಂದರೆ ದಂಗೆಯನ್ನು ಮುನ್ನಡೆಸಿದವರು ಮುಸಲ್ಮಾನರು, ಅವರೇ ಅದಕ್ಕೆ ಮುಖ್ಯ ಕಾರಣ ಎಂದು ಅವರು ತೀರ್ಮಾನಿಸಿದ್ದರು. ಆ ಕ್ರಾಂತಿಯ ಸಮಯದಲ್ಲಿ ದೆಹಲಿ ನಗರವೊಂದರಲ್ಲೇ 27,000 ಜನ ಮುಸ್ಲಿಮರನ್ನು ಮರಣ ದಂಡನೆಗೆ ಗುರಿಪಡಿಸಲಾಯಿತೆಂದು ಅಂದಾಜು ಮಾಡಲಾಗಿದೆ.

ಅಂತೂ ರಾಷ್ಟ್ರೀಯತಾ ಚಳುವಳಿ ಬೆಳೆದಂತೆ ಬ್ರಿಟಿಷರ ಧೋರಣೆಯೂ ಬದಲಾಯಿತು. 1870 ರ ಸುಮಾರಿನಲ್ಲಿ ಈ ಬದಲಾದ ಮನೋಧರ್ಮ ಹೆಚ್ಚು ಹೆಚ್ಚಾಗಿ ಗಮನಕ್ಕೆ ಬರತೊಡಗಿತು. ಈ ವ್ಯತ್ಯಸ್ತ ಮನೋಧರ್ಮವೂ ಬ್ರಿಟಿಷರು ಮಾಡಿದ ಅಥವಾ ಮಾಡಲೆತ್ನಿಸಿದ ಮಿಕ್ಕೆಲ್ಲದರಂತೆಯೇ ರಾಜಕೀಯದಿಂದ ಪ್ರಚೋದಿತವಾದದ್ದು; ಬ್ರಿಟಿಷರು ತಮ್ಮ ಸ್ವಂತದ ಆಸಕ್ತಿಗಳ ರಕ್ಷಣೆಗಾಗಿ ಅನು ಸರಿಸಿದ ಹೊಸ ತಂತ್ರದ ಫಲ. ರಾಷ್ಟ್ರೀಯ ಚಳುವಳಿ ಹರಡಿ ಬೆಳೆದ ಹಾಗೆ, ಅದು

ಜನರನ್ನು ಒಗ್ಗೂಡಿಸಿ ಸಾಮ್ರಾಜ್ಯಕ್ಕೆ ಭಾರೀ ಸಮಸ್ಯೆಯನ್ನು ತಂದೊಡ್ಡಬಹುದು ಎಂಬ ಭೀತಿ ಬೆಳೆಯಿತು. ಐಕ್ಯಗೊಂಡ ಜನತೆಯನ್ನು ಬಹಳ ಕಾಲ ಅಧೀನತೆಯಲ್ಲಿಟ್ಟುಕೊಂಡಿರಲು ಸಾಧ್ಯವಿಲ್ಲ, ಹಾಗಾಗಿ, ದಬ್ಬಾಳಿಕೆ ಮತ್ತು ಕಟ್ಟುನಿಟ್ಟಾದ ಹತೋಟಿ ಕ್ರಮಗಳ ಜೊತೆಗೆ, ಉಕ್ಕೇರುತ್ತಿದ್ದ ರಾಷ್ಟ್ರೀಯತಾ ಭಾವನೆಯನ್ನು ಪೂರ್ತಿ ಒಣಗಿಸಲು ಯತ್ನಿಸುವುದರ ಜೊತೆಗೆ ಬ್ರಿಟಿಷರು ಜನರನ್ನು ಒಟ್ಟಾಗದಂತೆ, ಪರಸ್ಪರ ಜಗಳವಾಡುತ್ತಿರುವಂತೆ, ತಮ್ಮ ತಮ್ಮಲ್ಲೇ ಸ್ಪರ್ಧಿಸುವಂತೆ ಏನೆಲ್ಲವನ್ನೂ ಮಾಡಲು ಸಿದ್ಧರಾದರು. 'ಒಡೆದು ಆಳು' ಎಂಬ ನೀತಿಯನ್ನು ಅನುಸರಿಸತೊಡಗಿದರು. ಜನರನ್ನು ಅವರ ವಿವಿಧ ಧರ್ಮಗಳ ಹೆಸರಿನಲ್ಲಿ ಒಡೆದು ಭಾರತದ ರಾಜಕೀಯದಲ್ಲಿ ಮತೀಯ ಹಾಗೂ ಬೇರ್ಪಡಿಕೆಯ ಪ್ರವೃತ್ತಿ ಬಲಗೊಳ್ಳುವಂತೆ ಪ್ರೋತ್ಸಾಹಿಸಬೇಕೆಂದು ನಿರ್ಧರಿಸಿದರು. ಮುಸ್ಲಿಂ ಅಲ್ಪ ಸಂಖ್ಯಾತ ಪಕ್ಷದ ಹಿತಚಿಂತಕರು ತಾವೇ ಎಂದು ಅವರು ಹೇಳಿಕೊಂಡರು. ತಮ್ಮ ಪಕ್ಷದ ಪರವಾಗಿ ಮುಸ್ಲಿಮರು, ಜಮೀನ್ದಾರರು, ಭೂಮಾಲೀಕರು ಮತ್ತು ವಿದ್ಯಾವಂತ ಮಧ್ಯಮ ವರ್ಗದ ಜನ-ಇವರನ್ನು ಒಲಿಸಿಕೊಳ್ಳಲು ಪ್ರಯತ್ನ ಮಾಡಿದರು. ಇನ್ನೂ ಬೇರೆ ರೀತಿಯ ವಿಭಜನೆಗಳನ್ನೂ ಪ್ರಯತ್ನಿಸಿದರು. ಬಂಗಾಳೀ ಪ್ರಾಧಾನ್ಯದ ವಿಷಯ ಮಾತಾಡತೊಡಗಿ ಪ್ರಾಂತೀಯತೆಯನ್ನು ಬಿತ್ತಿದರು. ಭಾರತೀಯ ಸಮಾಜ ರಚನೆಯಲ್ಲಿದ್ದ ಜಾತೀಯ ಸ್ವರೂಪವನ್ನು ದುರುಪಯೋಗಪಡಿಸಿಕೊಂಡು ಬ್ರಾಹ್ಮಣೇತರರನ್ನು, ಮೇಲು ಜಾತಿಗಳಿಗೆದುರಾಗಿ ಕೆಳಜಾತಿಗಳನ್ನು ಎತ್ತಿಕಟ್ಟಿದರು. ನ್ಯಾಯಾಲಯಗಳಲ್ಲಿ ಉರ್ದುವಿನ ಸ್ಥಾನದಲ್ಲಿ ಹಿಂದಿಯನ್ನು ತರಬೇಕೆಂಬ ಚಳುವಳಿಗೆ ಸಹಾಯ ಮಾಡಿ ಯು.ಪಿ., ಬಿಹಾರಗಳಲ್ಲಿನ ಹಿಂದೂಗಳಿಗೂ ಮುಸ್ಲಿಮರಿಗೂ ಸಾಮಾಜಿಕವಾಗಿ ಮತ್ತು ಮತೀಯವಾಗಿ ವೈರವನ್ನು ತಂದುಹಾಕಿದರು. ಹೀಗೆ ಭಾರತೀಯ ಸಮಾಜದ ಬೇರೆ ಬೇರೆ ಭಾಗಗಳ ನ್ಯಾಯಬದ್ಧ ಬೇಡಿಕೆಗಳನ್ನೂ ಅವರ ನಡುವೆ ಅಸಾಮರಸ್ಯ, ವಿದ್ವೇಷ ಹುಟ್ಟುವಂತೆ ತಿರುಗಿಸಿದರು. ಭಾರತದ ಸಾಮಾಜಿಕ ಪರಿಸ್ಥಿತಿ ಕಠಿಣಕರವಾಗಿತ್ತು. ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಶ್ನೆಗಳ ಸರಿತಪ್ಪು ಎಂಬುದು ಬೇರ್ಪಡಿಸಲಾಗದಷ್ಟು ಕಷ್ಟವಾಗಿ ಬೆರೆತುಹೋಗಿದ್ದುವು. ಇವನ್ನು ಜಾಗರೂಕತೆಯಿಂದ ಬೇರ್ಪಡಿಸಬೇಕಾಗಿತ್ತು. ಈ ಕಠಿಣಕರವಾದ ಪರಿಸ್ಥಿತಿಯನ್ನು ವಿದೇಶೀ ಆಳುಗರು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡರು.

ಮುಸ್ಲಿಂ ಮತೀಯತೆಯ ಬೆಳವಣಿಗೆಗೆ ಸಯ್ಯದ್ ಅಹಮದ್ ಖಾನ್ ಎಂಬುವನು ಬಹಳ ಮುಖ್ಯನಾದವನು. ಆತ ಒಬ್ಬ ಪ್ರಮುಖ ಸುಧಾರಕನೂ ಶಿಕ್ಷಣ ತಜ್ಞನೂ ಆಗಿದ್ದನು. ಖುರಾನಿನ ಮುಖ್ಯ ಅಂಶಗಳನ್ನು ಆಧುನಿಕ ರೀತಿ ನೀತಿಗಳ ಹಿನ್ನೆಲೆಯಲ್ಲಿ ಪ್ರಚುರಪಡಿಸಿ ಸೇವೆಯ ಮಹತ್ವವನ್ನು ಒತ್ತಿ ಹೇಳಿದನು. ಅವನ ಈ ವರ್ತನೆಯಿಂದ ಸಾಂಪ್ರದಾಯಿಕ ಇಸ್ಲಾಂ ನಾಯಕರಿಗೂ ಅವನಿಗೂ ಘರ್ಷಣೆ ಪ್ರಾರಂಭವಾಯಿತು. ಈ ಸಮಯದಲ್ಲಿ ಹಿಂದೂ ಮುಸ್ಲಿಂ ಸಹಕಾರವನ್ನು ಅವನು ನಂಬಿದ್ದನು. ಅಲಿಘಡದಲ್ಲಿ ಮುಸ್ಲಿಮರಿಗಾಗಿ ಆಧುನಿಕ ವಿದ್ಯಾಭ್ಯಾಸ ಕೇಂದ್ರವೊಂದನ್ನು (ಮೊಹಮಡನ್ ಆಂಗ್ಲೊ-ಓರಿಯಂಟಲ್ ಕಾಲೇಜ್) ಸ್ಥಾಪಿಸಲು ಹಿಂದೂ ಮತ್ತು ಮುಸ್ಲಿಂರಿಂದ ಧನ ಸಹಾಯವನ್ನು ಪಡೆದಿದ್ದನು. ಆದರೆ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಳವಣಿಗೆ

ಯಿಂದಾಗಿ ಮುಸ್ಲಿಮರ ಪರಿಸ್ಥಿತಿಯ ಬಗ್ಗೆ ಗಾಬರಿಗೊಳ್ಳಲು ಪ್ರಾರಂಭಿಸಿದನು. ಅವನಿಗೆ ಬೆಂಬಲ ನೀಡಿದ್ದ ಅನೇಕ ಮುಸ್ಲಿಂ ಜಮೀನ್ದಾರರ ಬಗ್ಗೆ ಚಿಂತಿಸಲಾರಂಭಿಸಿದನು. ಬ್ರಿಟಿಷರು ಕೂಡ ಹಿಂಬದಿಯಿಂದ ಸಾಧ್ಯವಾದಷ್ಟು ಕೀಟಲೆ ಮಾಡುತ್ತಿದ್ದರು. ಈ ಸಮಯದಲ್ಲಿ ಹಿಂದೂಗಳ ಮತ್ತು ಮುಸ್ಲಿಮರ ಹಿತಾಸಕ್ತಿಗಳು ಬೇರೆ ಬೇರೆ ಎಂದೂ, ಅನೇಕ ವೇಳೆ ಎದುರುಬದುರಾಗಿವೆ ಎಂದೂ ಸಯ್ಯದ್ ಅಹಮದ್ ಖಾನ್ ಘೋಷಿಸಿದನು. ಅವು ಪರಸ್ಪರ ವಿರುದ್ಧವಾದುವು ಎಂದೇ ಆತನ ಅಭಿಮತವಾಗಿತ್ತು. ಅವನೊಬ್ಬ ಕಟ್ಟಾ ಬ್ರಿಟಿಷ್ ವಿಧೇಯ. 1885 ರಲ್ಲಿ ಇಂಡಿಯನ್ ಕಾಂಗ್ರೆಸ್ ಪ್ರಾರಂಭವಾದಾಗ ಅವನು ಅದನ್ನು ವಿರೋಧಿಸಿದ್ದಲ್ಲದೆ, ಬನಾರಸ್‌ನ ರಾಜಾ ಶಿವಪ್ರಸಾದನೊಂದಿಗೆ ಕೂಡಿಕೊಂಡು ಬ್ರಿಟಿಷರಿಗೆ ವಿಧೇಯತೆ ತೋರುವ ಪ್ರತಿಪಕ್ಷವೊಂದನ್ನು ಕಟ್ಟಿದನು. ಬ್ರಿಟಿಷರು ಹೊರಟು ಹೋದರೆ ಹಿಂದೂಗಳ ಬಹುಸಂಖ್ಯಾತ ಪಕ್ಷವು ಪ್ರಭುತ್ವ ನಡೆಸುತ್ತದೆ, ಮುಸ್ಲಿಂ ಅಲ್ಪ ಸಂಖ್ಯಾತರಿಗೆ ಅನ್ಯಾಯ ಮಾಡುತ್ತದೆ ಎಂದು ಅವನು ಸಾರಿದನು. ಮುಸ್ಲಿಮರು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿಗೆ ಸೇರಬಾರದು ಎಂದು ಅವರಿಗೆ ಹೇಳಿಕೊಟ್ಟನು. ಬದ್ರುದ್ದೀನ್ ತ್ಯಾಬ್ಜಿ ಮೊದಲಾದ ಇತರ ಮುಸ್ಲಿಂ ನಾಯಕರು ನೂತನ ರಾಷ್ಟ್ರೀಯ ಸಂಸ್ಥೆಗೆ ಸೇರಿಕೊಳ್ಳಬೇಕೆಂದು ಮನವಿ ಮಾಡಿಕೊಳ್ಳುತ್ತಿದ್ದರೂ ಇವನು ತನ್ನದೇ ಪ್ರಚಾರ ಕೈಗೊಂಡನು.

ಸಯ್ಯದ್ ಅಹಮದ್ ಖಾನ್ ಮೊದಲಾದ ಮುಸ್ಲಿಂ ನಾಯಕರ ದೃಷ್ಟಿಗಳು ವಸ್ತುಸ್ಥಿತಿಗೆ ವಿರುದ್ಧವಾಗಿದ್ದುವು, ಅವೈಜ್ಞಾನಿಕವೂ ಅವಿಚಾರಯುತವೂ ಆಗಿದ್ದುವು. ಹಿಂದೂಗಳು ಮತ್ತು ಮುಸ್ಲಿಮರು ತಮ್ಮ ಬೇರೆಬೇರೆಯೇ ಆದ ಧರ್ಮಗಳಲ್ಲಿ ಶ್ರದ್ಧೆ ತಳೆದಿದ್ದರೂ ಕೂಡ, ಅವರ ಆರ್ಥಿಕ ಮತ್ತು ರಾಜಕೀಯ ಆಸಕ್ತಿಗಳು ಒಂದೇ ಆಗಿದ್ದುವು. ಸಾಮಾಜಿಕ ಮತ್ತು ಸಾಂಸ್ಕೃತಿಕ ದೃಷ್ಟಿಗಳಿಂದ ನೋಡಿದರೂ, ಹಿಂದೂ ಮತ್ತು ಮುಸ್ಲಿಂ ಜನತೆ ಹಾಗೂ ವರ್ಗಗಳು ಸಮಾನವಾದ ಜೀವನ ವಿಧಾನಗಳನ್ನು ಹೊಂದಿದ್ದರು. ಉದಾಹರಣೆಗೆ, ಒಬ್ಬ ಬಂಗಾಳಿ ಮುಸ್ಲಿಮನಿಗೂ ಪಂಜಾಬಿ ಮುಸ್ಲಿಮನಿಗೂ ಇರುವುದಕ್ಕಿಂತ ಹೆಚ್ಚು ಸಮಾನತೆ ಒಬ್ಬ ಬಂಗಾಳಿ ಮುಸ್ಲಿಮನಿಗೂ ಬಂಗಾಳಿ ಹಿಂದುವಿಗೂ ಇತ್ತು. ಇದಕ್ಕಿಂತ ಮುಖ್ಯವಾಗಿದ್ದ ವಿಚಾರವೆಂದರೆ, ವಿದೇಶೀ ಆಳುಗರು ಹಿಂದೂ ಮತ್ತು ಮುಸ್ಲಿಮರನ್ನು ಸಮಾನವಾಗಿ ತುಳಿಯುತ್ತಿದ್ದರು, ಸುಲಿಗೆ ಮಾಡುತ್ತಿದ್ದರು. 1884 ರಲ್ಲಿ ಇದೇ ಸಯ್ಯದ್ ಅಹಮದ್ ಖಾನ್ ಹೇಳಿದ್ದನು:

"ನೀನು ಅದೇ ನೆಲದಲ್ಲಿ ವಾಸಿಸುತ್ತಿಲ್ಲವೆ? ನಿನ್ನನ್ನು ಅದೇ ನೆಲದಲ್ಲಿ ಸುಡುವುದಿಲ್ಲವೆ ಅಥವಾ ಹೂಳುವುದಿಲ್ಲವೆ? ಅದೇ ನೆಲದಲ್ಲಿ ನಡೆದು ಅದೇ ನೆಲದ ಮೇಲೆ ನೀನು ಬದುಕುವುದಿಲ್ಲವೆ? ಹಿಂದೂ ಮತ್ತು ಮಹಮ್ಮದೀಯ ಎಂಬ ಶಬ್ದಗಳು ಕೇವಲ ಧರ್ಮವನ್ನು ಸೂಚಿಸುತ್ತವೆನ್ನುವುದನ್ನು ಜ್ಞಾಪಕದಲ್ಲಿಡು. ಅದನ್ನು ಬಿಟ್ಟರೆ ಎಲ್ಲ ಜನರೂ, ಹಿಂದುವಾಗಲಿ ಮುಸ್ಲಿಮನಾಗಲಿ, ಕ್ರಿಶ್ಚಿಯನನು ಕೂಡ-ಈ ನೆಲದ ಮೇಲೆ ವಾಸಿಸುತ್ತಿರುವ ಎಲ್ಲರೂ ಈ ವಿಶಿಷ್ಟವಾದ ದೃಷ್ಟಿಯಿಂದ ಒಂದೇ ರಾಷ್ಟ್ರಕ್ಕೆ ಸೇರಿದವರು. ಆಗ ಈ ಬೇರೆ ಬೇರೆ

ಪಂಗಡಗಳನ್ನು ಒಂದು ದೇಶ ಎಂದು ವರ್ಣಿಸಬಹುದು. ಎಲ್ಲರಿಗೂ ಸಮಾನ ವಾದ ದೇಶದ ಒಳಿತಿಗಾಗಿ ಎಲ್ಲರೂ ಪ್ರತಿಯೊಬ್ಬರೂ ಒಂದುಗೂಡಬೇಕು."

ಆದ್ದರಿಂದ ಹೊಸದಾಗಿ ಮತೀಯ ಆಧಾರದ ಮೇಲೆ ಆಲೋಚನಾ ವಿಧಾನಗಳು ಬಹುಜನ ಮುಸ್ಲಿಮರಲ್ಲಿ ಹೇಗೆ ಬೆಳೆಯಿತು ಎಂಬುದನ್ನು ತಿಳಿದುಕೊಳ್ಳುವುದು ಯುಕ್ತವಾದದ್ದು.

ವಿದ್ಯಾಭ್ಯಾಸ, ವಾಣಿಜ್ಯ ಮತ್ತು ಕೈಗಾರಿಕೆಗಳಲ್ಲಿ ಮುಸ್ಲಿಮರು ಇತರರಿಗಿಂತ ಸ್ವಲ್ಪ ಹಿಂದೆ ಇದ್ದದ್ದು ಇದಕ್ಕೆ ಒಂದು ಕಾರಣವಾಯಿತು. ಮುಸ್ಲಿಮರ ಮೇಲಣ ವರ್ಗದ ಪೈಕಿ ಹೆಚ್ಚಾಗಿ ಶ್ರೀಮಂತ ವರ್ಗದವರೂ ಜಮೀನ್ದಾರರೂ ಇದ್ದರು, 19 ನೆಯ ಶತಮಾನದ 70 ವರ್ಷಗಳು ಈ ವರ್ಗದ ಜನರು ಬ್ರಿಟಿಷ್ ವಿರೋಧಿಗಳಾಗಿದ್ದು ಸಾಂಪ್ರದಾಯಿಕಬದ್ಧರಾಗಿ ಆಧುನಿಕ ವಿದ್ಯಾಭ್ಯಾಸವನ್ನು ವಿರೋಧಿಸುತ್ತಿದ್ದರು. ಇದರಿಂದಾಗಿ ಭಾರತದಲ್ಲಿ ವಿದ್ಯಾವಂತ ಮುಸ್ಲಿಮರ ಸಂಖ್ಯೆ ಬಹಳ ಕಡಮೆ ಯಾಗಿತ್ತು. ಈ ಕಾರಣದಿಂದ ಪ್ರಜಾಪ್ರಭುತ್ವ, ರಾಷ್ಟ್ರೀಯತೆ ಹಾಗೂ ವಿಜ್ಞಾನದ ಮೇಲೆ ಒತ್ತಡವಿದ್ದ ಆಧುನಿಕ ವಿದ್ಯಾಭ್ಯಾಸ ಮುಸ್ಲಿಮರಿಗೆ ಇಲ್ಲವಾಯಿತು. ಸಾಂಪ್ರದಾಯಿಕವಾಗಿ ಹಿಂದುಳಿಯುವುದು ಅವರ ಪಾಡಾಯಿತು. ನಂತರ ಸಯ್ಯದ್ ಅಹಮದ್ ಖಾನ್, ನವಾಬ್ ಅಬ್ದುಲ್ ಲತೀಫ್, ಬದ್ರುದೀನ್ ತ್ಯಾಬ್ಜಿ ಇವರೇ ಮುಂತಾದವರ ಪರಿಶ್ರಮದಿಂದ ಆಧುನಿಕ ವಿದ್ಯಾಭ್ಯಾಸ ಮುಸ್ಲಿಂರಿಗೆ ದೊರೆಯಿತು. ಆದರೂ ಹಿಂದೂಗಳು, ಕ್ರೈಸ್ತರು ಮತ್ತು ಪಾರ್ಸಿಗಳಿಗೆ ಹೋಲಿಸಿದಲ್ಲಿ ವಿದ್ಯಾವಂತ-ಅವಿದ್ಯಾವಂತ ಪ್ರಮಾಣವು ಮುಸ್ಲಿಮಲ್ಲಿ ಬಹಳ ಕಡಮೆಯಾಗಿತ್ತು. ಹೀಗೆಯೇ ವಾಣಿಜ್ಯ ಮತ್ತು ಕೈಗಾರಿಕೆಯ ಬೆಳವಣಿಗೆಯಲ್ಲಿ ಮುಸ್ಲಿಮ ಪಾತ್ರ ಹೆಚ್ಚಾಗಿರಲಿಲ್ಲ. ವಾಣಿಜ್ಯ ಮತ್ತು ಕೈಗಾರಿಕೆಯಲ್ಲಿ ಅವರ ಸಂಖ್ಯೆ ಕಡಮೆಯಾಗಿದ್ದದ್ದು ಮುಸ್ಲಿಂ ಜನ ಸಮೂಹದ ಮೇಲೆ ಜಮೀನ್ದಾರರ ಹತೋಟಿ ಭದ್ರವಾಗಲು ನೆರವಾಯಿತು. ಈ ಮುಂಚೆಯೇ ನೋಡಿರುವಂತೆ ಹಿಂದೂ ಅಥವಾ ಮುಸ್ಲಿಂ ಜಮೀನ್ದಾರರು ಸ್ವಂತ ಹಿತಾಸಕ್ತಿಗಳ ದೃಷ್ಟಿಯಿಂದ ಬ್ರಿಟಿಷರಿಗೆ ನೆರವು ನೀಡಿದರು. ಆದರೆ ಹಿಂದೂಗಳ ಪೈಕಿ ಅಭಿವೃದ್ಧಿಗೊಳ್ಳುತ್ತಿದ್ದ ವಾಣಿಜ್ಯ ಮತ್ತು ಕೈಗಾರಿಕೋದ್ಯಮಿ ಗಳು ಹಾಗೂ ಆಧುನಿಕ ವಿದ್ಯಾಪರಿಣತರು ಜಮೀನ್ದಾರರನ್ನು ನಾಯಕತ್ವದಿಂದ ಹಿಂದಕ್ಕೆ ತಳ್ಳಿದ್ದರು. ಈ ಬದಲಾವಣೆ ಮುಸ್ಲಿಮರಲ್ಲಿ ಕಂಡುಬರಲಿಲ್ಲ.

ವಿದ್ಯಾಭ್ಯಾಸದಲ್ಲಿ ಮುಸ್ಲಿಮರು ಹಿಂದುಳಿದ ಕಾರಣ ಮತ್ತೊಂದು ದುರದೃಷ್ಟ ಪರಿಣಾಮವಾಯಿತು. ಸರ್ಕಾರಿ ಉದ್ಯೋಗಗಳಿಗಾಗಲೀ, ಇತರ ಮುಖ್ಯ ಹುದ್ದೆ ಗಳಿಗಾಗಲೀ ಆಧುನಿಕ ವಿದ್ಯಾಭ್ಯಾಸ ಅವಶ್ಯಕವಾಗಿದ್ದು, ಅವರು ಈ ವಿಚಾರದಲ್ಲೂ ಹಿಂದುಳಿಯಬೇಕಾಯಿತು. ಅಷ್ಟೇ ಅಲ್ಲದೆ 1858 ರ ನಂತರ ಸರ್ಕಾರ ಅವರನ್ನು ಮನಃಪೂರ್ವಕವಾಗಿ ದೂರವಿಟ್ಟಿತು. 1857 ರ ದಂಗೆಗೆ ಮುಸ್ಲಿಮರೇ ಮುಖ್ಯ ಕಾರಣರೆಂಬ ಅವರ ಅಭಿಪ್ರಾಯವೇ ಈ ನಿರ್ಧಾರಕ್ಕೆ ಕಾರಣ. ಆಧುನಿಕ ವಿದ್ಯಾಭ್ಯಾಸ ಅವರಲ್ಲಿ ಪ್ರಚುರವಾದಾಗ ಮುಸ್ಲಿಮರಿಗೆ ವಾಣಿಜ್ಯ ಕೈಗಾರಿಕಾ ಕ್ಷೇತ್ರಗಳಲ್ಲಿ ಹೆಚ್ಚಿನ ಅವಕಾಶಗಳು ದೊರೆಯಲಿಲ್ಲ. ಆದಕಾರಣ ಅವರು ಸರ್ಕಾರಿ ಉದ್ಯೋಗ ಪಡೆಯಲು ಪ್ರಯತ್ನಿಸಿದರು. ಆದರೆ ಭಾರತ ಸಾಕಷ್ಟು ಹಿಂದುಳಿದ ದೇಶವಾಗಿ

ದ್ದರಿಂದ ಅವರಿಗೆ ಹೆಚ್ಚಿನ ಅವಕಾಶ ದೊರೆಯುವಂತಿರಲಿಲ್ಲ. ಇದರಿಂದಾಗಿ ಬ್ರಿಟಿಷ್ ಅಧಿಕಾರಿಗಳಿಗೂ ಅವರ ವಿಧೇಯರಾಗಿದ್ದ ಮುಸ್ಲಿಮರಿಗೂ ವಿದ್ಯಾವಂತ ಮುಸ್ಲಿಮರನ್ನು ವಿದ್ಯಾವಂತ ಹಿಂದೂಗಳ ವಿರುದ್ಧ ಎತ್ತಿಕಟ್ಟಲು ಒಳ್ಳೆಯ ಅವಕಾಶವಿತ್ತು. ಸರ್ಕಾರಿ ಉದ್ಯೋಗದಲ್ಲಿ ಮುಸ್ಲಿಮರಿಗೆ ವಿಶೇಷ ರೀತಿಯ ಸ್ಥಾನಮಾನಗಳಿರಬೇಕೆಂದು ಸಯ್ಯದ್ ಅಹಮದ್ ಖಾನ್ ಮತ್ತು ಇತರರು ವಾದಿಸಲಾರಂಭಿಸಿದರು. ವಿದ್ಯಾವಂತ ಮುಸ್ಲಿಮರು ಬ್ರಿಟಿಷರಿಗೆ ವಿಧೇಯರಾಗಿದ್ದರೆ ಇದಕ್ಕೆ ಅವಕಾಶವಿರುತ್ತದೆಂದು ಅವರು ಘೋಷಿಸಿದರು. ಅವರಿಗೆ ವಿಧೇಯರಾಗಿದ್ದ ಕೆಲವು ಹಿಂದೂ ಮತ್ತು ಪಾರ್ಸಿಗಳೂ ಸಹ ಇದೇ ವಾದಸರಣಿಯನ್ನು ಅನುಸರಿಸಿದರು. ಆದರೆ ಅವರು ಅಲ್ಪಸಂಖ್ಯಾತರಾಗಿ ಉಳಿದರು. ಇದರ ಪರಿಣಾಮವಾಗಿ ಇಡೀ ದೇಶದಲ್ಲಿ ವಕೀಲರು, ಪತ್ರಿಕೋದ್ಯಮಿಗಳು, ವಿದ್ಯಾರ್ಥಿಗಳು, ವ್ಯಾಪಾರಿಗಳು ಮತ್ತು ಕೈಗಾರಿಕೋದ್ಯಮಿಗಳು ರಾಜಕೀಯ ನಾಯಕರಾಗಿ ಪರಿವರ್ತಿಸುತ್ತಿದ್ದರು. ಆದರೆ ಮುಸ್ಲಿಮರಲ್ಲಿ ಮಾತ್ರ ಬ್ರಿಟಿಷರಿಗೆ ವಿಧೇಯರಾಗಿದ್ದ ಜಮೀನ್ದಾರರು ಮತ್ತು ಸರ್ಕಾರಿ ಉದ್ಯೋಗಗಳಿಂದ ನಿವೃತ್ತರಾದವರು ಮಾತ್ರ ರಾಜಕೀಯ ವಿಚಾರಗಳಲ್ಲಿ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಮುಂಬೈನಲ್ಲಿ ಮಾತ್ರ ವಿಚಾರ ಬೇರೆಯಾಗಿತ್ತು. ವಾಣಿಜ್ಯ ಮತ್ತು ವಿದ್ಯಾಭ್ಯಾಸಗಳನ್ನು ಅಲ್ಲಿನ ಮುಸ್ಲಿಮರು ಬಹಳ ಮುಂಚೆಯೇ ಪ್ರವೇಶಿಸಿದ್ದರು. ಆದ್ದರಿಂದ ಅಲ್ಲಿನ ರಾಷ್ಟ್ರೀಯ ಕಾಂಗ್ರೆಸ್ಸಿನ ಮುಂದಾಳುಗಳ ಪೈಕಿ ಬದ್ರುದ್ದೀನ್ ತ್ಯಾಬ್ಜಿ, ಆರ್. ಎಂ. ಸಯಾನಿ, ಎ. ಭೀಮ್‌ಜೀ ಮತ್ತು ಯುವಕ ಬ್ಯಾರಿಸ್ಟರ್ ಮುಹಮ್ಮದ್ ಆಲಿ ಜಿನ್ನಾ ಇವರೇ ಮುಂತಾದ ಪ್ರತಿಭಾಶೀಲ ಮುಸ್ಲಿಮರಿದ್ದರು. ಇಷ್ಟೇ ಅಲ್ಲದೆ ಬಂಗಾಳ, ಉತ್ತರ ಪ್ರದೇಶ ಮತ್ತು ಪಂಜಾಬ್‌ಗಳಲ್ಲಿ ವಿದ್ಯಾಭ್ಯಾಸ ಹರಡಿ ಮುಸ್ಲಿಂ ಪೈಕಿ ರಾಷ್ಟ್ರೀಯತೆಯ ಗುಂಪನ್ನು ಪ್ರಾರಂಭಿಸಲು ಅವಕಾಶವಾಯಿತು. ಬ್ರಿಟಿಷ್ ವಿಧೇಯರು ನಾಯಕರಾಗುವಲ್ಲಿ ಪಡೆದಿದ್ದ ಏಕಸ್ವಾಮ್ಯ ಈಗ ಇಲ್ಲವಾಯಿತು. ಜವಾಹರಲಾಲ್ ನೆಹರೂ ಅವರು ತಮ್ಮ "ದಿ ಡಿಸ್ಕವರಿ ಆಫ್ ಇಂಡಿಯಾ" ಪುಸ್ತಕದಲ್ಲಿ ಬರೆದಿರುವ ಒಂದು ಪಂಕ್ತಿಯೊಡನೆ ಈ ಸಮಸ್ಯೆಯ ವಿಚಾರವನ್ನು ನಾವು ಮುಕ್ತಾಯ ಮಾಡಬಹುದು:

> "ಹಿಂದೂ ಮತ್ತು ಮುಸ್ಲಿಂ ಮಧ್ಯಮ ವರ್ಗಗಳ ಅಭಿವೃದ್ಧಿಯಲ್ಲಿ ಒಂದು ತಲೆಮಾರು ಅಥವಾ ಅದಕ್ಕೂ ಹೆಚ್ಚಿನ ಅಂತರವಿದೆ. ಈ ವ್ಯತ್ಯಾಸ ರಾಜಕೀಯ, ಆರ್ಥಿಕ ಮತ್ತು ಇತರ ಕ್ಷೇತ್ರಗಳಲ್ಲಿ ರೂಪಿಸಲ್ಪಟ್ಟಿದೆ. ಈ ಹಿಂದುಳಿಕೆ ಮುಸ್ಲಿಮರಲ್ಲಿ ಒಂದು ರೀತಿಯ ಮಾನಸಿಕ ಭಯವನ್ನು ತಂದಿದೆ."

ಆ ಕಾಲದಲ್ಲಿ ಮತೀಯ ಸ್ವರೂಪದ ಆಲೋಚನೆ ಬೆಳೆಯಲು ಇನ್ನೂ ಒಂದು ಕಾರಣವಿದ್ದಿತು. ಮೊದಲು ಭಾರತದ ಇತಿಹಾಸವನ್ನು ಬರೆದವರು ಬ್ರಿಟಿಷ್ ಚರಿತ್ರಕಾರರು. ಆದರೆ ಆಮೇಲೆ ಬರೆದ ಭಾರತೀಯ ಇತಿಹಾಸಕಾರರೂ ಬ್ರಿಟಿಷರ ಹೆಜ್ಜೆಯಲ್ಲೇ ಹೆಜ್ಜೆಯಿಟ್ಟು ಬರೆದರು. ದುರದೃಷ್ಟವಶಾತ್ ಅವರು ಬರೆದದ್ದು, ಬೋಧಿಸಿದ್ದು ಮತೀಯ ಭಾವನೆಗಳನ್ನು ಉದ್ರೇಕಿಸುವ ರೀತಿಯಲ್ಲಿಯೇ. ಉದಾಹರಣೆಗೆ ಪ್ರಾಚೀನ ಕಾಲವನ್ನು ಹಿಂದೂ ಯುಗ ಎಂದೂ, ಮಧ್ಯಕಾಲವನ್ನು ಮುಸ್ಲಿಂ ಯುಗ ಎಂದೂ ಅವರು ಕರೆದರು. ಮಧ್ಯಕಾಲದಲ್ಲಿ ಟರ್ಕ್, ಆಫ್ಘನ್

ಮತ್ತು ಮೊಗಲ್ ವಂಶಗಳು ಆಳುತ್ತಿದ್ದುವು. ಅವರ ಆಳಿಕೆಯ ಗುಣಸ್ವರೂಪಗಳನ್ನು ವಿವರಿಸುವ ಗೋಜಿಗೆ ಹೋಗದೆ ಅವರೆಲ್ಲರನ್ನೂ ಮುಸ್ಲಿಮರು ಎಂದು ಒಂದು ಗುಂಪುಮಾಡಿ, ಆ ಯುಗವನ್ನೇ ಮುಸ್ಲಿಂ ಯುಗ ಎಂದು ಅವರು ಕರೆದುಬಿಟ್ಟರು. ಮುಸ್ಲಿಂ ಆಳಿಕೆಯನ್ನು ಕುರಿತು ಆಡುವಾಗ ಅವರ ಮಾತುಗಳು ಎಲ್ಲ ಆಳುಗರೂ ಮುಸ್ಲಿಮರಾಗಿದ್ದರು, ಎಲ್ಲ ಹಿಂದೂಗಳೂ ಆಳಲ್ಪಟ್ಟವರಾಗಿದ್ದರು ಎಂಬ ಅರ್ಥ ಕೊಡುತ್ತಿದ್ದುವು. ವಾಸ್ತವಸ್ಥಿತಿ ಇದಾಗಿರಲಿಲ್ಲ. ಆಳುವವರು, ಅಧಿಪತಿಗಳು, ಜಮೀನ್ದಾರರು ಹಿಂದುಗಳಾಗಿರಲಿ ಮುಸ್ಲಿಮರಾಗಿರಲಿ, ಅವರು ಎಲ್ಲರನ್ನೂ ಹಿಂದೂ, ಮುಸ್ಲಿಂ-ಎಲ್ಲ ಜನಸಾಮಾನ್ಯರನ್ನೂ ಒಂದೇ ಸಮನಾಗಿ ಪರಿಗಣಿಸುತ್ತಿದ್ದರು. ಅಂದರೆ ಒಂದೇ ಬಗೆಯ ತಿರಸ್ಕಾರ, ಅಗೌರವ ಎಲ್ಲರಿಗೂ ಅವರಿಂದ ದೊರಕುತ್ತಿತ್ತು. ತಮ್ಮ ಲಾಭಕ್ಕಾಗಿ ಉಪಯೋಗಪಡೆದುಕೊಳ್ಳಬೇಕಾದ ಕೀಳು ಜೀವಿಗಳು ಎಂಬ ಭಾವನೆಯಿಂದ ಅವರನ್ನು ನೋಡಲಾಗುತ್ತಿತ್ತು. ಹಿಂದೂ ಜನಸಾಮಾನ್ಯರಂತೆಯೇ ಮುಸ್ಲಿಂ ಜನಸಾಮಾನ್ಯರೂ ಬಡವರಾಗಿದ್ದರು, ತೆರಿಗೆಯ ಭಾರದಿಂದ ಕುಗ್ಗಿದ್ದರು. ಪ್ರಾಚೀನಕಾಲ ಮತ್ತು ಮಧ್ಯಕಾಲದ ಭಾರತದ ರಾಜಕೀಯವು ಮಿಕ್ಕೆಡೆಗಳ ರಾಜಕೀಯದಂತೆಯೇ ಇದ್ದಿತು ಎಂಬುದನ್ನು ಇತಿಹಾಸಕಾರರು ಅರ್ಥ ಮಾಡಿಕೊಳ್ಳಲಿಲ್ಲ. ಆಳುಗರ ಆರ್ಥಿಕ ಮತ್ತು ರಾಜಕೀಯ ಹಿತಾಸಕ್ತಿಗಳನ್ನು ಅದು ಅನುಸರಿಸುತ್ತಿದ್ದಿತೇ ಹೊರತು ಯಾವುದೇ ಬಗೆಯ ಧಾರ್ಮಿಕ ವಿಚಾರಗಳನ್ನಲ್ಲ. ನಿಜ, ಆಳುಗರು ಮತ್ತು ಅವರ ವಿರೋಧಿಗಳು ಜನರಿಗೆ ದಿಗ್ಭ್ರಮೆಯುಂಟುಮಾಡಿ ಅವರ ಆಲೋಚನೆಯ ಹಾದಿ ತಪ್ಪಿಸಿ ತಮ್ಮ ನಿಜವಾದ ಉದ್ದೇಶಗಳನ್ನು ಮರೆಮಾಡುವುದಕ್ಕಾಗಿ ಧರ್ಮವನ್ನು ಉಪಯೋಗಿಸಿಕೊಳ್ಳುತ್ತಿದ್ದುದುಂಟು. ಆದರೆ ಇದರಿಂದ ಉದ್ದೇಶಗಳೇ ಮತೀಯ ಅಥವಾ ಧಾರ್ಮಿಕ ಆಗಿದ್ದುವೆಂದು ಅರ್ಥವಾಗುವುದಿಲ್ಲ. ಬ್ರಿಟಿಷರಾಗಿದ್ದ ಮತ್ತು ಮತೀಯ ಭಾವನೆಯಿದ್ದ ಇತಿಹಾಸಕಾರರು ಭಾರತದ ಮಿಶ್ರ ಸಂಸ್ಕೃತಿಯನ್ನು ಎತ್ತಿ ತೋರಿಸಲಿಲ್ಲ. ಭಾರತದ ಸಂಸ್ಕೃತಿಯು ಮಾದರಿ ವೈವಿಧ್ಯಪೂರ್ಣವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಈ ವಿವಿಧತೆಯ ನಡುವೆ ಒಂದು ಸಮಾನತೆಯ ಎಳೆ ಹರಿದಿತ್ತು. ಅದಕ್ಕಿಂತಲೂ ಮುಖ್ಯವಾದ ಒಂದು ವಿಚಾರವೆಂದರೆ, ವೈವಿಧ್ಯವು ವರ್ಗಾನುಸಾರಿ, ಪ್ರಾಂತಾನುಸಾರಿ ಆಗಿದ್ದಿತೇ ಹೊರತು ಧರ್ಮಾನುಸಾರಿ ಆಗಿರಲಿಲ್ಲ ಎಂಬುದು. ಹಿಂದೂ ಸಂಸ್ಕೃತಿ ಮತ್ತು ಮುಸ್ಲಿಂ ಸಂಸ್ಕೃತಿಗಳ ತಪ್ಪು ಚಿತ್ರಗಳನ್ನು ಕೊಟ್ಟುದರಿಂದ ಇತಿಹಾಸದ ಬೋಧನೆಯು ವಿಭಜನ ಪ್ರವೃತ್ತಿಗಳನ್ನು ಹುಟ್ಟಿಸಿತು. ಮತೀಯ ಸುಧಾರಣಾ ಚಳುವಳಿಗೂ ಸಹ ಇದೇ ರೀತಿಯ ಪ್ರಭಾವವನ್ನು ಬೀರಿದುವು. ತರ್ಕಬದ್ಧವಾಗಿರದ ವಾದ ಮತ್ತು ಯೋಜನೆಗಳನ್ನು ದೂರಮಾಡಿ, ತರ್ಕಬದ್ಧ ಹಾಗೂ ಮಾನವೀಯ ವಿಚಾರಗಳನ್ನು ಪ್ರಚುರಪಡಿಸಿ 19 ನೆಯ ಶತಮಾನದ ಅನೇಕ ಮತೀಯ ಮೂಢನಂಬಿಕೆಗಳನ್ನು ದೂರಮಾಡಿದುದಲ್ಲದೇ ಭಾರತೀಯರಲ್ಲಿ ಆತ್ಮಗೌರವವನ್ನು ಮೂಡಿಸುವುದರ ಮೂಲಕ ಈ ಸುಧಾರಣೆಗಳು ಮುಖ್ಯವಾದ ಪಾತ್ರವನ್ನು ವಹಿಸಿದುವು. ಇದೇ ಸಮಯದಲ್ಲಿ ಕೆಲವು ಸುಧಾರಣೆಗಳು ಹಿಂದೂ, ಮುಸ್ಲಿಂ, ಸಿಖ್ ಹಾಗೂ ಪಾರ್ಸಿಗಳ ನಡುವೆ ಒಡಕು

ಉಂಟು ಮಾಡುವ ಹಾಗೆ ಕಂಡುಬಂದುವು. ಇಷ್ಟೇ ಅಲ್ಲದೆ ಹಿಂದೂಗಳಲ್ಲೇ ಉಚ್ಚ ಮತ್ತು ಕೀಳು ಎಂಬ ಭಾವನೆಗೆ ಅವಕಾಶ ಮಾಡಿಕೊಡುವಂತಿದ್ದುವು. ಅನೇಕ ಮತಗಳಿರುವ ಒಂದು ದೇಶದಲ್ಲಿ ಯಾವುದೇ ಮತವನ್ನು ಒತ್ತಿ ಹೇಳುವ ಪ್ರಯತ್ನ ಮಾಡುವಲ್ಲಿ ಒಡಕು ಕಂಡುಬರುವುದು ಅನಿವಾರ್ಯವಾಗುತ್ತದೆ. ಅಷ್ಟೇ ಅಲ್ಲದೆ ಈ ಮತೀಯ ಸುಧಾರಣೆಗಳು ಸಾಂಸ್ಕೃತಿಕ ಪರಂಪರೆಯ ಏಕಮುಖ ಪ್ರತಿಪಾದನೆಗಳಾದುವು. ಈ ವಿಚಾರಗಳು ಎಲ್ಲಾ ಜನರಿಗೂ ಸಾಮಾನ್ಯವಾಗಿ ಅನ್ವಯಿಸುವ ಪರಂಪರೆಗಳಾಗಿರಲಿಲ್ಲ. ಕಲೆ ಮತ್ತು ಶಿಲ್ಪ, ಸಾಹಿತ್ಯ, ಸಂಗೀತ, ವಿಜ್ಞಾನ ಮತ್ತು ತಾಂತ್ರಿಕ ವಿಜ್ಞಾನ ಇವೇ ಮುಂತಾದ ವಿಷಯಗಳಲ್ಲಿ ಜನತೆಯ ಎಲ್ಲಾ ವರ್ಗಗಳೂ ಸಮಾನಾಂತರವಾದ ಪಾತ್ರಗಳನ್ನು ವಹಿಸಿದ್ದರೂ ಇವುಗಳ ಪ್ರತಿಪಾದನೆ ಸಮಾಧಾನಕರವಾಗಿರಲಿಲ್ಲ. ಹಿಂದೂ ಮತ ಸುಧಾರಣೆಗಳು ಪ್ರಾಚೀನ ವೈಭವದ ವಿಶ್ಲೇಷಣೆಯಲ್ಲಿ ಮಗ್ನವಾಗಿದ್ದುವು. ವಿಶಾಲ ಮನೋಭಾವದ ವ್ಯಕ್ತಿಯಾದ ಸ್ವಾಮಿ ವಿವೇಕಾನಂದರೂ ಸಹ ಇದೇ ಅರ್ಥದಲ್ಲಿ ಭಾರತದ ಪ್ರಾಚೀನ ವೈಭವವನ್ನು ಕುರಿತು ಮಾತನಾಡುತ್ತಿದ್ದರು. ಇದೇ ರೀತಿಯಾಗಿ ಮುಸ್ಲಿಂ ಸುಧಾರಕರು ತಮ್ಮ ಸಾಂಪ್ರದಾಯ ಹಾಗೂ ಮಹತ್ವಪೂರ್ಣ ವಿಷಯಗಳಿಗೆ ಪಶ್ಚಿಮ ಏಷ್ಯಾ ಇತಿಹಾಸವನ್ನು ಮರೆಹೊಕ್ಕರು. ಹೀಗಾಗಿ ಸುಧಾರಕರ ಚಟುವಟಿಕೆಗಳು ಎರಡು ಜನಾಂಗ ನೀತಿಯನ್ನು ಮುಂದಿಡುವಲ್ಲಿ ಪರ್ಯವಸಾನಗೊಳ್ಳಲಾರಂಭಿಸಿತು. ಹಲಕೆಲವು ಸುಧಾರಣೆಗಳು ನಿಜವಾದ ಸುಧಾರಣೆಗಳಾಗಿ ಉಳಿಯಲಿಲ್ಲ. ಅವರು ಇತರ ಮತಗಳೊಡನೆ ಮತೀಯ ಯುದ್ಧವನ್ನೇ ಪ್ರಾರಂಭಿಸುವಂತೆ ಕಂಡುಬಂದಿತು. 20ನೆಯ ಶತಮಾನದಲ್ಲಿ ಮತೀಯತೆಯ ಬೆಳವಣಿಗೆಗೆ ಈ ಎಲ್ಲಾ ಕಾರಣಗಳು ಸಹಾಯಕಾರಿಯಾದುವು.

ರಾಜಕೀಯದ ಮತೀಯ ದೃಷ್ಟಿಯು ಅವೈಜ್ಞಾನಿಕವೂ ವಿಚಾರರಹಿತವೂ ಆಗಿದ್ದಿತು. ಆದರೆ ಒಂದು ಅಲ್ಪಸಂಖ್ಯಾತವರ್ಗವು ಸಹಜವಾಗಿ ಹೊಂದಿರುವ ಭಯವನ್ನು ಹಿಡಿದು ಆಡಿಸಿತು. ಅಂತಹ ಪರಿಸ್ಥಿತಿಗಳಲ್ಲಿ ಧಾರ್ಮಿಕ ಬಹುಸಂಖ್ಯಾತ ವರ್ಗದ ಕರ್ತವ್ಯ ಇದು: ತನ್ನ ಮನೋಭಾವ, ವರ್ತನೆಗಳಲ್ಲಿ ಅಲ್ಪಸಂಖ್ಯಾತರನ್ನು ನೋಯಿಸಲು ತನ್ನ ಸಂಖ್ಯಾಬಾಹುಳ್ಯವನ್ನು ಉಪಯೋಗಿಸಿಕೊಳ್ಳುವುದಿಲ್ಲ ಎಂದು ಅದು ಅಲ್ಪಸಂಖ್ಯಾತರಿಗೆ ಮನವರಿಕೆ ಮಾಡಿಕೊಡಬೇಕು. ಅಲ್ಪಸಂಖ್ಯಾತರಿಗೆ ಅವರ ಧರ್ಮವನ್ನೂ ಸಾಮಾಜಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನೂ ಸುರಕ್ಷಿತವಾಗಿಡಲಾಗುತ್ತದೆ ಎಂದು ಒಪ್ಪಿಸುವುದು ಮಾತ್ರವಲ್ಲ, ಬಹುಸಂಖ್ಯಾತರ ಕರ್ತವ್ಯ ಇನ್ನೂ ದೊಡ್ಡದು. ಆರ್ಥಿಕ ಮತ್ತು ರಾಜಕೀಯ ವಿಚಾರಗಳನ್ನು ಕುರಿತ ನಿರ್ಣಯಗಳನ್ನು ಸಂಪೂರ್ಣವಾಗಿ ಜಾತ್ಯತೀತ ಆಧಾರಗಳಿಂದ ಕೈಗೊಳ್ಳಲಾಗುತ್ತದೆ, ಧರ್ಮವು ಅಲ್ಲಿ ಪಾತ್ರ ವಹಿಸುವುದಿಲ್ಲ ಎಂಬುದನ್ನು ಅಲ್ಪಸಂಖ್ಯಾತರು ಅರ್ಥಮಾಡಿಕೊಳ್ಳುವಂತೆ ಮಾಡಬೇಕು. ಮೊದಮೊದಲಿನ ರಾಷ್ಟ್ರೀಯವಾದಿಗಳು ಮಾಡಿದ ಕೆಲಸ ಇದೇಯೆ. ಅವರು ಜನರನ್ನು ಒಂದುಗೂಡಿಸಿ, ಅವರ ಸಮಾನ ಹಿತಾಸಕ್ತಿಗಳ-ರಾಷ್ಟ್ರೀಯ, ಆರ್ಥಿಕ ಮತ್ತು ರಾಜಕೀಯ ಆಧಾರದ ಮೇಲೆ ಅವರನ್ನು ಒಂದು ರಾಷ್ಟ್ರವಾಗಿ ಬೆಸೆಯುವ ಕೆಲಸವನ್ನು ಅವರು ಮಾಡಿದರು. ಜನರ ಧಾರ್ಮಿಕ ಮತ್ತು ಸಾಮಾಜಿಕ

ಜೀವನದಲ್ಲಿ ಮಧ್ಯಪ್ರವೇಶ ಮಾಡುವುದಿಲ್ಲ ಎಂದು ಭರವಸೆ ಕೊಟ್ಟರು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 1889ರಲ್ಲಿ ಒಂದು ತೀರ್ಮಾನಕ್ಕೆ ಬಂದಿತು. ಮುಸ್ಲಿಂ ಪ್ರತಿನಿಧಿಗಳಲ್ಲಿ ಬಹು ಜನರು ಒಂದು ವಿಚಾರವು ಮುಸ್ಲಿಮರಿಗೆ ಹಾನಿಕರವಾಗಿದೆ ಎಂದು ಅಭಿಪ್ರಾಯಪಟ್ಟರೆ, ಆದರೆ, ಆ ವಿಚಾರವನ್ನು ತಾನು ಅನುಮೋದಿಸುವುದಿಲ್ಲ ಎಂಬುದೇ ಆ ತೀರ್ಮಾನ. ರಾಜಕೀಯವು ಮತ ಹಾಗೂ ಜನಾಂಗಗಳನ್ನು ಆಧಾರಿಸಿರಬಾರದೆಂದು ಬೋಧಿಸುವ ಮೂಲಕ ಜನರ ರಾಜಕೀಯ ಮನೋಭಾವವನ್ನು ಆಧುನೀಕರಿಸುವ ಪ್ರಯತ್ನವನ್ನು ಮುಂಚಿನ ರಾಷ್ಟ್ರೀಯತಾ ವಾದಿಗಳು ಕೈಗೊಂಡರು.

ದುರದೃಷ್ಟವಶಾತ್ ಮುಂದಿನ ಕೆಲವರು ನಾಯಕರು ಜಾತ್ಯತೀತ ರಾಜಕೀಯದ ಬುದ್ಧಿವಂತಿಕೆಯ ತತ್ವಗಳನ್ನು ಕಟ್ಟುನಿಟ್ಟಾಗಿ ಅನುಸರಿಸಲಿಲ್ಲ. ಉಗ್ರಗಾಮಿಗಳಾಗಿದ್ದ ರಾಷ್ಟ್ರೀಯವಾದಿಗಳು ರಾಷ್ಟ್ರೀಯ ಚಳುವಳಿಗೆ ಭಾರೀ ಒತ್ತಡಕೊಟ್ಟು ಮುನ್ನೂಕಿ ಜನರು ಅಧಿಕ ಸಾಮರ್ಥ್ಯ ಮತ್ತು ಕ್ರಿಯಾಪಟುತ್ವದಿಂದ ಮುನ್ನುಗ್ಗುವಂತೆ ಮಾಡಿದರು. ಆದರೆ ಅವರ ಕೆಲವು ಚಟುವಟಿಕೆಗಳು ಮತೀಯತೆಯನ್ನು ಕೆರಳಿಸಿದುವು ಎಂಬುದನ್ನು ಒಪ್ಪಿಕೊಳ್ಳಬೇಕು. ರಾಷ್ಟ್ರೈಕ್ಯದ ಬೆಳವಣಿಗೆಯ ದೃಷ್ಟಿಯಿಂದ ಅದು ಹಿಂದಿಟ್ಟ ಹೆಜ್ಜೆಯೇ ಸರಿ. ಅವರ ಪ್ರಚಾರ ಜನರನ್ನು ಜಾಗೃತಗೊಳಿಸುವುದರಲ್ಲಿ ಬಹಳ ಪರಿಣಾಮಕಾರಿಯಾಗಿದ್ದುವು. ಆದರೆ ಅವುಗಳಲ್ಲಿ ಹಿಂದೂ ಧಾರ್ಮಿಕ ಪಕ್ಷಪಾತದ ಛಾಯೆ ಕಾಣುತ್ತಿತ್ತು. ಅವರು ಮಧ್ಯಕಾಲೀನ ಭಾರತ ಸಂಸ್ಕೃತಿಯನ್ನು ಕಡೆಗಣಿಸಿ ಪ್ರಾಚೀನ ಭಾರತೀಯ ಪರಂಪರೆಯನ್ನೇ ಒತ್ತಿ ಹೇಳಿದರು. ಭಾರತ ರಾಷ್ಟ್ರವನ್ನು ಹಿಂದೂಗಳೊಂದಿಗೆ ಮತ್ತು ಭಾರತೀಯ ಸಂಸ್ಕೃತಿಯನ್ನು ತಾವು ಎಣಿಸಿದ ಆರ್ಯರ ಪರಂಪರೆ ಹಾಗೂ ಹಿಂದೂ ಮತಗಳೊಡನೆ ಅನನ್ಯಗೊಳಿಸುವ ಪ್ರವೃತ್ತಿ ಅವರಲ್ಲಿ ಕರೆದುಬಂದಿತು. ತಿಲಕರು ವ್ಯವಸ್ಥೆಗೊಳಿಸುತ್ತಿದ್ದ ಶಿವಾಜಿ ಮತ್ತು ಗಣಪತಿ ಉತ್ಸವಗಳು; ಅರವಿಂದರು ಅರೆ-ಅನುಭಾವಿಕ, ಅರೆ-ಆಧ್ಯಾತ್ಮಿಕರೂಪದಲ್ಲಿ ಭಾರತವನ್ನು ತಾಯಿ ಎಂದು, ರಾಷ್ಟ್ರೀಯತೆಯನ್ನು ಧರ್ಮ ಎಂದು ಪರಿಗಣಿಸಿದ್ದು; ಭಯೋತ್ಪಾದಕರು ಭಗವತಿ ಕಾಳಿಯೆದುರಿಗೆ ಕೈಕೊಳ್ಳುತ್ತಿದ್ದ ಭೀಕರ ಪ್ರತಿಜ್ಞೆಗಳು; ವಿಭಜನ-ವಿರೋಧೀ ಚಳುವಳಿಯ ಉದ್ಘಾಟನೆಗಾಗಿ ಗಂಗೆಯಲ್ಲಿ ನಡೆಸಿದ ಶುದ್ಧೀಕರಣ ಸ್ನಾನ-ಇವೆಲ್ಲವೂ ಎಲ್ಲ ಕಡೆಯೂ ಇದ್ದ ಎಲ್ಲ ಭಾರತೀಯರಿಗೂ ಇಷ್ಟವಾಗುವುದು ಸಾಧ್ಯವಿರಲಿಲ್ಲ. ಅವರಲ್ಲಿ ತೀವ್ರ ಧಾರ್ಮಿಕ ಭಾವನೆಯೂ ಆದರಲ್ಲಿ ಹಿಂದೂ ಮೇಲುಜಾತಿ ಎಂಬ ಪಕ್ಷಪಾತವೂ ಇದ್ದುವು. ಸಾಮಾನ್ಯರಾದ ಜಾತ್ಯತೀತ ಭಾವನೆಯ ಭಾರತೀಯರು ಶುದ್ಧಾಂಗವಾದ ರಾಜಕೀಯದ ಸುತ್ತ ಈ ಧಾರ್ಮಿಕ ಪರಿವೇಷ ಸುತ್ತಿಕೊಳ್ಳುವುದನ್ನು ಇಷ್ಟಪಡಲಿಲ್ಲ. ಹಾಗೆಯೇ ಮುಸ್ಲಿಮರು ಮತ್ತು ಇತರ ಕೆಲವರು ಧಾರ್ಮಿಕವಾದಿಗಳು ಧಾರ್ಮಿಕ ಸಂಕೇತಗಳು, ಕರ್ಮಾಚರಣೆಗಳು ತಮ್ಮ ಧರ್ಮಕ್ಕೆ ವಿರುದ್ಧವಾಗಿರುವುದನ್ನು ಕಂಡರು. ಇದೇ ರೀತಿಯಾಗಿ ಪ್ರಾಚೀನ ಕಾಲದ ಹಾಗೂ ಮತದ ಟೀಕೆ ಇಲ್ಲದ ಪ್ರಶಂಸೆ ಹಿಂದೂಗಳ ಕೆಳ ವರ್ಗದವರಿಗೆ ಒಪ್ಪಿಗೆಯಾಗಿರಲಿಲ್ಲ. ಇದೇ ಕಾಲದಲ್ಲಿ ಬೆಳದುಬಂದಿದ್ದ ಮತೀಯ ತುಳಿಕೆಯ ಕೆಟ್ಟ ಪರಿಣಾಮಗಳಿಂದ ಅವರು ಶತಮಾನಗಳಗಟ್ಟಲೆ ಕಷ್ಟ

ಅನುಭವಿಸಿದ್ದರು. ಯಾರಾದರೂ ಶಿವಾಜಿಯನ್ನೋ ಪ್ರತಾಪನನ್ನೋ ರಾಷ್ಟ್ರವೀರ ಎಂದು ಕರೆದರೆ ಮರುಕ್ಷಣ ತನಗೆ ತಾನೇ ಮೊಗಲ್ ಚಕ್ರವರ್ತಿಗಳು ರಾಷ್ಟ್ರವಿರೋಧಿಗಳಾಗಿದ್ದ ಹೊರಗಿನವರು ಅಥವಾ "ವಿದೇಶೀಯರು" ಎಂಬ ಭಾವನೆ ಹೊಳೆದುಬಿಡುತ್ತಿದ್ದಿತು. ಆದರೆ ವಾಸ್ತವವಾಗಿ ಔರಂಗಜೇಬ್-ಅಕ್ಬರರೂ ಶಿವಾಜಿ-ಪ್ರತಾಪರಷ್ಟೇ ಮಟ್ಟಿಗೆ ಭಾರತೀಯರಾಗಿದ್ದರು. ಅಲ್ಲದೆ, ಅವರೆಲ್ಲರೂ ಆಳುವ ವರ್ಗಕ್ಕೆ ಸೇರಿದವರಾಗಿದ್ದರು. ಅವರ ನಡುವೆ ನಡೆದ ಪರಸ್ಪರ ಹೋರಾಟಗಳನ್ನು, ಅವರವರ ವಿಶಿಷ್ಟ ಐತಿಹಾಸಿಕ ಹಿನ್ನೆಲೆಯಲ್ಲಿ ನಡೆದ ರಾಜಕೀಯ ಹೋರಾಟಗಳೆಂಬ ದೃಷ್ಟಿಯಿಂದ ನೋಡಬೇಕಾಗಿದ್ದಿತು. ಪ್ರತಾಪನನ್ನೂ ಶಿವಾಜಿಯನ್ನೂ 'ರಾಷ್ಟ್ರವೀರ'ರೆಂಬಂತೆ ನೋಡಿ, ಅಕ್ಬರ್ ಮತ್ತು ಔರಂಗಜೇಬರನ್ನು 'ವಿದೇಶೀಯರು' ಎಂಬಂತೆ ಭಾವಿಸುವುದು ಆಧುನಿಕ ಮತೀಯ ಚಿಂತನ ವಿಧಾನಗಳನ್ನು ಪ್ರಾಚೀನ ಇತಿಹಾಸಕ್ಕೆ ಚಾಚಿದಂತಾಗುತ್ತಿದ್ದಿತು. ಇದು ಕೆಟ್ಟ ಚರಿತ್ರೆ ಮಾತ್ರವಲ್ಲ, ರಾಷ್ಟ್ರದ ಐಕ್ಯತೆಗೆ ಒಂದು ಆಘಾತವೂ ಆಗಿತ್ತು.

ಅಂದ ಮಾತ್ರಕ್ಕೆ ಉಗ್ರಗಾಮಿಗಳಾದ ರಾಷ್ಟ್ರೀಯವಾದಿಗಳು ಮುಸ್ಲಿಂ ವಿರೋಧಿಗಳಾಗಿದ್ದರು ಎಂದಾಗಲಿ, ಮುಖ್ಯವಾಗಿ ಮತೀಯ ಮನೋಭಾವವುಳ್ಳವರಾಗಿದ್ದರೆಂದಾಗಲಿ ಅರ್ಥವಲ್ಲ. ಅದಕ್ಕೆ ವಿರುದ್ಧವಾಗಿ, ಅವರಲ್ಲಿ ಅನೇಕರು, ವಿಶೇಷತಃ ತಿಲಕ್ ಅವರು ಹಿಂದೂ-ಮುಸ್ಲಿಂ ಐಕ್ಯತೆಯ ಪರವಾಗಿದ್ದರು. ಅವರಲ್ಲಿ ಅನೇಕರು ಚಿಂತನೆಯಲ್ಲಿ ಆಧುನಿಕವೂ ಪ್ರಗತಿಯುತವೂ ಆದ ವಿಧಾನವನ್ನು ಹೊಂದಿದ್ದರು. ಭಯೋತ್ಪಾದಕರ ಆದರ್ಶ ಎದುರಿಗಿತ್ತು. ಆರ್ಥಿಕ ಪರಿಹಾರ ಮತ್ತು ರಾಜಕೀಯ ಸ್ವಾತಂತ್ರ್ಯಗಳನ್ನು ಸಾಧಿಸಬೇಕಾದರೆ ಹಿಂಸಾತ್ಮಕ ಕ್ರಾಂತಿಯಿಂದ ಮಾತ್ರವೇ ಸಾಧ್ಯ ಎಂದು ಅವರು ನಂಬಿದ್ದರು. ಆದರೆ ಉಗ್ರಗಾಮಿ ರಾಷ್ಟ್ರೀಯವಾದಿಗಳ ರಾಜಕೀಯ ಚಟುವಟಿಕೆ ಮತ್ತು ಭಾವನೆಗಳಲ್ಲಿ ಹಿಂದೂ ಛಾಯೆ ಇತ್ತು ಎಂಬುದು ನಿಜವಾಗಿ ಉಳಿಯುತ್ತದೆ. ಅವರ ಅಂತಿಮ ಗುರಿ ಲೌಕಿಕವಾಗಿದ್ದರೂ ಅವರ ಸಾಮಾನ್ಯ ವರ್ತನೆ ಹಾಗಿರಲಿಲ್ಲ. ಈ ಕಾರಣದಿಂದ ಬ್ರಿಟಿಷರು ಹಾಗೂ ಬ್ರಿಟಿಷ್ ಪರವಾದಿಗಳು ಸನ್ನಿವೇಶದ ಉತ್ತಮ ಫಲ ಪಡೆಯಲಾರಂಭಿಸಿದರು. ಇದರ ಪರಿಣಾಮವಾಗಿ ರಾಷ್ಟ್ರೀಯ ಆಂದೋಳನದಿಂದ ಅನೇಕ ವಿದ್ಯಾವಂತ ಮುಸ್ಲಿಮರು ದೂರವಿದ್ದರು ಅಥವಾ ವಿರೋಧಿಗಳಾದರು. ಹೀಗಾಗಿ ಅವರು ಪ್ರತ್ಯೇಕ ಮನೋಭಾವನೆಗೆ ಸುಲಭವಾಗಿ ಶರಣಾದರು. ಹಾಗಾದರೂ ಮುಸ್ಲಿಂ ವಿದ್ಯಾವಂತರ ಮುಂದುವರಿದ ವರ್ಗದವರ ಪೈಕಿ ಅನೇಕರು ಸ್ವದೇಶೀ ಚಳುವಳಿಯಲ್ಲಿ ಪಾಲ್ಗೊಂಡರು. ಯುವಕ ಬ್ಯಾರಿಸ್ಟರ್ ಮುಹಮ್ಮದ್ ಆಲಿ ಜಿನ್ನಾ ರಾಷ್ಟ್ರೀಯ ಕಾಂಗ್ರೆಸ್ಸಿನ ನಾಯಕರಾದರು. ಬ್ಯಾರಿಸ್ಟರ್ ಅಬ್ದುಲ್ ರಸೂಲ್ ಮತ್ತು ಹಸರತ್ ಮೊಹಾನಿ ಸ್ವದೇಶೀ ಚಳುವಳಿಯಲ್ಲಿ ಪಾಲ್ಗೊಂಡ ಮುಸ್ಲಿಮರ ಪೈಕಿ ಮುಖ್ಯರಾದವರು.

ಬಡತನದಲ್ಲಿರುವ ಹಿಂದುಳಿದ ರಾಷ್ಟ್ರವೊಂದು, ವಸಾಹತುಶಾಹೀ ಪ್ರಭುತ್ವಕ್ಕೆ ಸಿಕ್ಕಿ ಅನಭಿವೃದ್ಧ ಸ್ಥಿತಿಯಲ್ಲಿರುವಾಗ ಉದ್ಯೋಗ ಅವಕಾಶಗಳು ಬಹಳ ಮಿತವಾಗಿರುತ್ತವೆ. ಆದರಲ್ಲೂ ವಿದ್ಯಾವಂತವರ್ಗದವರಿಗೆ ಅವು ಬಹಳ ಕಡಮೆಯಾಗಿರುತ್ತವೆ.

ಆದ್ದರಿಂದ ಆ ಸಮಯದಲ್ಲಿ ದೇಶದಲ್ಲಿ ದೊರಕುತ್ತಿದ್ದ ಉದ್ಯೋಗಗಳಿಗೆ ತೀವ್ರವಾದ ಸ್ಪರ್ಧೆಯಿರುತ್ತಿತ್ತು. ದೂರದೃಷ್ಟಿಯುಳ್ಳ ಭಾರತೀಯರು ದೇಶದ ಆರ್ಥಿಕ ಮತ್ತು ರಾಜಕೀಯ ಉದ್ಧಾರಕ್ಕಾಗಿ ಶ್ರಮಿಸಿದರು. ಆದರೆ ಪಟ್ಟಭದ್ರ ಆಸಕ್ತಿಯುಳ್ಳ ಜನ-ಭಾರತೀಯರು ಹಾಗೂ ಬ್ರಿಟಿಷರು-ಮತೀಯ, ಧಾರ್ಮಿಕ, ಜಾತೀಯ ಮತ್ತು ಪ್ರಾಂತೀಯ ಭಾವನೆಗಳನ್ನು ಕೆರಳಿಸುವುದಕ್ಕೆ ಈ ಪರಿಸ್ಥಿತಿಯನ್ನು ದುರುಪಯೋಗ ಪಡಿಸಿಕೊಂಡರು. ಎಲ್ಲ ಬಗೆಯ ವರ್ಗಗಳು ಮತ್ತು ಪಂಗಡಗಳಿಗೆ ಸ್ಥಾನಗಳನ್ನೂ ಉದ್ಯೋಗಗಳನ್ನೂ ಕಾದಿರಿಸಲು ತಗಾದೆ ಅಧಿಕವಾಯಿತು. ಸಂಕುಚಿತಮತಿಗಳಾಗಿದ್ದ, ದೂರದೃಷ್ಟಿಯಿರದ ಮುಸ್ಲಿಮರೂ ಹಿಂದೂಗಳೂ ತಮ್ಮ ತಮ್ಮದೇ ರಾಷ್ಟ್ರೀಯತೆಯನ್ನು ಕುರಿತು ಮಾತನಾಡತೊಡಗಿದರು. ರಾಷ್ಟ್ರೀಯತೆ ಎನ್ನುವುದನ್ನು ಒಡೆಯುವುದು ಸಾಧ್ಯವೋ ಎನ್ನುವ ಹಾಗೆ, ಅನೇಕ ಮತೀಯ ಪ್ರಕಾರಗಳಂತೆಯೋ ಅದೂ ಇರಬಹುದು ಎನ್ನುವ ಹಾಗೆ, ಸಾಮ್ರಾಜ್ಯಶಾಹೀ ಮತ್ತು ಪಟ್ಟಭದ್ರಹಿತಗಳ ವಿರುದ್ಧವಾಗಿ ಒಂದು ಸಾರ್ವತ್ರಿಕ ಹೋರಾಟವಿಲ್ಲದೆಯೇ ಆರ್ಥಿಕ ಕ್ಷೇಮ ಸಾಧ್ಯ ಎನ್ನುವ ಹಾಗೆ ಅವರು ವರ್ತಿಸಿದರು.

ಮತೀಯ ಸಿದ್ಧಾಂತಕ್ಕೆ ಒಂದು ಖಚಿತವಾದ ರೂಪ ಮತ್ತು ಆಧಾರ ದೊರೆತದ್ದು 1906 ರಲ್ಲಿ. ಆಗಾಖಾನ್, ಡಾಕ್ಕಾದ ನವಾಬ ಮತ್ತು ನವಾಬ ಮೊಹಸಿನ್ ಉಲ್-ಮುಲ್ಕ್ ಇವರ ನಾಯಕತ್ವದಲ್ಲಿ ಅಖಿಲ ಭಾರತ ಮುಸ್ಲಿಂ ಲೀಗ್ ರಚಿತವಾದದ್ದು ಆಗ. ವಿದ್ಯಾವಂತ ಮುಸ್ಲಿಮರ ಒಂದು ವಿಭಾಗದ ಸ್ವಾರ್ಥವೂ, ಪ್ರಗತಿವಿರೋಧಿ ಮುಸ್ಲಿಂ ಜಮೀನ್ದಾರರ ಮತ್ತು ಮೇಲುವರ್ಗಗಳ ಪಟ್ಟಭದ್ರ ಹಿತಗಳೂ ಈ ದುರದೃಷ್ಟದ ಹಿನ್ನಡೆಗೆ ಕಾರಣವಾಯಿತು. ಲೀಗು ಬಂಗಾಳದ ವಿಭಜನೆಯನ್ನು ಬೆಂಬಲಿಸಿತು; ವಿಶೇಷ ಸಂರಕ್ಷಣಾ ಕ್ರಮಗಳನ್ನೂ, ಬೇರೆಯೇ ಆದ ಮತದಾರ ವರ್ಗವನ್ನೂ ಕೇಳಿತು. ಬ್ರಿಟಿಷರು ಅಂಥದೊಂದು ಸುಸಂಧಿ ಬಂದೀತೇ ಎಂದು ಕಾಯುತ್ತಿದ್ದರು. ಅದನ್ನು ಅವರು ಸಂಪೂರ್ಣವಾಗಿ ಉಪಯೋಗಿಸಿಕೊಂಡರು. ಮುಸ್ಲಿಮರ "ವಿಶೇಷ ಹಿತಗಳನ್ನು" ತಾವು ಕಾಪಾಡುವುದಾಗಿ ಘೋಷಿಸಿದರು. ಲೀಗ್ ಪರಮ ವಿಧೇಯತೆಯಿಂದ ಕಾಂಗ್ರೆಸ್ಸಿನ ಪ್ರತಿಯೊಂದು ಪ್ರಜಾಸತ್ತಾತ್ಮಕ ಹಾಗೂ ರಾಷ್ಟ್ರೀಯ ಬೇಡಿಕೆಯನ್ನು ತಿರಸ್ಕರಿಸತೊಡಗಿತು. ಬಂಗಾಳದಲ್ಲಿ ಲೀಗಿಗೆ ವಿಧೇಯರಾಗಿದ್ದ ನಾಯಕರು ದೊಡ್ಡ ಜಮೀನ್ದಾರರಷ್ಟೇ ಆಗಿರದೆ ಬಂಗಾಳಿಯವರಾಗಿರಲಿಲ್ಲ. ಆದಕಾರಣ ಬಂಗಾಳದ ಮುಸ್ಲಿಂ ರೈತರ ಬಗ್ಗೆ ಅವರಿಗೆ ಯಾವ ಅನುಕಂಪವೂ ಇರಲಿಲ್ಲ.

ಮುಸ್ಲಿಮರ ಹಿತಾಸಕ್ತಿಗಳು ರಾಷ್ಟ್ರದ ಉಳಿದವರದಕ್ಕಿಂತ ಬೇರೆ ಎಂದು ಲೀಗ್ ಮೊದಲಿನಿಂದ ಹೇಳುತ್ತಿದ್ದಿತಷ್ಟೆ. ಅದು ಮೂಲಭೂತವಾಗಿ ಸುಳ್ಳು ಎಂಬುದು ಸುಶಿಕ್ಷಿತ ಆಧುನಿಕ ಮನೋಭಾವವುಳ್ಳ ಸುಶಿಕ್ಷಿತ ಮುಸ್ಲಿಂ ಯುವಕರಿಗೆ, ಬಹುಜನಕ್ಕೆ ಸ್ಪಷ್ಟವಾಗಿ ಗೊತ್ತಾಗಿತ್ತು. ಅವರನ್ನು ಉಗ್ರರೂಪದ ರಾಷ್ಟ್ರೀಯ ಭಾವನೆಗಳು ಆಕರ್ಷಿಸಿದುವು. ಲೀಗು ಎಲ್ಲ ಮುಸ್ಲಿಮರ ದೃಷ್ಟಿಗಳನ್ನೂ ಆಸಕ್ತಿಗಳನ್ನೂ ಪ್ರತಿನಿಧಿಸುತ್ತವೆ ಎಂಬ ಭಾವನೆಯನ್ನು ಅವರು ತಿರಸ್ಕರಿಸಿದರು. ರಾಷ್ಟ್ರೀಯವೂ ಉಗ್ರವೂ ಆಗಿದ್ದ ಅಹ್ರಾರ್ (Ahrar) ಚಳುವಳಿಯು ಸುಮಾರಾಗಿ ಈ ಕಾಲದಲ್ಲೇ

ಪ್ರಾರಂಭವಾಯಿತು. ಇದೇ ರೀತಿ ಸಾಂಪ್ರದಾಯಿಕ ಮುಸ್ಲಿಂ ವಿದ್ವಾಂಸರು ರಾಷ್ಟ್ರಪ್ರೇಮದಿಂದ ಪ್ರೇರಿತರಾಗಿ ಮತೀಯ ಆಲೋಚನೆಗಳನ್ನು ಬಿಟ್ಟು ರಾಷ್ಟ್ರದ ರಾಜಕೀಯದಲ್ಲಿ ಪಾಲುಗೊಂಡರು. ಇವರಲ್ಲಿ ಅತ್ಯಂತ ಮುಖ್ಯರಾದವರೆಂದರೆ ಮೌಲಾನಾ ಅಬುಲ್ ಕಲಂ ಆಜಾದ್.

ಈ ಶತಮಾನದ ಎರಡನೆಯ ದಶಕದ ಮೊದಲಿನ ಕೆಲವು ವರ್ಷಗಳಲ್ಲಿ ಟರ್ಕಿಯು ಮೊದಲು ಇಟಲಿಯೊಂದಿಗೆ, ಅನಂತರ ಬಾಲಕನ್ (Balakan) ಶಕ್ತಿಗಳೊಂದಿಗೆ ಯುದ್ಧ ಮಾಡಬೇಕಾಯಿತು. ಆಗ ಇಡೀ ಮುಸ್ಲಿಂ ಜಗತ್ತಿಗೇ ಟರ್ಕಿ ವಿಶೇಷಮಹತ್ವ ಹೊಂದಿದ್ದ ಕೇಂದ್ರವಾಗಿತ್ತು. ಈ ಸಮಯದಲ್ಲಿ ಟರ್ಕಿ (ತುರ್ಕಿಸ್ತಾನ) ಪ್ರಬಲವಾದ ಮುಸ್ಲಿಂ ರಾಷ್ಟ್ರವಾಗಿತ್ತು. ಮುಸ್ಲಿಮರ ಅನೇಕ ಧರ್ಮಕ್ಷೇತ್ರಗಳು ಇದಕ್ಕೆ ಸೇರಿತ್ತು. 1857ರ ವರೆಗೆ ಭಾರತೀಯ ಮುಸ್ಲಿಮರು ಮೊಗಲ್ ಚಕ್ರವರ್ತಿಯನ್ನು ತಮ್ಮ ಇಮಾಮ್ (ಅಂದರೆ, ರಾಜಕೀಯ ಹಾಗೂ ಮತೀಯ ನಾಯಕ) ಎಂದು ಪರಿಗಣಿಸಿದ್ದರು. ಮೊಗಲ್ ಚಕ್ರವರ್ತಿಯ ಪತನವಾದ ಮೇಲೆ ಮತ್ತು ಒಟ್ಟೊಮನ್ ಸಾಮ್ರಾಜ್ಯದ ಮೇಲೆ ರಷ್ಯಾದ ಒತ್ತಡ ಹೆಚ್ಚಿದಂತೆ ಟರ್ಕಿಯ ಹಿತರಕ್ಷಕರಾಗಲು ಬ್ರಿಟಿಷರು ನಿಶ್ಚಯಿಸಿದರು. ಹೀಗಾಗಿ ಮುಸ್ಲಿಮರ ಹಿತರಕ್ಷಕರಾದರು. ತುರ್ಕಿಯ ಸುಲ್ತಾನನನ್ನು ಕಲೀಫನನ್ನಾಗಿ ಎಲ್ಲಾ ಮುಸ್ಲಿಂ ಜನಾಂಗ ಸ್ವೀಕರಿಸುವಂತೆ ಇಸ್ಲಾಂ ಚಳುವಳಿಯನ್ನು ಎಲ್ಲೆಡೆಯಲ್ಲೂ ಪ್ರಾರಂಭಿಸಲು ಉತ್ತೇಜನ ನೀಡಿದರು. ಮೊದಲ ಮಹಾಯುದ್ಧದ ಸಮಯದಲ್ಲಿ ಬ್ರಿಟಿಷರಿಂದ ತುರ್ಕಿಸ್ತಾನದ ಹಿತಕ್ಕೆ ಧಕ್ಕೆ ಕಂಡುಬಂದ ಪರಿಣಾಮವಾಗಿ ಭಾರತೀಯರಲ್ಲಿ ತಕ್ಷಣ ಬದಲಾವಣೆ ಕಂಡುಬಂದಿತು. ಬ್ರಿಟಿಷ್ ವಿರೋಧಿ ಮತ್ತು ವಸಾಹತುಶಾಹೀ ವಿರೋಧಿ ಭಾವನೆಗಳು ಮುಸ್ಲಿಮರಲ್ಲಿ ಬೇಗ ಕಂಡುಬಂದಿತು.

ಭಾರತ ರಾಷ್ಟ್ರೀಯ ಕಾಂಗ್ರೆಸ್ಸನ್ನು ವಿರೋಧಿಸುವಂಥ ವ್ಯವಸ್ಥಿತ ಮತೀಯ ಚಳುವಳಿಗಳಾಗಲೀ ಸಂಸ್ಥೆಗಳಾಗಲೀ ತಲೆದೋರದಿದ್ದರೂ ಹಿಂದೂ ಮತೀಯ ಭಾವನೆಗಳು ಪ್ರಚಲಿತವಾಗಿದ್ದುವು. ಹಿಂದೂ ಮತೀಯ ಭಾವನೆಯ ಸರಣಿಯು ರಾಷ್ಟ್ರೀಯ ಭಾವನಾ ಸರಣಿಯಲ್ಲೇ ಅಡಕವಾಗಿದ್ದ ಕಾರಣ ಹಿಂದೂ ಮತೀಯ ಸಂಸ್ಥೆಗಳ ಅವಶ್ಯಕತೆಯಿರಲಿಲ್ಲ. ಆದರೆ ಮುಸ್ಲಿಂ ಮತೀಯ ಸರಣಿಯು ರಾಷ್ಟ್ರೀಯ ಸರಣಿಯ ಹೊರಗಡೆ ಕೆಲಸ ಮಾಡಬೇಕಾಗಿತ್ತು. ಹಿಂದೂ ರಾಷ್ಟ್ರೀಯತೆ, ಮುಸ್ಲಿಮರು 'ವಿದೇಶೀಯರು', ಹಿಂದೂಗಳ ಹಿತಾಸಕ್ತಿಗಳ ರಕ್ಷಣೆ-ಇವೇ ಮುಂತಾದುವು ಕೆಲವು ನಾಯಕರುಗಳ ಮಾತಾಯಿತು. ಶಾಸನ ಸಭೆಗಳಲ್ಲೂ ಉದ್ಯೋಗಗಳಲ್ಲೂ 'ಹಿಂದೂ' ಪಾಲು ಇರಬೇಕೆಂದು ಅವರು ಹೇಳತೊಡಗಿದರು. ಹೀಗಾಗಿ ಮುಸ್ಲಿಂ ಮತ್ತು ಹಿಂದೂ ಮತಗಳು ಎದುರುಬದುರಾದುವು.

ಆದರೆ ಈ ಬೆಳವಣಿಗೆಗಳಿಗೆ ಒಂದು ನೇತ್ಯಾತ್ಮಕ ಮುಖವೂ ಇತ್ತು. **ಖಿಲಾಫತ್** ಪ್ರಶ್ನೆಯನ್ನು ಕುರಿತ ಚಳುವಳಿ ವಿದ್ಯಾವಂತ ಉಗ್ರವಾದೀ ರಾಷ್ಟ್ರೀಯ ಮುಸ್ಲಿಮರ ಆಲೋಚನೆಯನ್ನು ತೀವ್ರಗಾಮೀ ಜಾತ್ಯತೀತ ವಿಧಾನದಿಂದ ರಾಜಕೀಯದ ಕಡೆಗೆ ಒಲೆಯುವಂತೆ ಮಾಡಿತು. ಬ್ರಿಟಿಷ್ ಸಾಮ್ರಾಜ್ಯಶಾಹಿಯು ಜನರ ಆರ್ಥಿಕ ಮತ್ತು ರಾಜಕೀಯ ಆಸಕ್ತಿಗಳನ್ನು ತುಳಿಯುತ್ತಿದೆಯೆಂಬ ಆಧಾರದ ಮೇಲೆ ಅದರ ವಿರುದ

ಹೋರಾಟ ಕೈಗೊಳ್ಳುವುದಕ್ಕೆ ಬದಲಾಗಿ ಕಲೀಫತೆಯೂ ಟರ್ಕಿಯ ಪವಿತ್ರ ಸ್ಥಾನಗಳೂ ಅಪಾಯಕ್ಕೆ ಒಳಗಾದುವೆಂಬ ಕಾರಣದಿಂದ ಕೈಗೊಂಡರು. ಅಲ್ಲದೆ, ಅವರು ಹೇಳುತ್ತಿದ್ದ ನಾಯಕರು, ಪೌರಾಣಿಕ ಅಂಶಗಳು, ಸಾಂಸ್ಕೃತಿಕ ಪರಂಪರೆಗಳು-ಎಲ್ಲವೂ ಭಾರತದ ಪ್ರಾಚೀನ ಅಥವಾ ಮಧ್ಯಕಾಲೀನ ಇತಿಹಾಸಕ್ಕೆ ಸಂಬಂಧಪಡದೆ ಪಶ್ಚಿಮ ಏಷ್ಯಾದ ಇತಿಹಾಸಕ್ಕೆ ಸಂಬಂಧಪಟ್ಟಿದ್ದುವು. ಹೀಗೆ ಅವರ ರಾಜಕೀಯ ಮನವಿಗೆ ಆಧಾರವಾಗಿದ್ದದ್ದೂ ಧಾರ್ಮಿಕ ಭಾವನೆಗಳೇ. ದೀರ್ಘಾವಧಿಯಲ್ಲಿ ಈ ವಿಧಾನವು ರಾಷ್ಟ್ರೀಯತೆಯ ಬೆಳವಣಿಗೆಗೆ ಮಾರಕವಾಗಿ ಪರಿಣಮಿಸಿತು. ಏಕೆಂದರೆ, ಅದು ಮುಸ್ಲಿಮರಲ್ಲಿ ರಾಜಕೀಯ ಮತ್ತು ಆರ್ಥಿಕ ಪ್ರಶ್ನೆಗಳ ಬಗೆಗೆ ಒಂದು ಜಾತ್ಯತೀತವೂ ವೈಜ್ಞಾನಿಕವೂ ಆದ ವಿಧಾನವನ್ನು ಪ್ರಚೋದಿಸಲಿಲ್ಲ.

ಈ ಅವಧಿಯಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸನ್ನು ವಿರೋಧಿಸಲು ಯಾವ ಹಿಂದೂ ಮತೀಯ ಸಂಸ್ಥೆಯನ್ನೂ ಸ್ಥಾಪಿಸಲಿಲ್ಲ. ಆದರೆ ಸ್ವಲ್ಪಮಟ್ಟಿಗೆ ಹಿಂದೂ ಮತೀಯ ಭಾವನೆಯೂ ಹರಡತೊಡಗಿತ್ತು. ಮುಸ್ಲಿಂ ಲೀಗಿನ ಯೋಜನೆಗಳನ್ನೂ ಕಾರ್ಯಕ್ರಮಗಳನ್ನೂ ಅನೇಕರು ಪ್ರತಿಧ್ವನಿಸತೊಡಗಿದ್ದರು. ಕೆಲವರು ನಾಯಕರು ಹಿಂದೂ ರಾಷ್ಟ್ರೀಯತೆಯನ್ನು ಕುರಿತು, ಮುಸ್ಲಿಮರು 'ಅನ್ಯರು' ಎಂಬುದಾಗಿ, ಶಾಸನ ಸಭೆಗಳಲ್ಲಿಯೂ ಉದ್ಯೋಗಗಳಲ್ಲಿಯೂ ಸ್ಥಾನಗಳಲ್ಲಿ 'ಹಿಂದೂ' ಪಾಲು ಇರಬೇಕೆಂಬುದಾಗಿ ಮಾತನಾಡತೊಡಗಿದ್ದರು.

## ಮೊದಲನೆ ಮಹಾಯುದ್ಧದ ವರ್ಷಗಳು

1914ರಲ್ಲಿ ಗ್ರೇಟ್ ಬ್ರಿಟನ್ ಜರ್ಮನಿಗೆದುರಾಗಿ ಯುದ್ಧವನ್ನು ಘೋಷಿಸಿದುದರಿಂದ ಭಾರತವೂ ಅದರ ಸುಳಿಯೊಳಕ್ಕೆ ಎಳೆಯಲ್ಪಟ್ಟಿತು. ಯುದ್ಧವನ್ನು ಘೋಷಿಸುವುದಕ್ಕೆ ಮುಂಚಿತವಾಗಿಯಾಗಲಿ, ಮುಖ್ಯವಾಗಿ ಬ್ರಿಟಿಷ್ ಸಾಮ್ರಾಜ್ಯದ ಆಸಕ್ತಿಗಳಿಗಾಗಿ ಹೋರಾಡುವಾಗ ಭಾರತದ ಜನರನ್ನೂ ಸಂಪನ್ಮೂಲಗಳನ್ನೂ ಸರಕಾರವು ಅದಕ್ಕೆ ಬದ್ಧಗೊಳಿಸುವ ಮುಂಚೆಯಾಗಲಿ ಭಾರತೀಯರನ್ನು ಕೇಳಲಿಲ್ಲ. ಸ್ವಯಂ ಪ್ರೇರಿತವಾಗಿ ಮಾಡಿದ್ದಲ್ಲವಾದರೂ ಭಾರತದ ಕೊಡುಗೆ ಗಮನಾರ್ಹವಾದುದಾಗಿತ್ತು. ಹತ್ತು ಲಕ್ಷಕ್ಕಿಂತಲೂ ಹೆಚ್ಚು ಮಂದಿ ಭಾರತೀಯರನ್ನು ಫ್ರಾನ್ಸಿನಿಂದ ಚೀನಾವರೆಗಿನ ನಾನಾ ಯುದ್ಧದ ಕ್ಷೇತ್ರಗಳಿಗೆ ಕಳುಹಿಸಲಾಯಿತು. ಹತ್ತರಲ್ಲಿ ಒಬ್ಬರು ಯುದ್ಧದಲ್ಲಿ ಸತ್ತರು. ಯುದ್ಧದ ವೆಚ್ಚ 127 ದಶಲಕ್ಷ ಪೌಂಡುಗಳಿಗಿಂತಲೂ ಅಧಿಕವಾಗಿತ್ತು. ಭಾರತದ ರಾಷ್ಟ್ರೀಯ ಸಾಲದ ಹೊರೆ ಶೇ. 30 ರಷ್ಟು ಹೆಚ್ಚಿತು, ಅದರ ಬಹುಭಾಗವನ್ನು ಜನತೆಯ ಮೇಲೆಯೇ ಹೇರಲಾಯಿತು.

## ಮೊದಲ ರಾಷ್ಟ್ರೀಯವಾದಿಗಳ ಪ್ರತಿಕ್ರಿಯೆ

ಮೊದಲಲ್ಲಿ ಭಾರತೀಯ ನಾಯಕರು ಬ್ರಿಟನ್ನಿಗೆ ತಮ್ಮ ಸಹಾನುಭೂತಿಯನ್ನೂ ಬೆಂಬಲವನ್ನೂ ವ್ಯಕ್ತಪಡಿಸಿದರು. ಆದರೆ ಬ್ರಿಟನ್ನಿನ ಪರವಾಗಿ ಪ್ರಾಮಾಣಿಕವಾದ ಜನಾಭಿಪ್ರಾಯ ಮೂಡಿತು ಎಂದು ಭಾವಿಸುವುದು ತಪ್ಪಾಗುತ್ತದೆ. ಮಿತಗಾಮಿಗಳೂ

ತೀವ್ರಗಾಮಿಗಳೂ ಸಮಾನವಾಗಿ ಜರ್ಮನಿಯ ವಿಜಯಗಳನ್ನು ತೃಪ್ತಿಯಿಂದ ಆಲಿಸುತ್ತಿದ್ದರು. ಭಾರತೀಯರು ಕೃತಜ್ಞತೆ ತೋರಿಸಬೇಕಾದರೆ ರಾಜಕೀಯ ಸುಧಾರಣೆ ಆಗಲೇಬೇಕು ಎಂದು ಕಾಂಗ್ರೆಸ್ ಮುಚ್ಚುಮರೆಯಿಲ್ಲದೆ ಹೇಳಿತು. "ಸಾಮ್ರಾಜ್ಯದ ರಾಜ್ಯನೀತಿಜ್ಞರ ಸದ್ಭಾವನೆಯಿಂದ ಸ್ವರಾಜ್ಯದಲ್ಲಿ ಶಿಕ್ಷಣ ಪಡೆಯಲು" ಜನರನ್ನು ಸೇರಿಸಿಕೊಳ್ಳಲು ಗಾಂಧಿ ಸಕ್ರಿಯವಾಗಿ ನೆರವು ನೀಡಿದರು. 1918 ರಲ್ಲಿ ಅವರು ಹೇಳಿದರು: "ಭಾರತದ ಜನರಿಗೆ ತೃಪ್ತಿಯುಂಟುಮಾಡುವುದು ಅತ್ಯಂತ ಕಡಮೆ ಕಾಲಾವಧಿಯಲ್ಲಿ ಸ್ವಯಮಾಡಳಿತದ ದರ್ಶನವನ್ನು ಪಡೆಯುವುದು ಮಾತ್ರವೇ."

ಅನೇಕರು ಮಿತ್ರರಾಷ್ಟ್ರಗಳು ಘೋಷಿಸಿದ ಯುದ್ಧೋದ್ದೇಶಗಳ ಬಗೆಗೆ ತಪ್ಪು ಭಾವನೆ ತಳೆದಿದ್ದರು. ಲಾಯ್ಡ್ ಜಾರ್ಜ್ (Lloyd George) ಹೇಳಿದನು: "ಮಿತ್ರರಾಷ್ಟ್ರಗಳು ಯುದ್ಧಮಾಡುತ್ತಿರುವುದು ಸ್ವಾತಂತ್ರ್ಯಕ್ಕೇ ಹೊರತು ಬೇರೆ ಯಾವುದಕ್ಕೂ ಅಲ್ಲ." ಅಧ್ಯಕ್ಷ ವಿಲ್ಸನರ (Wilson) "ಹದಿನಾಲ್ಕು ಅಂಶಗಳು" ಈ ಉದಾತ್ತ ಭಾವನೆಗಳನ್ನು ಬಲಪಡಿಸುವಂತೆ ತೋರಿದುವು. ಹೀಗಾಗಿ ವಾಸ್ತವವಾಗಿ ಸಾಮ್ರಾಜ್ಯಶಾಹೀ ಶಕ್ತಿಗಳು ವಸಾಹತುಗಳಿಗಾಗಿ, ಮಾರುಕಟ್ಟೆಗಳಿಗಾಗಿ ನಡೆಸುತ್ತಿದ್ದ ಆ ಯುದ್ಧದ ನಿಜವಾದ ಸ್ವರೂಪವನ್ನು ಅನೇಕ ಭಾರತೀಯರು ತಿಳಿದುಕೊಳ್ಳದೆ ಹೋದುದರಲ್ಲಿ ಆಶ್ಚರ್ಯವಿಲ್ಲ. ಆದರೂ ಮೊದಮೊದಲು ತೋರಿಸಿದ ಉತ್ಸಾಹ, ಭಾರತೀಯರ ಸಹಕಾರಕ್ಕೆ ಪ್ರತಿಫಲವಾಗಿ ರಾಜಕೀಯ ಸುಧಾರಣೆ ಆಗುತ್ತದೆ ಎನ್ನುವ ಸೂಚನೆ ಯಾವುದೂ ಬಾರದುದರಿಂದಾಗಿ ಇಳಿಮುಖವಾಯಿತು. ಸುಧಾರಣೆಗಳನ್ನು ಘೋಷಿಸಲು ಸರಕಾರವು ವಿಳಂಬ ಮಾಡುತ್ತಿರುವುದರಿಂದ ಮಿತಗಾಮಿಗಳ ಪ್ರಭಾವ ಕುಂದುತ್ತಿದೆ ಎಂದು ಸುರೇಂದ್ರನಾಥ ಬ್ಯಾನರ್ಜಿ ಭವಿಷ್ಯ ನುಡಿದರು.

ಎರಡು ಘಟನೆಗಳು ಮಿತಗಾಮಿಗಳನ್ನೂ ತೀವ್ರಗಾಮಿಗಳನ್ನೂ ಒಂದುಗೂಡಿಸಿದುವು. ಅವು, ಫಿರೋಜ್ ಷಹಾ ಮೆಹ್ತಾ, ಜಿ.ಕೆ. ಗೋಖಲೆ ಇವರ ಮರಣ ಹಾಗೂ ಮಾಂಡಲಾಯ್‌ನಿಂದ ತಿಲಕರ ಆಗಮನ. ಮುಂಬಯಿ ಕಾಂಗ್ರೆಸ್ಸು (1915), ಮಿಸೆಸ್ ಆನಿಬೆಸೆಂಟರ ಸೂಚನೆಯಂತೆ ಸದಸ್ಯತ್ವವನ್ನು ತೀವ್ರಗಾಮಿಗಳಿಗೂ ತೆರೆದಿತು. ಭಾರತೀಯ ಸಂಸ್ಕೃತಿಯ ಬಗೆಗೆ ಆಳವಾದ ಗೌರವ, ಸಾಮಾಜಿಕ ಹಾಗೂ ಶೈಕ್ಷಣಿಕ ಯೋಜನೆಗಳ ಬಗೆಗೆ ನಿಷ್ಠೆ, ಬ್ರಿಟಿಷ್ ಕಾಮನ್-ವೆಲ್ತಿಗೇ ಸೇರಿದಂತೆ ಸಂಪೂರ್ಣ ಸ್ವಯಮಾಧಿಕಾರದಲ್ಲಿ ಭರವಸೆ-ಇವುಗಳಿಂದಾಗಿ ಆಕೆ ಆ ವೇಳೆಗಾಗಲೇ ಪ್ರಮುಖ ರಾಜಕೀಯ ನಾಯಕರಾಗಿದ್ದರು. ಐರಿಷ್ ಕ್ರಾಂತಿಯಿಂದ ಪ್ರೋತ್ಸಾಹಿತರಾದ ಆನಿಬೆಸೆಂಟ್ 1916 ರ ಸೆಪ್ಟೆಂಬರ್ ತಿಂಗಳಲ್ಲಿ "ಹೋಂ ರೂಲ್ ಲೀಗ್" ಅನ್ನು ಪ್ರಾರಂಭಿಸಿದರು. ಥಿಯಸಾಫಿಕಲ್ ಸೊಸೈಟಿಯ ಪ್ರಭಾವಗಳನ್ನೂ ಐರಿಷ್ ರಾಷ್ಟ್ರೀಯವಾದಿಗಳ ಕಾರ್ಯಕೌಶಲವನ್ನೂ ಉಪಯೋಗಿಸಿಕೊಂಡು, ಕೆಲವೇ ದಿನಗಳಲ್ಲಿ ರಾಷ್ಟ್ರಾದ್ಯಂತ ಲೀಗಿನ ಶಾಖೆಗಳನ್ನು ಸ್ಥಾಪಿಸಿದರು. ತಮ್ಮದೇ ಹೋಂ ರೂಲ್ ಲೀಗಿನೊಂದಿಗೆ ತಿಲಕರೂ ಈ ಚಳುವಳಿಯನ್ನು ಕೂಡಿಕೊಂಡರು. ಅವರ ಸರಳವೂ ಆದರೆ ಗುರಿತಪ್ಪದುದೂ ಆದ ಲೇಖನಗಳು ಮತ್ತೊಮ್ಮೆ ರಾಷ್ಟ್ರಪ್ರೇಮ, ನಿರ್ಭೀತಿ ಮತ್ತು ಬಲಿದಾನಗಳನ್ನು ಒತ್ತಿ ಹೇಳತೊಡಗಿದುವು. ತಿಲಕರು ತಮ್ಮ

ಕಾರ್ಯಕ್ಷೇತ್ರವನ್ನು ಮಹಾರಾಷ್ಟ್ರ, ಮಧ್ಯಪ್ರಾಂತ (ಸೆಂಟ್ರಲ್ ಪ್ರಾವಿನ್ಸ್)ಗಳಿಗೆ ಮಿತಗೊಳಿಸಿಕೊಂಡರು. ಮಿಸೆಸ್ ಬೆಸೆಂಟ್ ಅನೇಕಾನೇಕ ಅನುಯಾಯಿಗಳೊಂದಿಗೆ ದೇಶದ ಉಳಿದ ಭಾಗಗಳಲ್ಲಿ ಚಳುವಳಿಯನ್ನು ವ್ಯವಸ್ಥೆಗೊಳಿಸಿದರು. ಯುದ್ಧ ಅಂದರೆ ಹೊರಲಾರದ ತೆರಿಗೆಗಳು, ಮುಗಿಲುಮುಟ್ಟುವ ಬೆಲೆಗಳು, ಬಡಜನರಿಗೆ ಇನ್ನೂ ಹೆಚ್ಚು ಯಾತನೆಗಳು. ಅವರು ಹೋಂ ರೂಲು ಮನವಿಗೆ ಓಗೊಟ್ಟರು. ಬಹುಸಂಖ್ಯೆಯ ಸ್ತ್ರೀಯರೂ ಅದಕ್ಕೆ ಪ್ರತಿಕ್ರಿಯೆ ತೋರಿಸಿದರು.

## ಸ್ವದೇಶದಲ್ಲೂ ವಿದೇಶದಲ್ಲೂ ಕ್ರಾಂತಿಕಾರಕ ಚಟುವಟಿಕೆಗಳು

ಹೀಗೆ ಯುದ್ಧದ ಪ್ರಚೋದನೆಯು ಕಾಂಗ್ರೆಸ್ಸಿಗೆ ಹೊಸ ಚೈತನ್ಯವನ್ನು ತುಂಬುತ್ತಿದ್ದಾಗ ಕ್ರಾಂತಿಕಾರಿ ನಾಯಕರು ಜರ್ಮನಿಯ ನೆರವಿನಿಂದ ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಳ್ಳಲು ನಿರ್ಧರಿಸಿದರು. ಸರಕಾರದ ದಬ್ಬಾಳಿಕೆ ಅವರ ಸಮೂಹ ದಲ್ಲಿ ಸ್ವಲ್ಪಮಟ್ಟಿನ ಗೊಂದಲವನ್ನುಂಟುಮಾಡಿತ್ತು. ಆದರೆ 1912 ರಿಂದ ಅವರು ಮತ್ತೆ ಎರಡನೆಯಸಾರಿ ತಮ್ಮ ಬಲ ಪರೀಕ್ಷೆ ಮಾಡಲು ಸಿದ್ಧರಾಗಿ ಜೊತೆಗೂಡು ತ್ತಿದ್ದರು. ವಿದೇಶಗಳಲ್ಲಿದ್ದ ಕ್ರಾಂತಿಕಾರರೂ ನಮ್ಮ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ವ್ಯಾಪ್ತಿಯನ್ನು ಕೊಟ್ಟರು. ಅವರು ಜೈಲನ್ನೋ ಸಾವನ್ನೋ ತಪ್ಪಿಸಿಕೊಳ್ಳುವುದಕ್ಕಾಗಿ ದೇಶಬಿಟ್ಟು ಓಡಿಹೋದ ವ್ಯಕ್ತಿಗಳಲ್ಲ. ಅವರಲ್ಲಿ ಅನೇಕರನ್ನು ಯೂರೋಪು, ಅಮೇರಿಕಾ, ಮಧ್ಯಪ್ರಾಚ್ಯ ಮತ್ತು ಆಗ್ನೇಯ ಏಷ್ಯಾ ಮುಂತಾದ ಕಡೆಗಳಲ್ಲಿ ಕೇಂದ್ರಗಳನ್ನು ತೆರೆಯುವ ಹಂಚಿಕೆಯಿಂದ ಕಳುಹಿಸಲಾಗಿದ್ದಿತು. ಅಲ್ಲಿ ಭಾರತದ ಪರವಾಗಿ ವಿಚಾರಗಳನ್ನು ಹರಡುವುದು, ಆಯುಧಗಳನ್ನೂ ಹಣವನ್ನೂ ಸಂಗ್ರಹಿಸಿ ಸ್ವದೇಶದಲ್ಲಿ ಕ್ರಾಂತಿಯನ್ನು ಮುಂದುವರಿಸಲು ನೆರವಾಗುವುದು ಅವರ ಉದ್ದೇಶ ವಾಗಿತ್ತು. ಭಾರತೀಯ ವಿದ್ಯಾರ್ಥಿಗಳು, ವ್ಯಾಪಾರಸ್ಥರು ಮತ್ತು ಅಲ್ಲಿ ನೆಲಸಿದ್ದ ಕಾರ್ಮಿಕರುಗಳನ್ನು ಸೇರಿಸಿಕೊಂಡರು. ಅವರು ಎಲ್ಲೆಲ್ಲಿ ಹೋದರೂ ಪ್ರಗತಿಯುತ ಅಥವಾ ಸಮಾಜವಾದೀ ಚಳುವಳಿಗಳಿಗೆ ಬೆಂಬಲ ಸಂಪಾದಿಸಿದರು. ಯುದ್ಧ ಪ್ರಾರಂಭವಾದುದರಿಂದಾಗಿ, ವಿದೇಶಗಳಲ್ಲಿ ನೆಲೆಗೊಳಿಸಿದ ಭಾರತೀಯ ಸೈನ್ಯದಳ ದೊಂದಿಗೆ ಸಂಪರ್ಕ ಪಡೆಯಲು ಅವರಿಗೆ ಸಾಧ್ಯವಾಯಿತು. ಜೊತೆಗೆ ಯುದ್ಧ ಸೆರೆಯಾಳುಗಳ ಹಾಗೂ ಬ್ರಿಟಿಷ್ ಆಳಿಕೆಗೆ ವಿರೋಧಿಗಳಾಗಿದ್ದವರ ಬೆಂಬಲವೂ ದೊರಕಿತು. ಜರ್ಮನಿಯ ನೆರವಿನೊಂದಿಗೆ ಅವರು ಭಾರತೀಯ ಕ್ರಾಂತಿಕಾರ ಸಂಸ್ಥೆಗಳಿಗೆ, ಜನಬಲ, ಹಣ ಮತ್ತು ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡಲು ಹಂಚಿಕೆ ಹಾಕಿದರು. ಆದರೆ ಜರ್ಮನಿಯ ಕೈಗೊಂಬೆಗಳಾಗಿರಲು ಅವರು ಎಂದೂ ಸಮ್ಮತಿಸಲಿಲ್ಲ.

ಸಾವರ್ಕರರ ಬಂಧನ ಮತ್ತು ತಪ್ಪಿಸಿಕೊಳ್ಳಲು ಅವರು ಮಾಡಿದ ಅಪಕ್ವ ವಿಫಲ ಪ್ರಯತ್ನಗಳಿಂದಾಗಿ ಲಂಡನಿನ ಕ್ರಾಂತಿಕಾರರು ಚೆದರಿಹೋದರು. ವೀರೇಂದ್ರನಾಥ ಚಟ್ಟೋಪಾಧ್ಯಾಯ ಪ್ಯಾರಿಸ್ ಮತ್ತು ಜರ್ಮನಿಗೆ ಹೋದರು. ಬರ್ಲಿನಿನಲ್ಲಿ ಜರ್ಮನ್ ವಿದೇಶಾಂಗ ಕಚೇರಿಯ ನೆರವಿನಿಂದ ನಿವಾಸಿ ಭಾರತೀಯರ ಸಮಿತಿಯೊಂದು ರೂಪುಗೊಂಡಿತು. ಇದೇ ಮುಂದೆ ಇಂಡಿಯನ್ ಇಂಡಿಪೆಂಡೆನ್ಸ್

ಕಮಿಟಿ ಎಂಬ ಹೆಸರು ಪಡೆಯಿತು. ವೀರೇಂದ್ರನಾಥರು ಅದರ ಕಾರ್ಯದರ್ಶಿಯಾದರು. ಅದು ಬಾಗ್‌ದಾದ್, ಇಸ್ತಾಂಬುಲ್, ಪರ್ಷಿಯಾ ಮತ್ತು ಕಾಬೂಲ್‌ಗಳಿಗೆ ನಿಯೋಗಗಳನ್ನು ಕಳುಹಿಸಿತು. ಭಾರತ ಸೇನಾದಳಗಳೊಂದಿಗೆ ಮತ್ತು ಭಾರತದ ಯುದ್ಧಸೆರೆಯಾಳುಗಳೊಂದಿಗೆ ಕೆಲಸ ಮಾಡಿತು. ಕಾಬೂಲಿಗೆ ರಾಜಾ ಮಹೇಂದ್ರ ಪ್ರತಾಪರನ್ನು, ಮೌಲಾನಾ ಬರಕುತುಲ್ಲಾ ಮತ್ತು ಮೌಲಾನಾ ಓಬೀಯಾದುಲ್ಲಾ ಎಂಬುವರ ಜೊತೆ ಕಳಿಸಿಕೊಡಲಾಯಿತು. ಅಲ್ಲಿ ಅವರು ಒಂದು ತಾತ್ಕಾಲಿಕ ಭಾರತ ಸರಕಾರವನ್ನು ರಚಿಸಿದರು.

ಈ ಮಧ್ಯೆ ಹರದಯಾಲ್ ಅಮೆರಿಕಾಕ್ಕೆ ಬಂದರು. ಅಲ್ಲಿ ಆ ವೇಳೆಗಾಗಲೇ ತಾರಕಾನಾಥ ದಾಸ್ ಅವರು, ಪಶ್ಚಿಮ ಕರಾವಳಿಯಲ್ಲಿ ನೆಲಸಿದ್ದು ಅಮೆರಿಕದ ಕಟ್ಟುನಿಟ್ಟಾದ ವಲಸೆ ಕಾನೂನುಗಳ ಬಗೆಗೆ ಕಹಿಭಾವನೆ ತಳೆದಿದ್ದ ಭಾರತೀಯ ವಲಸೆಗಾರರಲ್ಲಿ ಕ್ರಾಂತಿಯ ಸಂದೇಶವನ್ನು ಹರಡುತ್ತಿದ್ದರು. 1913ರ ನವೆಂಬರ್ 1 ನೆಯ ತಾರೀಕಿನಿಂಧ ಕ್ರಾಂತಿಯ ಸ್ಮಾರಕವಾಗಿ ಪ್ರಕಟವಾಗಲು ತೊಡಗಿದ ಘದರ್ ಎಂಬ ವಾರಪತ್ರಿಕೆಯಿಂದ ಆ ಪಕ್ಷಕ್ಕೆ ಆ ಹೆಸರು ಬಂದಿತು. (ವಾಸ್ತವವಾಗಿ ಘದರ್ ಎಂಬ ಶಬ್ದದ ಅರ್ಥವೇ ದಂಗೆ ಎಂದಾಗುತ್ತದೆ.) ಅದರ ಯೋಜನೆಯಲ್ಲಿ ಸೇನಾದಳಗಳ ನಡುವೆ ಕಾರ್ಯಚಟುವಟಿಕೆ, ಅಧಿಕಾರಿಗಳ ಕೊಲೆ, ಕ್ರಾಂತಿಕಾರವೂ ಸಾಮ್ರಾಜ್ಯಶಾಹೀ ವಿರೋಧೀಯೂ ಆದ ಸಾಹಿತ್ಯದ ಪ್ರಕಟಣೆ, ಮದ್ದುಗುಂಡುಗಳ ಶಸ್ತ್ರಾಸ್ತ್ರಗಳ ಸಂಗ್ರಹ-ಇವು ಸೇರಿದ್ದುವು. ಸ್ಯಾನ್‌ಫ್ರಾನ್ಸಿಸ್ಕೋ ಅದರ ಮುಖ್ಯ ನೆಲೆಯಾಯಿತು. ಅಮೆರಿಕದ ಕರಾವಳಿಯಲ್ಲೂ ದೂರ ಪ್ರಾಚ್ಯದಲ್ಲೂ ಶಾಖೆಗಳನ್ನು ಸ್ಥಾಪಿಸಲಾಯಿತು. ಬ್ರಿಟಿಷ್ ವಸಾಹತುಗಳೆಲ್ಲದರಲ್ಲೂ ಏಕಕಾಲದಲ್ಲಿಯೇ ಕ್ರಾಂತಿಯನ್ನು ಎಬ್ಬಿಸಬೇಕೆಂಬುದೇ ಇದರ ಹಿಂದಿದ್ದ ಉದ್ದೇಶ. ಘದರ್ ಜಾಹೀರಾತು ಕೊಟ್ಟಿತು: "ಭಾರತದಲ್ಲಿ ಘದರನ್ನು ಪ್ರಚೋದಿಸಲಿಕ್ಕಾಗಿ ಧೈರ್ಯಶಾಲಿಗಳಾದ ಯೋಧರು ಬೇಕಾಗಿದ್ದಾರೆ. ವೇತನ-ಮರಣ; ಬೆಲೆ-ಹುತಾತ್ಮತೆ; ನಿವೃತ್ತಿ ವೇತನ-ಸ್ವಾತಂತ್ರ್ಯ; ಯುದ್ಧರಂಗ-ಭಾರತ..."

ಕೊಮಾಗಾಟಾಮರೂ (Komagatamaru) ಘಟನೆಯು ಘದರ್ ಪಕ್ಷದ ಚಟುವಟಿಕೆಗಳಿಗೆ ನೆರವಾಯಿತು. ಅದು ಗುರುದೀತ್ ಸಿಂಗನು ಕೆನಡಾಕ್ಕೆ ವಲಸಿಗರನ್ನು ಒಯ್ಯಲು ಬಾಡಿಗೆಗೆ ಪಡೆದುಕೊಂಡಿದ್ದ ಒಂದು ಹಡಗು. ಆದರೆ ಅದು ಬಂದಾಗ ಎರಡು ತಿಂಗಳ ಏಕಾಂತವಾಸ ಮತ್ತು ಅನಿಶ್ಚಯದ ಅನಂತರ ಹಿಂದಿರುಗುವಂತೆ ಹೇಳಲಾಯಿತು. ಕೊನೆಗೊಮ್ಮೆ ಕೊಮಾಗಾಟಾಮರೂ ಹಡಗು ಕಲ್ಕತ್ತ ಬಂದರಿನಲ್ಲಿ ಲಂಗರು ಹಾಕಿದಾಗ, ಸರಕಾರವು ಅವರಿಗಾಗಿ ಮೀಸಲಾಗಿಟ್ಟಿದ್ದ ರೈಲನ್ನು ಹತ್ತಲು ಪ್ರಯಾಣಿಕರು ನಿರಾಕರಿಸಿದರು. ಒಂದು ದಂಗೆ ಎದ್ದಿತು. 20 ರಿಂದ 40 ರಷ್ಟು ಜನ ಸತ್ತು ಅನೇಕರು ಗಾಯಗೊಂಡರು. ಟೋಷಾಮಾರು (Toshamaru) ವಿಗೂ ಅದೇ ಗತಿಯಾಯಿತು. ವಿದೇಶಗಳಲ್ಲಿದ್ದ ಪಂಜಾಬಿಗಳು ಈ ಸುದ್ಧಿಯಿಂದ ಸಿಡಿದೆದ್ದರು, ಭಾರತಕ್ಕೆ ಧಾವಿಸಿದರು, ಬ್ರಿಟಿಷ್ ಆಡಳಿತಕ್ಕೆ ಎದುರಾಗಿ ಬಿರುಸಾದ ಸಶಸ್ತ್ರ ಚಳುವಳಿ ಹೂಡಲು ಇಲ್ಲಿನವರೊಂದಿಗೆ ಜೊತೆಗೂಡಿದರು. ಜರ್ಮನ್ ಶಸ್ತ್ರಾಸ್ತ್ರಗಳನ್ನು ಪಡೆಯಲು ಸಾಧ್ಯವಿಲ್ಲವಾಗಿ ಅವಳು ಬಂಗಾಳೀ

ಕ್ರಾಂತಿಕಾರರ ಸಂಪರ್ಕ ಪಡೆದರು.

ಬಂಗಾಳದ ಭಯೋತ್ಪಾದಕ ಕ್ರಾಂತಿಕಾರರಲ್ಲಿ ನೂತನ ನಾಯಕರು ಉದ್ಭಿಸಿದ್ದರು. ಜತೀಂದ್ರನಾಥ ಮುಖರ್ಜಿ, ರಾಶ್ ಬೆಹಾರಿ ಬೋಸ್ ಮತ್ತು ನರೇಂದ್ರನಾಥ ಭಟ್ಟಾಚಾರ್ಯ ಮುಂತಾದವರು. ಭಾರತದ ಸೇನಾ ದಳಗಳನ್ನು ಆಕರ್ಷಿಸುವುದು, ಪೆಷಾವರಿನಿಂದ ಚಿತ್ತಗಾಂಗ್‌ವರಗೆ ಉದ್ದಕ್ಕೂ ಪೋಲೀಸ್ ಲೈನ್‌ಗಳ ಮೇಲೆ ಟ್ರೆಜರಿಗಳ ಮೇಲೆ ಏಕಕಾಲದಲ್ಲಿ ಆಕ್ರಮಣ ಮಾಡುವುದು ಮತ್ತು ಅಂತಿಮವಾಗಿ ಜರ್ಮನ್ ಶಸ್ತ್ರಾಸ್ತ್ರಗಳೊಂದಿಗೆ ಬ್ರಿಟಿಷರ ಮೇಲೆ ಯುದ್ಧ ಘೋಷಣೆ ಮಾಡುವುದು-ಇದು ಹಂಚಿಕೆಯ ಮುಖ್ಯ ಅಂಶಗಳಾಗಿದ್ದುವು. ದುರದೃಷ್ಟವಶಾತ್ 1915ರ ಫೆಬ್ರವರಿ 21 ರಂದು ನಡೆಯಬೇಕಾಗಿದ್ದ ಕ್ರಾಂತಿ ವಿಫಲವಾಗಿಹೋಯಿತು. ಒಳ ಸಂಚಿನ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬನಾದ ವಿ.ಜಿ. ಪಿಂಗ್ಲೆಯನ್ನು ಮೀರತ್ತಿನಲ್ಲಿ ಕುದುರೆಯ ಸೈನಿಕ ಠಾಣ್ಯದಲ್ಲಿ ಬಾಂಬುಗಳ ಸಹಿತವಾಗಿ ಬಂಧಿಸಲಾಯಿತು. ಕ್ರಾಂತಿಕಾರಕ ದಳಗಳನ್ನು ಚೆದುರಿಸಲಾಯಿತು. ಒಳಸಂಚು ಮಾಡಿದವರಲ್ಲಿ ಅನೇಕರನ್ನು ಗಲ್ಲಿಗೇರಿಸಲಾಯಿತು. ಅಲ್ಲವೇ ಅಂಡಮಾನಿಗೆ ಗಡೀಪಾರು ಮಾಡಲಾಯಿತು. ರಾಶ್ ಬೆಹಾರಿ ಬೋಸ್ ಜಪಾನಿಗೆ ತಪ್ಪಿಸಿಕೊಂಡು ಹೋದನು.

ಜತೀನ್ ಮುಖರ್ಜಿಯಾದರೋ ಇನ್ನೂ ಹೆಚ್ಚಿನ ಆಸೆಯಿಂದ ಆಗ ಬಿಡಿಬಿಡಿಯಾದ ಕೊಲೆ ನಡೆಸುವ ಕೆಲಸವನ್ನು ನಿಲ್ಲಿಸಿದನು. ರೊಡ್ಡಾ ಎಂಡ್ ಕಂಪೆನಿಗೆಂದು ಬಂದಿದ್ದ ಒಂದು ರಾಶಿ ಮೊಸೆರ್ ಪಿಸ್ತೂಲುಗಳು ಹದವಾಗಿ ಸಿಕ್ಕಿದುವು. ಜರ್ಮನಿಯಿಂದ ಬಂದಿದ್ದ ಶಸ್ತ್ರಾಸ್ತ್ರಗಳನ್ನು ಇಳಿಸಿಕೊಳ್ಳಲು ಕಾದಿದ್ದ ಐದು ಜನ ಬಂಗಾಳಿ ಭಯೋತ್ಪಾದಕರಿಗೂ ಆಯುಧಧಾರೀ ಪೋಲೀಸರ ಒಂದು ಪಡೆಗೂ ಬಾಲಸೋರ್ (Balasore)ನಲ್ಲಿ ಬೂರಿಬಲಮ್ ನದಿಯ ದಂಡೆಯ ಮೇಲೆ ಒಂದು ಸ್ಮರಣೀಯ ಕಾಳಗ ನಡೆಯಿತು. ಈ ಕಾಳಗದಲ್ಲಿ ಕಂದಕವೊಂದರಿಂದ ವೀರಾವೇಶವಾಗಿ ಯುದ್ಧಮಾಡುತ್ತಿದ್ದ ಜತೀಂದ್ರನಾಥನು ಗುಂಡೇಟಿನ ಗಾಯದಿಂದ ಮೃತನಾದನು.

ಯುದ್ಧಕಾಲದ ಕ್ರಾಂತಿ ಚಟುವಟಿಕೆಗಳು ವಿಫಲವಾದುದಕ್ಕೆ ಕಾರಣಗಳು ಇವು: ಭಾರತೀಯ ನಾಯಕರ ನಡುವೆ ಹೊಂದಾಣಿಕೆಯಿಲ್ಲದುದು; ಭಾರತೀಯ ಕ್ರಾಂತಿಕಾರರು, ಬರ್ಲಿನ್ ಸಮಿತಿ ಮತ್ತು ಘದರ್ ಪಕ್ಷಗಳ ನಡುವೆ ಸಂಪರ್ಕ ಸರಿಯಾಗಿರಲಿಲ್ಲವಾದುದು. ಮೊದಲಿನಿಂದಲೂ ಸಂದೇಹಗ್ರಸ್ತವಾಗಿದ್ದ ಸರಕಾರ ಶಸ್ತ್ರಾಸ್ತ್ರಗಳನ್ನು ಹಡಗಿಗೆ ತುಂಬಿ ಕಳುಹಿಸುವುದನ್ನು ನಿಲ್ಲಿಸಬೇಕೆಂದು ಅಮೆರಿಕದ ಅಧಿಕಾರಿಗಳನ್ನು ಕೇಳಿಕೊಂಡಿತು. ಅಮೆರಿಕವು ಜರ್ಮನಿಯ ವಿರುದ್ಧವಾಗಿ ಮಿತ್ರರಾಷ್ಟ್ರಗಳೊಂದಿಗೆ ಸೇರಿಕೊಂಡ ಮೇಲೆ, ಅಲ್ಲಿ ಯಾವ ಚಟುವಟಿಕೆಯೂ ಇನ್ನು ನಡೆಯದಾಯಿತು. ಸಾನ್‌ಫ್ರಾನ್ಸಿಸ್ಕೋದಲ್ಲಿ ಘದರ್ ನಾಯಕರ ವಿಚಾರಣೆ ನಡೆದು, ಇನ್ನುಮುಂದೆ ಅಮೆರಿಕದಲ್ಲಿ ನೆಲೆಗೊಂಡು ಯಾವ ಕ್ರಾಂತಿಕಾರೀ ಚಟುವಟಿಕೆಯೂ ನಡೆಯುವ ಸಾಧ್ಯತೆಯೇ ಇಲ್ಲದಂತೆ ಅಳಿಸಿಹಾಕಲಾಯಿತು.

## ಲಕ್ನೋ ಒಪ್ಪಂದ

ಪರಿಸ್ಥಿತಿಗಳು ವಸ್ತುಸ್ಥಿತಿಯನ್ನು ಹೊಸ ದೃಷ್ಟಿಕೋನದಿಂದ ನೋಡುವಂತೆ ಸರಕಾರವನ್ನು ಬಲಾತ್ಕರಿಸುತ್ತಿದ್ದುವು. ಹೀಗಿರಲು 1916 ರಲ್ಲಿ ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ನಡುವೆ ಉಂಟಾದ ಒಂದು ಒಪ್ಪಂದ ಹೊಸ ದಾರಿಯೊಂದನ್ನು ಕಾಣಿಸಿತು. 1908 ರ ನಂತರ ಏಕೀಕೃತ ಕಾಂಗ್ರೆಸ್ ಸಮ್ಮೇಳನ ನಡೆದದ್ದು ಲಕ್ನೋದಲ್ಲೇ. ಹೋಂ ರೂಲು ಚಳುವಳಿಯೂ ಅದರಲ್ಲಿ ಹೋರಾಟದ ಸತ್ವವೊಂದನ್ನು ತಂದಿತ್ತು. ಮೌಲಾನಾ ಆಜಾದ್, ಅನ್ಸಾರಿ, ಅಜ್ಮಲ್ ಖಾನ್ ಮೊದಲಾದ ಮುಸ್ಲಿಂ ನಾಯಕರೊಂದಿಗೆ ಒಂದು ತೀರ್ಮಾನಕ್ಕೆ ಬರಲಾಯಿತು. ಅದುವರೆಗೂ ಊಳಿಗಮಾನ್ಯ ಅಂಶಗಳ ನಾಯಕತ್ವ ಹೊಂದಿದ್ದ ಮುಸ್ಲಿಂ ಲೀಗು ಈಗ ಬೆಳೆದಿತ್ತು. ಆಲಿಘರ್ ಪಂಥದ ಲೀಗಿನ ರಾಜಕೀಯ ದೃಷ್ಟಿಕೋನವು ಈಗ ಹೆಚ್ಚು ಹೋರಾಟದ ಮನೋಭಾವ ತಾಳಿತ್ತು. ಆಜಾದರ ಅಲ್-ಹಿಲಾಲ್, ಮಹಮದ್ ಆಲಿಯವರ ಕಾಮ್ರೇಡ್ ಪತ್ರಿಕೆಗಳನ್ನು ದಮನಗೊಳಿಸಿದುದರಿಂದ, ಅದಾದ ನಂತರ ಅವರನ್ನು ಸೆರೆಗೆ ಹಾಕಿದುದರಿಂದ, ಮುಸ್ಲಿಂ ನಾಯಕರಲ್ಲಿದ್ದ ರಾಷ್ಟ್ರೀಯತಾವಾದಿಗಳು ಕಾಂಗ್ರೆಸ್ಸಿನೊಂದಿಗೆ ಸಹಕರಿಸಲು ಸಿದ್ಧರಾಗಿದ್ದರು. ಇದರ ಫಲವೇ ಲಕ್ನೋ ಒಪ್ಪಂದ.

ಕಾಂಗ್ರೆಸ್ಸನ್ನೂ ಮುಸ್ಲಿಂ ಲೀಗನ್ನೂ ಒಟ್ಟಿಗೆ ತಂದದ್ದರಲ್ಲಿ ತಿಲಕರು ವಹಿಸಿದ ಪಾತ್ರ ಬಹು ದೊಡ್ಡದು. ಏಕೆಂದರೆ ಹಿಂದೂ-ಮುಸ್ಲಿಂ ಐಕ್ಯದಿಂದ ಮಾತ್ರವೇ ಯಶಸ್ಸು ಸಾಧಿಸುವುದು ಸಾಧ್ಯ ಎಂದು ಅವರಿಗೆ ಅರಿವಾಗಿತ್ತು. ಏಕೀಕೃತ ರಾಷ್ಟ್ರೀಯ ಸಂಸ್ಥೆಯೊಂದರ ಮುಂದೆ ತೀವ್ರಗಾಮಿಗಳ ಸಂಘವು ದುರ್ಬಲವೇ ಸರಿ. ಐಕ್ಯತೆಯನ್ನು ಸಾಧಿಸುವ ಉತ್ಸುಕತೆಯಲ್ಲಿ ಅವರು ಬೇರೆ ಬೇರೆ ಮತದಾರವರ್ಗ ಹಾಗೂ ಮುಸ್ಲಿಂ ಅಲ್ಪಸಂಖ್ಯಾಕತೆಗೆ ಹೆಚ್ಚಿನ ಪ್ರಾಧಾನ್ಯ ಇವುಗಳನ್ನೂ ಒಪ್ಪಿಕೊಂಡರು. ಒಂದೊಂದೇ ಪ್ರಾಂತದ ಶಾಸನ ಸಭೆಯಲ್ಲೂ ಇರಬೇಕಾದ ಮುಸ್ಲಿಂ ಸದಸ್ಯರ ಸಂಖ್ಯೆ ಇಷ್ಟು ಎಂದು ನಿರ್ದಿಷ್ಟಪಡಿಸಲಾಯಿತು. ಕೇಂದ್ರದ ಶಾಸನ ಸಭೆಯಲ್ಲಿ ಅದು ಮೂರನೆಯ ಒಂದಾಗಿರಬೇಕಾಗಿತ್ತು. ಯಾವುದೇ ಒಂದು ಶಾಸನ ಸಭೆಯಲ್ಲಿ ಒಂದು ಕ್ರಮವನ್ನು ವಿರೋಧಿಸಿದ ಧರ್ಮಕ್ಕೆ ಸೇರಿದ ಸದಸ್ಯರ ಪೈಕಿ ನಾಲ್ಕನೆಯ ಮೂರರಷ್ಟು ಜನ ತಿರಸ್ಕರಿಸಿದರೆ ಅಂತಹ ಕ್ರಮವನ್ನು ಮುಂದುವರಿಸುವಂತಿರಲಿಲ್ಲ. ಇದಕ್ಕೆ ಪ್ರತಿಯಾಗಿ ಕಾಂಗ್ರೆಸ್ಸೂ ಮುಸ್ಲಿಂ ಲೀಗೂ ಒಟ್ಟು ಗೂಡಿ ಇಂಡಿಯನ್ ಕೌನ್ಸಿಲನ್ನು (Indian Council) ರದ್ದು ಮಾಡಬೇಕೆಂದೂ ಕೇಂದ್ರ ಮತ್ತು ಪ್ರಾಂತ ಶಾಸನ ಸಭಾ ಸದಸ್ಯರಲ್ಲಿ ಐದನೆಯ ನಾಲ್ಕರಷ್ಟು ಜನರನ್ನು ಚುನಾವಣೆಯಿಂದ ಆರಿಸಬೇಕೆಂದೂ ಒತ್ತಾಯಮಾಡಿದರು. ಪ್ರಾಂತೀಯ ವಿಚಾರಗಳಲ್ಲಿ ಮಧ್ಯಪ್ರವೇಶಮಾಡದಿರುವಿಕೆ, ಕೇಂದ್ರ ಸರಕಾರದ ಮೇಲೆ ರಕ್ಷಣೆ ಹಾಗೂ ವಿದೇಶಾಂಗ ನೀತಿಗಳನ್ನು ಬಿಟ್ಟು ಉಳಿದಂತೆ ಸಂಪೂರ್ಣ ಹತೋಟಿ ಇವನ್ನು ಅವರು ಒತ್ತಾಯ ಮಾಡಿದರು. ಹಿಂದೂ-ಮುಸ್ಲಿಂ ಐಕ್ಯತೆಯನ್ನು ಸಾಧಿಸುವಲ್ಲಿ ಲಕ್ನೋ ಒಪ್ಪಂದ ಒಂದು ಮುಖ್ಯ ಪ್ರಗತಿಯಾಗಿತ್ತು. ಆದರೆ ಗಾಂಧೀ ಹೇಳಿದಂತೆ, ಅದು ಸುಶಿಕ್ಷಿತರೂ ಶ್ರೀಮಂತರೂ ಆದ ಹಿಂದೂಗಳಿಗೆ ಸುಶಿಕ್ಷಿತರೂ ಶ್ರೀಮಂತರೂ ಆದ ಮುಸ್ಲಿಮರಿಗೂ ನಡುವೆ ಅಧಿಕಾರಕ್ಕಾಗಿ ನಡೆದ ಒಪ್ಪಂದ. ಅದರಲ್ಲಿ ಹಿಂದೂ ಮತ್ತು

ಮುಸ್ಲಿಂ ಜನಸಾಮಾನ್ಯರು ಪಾಲುಗೊಳ್ಳಲಿಲ್ಲ. ಇನ್ನು ಅದು ಹಿಂದೂಗಳು ಮತ್ತು ಮುಸ್ಲಿಮರ ಆಸಕ್ತಿಗಳ ಭಿನ್ನತೆಯ ತಪ್ಪು ಕಲ್ಪನೆಯನ್ನೇ ಒತ್ತಿ ಹೇಳುತ್ತಿತ್ತು, ಅದರ ಪ್ರಕಾರವೇ ಹಿಂದೂಗಳಿಗೂ ಮುಸ್ಲಿಮರಿಗೂ ಬೇರೆಬೇರೆ ರಾಜಕೀಯ ಸ್ಥಾನ ಬೇಕೆಂದು ಹೇಳಿತು. ಅದಕ್ಕೆ ಆಧಾರವಾಗಿದ್ದದ್ದು ಹಿಂದೂಗಳು ಮುಸ್ಲಿಮರೂ ಬೇರೆಬೇರೆ ಜನಾಂಗಗಳು ಎಂಬ ಹಾನಿಕಾರಕವಾದ ತಪ್ಪು ಭಾವನೆ. ಜಾತ್ಯತೀತತೆಯ ವಿಕಾಸಕ್ಕೆ ಅದು ಅನುಕೂಲವಾಗಿರಲಿಲ್ಲ, ಮುಂದಿನ ಮತೀಯ ವಿದ್ವೇಷಗಳಿಗೆ ಬಾಗಿಲು ತೆರೆಯಿತು. ಭಾರತದ ಐಕ್ಯತೆಯ ಮೂಲಭೂತ ಆಧಾರದ ಮೇಲೆ ಮಾಡಿಕೊಂಡ ಹೊಂದಾಣಿಕೆ, ಹೆಚ್ಚು ಹೆಚ್ಚು ಸಡಿಲತೆಗಳಿಗೆ ದಾರಿಮಾಡಿ ಕೊನೆಗೆ ಇಡೀ ರಚನೆಯೇ ಸಡಿಲವಾಯಿತು.

ಕೊನೆಯ ಪಕ್ಷ ತಾತ್ಕಾಲಿಕವಾಗಿಯಾದರೂ ಹೀಗೆ ದೇಶದಲ್ಲಿನ ಎರಡು ಪ್ರಧಾನ ಪಕ್ಷಗಳು ಒಟ್ಟಾಗಿ ಖಚಿತವಾದ ಬೇಡಿಕೆಗಳನ್ನು ಮುಂದಿಟ್ಟುದರಿಂದ ಸರಕಾರ ದಿಗ್ಭ್ರಾಂತವಾಯಿತು. ಸಾಲದ್ದಕ್ಕೆ ನಾಯಕರಲ್ಲಿ ಯುವಕ ಪೀಳಿಗೆಯನ್ನು ಆಕರ್ಷಿಸಿದ್ದ ಹೋಂ ರೂಲ್ ಲೀಗಿನ ಚಳುವಳಿಯನ್ನು ಅದು ಎದುರಿಸಬೇಕಾಯಿತು. ಜೊತೆಗೆ ಸ್ವದೇಶದಲ್ಲೂ ವಿದೇಶದಲ್ಲೂ ಗಮನಿಸಬೇಕಾಗಿದ್ದ ಕ್ರಾಂತಿಕಾರಕ ಚಳುವಳಿಗಳು ಬೇರೆ ಇದ್ದುವು. ಮತ್ತೆ ಸರಕಾರವು ಸುಧಾರಣೆಗಳು ಮತ್ತು ದಬ್ಬಾಳಿಕೆಯ ಇಬ್ಬಂದಿ ನೀತಿಯನ್ನೇ ಅನುಸರಿಸಿತು. ವೈಸ್‌ರಾಯ್ ಚೆಲಮ್ಸ್‌ಫರ್ಡ್ (Chelmsford) ಸುಧಾರಣೆಗಳನ್ನು ಘೋಷಿಸಬೇಕೆಂದು ಸೆಕ್ರೆಟರಿ ಆಫ್ ಸ್ಟೇಟನ್ನು ಒತ್ತಾಯ ಮಾಡುತ್ತಿದ್ದಾಗಲೇ, ಗೃಹ ಸದಸ್ಯನು (Home Member) ಹೊಸ ಪ್ರವಾಹವನ್ನು ತಡೆಯಲು ಅಣೆಕಟ್ಟು ಕಟ್ಟುವ ವಿಷಯ ಮಾತಾಡುತ್ತಿದ್ದನು. ಹೋಂ ರೂಲ್ ಲೀಗುಗಳನ್ನು ಅಡಗಿಸಲಾಯಿತು. ಮಿಸೆಸ್ ಬೆಸೆಂಟ್ ಅವರನ್ನು ಬಂಧಿಸಲಾಯಿತು. ಕಾಂಗ್ರೆಸ್ಸು ವೈಸರಾಯ್ ಅವರಲ್ಲಿ ತನ್ನ ಪ್ರತಿಭಟನೆ ಸಲ್ಲಿಸಿ ಮಿಸೆಸ್ ಬೆಸೆಂಟರನ್ನು ಕಲ್ಕತ್ತ ಕಾಂಗ್ರೆಸ್ಸಿನ (1917) ಅಧ್ಯಕ್ಷೆಯನ್ನಾಗಿ ಆರಿಸಿತು. ಮದರಾಸಿನಲ್ಲಿ ಸೂಚಿತವಾಗಿದ್ದ ನಿಷ್ಕ್ರಿಯ ಪ್ರತಿಭಟನೆಯನ್ನು ಒಪ್ಪಿಕೊಂಡಿದ್ದರೂ ಹೋಂ ರೂಲು ಬೇಡಿಕೆಯನ್ನು ಸಂಪೂರ್ಣವಾಗಿ ಅಂಗೀಕರಿಸಿತು. ಆದಷ್ಟು ಬೇಗ ಸಂಪೂರ್ಣ ಸ್ವಯುಮಾಡಳಿತವನ್ನು ಕೊಡಬೇಕು-ಎಂದು ಒತ್ತಾಯಮಾಡಿತು. ಕಾಂಗ್ರೆಸ್-ಲೀಗ್ ಯೋಜನೆಯೇ ಸುಧಾರಣೆಗಳ ಮೊದಲನೆಯ ಹಂತವಾಗಿತ್ತು.

## ಅಧಿಕಾರಿಗಳ ಪ್ರತಿಕ್ರಿಯೆ: ದಬ್ಬಾಳಿಕೆ ಮತ್ತು ಸುಧಾರಣೆಯ ಭರವಸೆ

ಸರಕಾರದ ಪ್ರತಿಕ್ರಿಯೆಯನ್ನು 1917 ಆಗಸ್ಟ್ 20 ರಂದು ಪಾರ್ಲಿಮೆಂಟಿನಲ್ಲಿ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದ ಮಾಂಟೆಗೂ (Montagu)ಘೋಷಿಸಿದನು. ಅವನು ಸೂಚಿಸಿದ್ದ ಕ್ರಮಗಳು ತುಂಬ ತಡವಾಗಿ ಬಂದುವು, ಹಾಗೂ ಸಾಕಷ್ಟು ದೂರ ಹೋಗಲಿಲ್ಲ. ಮೊದಲನಯ ಬಾರಿಗೆ ಭಾರತದ ಸುಧಾರಣೆಗಳ ಗುರಿ ಭಾರತಕ್ಕೆ ಜವಾಬ್ದಾರಿ ಸರಕಾರ ರಚನೆ ಎಂದು ನಿರೂಪಿಸಿದವನು ಮಾಂಟೆಗೂ. ಆದರೆ ಆ ಗುರಿಯ ಕಡೆಗೆ ನಿಧಾನವಾಗಿ ಕ್ರಮೇಣ ಹೆಜ್ಜೆ ಹಾಕಬೇಕಾಗಿತ್ತು. ಆಡಳಿತದ ಪ್ರತಿಯೊಂದು ವಿಭಾಗದಲ್ಲಿಯೂ ಭಾರತೀಯರನ್ನು ಹೆಚ್ಚುಹೆಚ್ಚಾಗಿ ಸೇರಿಸಿಕೊಳ್ಳುವುದರಿಂದ,

ಸ್ವಯಮಾಡಳಿತ ಸಂಸ್ಥೆಗಳನ್ನು ಎಚ್ಚರಿಕೆಯಿಂದ ನಿರ್ವಹಿಸುವುದರ ಮೂಲಕ ಅದನ್ನು ಕ್ರಮೇಣ ಸಾಧಿಸಬೇಕಾಗಿದ್ದಿತು. ಒಂದಾದಮೇಲೊಂದರಂತೆ ಸುಧಾರಣೆಗಳ ಹಂತಗಳು ಇರಬೇಕೆಂದು ಇದರ ಅರ್ಥವಾಯಿತು. ಪ್ರತಿಯೊಂದು ಮುಂದಿನ ಹೆಜ್ಜೆಯ ಸಮಯ ಮತ್ತು ಪ್ರಮಾಣಗಳನ್ನು ನಿರ್ಧರಿಸಬೇಕಾಗಿದ್ದದ್ದು ಬ್ರಿಟಿಷ್ ಸರಕಾರ. ಅವರ ನಿರ್ಧಾರಕ್ಕೆ ಆಧಾರವಾಗಿರಬೇಕಾಗಿದ್ದುದು ಭಾರತೀಯರು ಬ್ರಿಟಿಷರಿಗೆ ತೋರಿಸುವ ಸಹಕಾರ ಹಾಗೂ ಹೊಣೆಗಾರಿಕೆಗಳನ್ನು ಪೂರೈಸುವಲ್ಲಿ ಭಾರತೀಯರು ಪ್ರದರ್ಶಿಸುವ ಸಾಮರ್ಥ್ಯ. ಆಚರಣೆಯಲ್ಲಿ ಈ ಎಲ್ಲ ತತ್ವಗಳ ಅರ್ಥ ಪರಿಣಾಮಕಾರಿಯಾದ ಅಧಿಕಾರವನ್ನು ಬ್ರಿಟಿಷ್ ಹಿತಾಸಕ್ತಿಯಿಂದ ಬ್ರಿಟಿಷರೇ ಇಟ್ಟುಕೊಳ್ಳುವುದು ಎಂಬುದಾಗಿ ಅಷ್ಟೆ. ಸುಧಾರಣೆಗಳು ಎನ್ನುವುದು ಮಿತಗಾಮಿ ರಾಷ್ಟ್ರೀಯ ಅಭಿಪ್ರಾಯವನ್ನು ಒಲಿಸಿಕೊಂಡು ಅವರನ್ನು ತೀವ್ರಗಾಮಿ ರಾಷ್ಟ್ರೀಯವಾದಿಗಳಿಂದ ಬೇರ್ಪಡಿಸುವುದಕ್ಕಾಗಿ ಎಸೆದ ಚೂರು ರೊಟ್ಟಿ ಅಷ್ಟೆ.

ಸುಧಾರಣೆಯ ಭರವಸೆಗಳನ್ನು ಕೊಡುತ್ತಿದ್ದಾಗಲೇ, ಸಾಮ್ರಾಜ್ಯಶಾಹಿ ವಿರೋಧೀ ಹೋರಾಟದ ಶಕ್ತಿಗಳನ್ನು ದಮನಮಾಡಲು ಸರಕಾರ ಪ್ರಯತ್ನಿಸಿತು. ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆಕ್ಟ್ (Criminal Law Amendment Act) ಜಾರಿಗೆ ಬಂದು ಒಳಸಂಚನ್ನು ಒಂದು ಅಪರಾಧವನ್ನಾಗಿ ಮಾಡಿತು. ಸರಕಾರವು ವಿಶೇಷ ನ್ಯಾಯಮಂಡಲಿಗಳ ಮೂಲಕ ಸಂಕ್ಷಿಪ್ತ ವಿಚಾರಣೆಗಳನ್ನು ನಡೆಸಲು ಅನುಕೂಲಮಾಡಿಕೊಟ್ಟಿತು. ಕೇವಲ ಸಂದೇಹದ ಬಲದಿಂದ ಜನರನ್ನು ಅನಿರ್ದಿಷ್ಟ ಕಾಲ ಜೈಲಿನಲ್ಲಿ ಇಡಲಾಗುತ್ತಿತ್ತು. ಹಾಗೆ ಬಂಧಿತರಾದವರನ್ನು ತುಂಬಾ ಅನಾಗರಿಕ ಕ್ರೂರ ರೀತಿಯಲ್ಲಿ ನಡೆಸಿಕೊಳ್ಳಲಾಗುತ್ತಿತ್ತು. ರಾಷ್ಟ್ರೀಯತಾವಾದಿಗಳ ಬೇಡಿಕೆಗಳನ್ನು ಸ್ವಲ್ಪ ಸಮಾಧಾನಪಡಿಸಲೆಂದು ಸುಧಾರಣೆಗಳ ಭರವಸೆ; ಆಳುವವರು ಆಳಿಸಿ ಕೊಳ್ಳುವವರ ಮೇಲೆ ಭದ್ರವಾದ ಹಿಡಿತ ಇಟ್ಟುಕೊಳ್ಳುವುದಕ್ಕಾಗಿ ದಬ್ಬಾಳಿಕೆ, ಅನೇಕ ಬಗೆಯ ಅನೇಕ ವಿಧಾನಗಳಿಂದ, ಅದೇನನ್ನೇ ಬೇಕಾದರೂ ಬೆಲೆಕೊಟ್ಟು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಅವರು ಉಳಿಸಿಕೊಳ್ಳಬೇಕಾಗಿತ್ತು.

# IV

# ಸ್ವರಾಜ್ಯಕ್ಕಾಗಿ ಹೋರಾಟ

### *ಶಕ್ತಿಯ ಸಂಚಯನ: ಯುದ್ಧ ಸಮಯದ ಒತ್ತಡ*

ಮಹಾಯುದ್ಧವು ನಡೆಯುತ್ತಿದ್ದ ವರ್ಷಗಳಲ್ಲಿ ಭಾರತದ ರಾಷ್ಟ್ರೀಯತಾ ಪ್ರಜ್ಞೆ ಪಕ್ವವಾಗಿತ್ತು. ಚಳುವಳಿಯು ಚುರುಕಾಗಿತ್ತು, ಒಂದು ಅರ್ಥದಲ್ಲಿ ಹೆಚ್ಚು ಶಕ್ತಿಯುತವಾಗಿತ್ತು. ಯುದ್ಧದ ವಿಷಯದಲ್ಲಿ ಭಾರತದ ಕೊಡುಗೆಯನ್ನು ಬ್ರಿಟಿಷ್ ಸರಕಾರ ಸ್ವಲ್ಪಮಟ್ಟಿಗೆ ಮೆಚ್ಚಿತ್ತು. ಅದಕ್ಕೆ ಪ್ರತಿಫಲವಾಗಿ ಸಂಪೂರ್ಣ ಸ್ವಯಮಾಡಳಿತವನ್ನಲ್ಲದಿದ್ದರೂ ಕೆಲವು ಪ್ರಮುಖವಾದ ಸುಧಾರಣೆಗಳನ್ನು ಜಾರಿಗೆ ತರಬಹುದೆಂದು ಭಾರತವು ನಿರೀಕ್ಷಿಸಬಹುದಾಗಿತ್ತು. ರಾಷ್ಟ್ರೀಯತಾವಾದಿಗಳು ನಿರೀಕ್ಷಣೆಯ ನಿಲುವಿನಲ್ಲಿದ್ದರೂ ತಮ್ಮ ಆಕಾಂಕ್ಷೆಗಳು ತಿರಸ್ಕೃತವಾದರೆ ತಕ್ಕ ರೀತಿಯಲ್ಲಿ ಎದುರಿಸಿ ಹೋರಾಡಲೂ ಅವರು ಸಿದ್ಧರಾಗಿಯೇ ಇದ್ದರು.

ಆರ್ಥಿಕ ಕ್ಷೇತ್ರದಲ್ಲಿಯೂ ಆಸೆ ತಗ್ಗಿತು. ಯುದ್ಧಸಮಯದಲ್ಲಿ ವಿದೇಶೀ ಆಮದುಗಳು ಹೆಚ್ಚು ಕಡಮೆ ಸಂಪೂರ್ಣವಾಗಿ ನಿಂತುಹೋಗಿದ್ದವು. ಆದರೆ ಬ್ರಿಟನ್ನಿನ ಯುದ್ಧಾಗತ್ಯಗಳು ಹೆಚ್ಚಿದ್ದುವು. ಈ ಕೆಲವು ಅಗತ್ಯಗಳನ್ನು ಭಾರತ ಅಧಿಕ ಉತ್ಪಾದನೆಯ ಮೂಲಕ ಪೂರೈಸಬೇಕಾಗಿತ್ತು. ಇದರ ಪರಿಣಾಮವಾಗಿ ಭಾರತದ ವಾಣಿಜ್ಯ ಮತ್ತು ಕೈಗಾರಿಕೆಗಳು ಸ್ವಲ್ಪಮಟ್ಟಿಗೆ ಅಭಿವೃದ್ಧಿಹೊಂದಿದುವು. ಪ್ರೋತ್ಸಾಹ ಮತ್ತು ಅವಕಾಶ ದೊರೆತರೆ ಭಾರತ ಎಷ್ಟುಮಟ್ಟಿನ ಪ್ರಗತಿ ಸಾಧಿಸಬಹುದು ಎಂಬ ಬಗೆಗೆ ಅದರಿಂದ ಸ್ವಲ್ಪಮಟ್ಟಿನ ತಿಳಿವಳಿಕೆ ಬಂದಿತು. ಭಾರತೀಯ ಕೈಗಾರಿಕೋದ್ಯಮಿಗಳಿಗೆ ಅಧಿಕ ಲಾಭ ಮತ್ತು ಅಭ್ಯುದಯಗಳ ಒಂದು ಅಭಿರುಚಿಯನ್ನು ಅದು ತಂದುಕೊಟ್ಟಿತು. 1916 ರಲ್ಲಿ ಒಂದು ಕೈಗಾರಿಕಾ ಮಂಡಳಿಯನ್ನು ಸ್ಥಾಪಿಸಲಾಯಿತು. ಕೈಗಾರಿಕಾಭಿವೃದ್ಧಿಯಲ್ಲಿ ಸರಕಾರವು ಹೆಚ್ಚು ಕ್ರಿಯಾತ್ಮಕ ಪಾತ್ರವಹಿಸಬೇಕೆಂದೂ ಪ್ರಗತಿಯನ್ನು ಹೆಚ್ಚುಮಾಡಲು ನೆರವಾಗುವಂತೆ ಆಡಳಿತ ವ್ಯವಸ್ಥೆಯನ್ನು ರೂಪಿಸಬೇಕೆಂದೂ ಮಂಡಳಿ ಶಿಫಾರಸು ಮಾಡಿತು. ಕೈಗಾರಿಕಾ ನೀತಿಯಲ್ಲಿ ಪ್ರಮುಖ ಬದಲಾವಣೆಗಳಾಗುತ್ತವೆಂದು ಭಾರತೀಯ ಬಂಡವಾಳಗಾರರು ನಿರೀಕ್ಷಿಸಿದರು.

ಈ ಆಸೆ-ನಿರೀಕ್ಷೆಗಳ ಜೊತೆಜೊತೆಗೇ ಭೀತಿ-ಸಂದೇಹಗಳೂ ಇದ್ದುವು. ಉತ್ಪನ್ನ ವಸ್ತುಗಳ ಬೆಲೆ ತೀವ್ರವಾಗಿ ಏರಿತ್ತೇ ಹೊರತು ಕೃಷಿ ಉತ್ಪನ್ನಗಳ ಬೆಲೆ ಏರಿರಲಿಲ್ಲ. ಉಕ್ಕು ಮತ್ತು ಹತ್ತಿ ವಸ್ತುಗಳಲ್ಲಿ ಅಪಾರವಾದ ಲಾಭವಾಗುತ್ತಿದ್ದಿತು. ಅಲ್ಲಿ ಭಾರತೀಯರಿಗೆ ಉದ್ಯೋಗಾವಕಾಶಗಳು ಹೆಚ್ಚುಹೆಚ್ಚಾಗಿ ಸೃಷ್ಟಿಯಾಗಿದ್ದುವು.

ಆದರೇನು, ಈ ಲಾಭಗಳು ವಾಸ್ತವವಾಗಿ ಜನಸಾಮಾನ್ಯರಿಗೆ ತಲುಪಲಿಲ್ಲ. ಭಾರತೀಯ ಮಾರಿಷಸ್ ಮಂಡಳಿಯು ಅಗತ್ಯವಾದ ವಸ್ತುಸಾಮಗ್ರಿಗಳನ್ನು ಭಾರತದಿಂದಲೇ ಕೊಳ್ಳಲು ಸೂಕ್ತವಾದ ಕ್ರಮಗಳನ್ನು ಕೈಗೊಂಡಿತು. ಆದರೆ ಯಂತ್ರ ನಿರ್ಮಾಣ ಕೈಗಾರಿಕೆಗಳು ಭಾರತದಲ್ಲಿ ಇರಲಿಲ್ಲವಾಗಿ ಭಾರತೀಯ ಬಂಡವಾಳಗಾರರು ಈ ಪರಿಸ್ಥಿತಿಯ ಪೂರ್ಣ ಪ್ರಯೋಜನ ಪಡೆಯಲು ಸಾಧ್ಯವಾಗಲಿಲ್ಲ. ಯುದ್ಧ ಕಾಲದ ನಿಯಂತ್ರಣ ಮತ್ತು ಸಾಕಷ್ಟು ಹಡಗು ಸಾಗಾಣಿಕೆ ಇಲ್ಲದುದು ರಫ್ತು ಕಾರ್ಯಕ್ರಮಕ್ಕೆ ತಡೆಯಾಯಿತು. ಯುದ್ಧ ಮುಗಿಯುವ ವೇಳೆಗೆ ಉತ್ಪಾದನೆಯ ಗತಿ ಮಂದವಾಯಿತು. ಹಿಂದೆಯೇ ಕಾಣಿಸಿಕೊಂಡದ್ದು ಕಾರ್ಖಾನೆಗಳ ಮುಚ್ಚುವಿಕೆ ಮತ್ತು ನಿರುದ್ಯೋಗ. ಈ ಮಧ್ಯೆ ದಿನದಿನದ ಅಗತ್ಯ ವಸ್ತುಗಳ ಬೆಲೆ ಗಗನಕ್ಕೇರಿತ್ತು. 1914 ರಿಂದ 1920 ರವರಗಿನ ಅವಧಿಯಲ್ಲಿ ಕಲ್ಕತ್ತದಲ್ಲಿ ಸಗಟುಮಾರಾಟದ ಸೂಚಿ ಶೇ. 100 ಕ್ಕಿಂತಲೂ ಹೆಚ್ಚಾಗಿತ್ತು. ಬೇರೆ ಕ್ಷೇತ್ರಗಳಲ್ಲಿಯೂ ಪರಿಸ್ಥಿತಿ ಇದಕ್ಕಿಂತ ಶೇ. 93 ಕ್ಕಿಂತಲೂ ಹೆಚ್ಚಾಗಿತ್ತು. ಬೇರೆ ಕ್ಷೇತ್ರಗಳಲ್ಲಿಯೂ ಪರಿಸ್ಥಿತಿ ಇದಕ್ಕಿಂತ ತುಂಬ ವ್ಯತ್ಯಾಸವಾದುದಾಗಿರಲಿಲ್ಲ. ಇವೆಲ್ಲವುಗಳಿಂದಾಗಿ ಸಾಮಾನ್ಯ ಜನರಲ್ಲಿ ತೀವ್ರವಾದ ಕಷ್ಟಸಂಕಟಗಳು ತಲೆದೋರಿದುವು. ಗೇಣಿ ಮತ್ತು ತೆರಿಗೆಗಳ ಭಾರವನ್ನು ತಡೆಯಲಾರದೆ ಕೃಷಿಕರು ನರಳಿದರು. ಮುಂದೇನು ಎಂಬ ಆತಂಕ ಸಾರ್ವತ್ರಿಕವಾಗಿತ್ತು. ಕೈಗಾರಿಕೋದ್ಯಮಿಗಳು ಸರಕಾರದ ರಕ್ಷಣೆಯನ್ನೂ ನೆರವನ್ನೂ ಬಯಸಿದರು. ವಿಜಯಶಾಲಿ ಬ್ರಿಟನ್ನಿಗೆ ಭಾರತದ ಅರ್ಥವ್ಯವಸ್ಥೆಯು ಈ ಬೇಡಿಕೆಗಳನ್ನು ಪೂರೈಸುವ ಸಾಧ್ಯತೆಯಿತ್ತೆ?

ಯುದ್ಧ ಮುಗಿದೊಡನ ಆರ್ಥಿಕ ಪರಿಸ್ಥಿತಿ ಇನ್ನೂ ವಿಷಮಸ್ಥಿತಿಗೆ ತಿರುಗಿತು. ಮೊದಲನೆಯದಾಗಿ, ಬೆಲೆಗಳು ಗಗನಕ್ಕೇರಿದುವು. ಮತ್ತೆ ವಿದೇಶೀ ವಸ್ತುಗಳು ಆಮದಾಗಿ ಬರತೊಡಗಿದುವು, ವಿದೇಶೀ ಬಂಡವಾಳದ ಹೂಡಿಕೆ ಭಾರೀ ಪ್ರಮಾಣದಲ್ಲಿ ಮತ್ತೆ ಪ್ರಾರಂಭವಾಯಿತು. ಆರ್ಥಿಕ ಚಟುವಟಿಕೆಯ ಮಂದಗತಿ ಇನ್ನೂ ನಿಧಾನವಾಯಿತು. ಭಾರತದ ಕೈಗಾರಿಕಗಳು ಭಾರೀ ನಷ್ಟ ಅನುಭವಿಸಿದುವು, ಕೆಲವು ವೇಳೆ ಮುಚ್ಚಿಯೇ ಹೋದವು.

ರಾಜಕೀಯ ಕ್ಷೇತ್ರದಲ್ಲಿಯೂ ಬೇಕಾದಷ್ಟು ಮಟ್ಟಿಗೆ ಭ್ರಮೆ ಹರಿಯಿತು. ಯುದ್ಧದ ವರ್ಷಗಳಲ್ಲಿ ಏಷ್ಯಾ ಮತ್ತು ಆಫ್ರಿಕಾ ಖಂಡಗಳ ಎಲ್ಲ ದೇಶಗಳಲ್ಲಿಯೂ ರಾಷ್ಟ್ರೀಯತೆಯು ಅಧಿಕ ಉತ್ತೇಜನ ಪಡೆದಿತ್ತು. ಜನತೆಯ ಬೆಂಬಲವನ್ನು ಪಡೆಯುವ ಸಲುವಾಗಿ ಬ್ರಿಟನ್, ಅಮೆರಿಕಾ, ಫ್ರಾನ್ಸ್, ಇಟಲಿ, ಜಪಾನ್ - ಈ ಎಲ್ಲ ರಾಷ್ಟ್ರಗಳೂ ಯುದ್ಧವು ಪ್ರಜಾಸತ್ತೆಯನ್ನು ರಕ್ಷಿಸುವುದಕ್ಕಾಗಿ ಎಂದು ಮಾತನಾಡಿದ್ದರು. ಎಲ್ಲ ರಾಷ್ಟ್ರಗಳ ಮತ್ತು ಜನತೆಯ ಸ್ವಯಂ ನಿರ್ಧಾರ ಯಾವುದಿದೆಯೋ ಅದರಂತ ಖಂಡಿತವಾಗಿಯೂ ನಡೆದೇ ತೀರುವುದಾಗಿ ಪ್ರತಿಜ್ಞೆ ಕೈಗೊಂಡಿದ್ದರು. ಆದರೆ ಯುದ್ಧವು ಮುಗಿದಮೇಲ ವಸಾಹತುಶಾಹಿಯನ್ನು ಕೊನಗೂಳಿಸಬೇಕೆಂಬ ಇಚ್ಛೆಯನ್ನೇನೂ ಅವರು ವ್ಯಕ್ತಪಡಿಸಲಿಲ್ಲ.

1919 ರ ಶಾಂತಿ ಒಪ್ಪಂದಗಳು ಮಿತ್ರರಾಷ್ಟ್ರಗಳ ಯುದ್ಧೋದ್ದೇಶಗಳನ್ನೂ ಅಧ್ಯಕ್ಷ ವಿಲ್ಸನರ "ಹದಿನಾಲ್ಕು ಅಂಶ"ಗಳನ್ನೂ ಸುಳ್ಳು ಮಾಡಿದುವು. ಭಾರತದಲ್ಲಿನ ಕ್ರಾಂತಿ

ಚಳುವಳಿಗೆ ಸಹಾಯಮಾಡಲು ಪ್ರಯತ್ನಿಸಿದ್ದ ಜರ್ಮನಿಯ ಬಗೆಗೆ ಸ್ವಲ್ಪಮಟ್ಟಿನ ಸಹಾನುಭೂತಿ • ವ್ಯಕ್ತವಾಯಿತು. ವರ್ಸೇಲ್ಸ್ ಕರಾರು (Treaty of Versailles) ಮುಯ್ಯಿ ತೀರಿಸಿಕೊಳ್ಳುವಂತಹ ಆಳಿಕೆಯನ್ನು ಸಾರುವಂತೆ ತೋರಿತು. ಸೋತ ಬಣಗಳ ವಸಾಹತುಗಳನ್ನು ಗೆದ್ದ ರಾಷ್ಟ್ರಗಳು ಹಂಚಿಕೊಳ್ಳುವ ವಿಚಾರ, ಮಧ್ಯ ಯೂರೋಪಿನ ಜನತೆಗೆ ಸ್ವಯಂ-ನಿರ್ಧಾರದ ಹಕ್ಕನ್ನು ವಂಚಿಸಿದುದು, ಯುದ್ಧನಷ್ಟ ಪರಿಹಾರದ ಭಾರೀ ಹೊರೆಯನ್ನು ಜರ್ಮನಿಯ ಮೇಲೆ ಹೊರಿಸಿದುದು, ಕೊನೆಯದಾಗಿ ಟರ್ಕಿಯ ಸಾಮ್ರಾಜ್ಯವನ್ನು ಕುರಿತ ವರ್ತನೆ-ಇವು ಭಾರತೀಯರಿಗೆ ಆಘಾತ ಉಂಟುಮಾಡಿದುವು. ಲಾಯ್ಡ್ ಜಾರ್ಜನು (Loyld George) ಯುದ್ಧ ಸಮಯದಲ್ಲಿ ಕೊಟ್ಟ ಭರವಸೆಯ ಎದುರಾಗಿಯೇ ಒಟ್ಟೊಮಾನ್ (Ottoman) ಸಾಮ್ರಾಜ್ಯವನ್ನು ತುಂಡುತುಂಡಾಗಿ ಕತ್ತರಿಸಿ ಹಾಕಲು ಮಿತ್ರರಾಷ್ಟ್ರಗಳು ನಿರ್ಧರಿಸಿದುವು. ಟರ್ಕಿಯಲ್ಲಿ ಇಟಾಲಿಯನರು ಮತ್ತು ಗ್ರೀಕರು ಮಿತ್ರರಾಷ್ಟ್ರಗಳ ನೆರವಿನಿಂದ ಬಂದಿಳಿದಿದ್ದು ಒಟ್ಟೊಮಾನ್ ಸಾಮ್ರಾಜ್ಯದ ಮತ್ತು ಖಲೀಫತೆಯ ವಿನಾಶವನ್ನು ಎತ್ತಿತೋರಿಸುವಂತೆ ಕಂಡಿತು. ಮುಸ್ಲಿಂ ಜನತೆಯ ಬಹುಭಾಗ ಖಲೀಫತೆಯನ್ನು ತಮ್ಮ ಧಾರ್ಮಿಕ ನಾಯಕನೆಂದು ಪರಿಗಣಿಸಿತ್ತು. 'ಖಲೀಫನ ಸ್ಥಾನ ದುರ್ಬಲವಾದರೆ ಅದು ಸಾಮ್ರಾಜ್ಯಶಾಹೀ ಪ್ರಭುತ್ವದ ಅಧೀನವಾಗಿರುವ ಇತರ ರಾಷ್ಟ್ರಗಳ ಮುಸ್ಲಿಮರ ಮೇಲೆ ದುಷ್ಪರಿಣಾಮ ಉಂಟುಮಾಡಬಹುದು ಎಂಬುದಾಗಿ ಅವರು ಭಾವಿಸಿದರು. ಇದರ ಫಲವೇ ಖಿಲಾಫತ್ ಚಳುವಳಿಯ (Khilafat Movement) ಉದಯ.

ಹೋಂ ರೂಲ್ ಚಳುವಳಿಯೂ ಖಿಲಾಫತ್ ಚಳುವಳಿಯೂ ಸೇರಿ ಭಾರತದ ಪರಿಸ್ಥಿತಿಯನ್ನು ಕದಡಲು ತೊಡಗಿದಾಗಲೇ, 1917 ರ ನವೆಂಬರ್‌ನಲ್ಲಿ ಜಾರರ ರಷ್ಯಾ (Tsarist Russia) ದಲ್ಲಿ ಕ್ರಾಂತಿ ಎದ್ದಿತು. ಬೋಲ್ಷೆವಿಕರು (Bolsheviks) ಜಗತ್ತಿನಲ್ಲೇ ಪ್ರಪ್ರಥಮವಾದ ಸಮಾಜವಾದೀ ಸರಕಾರವನ್ನು ಸ್ಥಾಪಿಸಿದರು. ಮಿತ್ರರಾಷ್ಟ್ರಗಳು ತಾವು ಉಪದೇಶಿಸಿದುದಕ್ಕೆ ವಿರುದ್ಧವಾದದ್ದನ್ನೇ ಆಚರಿಸುತ್ತಿದ್ದಾಗ ಸೋವಿಯತ್ ರಷ್ಯಾವು, ಏಷ್ಯಾದಲ್ಲಿ ತನ್ನ ಸಾರ್ವಭೌಮತ್ವ ಹಕ್ಕುಗಳನ್ನು ಏಕಪಕ್ಷೀಯವಾಗಿ ತ್ಯಾಗಮಾಡಿ ಒಂದು ಮಹತ್ವಪೂರ್ಣವಾದ ಮುದ್ರೆಯನ್ನು ಉಳಿಸಿತು. ಜಾರ್ ಕಾಲೊನಿಗಳಿಗೆ ಸ್ವಯಂ-ನಿರ್ಧಾರದ ಹಕ್ಕು ಕೊಡಲಾಯಿತು. ಸೋವಿಯಟ್ ಗಣರಾಜ್ಯ (ಯು.ಎಸ್.ಎಸ್.ಆರ್.)ದಲ್ಲಿದ್ದ ಏಷ್ಯನ್ ಜನಾಂಗಗಳಿಗೆ ಸಮಾನ ಸ್ಥಾನಮಾನಗಳನ್ನು ನೀಡಲಾಯಿತು. ಈ ಕ್ರಾಂತಿಯು ಜನ ಸಾಮಾನ್ಯರಲ್ಲಿರುವ ಅದ್ಭುತವೂ ಅಪಾರವೂ ಆದ ಶಕ್ತಿಸಾಮರ್ಥ್ಯಗಳನ್ನು ಎತ್ತಿ ತೋರಿಸಿತು. ಅವರು ಸಾರ್ವಭೌಮ ರಾಷ್ಟ್ರಗಳ ಮಧ್ಯಪ್ರವೇಶವನ್ನೂ ನಾಗರಿಕ ಹೋರಾಟದ ಅಪಾರ ಕಷ್ಟನಷ್ಟಗಳನ್ನೂ ಧೈರ್ಯವಾಗಿ, ಯಶಸ್ವಿಯಾಗಿ ಎದುರಿಸಿದ್ದರು. ಈ ಕ್ರಾಂತಿಯೂ ಜಗತ್ತಿನ ಎಲ್ಲೆಡೆ ಇದ್ದ ವಸಾಹತುಗಳಿಗೆ ಜೀವಕಳೆ ತಂದಿತು. ದೂರದೂರದ ಹಳ್ಳಿಗಳಲ್ಲಿದ್ದ ರೈತರು ಯುದ್ಧದಿಂದ ಹಿಂದಿರುಗುತ್ತಿದ್ದ ಸೈನಿಕರಿಂದ ಕ್ರಾಂತಿಯ ಕಥೆ ಕೇಳಿದರು. ಭೂಮಿಯಿಲ್ಲದವರಿಗೆ ಭೂಮಿಯನ್ನು ಹಂಚಿದ ಲೆನಿನ್ (Lenin)ನ ಭೂಹಿಡುವಳಿ ಶಾಸನಗಳು ಬುದ್ಧಿಜೀವಿಗಳನ್ನು

ಉದ್ವೇಗಕ್ಕೀಡುಮಾಡಿದುವು. ದೆಹಲಿಯ ಕಾಂಗ್ರೆಸ್ಸು ಭಾರತದ ಸ್ವಯಂ ನಿರ್ಧಾರದ ಹಕ್ಕನ್ನು ಮಾತ್ರವಲ್ಲದೆ, ಭಾರತದ ಜನರ ಹಕ್ಕುಗಳನ್ನು ಘೋಷಿಸಬೇಕೆಂದೂ ಒತ್ತಾಯಮಾಡಿ ಕೇಳಿತು.

ಸಿನ್ ಫೆಯಿನ್ ಪಕ್ಷವು (Sinn Fein Party) ಐರಿಷ್ ಗಣರಾಜ್ಯವನ್ನು ಘೋಷಿಸಿದ್ದು ಇನ್ನೂ ಹೆಚ್ಚಿನ ಪ್ರಚೋದನೆಯನ್ನು ಒದಗಿಸಿತು. ಮೈಕೇಲ್ ಕಾಲಿನ್ಸನ (Michael Collins) ಐರಿಷ್ ಗೆರಿಲ್ಲಾಗಳು ಬ್ರಿಟಿಷರ ವಿರುದ್ಧವಾಗಿ ಹುಚ್ಚು ಸಾಹಸದಿಂದ ಹೋರಾಟವನ್ನು ಮುಂದುವರಿಸಿದರು. ಬ್ರಿಟಿಷರ ದಮನಕಾರಿ ಕ್ರಮಗಳು ಭಾರತೀಯರಿಗೆ ರೌಲಟ್ ಮಸೂದೆ (Rowlatt Bills)ಗಳನ್ನು ನೆನಪಿಗೆ ತಂದುವು. ಈಜಿಪ್ಟಿನಲ್ಲಿ ಜಗ್ಲುಲ್ ಪಾಷಾ (Zaghlul Pasha) ನ ರಾಷ್ಟ್ರೀಯ ಪಕ್ಷವು ಮಹಾಯುದ್ಧದ ಸಮಯದಲ್ಲಿ ಅಗಾಧವಾಗಿ ಬೆಳೆದಿತ್ತು. 1919 ರಲ್ಲಿ ಜಗ್ಲುಲ್ ಪಾಷಾನನ್ನು ಗಡೀಪಾರು ಮಾಡಿದುದರಿಂದ ಎದ್ದ ಭಾರೀ ದಂಗೆಯನ್ನು ಬ್ರಿಟಿಷ್ ಸೈನ್ಯವು ಅತ್ಯಂತ ಅನಾಗರಿಕವಾಗಿ ತುಳಿದು ಅಡಗಿಸಿತು. 1920 ರಲ್ಲಿ ಈಜಿಪ್ಟಿನ ಸ್ವಾತಂತ್ರ್ಯವನ್ನು ಘೋಷಿಸಲಾಯಿತು. ಅದೇ ಸಮಯದಲ್ಲಿ ಟರ್ಕಿಯ ಮುಸ್ತಾಫಾ ಕಮಲ್ ಪಾಷಾ (Mustapha Kamal Pasha) ಮಿತ್ರರಾಷ್ಟ್ರಗಳು ಟರ್ಕಿಯನ್ನು ಆಕ್ರಮಿಸಿಕೊಂಡುದನ್ನು ಪ್ರತಿಭಟಿಸಿ ಯುದ್ಧ ಘೋಷಿಸಿ, ಒಂದು ಪ್ರಾಂತೀಯ ಸರಕಾರವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದನು. ಮಿತ್ರರಾಷ್ಟ್ರಗಳು ಅದುವರೆಗೆ ಜರ್ಮನ್ ಕೊಡುಗೆಯಾಗಿದ್ದ ಷಾಂಟುಂಗ್ (Shantung) ಅನ್ನು ಇಟ್ಟುಕೊಳ್ಳಲು ಜಪಾನಿಗೆ ಅವಕಾಶಕೊಟ್ಟಾಗ ಚೀನಾದಲ್ಲಿ ಉಗ್ರ ಪ್ರತಿಭಟನೆ ಇತ್ತು. ಬುದ್ಧಿಜೀವಿಗಳೂ ವಿದ್ಯಾರ್ಥಿಗಳೂ ಮುಖ್ಯ ಪಾತ್ರ ವಹಿಸಿದ್ದ ಮೇ ನಾಲ್ಕರ ಚಳುವಳಿ ಜಪಾನೀ ವಸ್ತುಗಳ ಬಹಿಷ್ಕಾರವನ್ನು ವ್ಯವಸ್ಥೆಗೊಳಿಸಿತು. ಚೀನಿಯರು ವರ್ಸೇಲ್ಸ್ ಕರಾರಿಗೆ ಸಹಿ ಹಾಕಲು ನಿರಾಕರಿಸಿದರು.

ಈ ನೂತನ ಶಕ್ತಿಗಳು ನೂತನ ರೀತಿಯ ಸವಾಲುಗಳನ್ನು ಮೂಡಿಸುತ್ತಿರುವಾಗ, ನೂತನವಾದ ಜನಸಾಮಾನ್ಯರ ಆಧಾರವುಳ್ಳ ರಾಷ್ಟ್ರೀಯ ಹೋರಾಟಗಳನ್ನು ಪ್ರಾರಂಭಿಸುತ್ತಿರುವಾಗ, ಅಧಿಕಾರಿಗಳ ನೀತಿಯಾದರೋ ಸ್ಥಗಿತವಾಗಿದ್ದಂತೆ ಕಾಣುತ್ತಿತ್ತು. 1917 ರ ಆಗಸ್ಟ್ 20 ರಂದು ಮಾಂಟೆಗೂ (Montagu) ಸಾರಿದ ಘೋಷಣೆಯನ್ನು ಅನುಸರಿಸಿ ಹೋಂ ರೂಲ್ ಸೆರೆಯಾಳುಗಳ ಬಿಡುಗಡೆಯಾಯಿತು. ಸೈನ್ಯದ ಕಮೀಷನ್ ಶ್ರೇಣಿಗಳಿಗೆ ಪ್ರವೇಶಾರ್ಹತೆಯಲ್ಲಿ ಜನಾಂಗಿಕವಾದ ತಡೆ ಇದ್ದದ್ದನ್ನು ತಗೆದುಹಾಕಲಾಯಿತು. ಭಾರತಕ್ಕೆ ಸಕ್ರೆಟರಿ ಆಫ್ ಸ್ಟೇಟ್ ಖುದ್ದಾಗಿ ಭೇಟಿ ನೀಡಿದರು. ಮಾಂಟೆಗೂ ಮಿತಗಾಮಿಗಳನ್ನು ಸಮಾಧಾನಗೊಳಿಸುವುದರಲ್ಲಿ ಯಶಸ್ವಿಯಾದನು, ಆದರೆ ತೀವ್ರಗಾಮಿಗಳನ್ನು ಗೆಲ್ಲುವುದರಲ್ಲಿ ವಿಫಲನಾದನು.

ವಾಸ್ತವವಾಗಿ ಸುಧಾರಣೆಗಳು ರಾಷ್ಟ್ರೀಯತಾವಾದಿಗಳ ಬೇಡಿಕೆಗಳನ್ನು ಪೂರೈಸುವುದರಲ್ಲಿ ಬಹುಮಟ್ಟಿಗೆ ವಿಫಲವಾದುವು. ಅದರ ಮುಖ್ಯ ಲಕ್ಷಣ ದ್ವಿಪ್ರಭುತ್ವ, ಪ್ರಾಂತಗಳಲ್ಲಿ ಒಂದು ಬಗೆಯ ಜೋಡಿ ಸರಕಾರ ಇರುವುದು. ಶಿಕ್ಷಣ ಮತ್ತು ನೈರ್ಮಲ್ಯ ಮುಂತಾದ ಅಷ್ಟು ಪ್ರಮುಖವಲ್ಲದ ಖಾತೆಗಳನ್ನು ಪ್ರಾಂತೀಯ ಶಾಸನ ಸಭೆಗಳಲ್ಲಿನ ಚುನಾಯಿತ ಸದಸ್ಯರಿಂದ ಆರಿಸಿದ ಮಂತ್ರಿಗಳಿಗೆ 'ವರ್ಗಾಯಿಸಿದರು.'

ಬಹಳ ಮುಖ್ಯವಾದ ಹಣಕಾಸು, ಪೋಲೀಸ್ ಮತ್ತು ಸಾಮಾನ್ಯ ಆಡಳಿತ ಮುಂತಾದುವನ್ನು ಎಕ್ಸಿಕ್ಯೂಟಿವ್ ಕೌನ್ಸಿಲಿನ ಸದಸ್ಯರಿಗಾಗಿ 'ಮೀಸಲಿಟ್ಟರು'. ಭಾರತ ಸರಕಾರಕ್ಕೆ ಹಾಗೂ ಪಾರ್ಲಿಮೆಂಟಿಗೆ ಮಾತ್ರವೇ ಉತ್ತರವಾದಿಗಳಾಗಿರುವ ಅಧಿಕಾರಶಾಹೀ ವರ್ಗದವರಿಗೆ ಅವು ಮೀಸಲಾದುವು. ಕಾರ್ಯಾಂಗದ ಎರಡೂ ಶಾಖೆಗಳಿಗೆ ಗವರ್ನರ್ ಅಧ್ಯಕ್ಷರು. ಆದರೆ ಯಾವಾಗಲೂ ಎರಡೂ ಶಾಖೆಗಳಿಗೆ ಒಟ್ಟಿಗೆ ಅವರು ಅಧ್ಯಕ್ಷರಾಗಿರುತ್ತಿರಲಿಲ್ಲ. ಮಂತ್ರಿಗಳು ತಮಗೆ ಸೇರಿದ ಖಾತೆಗಳ ವಿಷಯದಲ್ಲಿ ಲೆಜಿಸ್ಲೇಟಿವ್ ಕೌನ್ಸಿಲಿಗೆ ಹೊಣೆಗಾರರಾಗಿ ಇರುತ್ತಿದ್ದರು. ಆದರೆ ಗವರ್ನರ್ ಅವರ ಸಲಹೆಯನ್ನು ಒಪ್ಪಿಕೊಳ್ಳಲೇಬೇಕೆಂಬ ಕಡ್ಡಾಯವೇನೂ ಇರುತ್ತಿರಲಿಲ್ಲ. ಕೇಂದ್ರ ಸರಕಾರದ ಲಕ್ಷಣ ಹೇಗಿತ್ತೋ ಹಾಗೆಯೇ ಮುಂದುವರಿಯಿತು. ಗವರ್ನರ್-ಜನರಲ್ಲಿನ ಎಕ್ಸಿಕ್ಯೂಟಿವ್ ಕೌನ್ಸಿಲಿಗೆ ಎರಡನೆಯ ಭಾರತೀಯ ವ್ಯಕ್ತಿಯ ಸೇರ್ಪಡೆಯಾಯಿತು ಅಷ್ಟೆ. ಅದು ಮೊದಲಿನಂತೆಯೇ ಪಾರ್ಲಿಮೆಂಟಿಗೆ ಉತ್ತರವಾದಿಯಾಗಿ ಉಳಿಯಿತು. ಕೇಂದ್ರದಲ್ಲಿ ಎರಡು ಸದನಗಳ ಶಾಸನಸಭೆ. ಕೆಳಮನೆಯಲ್ಲಿ ಚುನಾಯಿತ ಸದಸ್ಯರ ಬಹುಮತ, ಮೇಲ್ಮನೆಯಲ್ಲಿ ಅಧಿಕಾರಿಗಳ ಬಹುಮತ. ಪ್ರಾಂತೀಯ ಶಾಸನ ಸಭೆಗಳೂ ವಿಸ್ತೃತವಾದುವು. ಹೆಚ್ಚು ವಿಶಾಲವಾದ ಮತದಾರ ವರ್ಗದಿಂದ ಚುನಾಯಿತ ಸದಸ್ಯರ ಬಹುಮತ ಅಲ್ಲಿ ಕಾಣಿಸಿಕೊಂಡಿತು. ಕೆಲವು ಆರ್ಥಿಕ ಹಾಗೂ ಶಾಸಕಾಂಗ ಅಧಿಕಾರಗಳನ್ನು ಪ್ರಾಂತಗಳಿಗೆ ವಹಿಸಲಾಯಿತು. ಮಿಕ್ಕ ಅಧಿಕಾರಗಳೆಲ್ಲವನ್ನೂ ಗವರ್ನಮೆಂಟ್ ಆಫ್ ಇಂಡಿಯಾವೇ ಉಳಿಸಿಕೊಂಡಿತು. ಪಂಜಾಬಿನಲ್ಲಿ ಸಿಖ್ಖರಿಗಾಗಿ ಬೇರೆಯೇ ಆಗಿ ಮತದಾರ ವರ್ಗವನ್ನು ವಿಸ್ತರಿಸಲಾಯಿತು.

ಸುಧಾರಣೆಗಳ ಅತ್ಯಂತ ನಿರಾಶಾದಾಯಕ ಅಂಶವೆಂದರೆ, ಅದರ ಅವಕಾಶಗಳಲ್ಲಿ ಗವರ್ನರ್-ಜನರಲ್ಲನ, ಅವನ ಎಕ್ಸಿಕ್ಯೂಟಿವ್ ಕೌನ್ಸಿಲಿನ ಮೇಲೆ ಶಾಸನ ಸಭೆಗೆ ಹೇಳಿಕೊಳ್ಳುವಂತಹ ನಿಯಂತ್ರಣಾಧಿಕಾರ ಇಲ್ಲವಾದದ್ದು. ಆದರೆ ಕೇಂದ್ರ ಸರಕಾರಕ್ಕೆ ಪ್ರಾಂತಗಳ ಮೇಲೆ ಸರ್ವವ್ಯಾಪಿಯಾದ ಅಧಿಕಾರ ಇದ್ದಿತು. ಇದೆಲ್ಲದರ ಜೊತೆಗೆ ಮತದಾನವನ್ನು ಎಷ್ಟುಮಟ್ಟಿಗೆ ಕಟ್ಟುನಿಟ್ಟಿಗೊಳಪಡಿಸಲಾಗಿದ್ದಿತೆಂದರೆ ಅದನ್ನು ಪ್ರಜಾಸತ್ತಾತ್ಮಕ ಎಂದು ಕರೆಯುವುದೇ ಸಾಧ್ಯವಿರಲಿಲ್ಲ. ಉದಾಹರಣೆಗೆ 1920 ರಲ್ಲಿ ಕಳಮನೆಗೆ ಇದ್ದ ಮತದಾರರು ಕೇವಲ 9,09,874 ಮಂದಿ. ಮೇಲ್ಮನೆಗೆ 17,364 ಜನ ಇದ್ದರು.

ವರದಿಯನ್ನು ಪ್ರಕಟಿಸಿದುದು (1918 ರ ಜುಲೈ 8ನೆಯ ತಾರೀಖು) ಮಿತಗಾಮಿಗಳಿಗೆ ತೀವ್ರಗಾಮಿಗಳಿಗೂ ನಡುವೆ ಘರ್ಷಣೆಗೆ ಸಂಕೇತವಾಗಿತ್ತು. ಮಿತಗಾಮಿಗಳು ವರದಿಯನ್ನು ಸ್ವಾಗತಿಸಿದರೆ, ತಿಲಕರು ಅದು "ಸಂಪೂರ್ಣವಾಗಿ ಒಪ್ಪುವುದಕ್ಕೆ ಸಾಧ್ಯವೇ ಇಲ್ಲದುದು" ಎಂದು ಘೋಷಿಸಿದರು. 1918 ರ ಆಗಸ್ಟ್ ತಿಂಗಳಲ್ಲಿ ಮುಂಬಯಿಯಲ್ಲಿ ಸೇರಿದ ಕಾಂಗ್ರೆಸ್ಸಿನ ವಿಶೇಷ ಅಧಿವೇಶನ ಅದನ್ನು "ನಿರಾಶಾದಾಯಕ ಮತ್ತು ಅತೃಪ್ತಿಕರ" ಎಂದು ಕರೆದಿತು. ಕೇಂದ್ರ ಸರಕಾರದ ಹೊಣೆಗಾರಿಕೆಯಾಗಿ, ಭಾರತದ ಆರ್ಥಿಕ ಸ್ವಾತಂತ್ರ್ಯವಾಗಿ ಹೆಚ್ಚುಕಡಮೆ ಸಂಪೂರ್ಣ ಪ್ರಾಂತೀಯ ಸ್ವಯಮಾಡಳಿತ ಕೊಡಬೇಕೆಂದು ಒತ್ತಾಯ ಮಾಡಿತು. ಈ ವೇಳೆಗೆ




ಎನ್.ಸಿ.ಓ. ಸ್ವಯಂಸೇವಕರು ಕಲ್ಕತ್ತಾದ ರಸ್ತೆಗಳಲ್ಲಿ ಮೆರವಣಿಗೆ ಹೋಗುತ್ತಿರುವುದು (1921)



ಮುಂಬೈನಲ್ಲಿ ವಿದೇಶಿ ಬಟ್ಟೆಗಳ ಭಸ್ಮ



ಭಗತ್ ಸಿಂಗ್



ಸೂರ್ಯ ಸೇನ್



ಪೋರ್ಟ್‌ಬ್ಲೈರ್‌ನಲ್ಲಿನ ಸೆರೆಮನೆ

ಸಂಖ್ಯೆ ಬಹಳಮಟ್ಟಿಗೆ ಕಡಮೆಯಾಗಿದ್ದ ಮಿತಗಾಮಿಗಳು ಅಧಿವೇಶನದಲ್ಲಿ ಭಾಗವಹಿಸಲು ಒಪ್ಪಲಿಲ್ಲ. 1918 ರ ನವೆಂಬರಿನಲ್ಲಿ ಬೇರೆಯಾಗಿಯೇ ಅವರು ಸಭೆ ನೆರೆಯಲಿದ್ದರು. ಮುಂದಿನ ವರ್ಷ ಅವರು ತಮ್ಮದೇ ಬೇರೊಂದು ಸಂಸ್ಥೆಯನ್ನು ರೂಪಿಸಿಕೊಂಡರು. ಅದೇ ನ್ಯಾಷನಲ್ ಲಿಬರಲ್ ಫೆಡರೇಷನ್ ಆಫ್ ಇಂಡಿಯಾ (National Liberal Federation of India). ಸುರೇಂದ್ರನಾಥ ಬ್ಯಾನರ್ಜಿ ಅದರ ಅಧ್ಯಕ್ಷರಾದರು. ಆದರೆ ಆ ಸಂಸ್ಥೆ ಇನ್ನು ಮುಂದೆ ರಾಜಕೀಯ ಶಕ್ತಿಯಾಗಿ ಉಳಿಯಲಿಲ್ಲ.

ಗಾಂಧೀಜಿ ಸುಧಾರಣೆಗಳ ಬಗೆಗೆ ಮೊದಲು ತೋರಿಸಿದ ಪ್ರತಿಕ್ರಿಯೆ ಅನುಕೂಲಕರವಾಗಿತ್ತು. ಆದರೆ ರಿಯಾಯಿತಿ-ದಬ್ಬಾಳಿಕೆ ಎಂಬ ನೀತಿಯನ್ನು ಅನುಸರಿಸುತ್ತಿದ್ದ ಸರಕಾರ ಸುಮಾರು ಅದೇ ಸಮಯದಲ್ಲಿ ಬಹಳ ತೀವ್ರವಾದ ದಮನಕಾರಕ ಶಾಸನಗಳನ್ನು ತಂದು ದೊಡ್ಡ ತಪ್ಪು ಮಾಡಿತು. 1905 ರಿಂದ 1918 ರ ವರೆಗಿನ ಕ್ರಾಂತಿ ಚಟುವಟಿಕೆಗಳನ್ನು ಪರೀಕ್ಷಿಸಬೇಕೆಂದು ನಿಯಾಮಿತವಾದ ರೌಲಟ್ ಕಮಿಟಿಯು (Rowlatt Committee) ಕೆಲವು ಕ್ರಮಗಳನ್ನು ಸೂಚಿಸಿತು. ವಿಚಾರಣೆಯಿಲ್ಲದೆ ಸ್ವೇಚ್ಛೆಯಿಂದ ಬಂಧಿಸುವುದು, ಸರಕಾರ ವಿರೋಧೀ ಚಳುವಳಿಗಳಲ್ಲಿ ತೊಡಗಿದ್ದಾರೆಂದು ಸಂದೇಹ ಬಂದವರನ್ನು ಸ್ಥಾನಬದ್ಧತೆಯಲ್ಲಿಡುವುದು ಮತ್ತು ಅವರ ಚಲನವಲನಗಳನ್ನು ನಿಯಂತ್ರಿಸುವುದು ಆ ಕ್ರಮಗಳು. ರಾಜಕೀಯ ಮೊಕದ್ದಮೆಗಳನ್ನು ನ್ಯಾಯದರ್ಶಿ ಮಂಡಳಿ ಇಲ್ಲದೆಯೇ ವಿಚಾರಣೆ ಮಾಡುವ ಅಧಿಕಾರವನ್ನು ನ್ಯಾಯಮೂರ್ತಿಗಳಿಗೆ ಕೊಡಲಾಯಿತು. ಮೇಲು ನ್ಯಾಯಾಲಯಕ್ಕೆ ಅಪೀಲು ಸಾಧ್ಯವೇ ಇರಲಿಲ್ಲ. ಅಪರಾಧಕ್ಕೆ ಗುರಿಮಾಡುವ ದಾಖಲೆಯನ್ನು ವಶದಲ್ಲಿ ಇಟ್ಟುಕೊಂಡಿರುವುದೂ ಶಿಕ್ಷಾರ್ಹವಾಗಿತ್ತು. ಈ ಸೂಚನೆಗಳು ಗಾಂಧೀಜಿಯವರ ಕಣ್ಣು ತೆರೆಸಿದುವು. ಅವರು ಹೇಳಿದರು. "ಈ ಸೂಚನೆಗಳು, ಸಿವಿಲ್ ಸರ್ವಿಸು ನಮ್ಮ ಕುತ್ತಿಗೆಯ ಮೇಲೆ ಇಟ್ಟುಕೊಂಡಿರುವ ತನ್ನ ಹಿಡಿತವನ್ನು ಉಳಿಸಿಕೊಳ್ಳುವುದರ ಪ್ರದರ್ಶನವಾಗಿವೆ. ಈ ಮಸೂದೆಗಳು ನಮ್ಮೆದುರು ಒಡ್ಡಿರುವ ಸವಾಲು ಎಂದು ನನ್ನ ಭಾವನೆ."

### *ಗಾಂಧೀಜಿಯವರ ಪ್ರವೇಶ*

ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ನಿರ್ವಿವಾದ ನಾಯಕರಾಗಿ ಗಾಂಧೀಜಿ ಕಾಣಿಸಿಕೊಂಡದ್ದೇ ಒಂದು ಸ್ವಾರಸ್ಯವಾದ ಕತೆ. ಅವರು ದಕ್ಷಿಣ ಆಫ್ರಿಕಾದಲ್ಲಿನ ಭಾರತೀಯರಿಗಾಗಿ ವೀರಾವೇಶದಿಂದ ಹೋರಾಡಿದ್ದು ಎಲ್ಲರಿಗೂ ತಿಳಿದಿದ್ದ ವಿಷಯ. ಅವರು ಪ್ರಯೋಗಿಸಿದ ಸತ್ಯಾಗ್ರಹದ ನೂತನ ವಿಧಾನವು ಒಳ್ಳೆಯ ಫಲಗಳನ್ನು ಕೊಟ್ಟಿತ್ತು. ಅವರ ವ್ಯಕ್ತಿತ್ವ ಮತ್ತು ಸಂಘಟನಾ ಸಾಮರ್ಥ್ಯಗಳ ಬಗೆಗೆ ವರಿಷ್ಠ ಕಾಂಗ್ರೆಸಿಗರಿಗೆ ಉನ್ನತವಾದ ಅಭಿಪ್ರಾಯವಿತ್ತು. 1915 ರಲ್ಲಿ ಭಾರತಕ್ಕೆ ಬರುವವರೆಗೂ ಕಾಂಗ್ರೆಸ್-ವಲಯಗಳಲ್ಲಿ ಅವರು ಯಾವುದೇ ಪ್ರಮುಖವಾದ ಪಾತ್ರವನ್ನು ವಹಿಸಿರಲಿಲ್ಲ. ಜನಸಾಮಾನ್ಯರಿಗೆ ಅವರ ಪರಿಚಯ ಆಗಿರಲಿಲ್ಲ. ಜವಹರಲಾಲ್ ನೆಹರೂ ಅಂತಹ ಯುವಕರಿಗೆ ಅವರು "ತುಂಬ ದೂರದ,

ಬೇರೆಯೇ ಸ್ವಭಾವದ, ರಾಜಕೀಯವಲ್ಲದ ವ್ಯಕ್ತಿತ್ವ"ವಾಗಿ ತೋರಿದ್ದರು.

ಆದರೆ ಈ ದೂರತೆಯೇ ಒಂದು ವರವಾಗಿತ್ತು. ಜನರು ಮಿತಗಾಮಿಗಳ ವಿಷಯಕ್ಕೆ ಮತ್ತು ಸ್ವಲ್ಪಮಟ್ಟಿಗೆ ತೀವ್ರಗಾಮಿಗಳ ವಿಷಯಕ್ಕೆ ಆದಂತೆ ಗಾಂಧಿಯವರ ಬಗೆಗೆ ಭ್ರಮಿತರಾಗಬೇಕಾಗಲಿಲ್ಲ. ಅವರ ವಿರಕ್ತ ರೀತಿಯ ಅಭ್ಯಾಸಗಳು, ಸಂತಗಾಂಭೀರ್ಯ, ಇಂಗ್ಲಿಷಿಗೆ ಬದಲಾಗಿ ಅವರು ಭಾರತೀಯ ಭಾಷೆಗಳನ್ನು ಉಪಯೋಗಿಸಿದ್ದು, ಧಾರ್ಮಿಕ ವಿಚಾರಗಳು ಇವು ಜನತೆಯ ಮೇಲೆ ಒಳ್ಳೆಯ ಪರಿಣಾಮ ಬೀರಿದುವು. ಜನತೆ ಅವರನ್ನು ಹೃದಯದಲ್ಲಿ ನೆಲೆಗೊಳಿಸಿಕೊಂಡಿತು. ಗಾಂಧಿ ಭಾರತದ ಮಣ್ಣಿನಲ್ಲಿ ಭದ್ರವಾಗಿ ಬೇರುಬಿಟ್ಟಿದ್ದರು. ಈ ಅಂಶದಿಂದಾಗಿ ತಮ್ಮ ಅಪಾರವಾದ ಬಲವನ್ನು ಪಡೆದಿದ್ದರು.

ದಕ್ಷಿಣ ಆಫ್ರಿಕದಲ್ಲಿ ಜನಾಂಗ ಪಕ್ಷಪಾತದ ವಿರುದ್ಧ ನಡೆಸಿದ ಹೋರಾಟದಲ್ಲಿ ತಮ್ಮ ಕಾರ್ಯತತ್ವವಾದ ಸತ್ಯಾಗ್ರಹವನ್ನು ಗಾಂಧೀಜಿ ರೂಪಿಸಿಕೊಂಡಿದ್ದರು. ಅದರ ಎರಡು ಪ್ರಧಾನ ಅಂಶಗಳು ಸತ್ಯ ಮತ್ತು ಅಹಿಂಸೆ. ಅದನ್ನು ಅವರು ಆತ್ಮಶಕ್ತಿ ಅಥವಾ ಪ್ರೇಮಶಕ್ತಿ ಎಂದು ಸೂಚಿಸಿದರು. ಆ ಶಕ್ತಿ ಸತ್ಯ ಮತ್ತು ಅಹಿಂಸೆಯಿಂದ ಹುಟ್ಟಿದುದು ಎಂದರವರು. ಸತ್ಯಾಗ್ರಹಿಯು ತಾನು ಯಾವುದು ತಪ್ಪು ಎಂದು ಪರಿಗಣಿಸುತ್ತಾನೋ ಅದಕ್ಕೆ ಶರಣಾಗಲು ನಿರಾಕರಿಸುತ್ತಾನೆ. ಎಲ್ಲ ಬಗೆಯ ಪ್ರಚೋದನೆಗಳೆದುರಾಗಲೂ ಅವನು ಶಾಂತವಾಗಿರುತ್ತಾನೆ. ಅವನು ದೋಷವನ್ನು ಪ್ರತಿಭಟಿಸುತ್ತಾನೆ; ಆದರೆ ದೋಷಿಯನ್ನು ದ್ವೇಷಿಸುವುದಿಲ್ಲ. ಅವನು ಸತ್ಯವನ್ನು ಎತ್ತಿಹಿಡಿಯುತ್ತಾನೆ, ವಿರೋಧಿಗೆ ಹಿಂಸೆ ಮಾಡುವುದರಿಂದ ಅಲ್ಲ, ತಾನೇ ಯಾತನೆಯನ್ನು ಅನುಭವಿಸುವುದರ ಮೂಲಕ. ಆ ಮೂಲಕ ತಪ್ಪಿತಸ್ಥನ ಆತ್ಮಸಾಕ್ಷಿಯನ್ನು ಪ್ರಚೋದಿಸುವುದು ಸಾಧ್ಯವೆಂದು ಸತ್ಯಾಗ್ರಹಿಯ ಭಾವನೆ. ಯಶಸ್ಸು ಸಾಧಿಸಬೇಕಾದರೆ ಸತ್ಯಾಗ್ರಹಿಯು ಸಂಪೂರ್ಣವಾಗಿ ಭೀತಿ, ದ್ವೇಷ ಮತ್ತು ಸುಳ್ಳುಗಳನ್ನು ಕಳೆದುಕೊಳ್ಳಬೇಕು. ಅವನು ನಿಷ್ಕ್ರಿಯವಾಗಿ ಪ್ರತಿಭಟಿಸುವವನ ಹಾಗಲ್ಲ. ಏಕೆಂದರೆ ಗಾಂಧೀಜಿ ಅನುಕೂಲಸಾಧನೆಗಾಗಿ ಹಿಂಸೆಯನ್ನು ಬಿಡಲಿಲ್ಲ, ಅವರಿಗೆ ಹಿಂಸೆಯ ತ್ಯಾಗ ಒಂದು ತತ್ವ. ನಿಷ್ಕ್ರಿಯ ಪ್ರತಿಭಟನೆ ದುರ್ಬಲರ ಸಾಧನ, ಸತ್ಯಾಗ್ರಹವಾದರೆ ಬಲಿಷ್ಠರಾದವರ ಆಯುಧ ಎಂದರು, ಅವರು.

ಸ್ವದೇಶೀ ಅವರ ಸೂತ್ರ. ಅವರು ಅದನ್ನು ಹೀಗೆ ವಿವರಿಸಿದರು: "ಅದು ನಮ್ಮ ಅಂತರಂಗದಲ್ಲಿರುವ ಒಂದು ಭಾವನೆ. ದೂರದ್ದನ್ನು ಬಿಟ್ಟು, ನಮ್ಮ ಹತ್ತಿರದ ಸುತ್ತುಮುತ್ತಿನ ಉಪಯೋಗ ಮತ್ತು ಅದರ ಸೇವೆಗೆ ನಮ್ಮನ್ನು ಮಿತಗೊಳಿಸುವ ಭಾವನೆ" ಎಂದೇ ಅವರು ದೈಹಿಕಶ್ರಮಕ್ಕೆ ಹೆಚ್ಚು ಮಹತ್ವ ಕೊಟ್ಟರು. ಅದನ್ನು ಅವರು "ಅನ್ನದ ದುಡಿಮೆ ಮತ್ತು ಚರಖಾ" ಎಂದು ಕರೆದರು.

ಸತ್ಯಾಗ್ರಹವು ದಕ್ಷಿಣ ಆಫ್ರಿಕದಲ್ಲಿ ಯಶಸ್ವಿಯಾದರೆ, ಭಾರತದಲ್ಲಿ ಏಕೆ ಅದರ ಪ್ರಯತ್ನ ಮಾಡಬಾರದು? "ಬ್ರಿಟಿಷ್ ಸರಕಾರವು ಒಂದು ಬಲಿಷ್ಠವಾದ ಸರಕಾರವೆಂಬುದರಲ್ಲಿ ನನಗೆ ಸಂದೇಹವಿಲ್ಲ. ಆದರೆ ಸತ್ಯಾಗ್ರಹವು ಪರಮೋತ್ಕೃಷ್ಟ ಪರಿಹಾರ ಎಂಬುದರಲ್ಲೂ ನನಗೆ ಸಂದೇಹವಿಲ್ಲ" ಎಂದರು ಗಾಂಧೀಜಿ. ಅದನ್ನು ಅವರು ಬಿಹಾರದ ಚಂಪಾರಣ್ಯ, ಅಹಮದಾಬಾದ್ ಮತ್ತು ಗುಜರಾತಿನ

ಖೈರಾಗಳಲ್ಲಿ ಪ್ರಯೋಗ ಮಾಡಿದರು.

ಇತರ ರಾಜಕಾರಣಿಗಳು ಸುಧಾರಣೆಗಳ ವಿಷಯವಾಗಿ ಚರ್ಚೆ ನಡೆಸುತ್ತಿದ್ದಾಗ, ಗಾಂಧೀಜಿ ಬಿಹಾರದ ಚಂಪಾರಣ್ಯದ ರೈತರ ಕರೆಗೆ ಓಗೊಟ್ಟು ಮೇಲೆದ್ದರು. ಅಲ್ಲಿನ ರೈತರು ಟಿಂಕಾಥಿಯಾ (Tinkathia) ವ್ಯವಸ್ಥೆಯ ಪ್ರಕಾರ ತಮ್ಮ ನೆಲದ 3/20ನೆಯ ಭಾಗದಲ್ಲಿ ನೀಲಿಯನ್ನು ಬೆಳೆಯಲೇಬೇಕೆಂದು ಕಾನೂನಿತ್ತು. ಅದನ್ನು ಅವರು ಬ್ರಿಟಿಷ್ ಪ್ಲಾಂಟರರಿಗೆ ಅವರು ನಿಷ್ಕರ್ಷಿಸಿದ ಬೆಲೆಗೆ ಮಾರಬೇಕಾಗಿತ್ತು. ಪ್ಲಾಂಟರರು ಅಕ್ರಮವಾದ ಸುಲಿಗೆ ಮತ್ತು ದಬ್ಬಾಳಿಕೆಗಳಿಗೆ ಆ ರೈತರನ್ನು ಒಳಪಡಿಸಿದ್ದರು. ಗಾಂಧೀಜಿ ಬಂಧನದ ಭೀತಿಗೆ ಜಗ್ಗದೆ, ಅವರ ಕಷ್ಟಗಳನ್ನು ವ್ಯವಸ್ಥಿತವಾಗಿ ವಿಚಾರಣೆ ನಡೆಸಿ ಕೇಳಿಕೊಂಡರು. ದೀರ್ಘಕಾಲದಿಂದ ನರಳುತ್ತಿದ್ದ ರೈತರಿಂದ ಖಂಡಿಸಲಾಗದಂತಹ ಸಾಕ್ಷ್ಯಾಧಾರಗಳನ್ನು ಅವರು ಎಷ್ಟುಮಟ್ಟಿಗೆ ಸಂಗ್ರಹಿಸಿ ಮುಂದಿಟ್ಟರೆಂದರೆ, ಸರಕಾರವು ಒಂದು ವಿಚಾರಣಾ ಸಮಿತಿಯನ್ನು ನೇಮಿಸಲೇಬೇಕಾಯಿತು. ಗಾಂಧೀಜಿ ಆ ಸಮಿತಿಯ ಸದಸ್ಯರಲ್ಲಿ ಒಬ್ಬರಾಗಿದ್ದರು. ಇದರ ಫಲಿತಾಂಶ ಆ ಪದ್ಧತಿಯ ನಿರ್ಮೂಲನಕ್ಕಿಂತಲೂ ಹೆಚ್ಚಿನದಾಗಿತ್ತು. ನಿದ್ರಿಸುತ್ತಿದ್ದ ಹಳ್ಳಿಗಳು ಶತಮಾನಗಳ ಜಡತೆಯನ್ನು ಕೊಡವಿ ಮೇಲೆದ್ದವು. ರಾಜೇಂದ್ರ ಪ್ರಸಾದ್, ಮಝರ್-ಉಲ್-ಹಕ್, ಮಹದೇವ ದೇಸಾಯಿ, ಜೆ.ಬಿ. ಕೃಪಲಾನಿ ಮೊದಲಾದ ಯುವಕ ರಾಷ್ಟ್ರೀಯವಾದಿಗಳೂ ಅವರೊಂದಿಗೆ ಚಂಪಾರಣ್ಯದಲ್ಲಿ ಕೆಲಸ ಮಾಡಿದ್ದರು. ಅವರ ಆದರ್ಶವಾದ, ಹಾಗೂ ರಾಜಕೀಯ ಚಟುವಟಿಕೆಯ ಬಗೆಗೆ ಚುರುಕಾದ, ಭೀತಿಯಿಲ್ಲದ, ವಾಸ್ತವಿಕವಾದ ಮತ್ತು ಪ್ರಯೋಗಸಾಧ್ಯವಾದ ವಿಧಾನಗಳಿಂದ ಪ್ರಭಾವಿತರಾಗಿದ್ದರು.

ಗುಜರಾತಿನ ಖೈರಾ (Kaira) ಜಿಲ್ಲೆಯಲ್ಲೂ ಅಂಥದೇ ಅವಕಾಶ ದೊರಕಿತು. 1918 ರಲ್ಲಿ ಆ ಜಿಲ್ಲೆಯಲ್ಲಿ ಬೆಳೆಗಳು ಬರಲಿಲ್ಲ. ಆದರೆ ಅಧಿಕಾರಿಗಳು ಭೂಕಂದಾಯವನ್ನು ಪೂರ್ತಿಯಾಗಿ ಕೊಟ್ಟೇತೀರಬೇಕೆಂದು ಒತ್ತಾಯಮಾಡಿದರು. ಗಾಂಧೀಜಿ ಸತ್ಯಾಗ್ರಹಕ್ಕೆ ರೈತರನ್ನು ಒಟ್ಟುಗೂಡಿಸಿದರು. ಅವರು ಕಂದಾಯ ಕೊಡಲು ನಿರಾಕರಿಸಿ ಅದರ ಪರಿಣಾಮವನ್ನು ಎದುರಿಸಲು ಸಿದ್ಧರಾದರು. ಕೊಡಲು ಶಕ್ತಿಯಿದ್ದವರೂ ಅದೊಂದು ತತ್ವದ ವಿಷಯವೆಂಬಂತೆ ನಿರಾಕರಿಸಿದರು. ಬಲಾತ್ಕಾರ, ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಿಕೆಯೇ ಮೊದಲಾದ ಹೆದರಿಕೆಗಳನ್ನು ಒಡ್ಡಿದರೂ ಫಲವಾಗಲಿಲ್ಲ. ಕೊನೆಗೆ ಸರಕಾರ ಮಣಿಯಲೇಬೇಕಾಯಿತು. ರೈತರೊಂದಿಗೆ ಒಂದು ತೀರ್ಮಾನ ಮಾಡಿಕೊಳ್ಳಬೇಕಾಯಿತು. ಈ ಸಮಯದಲ್ಲಿ ಇಂದುಲಾಲ್ ಯಾಜ್ಞಿಕ್ ಗಾಂಧಿಯವರ ಮುಖ್ಯ ಸಹವರ್ತಿಗಳಲ್ಲಿ ಒಬ್ಬರಾಗಿದ್ದರು. ಆಗತಾನೇ ಮೇಲೆಬರುತ್ತಿದ್ದ ದಿಟ್ಟಮನಸ್ಸಿನ ವಕೀಲ ಸರ್ದಾರ್ ವಲ್ಲಭಭಾಯಿ ಪಟೇಲ್ ಖೈರಾ ಸತ್ಯಾಗ್ರಹದ ಯಶಸ್ಸಿನಿಂದ ಎಷ್ಟುಮಟ್ಟಿಗೆ ಪ್ರಭಾವಿತರಾದರೆಂದರೆ, ಅವರು ಗಾಂಧೀಜಿಯ ಅತ್ಯಂತ ಸಮರ್ಥರಾದ ಅನುಯಾಯಿಗಳಲ್ಲಿ ಒಬ್ಬರಾದರು.

1918 ರಲ್ಲಿ ಅಹಮದಾಬಾದಿನ ಮಿಲ್ ಕೆಲಸಗಾರರೂ ಅವರ ಗಮನ ಸೆಳೆದರು. ಅವರಿಗೆ ಹೆಚ್ಚು ಕೂಲಿ ಕೊಡಲು ಒಪ್ಪದಿದ್ದ ಮಿಲ್ ಮಾಲೀಕರ ವಿರುದ್ಧವಾಗಿ ಗಾಂಧೀಜಿ ಅವರನ್ನು ಮುಷ್ಕರ ಹೂಡುವಂತೆ ಪ್ರೇರೇಪಿಸಿದರು. ಕಾರ್ಮಿಕರು

ಸತ್ವಗುಂದುತ್ತಾರೆಂದು ಕಂಡುಬಂದ ಸಮಯದಲ್ಲಿ ತಾವೇ ಉಪವಾಸ ಕೈಕೊಂಡು ಅವರಿಗೆ ಸ್ಫೂರ್ತಿ ತುಂಬಿದರು. ಅದು ಸಮಸ್ತ ಭಾರತದ ಗಮನವನ್ನು ಅತ್ತ ಸೆಳೆಯಿತು. ಅಹಮದಾಬಾದಿನ ಮಿಲ್ ಮಾಲೀಕರೆಲ್ಲ ಒಟ್ಟು ಸೇರಿ ಈ ಉಪವಾಸ ಸತ್ಯಾಗ್ರಹದ ಪರಿಣಾಮಗಳಿಗೆ ಹೆದರಿದರು. ನಾಲ್ಕನೆಯ ದಿನ ಅವರೆಲ್ಲ ಒಂದು ಒಪ್ಪಂದಕ್ಕೆ ಬಂದು ಕಾರ್ಮಿಕರಿಗೆ ಶೇ. 35 ರಷ್ಟು ಹೆಚ್ಚು ವೇತನ ಕೊಡಲು ಒಪ್ಪಿದರು.

ಸತ್ಯಾಗ್ರಹದ ಈ ಮೊದಮೊದಲ ಪ್ರಯೋಗಗಳು ಗಾಂಧೀಜಿಯವರನ್ನು ಭಾರತದ ಜನಸಾಮಾನ್ಯರ ಹತ್ತಿರಕ್ಕೆ ತಂದುವು. ಗ್ರಾಮಾಂತರ ಪ್ರದೇಶಗಳ ರೈತರು, ನಗರ ಪ್ರದೇಶಗಳ ಕಾರ್ಮಿಕರು ಅವರ ನಿಕಟಸಂಪರ್ಕ ಪಡೆದರು. ರಾಷ್ಟ್ರೀಯತಾ ಚಳುವಳಿಗೆ ಗಾಂಧಿ ನೀಡಿದ ಕೊಡುಗೆಗಳಲ್ಲಿ ಇದು ಅತ್ಯಂತ ಶ್ರೇಷ್ಠವಾದದ್ದು. ಇದುವರೆಗೆ ಇದ್ದ ಪರಿಸ್ಥಿತಿ ಇದು: ವ್ಯಾಪಕವಾದ ಧ್ಯೇಯೋದ್ದೇಶಗಳಿದ್ದರೂ ನಾಯಕರು ಆರ್ಥಿಕವಾದ ಅಂತರ್ದೃಷ್ಟಿಯೊಂದನ್ನು ಹೊಂದಿದ್ದರೂ ಜನ ಸಾಮಾನ್ಯರ ಕಷ್ಟಸಂಕಷ್ಟಗಳನ್ನು, ದಾರಿದ್ರ್ಯವನ್ನು ಕುರಿತು ಅವರು ಎಷ್ಟೇಮಟ್ಟಿಗೇ ವಿಷಯಸಂಗ್ರಹ ಮಾಡಿದ್ದರೂ ಕೂಡ ಒಟ್ಟಿನಲ್ಲಿ ರಾಷ್ಟ್ರೀಯತಾ ಚಳುವಳಿಯು ನಗರಗಳ ಕೆಳಮಧ್ಯಮವರ್ಗ, ಮಧ್ಯಮವರ್ಗ ಹಾಗೂ ವಿದ್ಯಾವಂತರಿಗೆ ಸಂಬಂಧ ಪಟ್ಟ ವಿಷಯವಾಗಿತ್ತು. ಜನಸಾಮಾನ್ಯರ ಕಾರಣವನ್ನು ಬಾಯಲ್ಲಿ ಹೇಳುತ್ತಿದ್ದರೂ, ಚಳುವಳಿಯ ನಾಯಕತ್ವವನ್ನು ಆ ಜನರು ವಹಿಸಿದ್ದರು. ಗಾಂಧೀ ಬರುತ್ತಲೇ ಸಾಮಾನ್ಯಜನತೆ ಇದ್ದಕ್ಕಿದ್ದಂತೆ ಚಳುವಳಿಯಲ್ಲಿ ನೇರವಾಗಿ ಸಕ್ರಿಯವಾಗಿ ಪಾಲುಗೊಳ್ಳುವಂತಾಯಿತು. ಅಲ್ಲದೆ ಜನಸಾಮಾನ್ಯರೊಂದಿಗೆ ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಸಮೀಕರಿಸಿಕೊಂಡ ನಾಯಕ ಗಾಂಧಿಯೊಬ್ಬರೇ ಎಂದು ಕಾಣುತ್ತದೆ. ತಮ್ಮ ವೈಯಕ್ತಿಕ ಜೀವನವನ್ನು ಅವರು ಹಳ್ಳಿಗರಿಗೆ ಪರಿಚಿತವಾದ ವಿಧಾನಗಳಿಗೆ ಅಳವಡಿಸಿಕೊಂಡರು. ಅವರು ಸುಲಭವಾಗಿ ಅರ್ಥಮಾಡಿಕೊಳ್ಳುವ ಭಾಷೆಯಲ್ಲಿ ಮಾತನಾಡಿದರು. ಕಾಲಕ್ರಮದಲ್ಲಿ ಗಾಂಧೀಜಿ ಗ್ರಾಮಾಂತರ ಭಾರತದಲ್ಲಿ ಭಾರೀ ಸಂಖ್ಯೆಗಳಲ್ಲಿ ವಾಸಿಸುತ್ತಿದ್ದ ಬಡವರ, ತುಳಿತಕ್ಕೆ ಸಿಕ್ಕವರ, ದುರ್ಬಲರ ಸಂಕೇತವಾದರು. ಈ ದೃಷ್ಟಿಯಿಂದ ಅವರು ನಿಜವಾಗಿಯೂ ಭಾರತ ವನ್ನು ಪ್ರತಿನಿಧಿಸಿದರು. ಅವರ ಪ್ರಾಮಾಣಿಕತೆಯನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ, ಸಂದೇಹಿಸುವಂತಿರಲಿಲ್ಲ.

ಗಾಂಧೀಜಿಯವರ ಹೃದಯಕ್ಕೆ ಬಹು ಹತ್ತಿರವಾಗಿದ್ದ ಇತರ ಮೂರು ಧ್ಯೇಯಗಳೆಂದರೆ ಹಿಂದೂ-ಮುಸ್ಲಿಂ ಐಕ್ಯತೆ, ಅಸ್ಪೃಶ್ಯತಾ ನಿವಾರಣೆ ಮತ್ತು ಸ್ತ್ರೀಯರ ಸ್ಥಾನಮಾನಗಳನ್ನು ಮೇಲೆತ್ತುವಿಕೆ. ಅವರು 'ಅಸ್ಪೃಶ್ಯರು' ಎಂದು ಕರೆಯಲ್ಪಡು ತ್ತಿದ್ದವರನ್ನು 'ಹರಿಜನರು' ಎಂದು ಕರೆದರು. ಒಮ್ಮೆ ಭಾರತವನ್ನು ಕುರಿತ ತಮ್ಮ ಕನಸನ್ನು ಅವರು ಹೀಗೆ ಬರೆದರು:

"ಅತ್ಯಂತ ದರಿದ್ರರಾದವರೂ ಇದು ತಮ್ಮದು ಎಂದು ಭಾವಿಸಿಕೊಳ್ಳುವ ಭಾರತಕ್ಕಾಗಿ ನಾನು ದುಡಿಯಲು ಇಚ್ಛಿಸುತ್ತೇನೆ. ಆ ಭಾರತ ನಿರ್ಮಾಣದಲ್ಲಿ ಅವರು ಪರಿಣಾಮಕಾರಿಯಾದ ಪಾತ್ರ ಪಡೆದಿರುತ್ತಾರೆ. ಆ ಭಾರತದಲ್ಲಿ ಜನರ ಮೇಲುವರ್ಗ

ಕೀಳುವರ್ಗಗಳಿರುವುದಿಲ್ಲ. ಅಲ್ಲಿ ಎಲ್ಲ ಜನಾಂಗಗಳೂ ಸಂಪೂರ್ಣ ಸಾಮರಸ್ಯದಿಂದ ಜೀವಿಸುತ್ತಾರೆ. ಅಂತಹ ಭಾರತದಲ್ಲಿ ಅಸ್ಪೃಶ್ಯತೆಯ ಶಾಪಕ್ಕೆ ಎಡೆಯಿಲ್ಲ... ಸ್ತ್ರೀಯರು ಪುರುಷರಷ್ಟೇ ಸಮಾನವಾದ ಸ್ಥಾನಮಾನಗಳನ್ನು ಪಡೆದಿರುತ್ತಾರೆ... ಇದೀಗ ನನ್ನ ಕನಸಿನ ಭಾರತ."

ಒಕ್ಕೊರಲಿನ ಸಮಸ್ತ ಭಾರತದ ವಿರೋಧವನ್ನೂ ಲೆಕ್ಕಿಸದೆ ಸರಕಾರ ರೌಲಟ್ ಮಸೂದೆಗಳನ್ನು ಜಾರಿಗೆ ತಂದಾಗ ಗಾಂಧೀಜಿಯವರ ಸಹನ ಮುರಿಯಿತು. ಅದನ್ನು ಸತ್ಯಾಗ್ರಹದ ಮೂಲಕ ಎದುರಿಸಬೇಕೆಂದು ಅವರು ನಿರ್ಧರಿಸಿದರು. ಈ ಬಾರಿ ಅದು ಮಿತವಾದ ಉದ್ದೇಶಗಳಿಂದ ಕೂಡಿದ ಸ್ಥಳೀಯ ಚಳುವಳಿಯಾಗಿರಲಿಲ್ಲ. ಒಂದು ಸತ್ಯಾಗ್ರಹ ಸಭೆಯನ್ನು ಪ್ರಾರಂಭಮಾಡಿ, ದಮನಕಾರೀ ಕಾನೂನುಗಳಿಗೆ ವಿಧೇಯತೆ ತೋರಿಸದಿರಲು ಒಂದು ಪ್ರತಿಜ್ಞೆಯನ್ನು ರೂಪಿಸಿದರು. 1919 ನೆಯ ಏಪ್ರಿಲ್ 6ರಂದು ದೇಶಾದ್ಯಂತ ಹರತಾಳ ಆಚರಿಸಬೇಕೆಂದು ಕರೆಕೊಟ್ಟರು. ಅದರ ಹಿಂದೆಯೇ ಅಸಹಕಾರ ಚಳುವಳಿಯನ್ನು ಹೂಡಿದರು. ಹರತಾಳ ಪ್ರಚಂಡ ಯಶಸ್ಸು ಪಡೆಯಿತು. ಆದರೆ ದೆಹಲಿಯಲ್ಲಿ ನೆರೆದ ಒಂದು ಗುಂಪಿನ ಮೇಲೆ ಗುಂಡುಹಾರಿಸಿದುದರಿಂದ ಹಿಂದೂಗಳೂ ಮುಸ್ಲಿಮರೂ ಅನೇಕ ಸಂಖ್ಯೆಯಲ್ಲಿ ಸತ್ತರು. ದೆಹಲಿಗೆ ಹೋಗುತ್ತಿದ್ದ ಗಾಂಧಿಯವರನ್ನು ಮಧ್ಯದಲ್ಲೇ ತಡದು ಬಲಾತ್ಕಾರದಿಂದ ಮುಂಬಯಿಗೆ ಹಿಂದಕ್ಕೆ ಕಳುಹಿಸಲಾಯಿತು. ಆಮೇಲೆ ಮತ್ತೆ ಗುಂಪು ಕೂಡುತ್ತಿದ್ದ ಜನರಮೇಲೆ ಪೋಲೀಸರು ಆಕ್ರಮಣ ಮಾಡಿದರು. ಅನೇಕ ಸ್ಥಳಗಳಲ್ಲಿ ಗಲಭೆಗಳಾದುವು.

ಆಮೇಲೆ ನಡೆಯಿತು ಜಲಿಯನ್‌ವಾಲಾಬಾಗಿನ ದುರಂತ. ಅಂದು ಏಪ್ರಿಲ್ 13 ನೆಯ ತಾರೀಖು. ಯುದ್ಧ-ಸಾಲಗಳು ಮತ್ತು ಗವರ್ನರ್ ಓ'ಡಯರ್ (O'Dwyer) ಬಲಾತ್ಕಾರವಾಗಿ ಸೇನೆಗೆ ಭರ್ತಿಮಾಡಿಕೊಳ್ಳುತ್ತಿದ್ದ ವಿಧಾನಗಳ ಬಗೆಗೆ ಪಂಜಾಬಿನ ಜನ ಉದ್ರಿಕ್ತರಾಗಿದ್ದರು. ಖಿಲಾಫತ್ ಪ್ರಚಾರದಿಂದ ಮುಸ್ಲಿಮರ ಮನಸ್ಸಿನ ಮೇಲೆ ತುಂಬ ತೀವ್ರವಾದ ಪರಿಣಾಮವುಂಟಾಗಿತ್ತು. ಸರಕಾರವು ಅನಾವಶ್ಯಕವಾಗಿ ಗಾಬರಿಗೊಂಡು ಮುಖ್ಯ ಮುಖಂಡರಾದ ಡಾ|| ಸತ್ಯಪಾಲ್ ಮತ್ತು ಡಾ|| ಸಯಿಫುದ್ದೀನ್ ಕಿಚಲು ಇವರನ್ನು ಬಂಧಿಸಲು ಆಜ್ಞೆ ಮಾಡಿತು. ಫಲಿತಾಂಶ ಅಮೃತಸರದಲ್ಲಿ ಜನರ ಉದ್ರೇಕ ಮೇರೆಮೀರಿದ್ದು, ಪೋಲೀಸರ ಗುಂಡೇಟಿನ ಹಿಂದೆಯೇ ಕೆಲವು ಅಧಿಕಾರಿಗಳ ಕೊಲೆಯಾಯಿತು, ಇಬ್ಬರು ಬ್ರಿಟಿಷ್ ಸ್ತ್ರೀಯರಿಗೆ ತೀವ್ರಗಾಯಗಳಾದುವು. ಮಾರನೆಯ ದಿನ ಜನರು ಪ್ರತಿಭಟಿಸಿ ಜಲಿಯನ್ ವಾಲಾಬಾಗಿನಲ್ಲಿ ಸಭೆ ಸೇರಿದ್ದಾಗ ಜನರಲ್ ಡಯರ್ ಇಡೀ ಪಂಜಾಬನ್ನೇ ಭಯದಿಂದ ನಡುಗಿಸಬೇಕೆಂದು ಬಯಸಿದನು. ಹೊರಕ್ಕೆ ಹೋಗಲು ಯಾವ ದಾರಿಯೂ ಇಲ್ಲದ ಒಂದು ಪಾರ್ಕಿನಲ್ಲಿ ನಿರಾಯುಧರಾಗಿದ್ದ ಜನಸಮೂಹದ ಮೇಲೆ ಮುನ್ನೆಚ್ಚರಿಕೆ ಕೊಡದ ಗುಂಡುಹಾರಿಸಬೇಕೆಂದು ಸೈನ್ಯದಳಗಳಿಗೆ ಆಜ್ಞೆ ಮಾಡಿದನು. ಇದ್ದ ಮದ್ದುಗುಂಡೆಲ್ಲವೂ ಮುಗಿದು ಡಯರ್ ಹಿಂದಿರುಗಿದಾಗ ಸುಮಾರು 1,000 ಜನ ಸತ್ತು, ಹಲವು ಸಾವಿರ ಜನ ತೀವ್ರವಾಗಿ ಗಾಯಗೊಂಡು ಬಿದ್ದಿದ್ದರು. ಅಮೃತಸರದ ಈ ಕಗ್ಗೊಲೆಯನ್ನು ಮಾಂಟೆಗೂ (Montagu) "ಪ್ರತಿಬಂಧಕ ಕೊಲೆ"

ಎಂದು ಕರೆದನು. ಅದನ್ನು ಅನುಸರಿಸಿಯೇ ಹಲವು ಬಗೆಯ ಅಪಮಾನಕಾರಕವಾದ ಆಜ್ಞೆಗಳನ್ನು ಹೊರಡಿಸಲಾಯಿತು. ಅನೇಕ ವಾರಗಳ ಕಾಲ ಕರ್ಫ್ಯೂ ವಿಧಿಸಲಾಯಿತು. ಜನರನ್ನು ಬಹಿರಂಗವಾಗಿ ಅಟ್ಟಿಸಿಕೊಂಡುಹೋಗಿ ಸದೆಬಡಿಯಲಾಯಿತು. ಇಬ್ಬರು ಬ್ರಿಟಿಷ್ ಹೆಂಗಸರ ಮೇಲೆ ಆಕ್ರಮಣ ನಡೆಸಿದ್ದ ಸ್ಥಳದಲ್ಲಿ ಜನರು ತೆವಳಿಕೊಂಡು ಹೋಗಬೇಕೆಂದು ಅಪ್ಪಣೆ ಮಾಡಲಾಯಿತು. ವಿದ್ಯಾರ್ಥಿಗಳು ಹಾಜರಿ ಕೊಡಲು ಪ್ರತಿದಿನವೂ ಹದಿನಾರು ಮೈಲಿ ನಡೆದುಹೋಗಬೇಕಾಯಿತು. ಬಂಧಿತ ವ್ಯಕ್ತಿಗಳನ್ನು ಪಂಜರಗಳಲ್ಲಿ ಕೂಡಿದರು. ಅವರ ಮೇಲೆ ಜಾಮೀನು ತೆಗೆದುಕೊಂಡರು. ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡರು, ಇಲ್ಲವೇ ನಾಶ ಮಾಡಿದರು. ಹಿಂದೂಗಳನ್ನೂ ಮುಸ್ಲಿಮರನ್ನೂ ಜೊತೆಜೊತೆಯಾಗಿ ಕೈಬೇಡಿ ತೊಡಿಸಿ ನಡೆಸಿದರು, ಹಿಂದೂ ಮುಸ್ಲಿಂ ಐಕ್ಯತೆಯ ಗತಿ ಇದು ಎಂದು ತೋರಿಸುವ ಹಾಗೆ. ಮಾರ್ಷಲ್ ಲಾ ಘೋಷಿಸಲಾಯಿತು. ಇವೆಲ್ಲವನ್ನೂ ಪ್ರತಿಭಟಿಸಿ ರವೀಂದ್ರನಾಥ ಟಾಗೋರ್ ಅವರು ಬ್ರಿಟಿಷ್ ಸರಕಾರವು ತಮಗೆ ಕೊಟ್ಟಿದ್ದ ನೈಟ್ ಪ್ರಶಸ್ತಿಯನ್ನು ತಿರಸ್ಕರಿಸಿದರು. ಅವರು ಘೋಷಿಸಿದರು:

> "ಇಂತಹ ಗೌರವ ಸಂಕೇತಗಳು, ಅವಕ್ಕೆ ಎಂದಿಗೂ ಸರಿಹೊಂದದ ಅಪಮಾನದ ಹಿನ್ನೆಲೆಯಲ್ಲಿ ನಮ್ಮ ಹೀನಾಯವನ್ನು ಎತ್ತಿತೋರಿಸುವ ಕಾಲ ಪ್ರಾಪ್ತವಾಗಿದೆ. ನನ್ನ ಮಟ್ಟಿಗೆ ಹೇಳುವುದಾದರೆ, ಎಲ್ಲ ವಿಶಿಷ್ಟ ಗೌರವಗಳನ್ನು ಕತ್ತರಿಸಿ ಎಸೆದು ನನ್ನ ನಾಡಿನ ಜನರ ಜೊತೆಯಾಗಿ ನಿಲ್ಲಬಯಸುತ್ತೇನೆ. ಅಮುಖ್ಯತೆಯಿಂದ ಅವರು ಮಾನವಜೀವಿಗಳಿಗೆ ಸರ್ವಥಾ ತಕ್ಕುದಲ್ಲದ ಕೀಳು ಸ್ಥಿತಿಯನ್ನು ಅನುಭವಿಸಬೇಕಾಗಿ ಬಂದಿದೆ."

ಪಂಜಾಬ್ ದುರಂತವು ಗಾಂಧೀಜಿಯನ್ನು ಭಾರತದ ರಾಜಕೀಯದ ಮುಂಚೂಣಿಗೆ ತಂದಿತು. ಸರಕಾರವು ನೇಮಿಸಿದ್ದ ಲಾರ್ಡ್ ಹಂಟರ್ (Lord Hunter) ನೇತೃತ್ವದ ವಿಚಾರಣಾ ಸಮಿತಿಯನ್ನು ಕಾಂಗ್ರೆಸ್ಸು ಬಹಿಷ್ಕರಿಸಿತು. ಅನೇಕ ಮಿತಗಾಮಿ ರಾಷ್ಟ್ರೀಯತಾವಾದಿಗಳೂ ಈಗ ಗಾಂಧೀಜಿಯವರೊಂದಿಗೆ ಕೂಡಿಕೊಂಡರು.

ಆಗ ದೇಶದಲ್ಲಿ ಮೂಡಿದ್ದ ಮನೋಭಾವ 1919 ರ ಅಮೃತಸರದ ಕಾಂಗ್ರೆಸ್ ಸಮ್ಮೇಳನದಲ್ಲಿ ವ್ಯಕ್ತವಾಯಿತು. ಮಾಂಟ್‌ಫರ್ಡ್ (Montford) ಸುಧಾರಣೆಗಳನ್ನು ತಿರಸ್ಕರಿಸಬೇಕೆಂಬುದು ಸಿ.ಆರ್. ದಾಸರ ಅಭಿಪ್ರಾಯವಾಗಿತ್ತು. ಆದರೆ ತಿಲಕರದು ಸಹಕಾರ ತೋರಿಸಬೇಕೆಂಬ ಭಾವನೆ. ಕೊನೆಗೆ ರಾಜಿಯಾಗಿ ಕಾಂಗ್ರೆಸ್ಸು ಪೂರ್ಣ ಪ್ರಮಾಣದ ಜವಾಬ್ದಾರಿ ಸರಕಾರ ಸ್ಥಾಪನೆಗೆ ಹೇಗೆ ಬೇಕೋ ಹಾಗೆ ಸುಧಾರಣೆಗಳನ್ನು ಕುರಿತು ವ್ಯವಹರಿಸಬೇಕು ಎಂದು ತೀರ್ಮಾನಿಸಿತು. ಆದರೆ ಸಿ.ಆರ್. ದಾಸ್ ತಮ್ಮ ಅಭಿಮತವನ್ನು ಸ್ಪಷ್ಟಪಡಿಸಿದರು: "ತಡೆಮಾಡುವುದರಿಂದ ನಮ್ಮ ರಾಜಕೀಯ ಧ್ಯೇಯ ಸಾಧಿತವಾಗುವುದಾದ ಪಕ್ಷದಲ್ಲಿ ಅದಕ್ಕೆ ತಾವು ವಿರೋಧಿಯಲ್ಲ."

ಈ ಸಮಯದಲ್ಲಿ ಗಾಂಧೀಜಿಯವರನ್ನು ನಿಧಾನವಾಗಿ ಖಿಲಾಫತ್ ಚಳುವಳಿಗೆ ಸೆಳೆಯಲಾಗುತ್ತಿತ್ತು. ಆ ವೇದಿಕೆಯಿಂದ ಸದ್ಯದಲ್ಲೇ ಅವರು ಸರಕಾರದ ವಿರುದ್ಧ ಅಸಹಕಾರ ಸಾರುವವರಿದ್ದರು. ದಕ್ಷಿಣ ಆಫ್ರಿಕಾದಲ್ಲಿ ಇದ್ದಾಗಿನಿಂದಲೂ ಅವರಿಗೆ

ಹಿಂದೂ-ಮುಸ್ಲಿಂ ಐಕ್ಯತೆಯಲ್ಲಿ ಆಸಕ್ತಿ. ಅವರ ಅಭಿಪ್ರಾಯದಲ್ಲಿ ಲಕ್ನೋ ಒಪ್ಪಂದ ಆ ಐಕ್ಯತೆಗೆ ಸಾಕಾಗುವಷ್ಟು ಆಧಾರ ಒದಗಿಸಲಿಲ್ಲ. ಆಲಿ ಸಹೋದರರೊಂದಿಗೆ ಅವರು ಸಂಪರ್ಕ ಬೆಳೆಸಿಕೊಂಡರು, ಖಿಲಾಫತ್ ಬಗೆಗೆ ಅವರ ಬೇಡಿಕೆ ನ್ಯಾಯವಾದದ್ದು ಎಂದು ತೀರ್ಮಾನಿಸಿಕೊಂಡರು. ಈ ವೇಳೆಗೆ ವರ್ಸೇಲ್ಸ್ ಕರಾರು ಟರ್ಕಿ ಸಾಮ್ರಾಜ್ಯವನ್ನು ಸದಸ್ಯತ್ವದಿಂದ ಬಿಡಿಸಿ ಚಳುವಳಿಯ ಅಲಗನ್ನು ಹರಿತಮಾಡಿತ್ತು. ಸುಲ್ತಾನನಿಗೆ ಉಳಿದ ಪ್ರದೇಶಗಳ ಮೇಲೆ ಕೂಡ ನಿಜವಾದ ಅಧಿಕಾರ ಎಂಬುದು ಇರಲಿಲ್ಲ. ಭಾರತದ ಮುಸ್ಲಿಮರು ಟರ್ಕಿಷ್ ನೀತಿಯನ್ನು ಬದಲಾಯಿಸುವಂತೆ ಬ್ರಿಟನನ್ನು ಒತ್ತಾಯಮಾಡಲು ನಿರ್ಧರಿಸಿದರು. ಮೌಲಾನಾ ಆಜಾದ್, ಹಕೀಮ್ ಅಜ್ಮಲ್ ಖಾನ್ ಮತ್ತು ಹಜರತ್ ಮೊಹಾನಿ ಅವರ ನೇತೃತ್ವದಲ್ಲಿ ಒಂದು ಖಿಲಾಫತ್ ಸಮಿತಿ ರಚಿತವಾಯಿತು. ಅದಕ್ಕೆ ನೆರವಾಗಬೇಕೆಂದು ಗಾಂಧೀಜಿ ಬಯಸಿದರು. ಅವರ ದೃಷ್ಟಿಯಲ್ಲಿ ಖಿಲಾಫತ್ ಚಳುವಳಿ "ಹಿಂದೂಗಳನ್ನು ಮಹಮದೀಯರನ್ನೂ ನೂರು ವರ್ಷಗಳ ಕಾಲಾವಧಿಯೂ ಒಂದುಗೂಡಿಸಲು ಸಾಧ್ಯವಿಲ್ಲದಷ್ಟು ಉತ್ತಮವಾಗಿ ಒಂದು ಗೂಡಿಸಿ ಐಕ್ಯತೆ ಸಾಧಿಸಲು ಒಂದು ಅವಕಾಶವಾಗಿತ್ತು." ಗಾಂಧೀಜಿ ಅದನ್ನು ಸರಳವಾಗಿ ಹೃದಯಗಳ ಮಿಲನ ಎಂಬಂತೆ ನೋಡಿದರು. ಅವರು **ಯಂಗ್ ಇಂಡಿಯಾ**ದಲ್ಲಿ ಬರೆದರು: "ನಾನು ಮಹಮದೀಯನನ್ನು ನನ್ನ ಸಹೋದರನೆಂದು ಭಾವಿಸುವುದಾದರೆ, ಅವನ ಅಪಾಯದ ಸಮಯದಲ್ಲಿ ಅವನ ನಿಲುವು ನ್ಯಾಯಯುತವಾದದ್ದೆಂದು ನನಗೆ ಮನವರಿಕೆಯಾದರೆ, ನನ್ನ ಶಕ್ತಿಯಿರುವಷ್ಟು ಮಟ್ಟಿಗೂ ನೆರವಾಗುವುದು ನನ್ನ ಕರ್ತವ್ಯವಾಗಿರುತ್ತದೆ."

1919 ರ ನವೆಂಬರಿನಲ್ಲಿ ಗಾಂಧೀಜಿ ಖಿಲಾಫತ್ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದರು. ಆ ಸಮ್ಮೇಳನವು ಮುಸ್ಲಿಮರಿಗೆ ಮಿತ್ರರಾಷ್ಟ್ರಗಳ ವಿಜಯೋತ್ಸವ ಸಮಾರಂಭಗಳಲ್ಲಿ ಭಾಗವಹಿಸಕೂಡದೆಂದು ಕರೆಕೊಟ್ಟಿತು. ಬ್ರಿಟಿಷರು ಟರ್ಕಿಗೆ ನ್ಯಾಯ ತೋರಿಸದೆ ಹೋದರೆ ಬಹಿಷ್ಕಾರ, ಅಸಹಕಾರಗಳನ್ನು ನಡಸುವುದಾಗಿ ಬೆದರಿಕೆ ಹಾಕಿತು. ಖಿಲಾಫತ್‌ಗಾಗಿ ಹಾಗೂ ಹಿಂದೂ ಮುಸ್ಲಿಂ ಐಕ್ಯತೆಗಾಗಿ ಬೆಂಬಲ ಕೋರಿ, ಆಜಾದ್, ಅಕ್ರಮ್‌ಖಾನ್ ಮತ್ತು ಫಜ್‌ಲುಲ್ ಹಕ್ ಇವರು ಬಂಗಾಳದಲ್ಲಿ ಪ್ರವಾಸಮಾಡಿದರು. ದೇವೋಬಂದ್ ಶಾಲೆಯ ಮೌಲಾನಾಗಳೂ, ಲಕ್ನೋದ ಉಲೇಮಾಗಳೂ ಉತ್ತರ ಭಾರತದಲ್ಲಿ ಅದನ್ನೇ ಮಾಡಿದರು. ಅಮೃತಸರ ಕಾಂಗ್ರೆಸ್ ಸಮ್ಮೇಳನ ಮತ್ತು ಮುಸ್ಲಿಂ ಲೀಗ್ ಎರಡೂ ಚಳುವಳಿಗೆ ಪೂರ್ಣ ಬೆಂಬಲ ನೀಡಿದುವು. 1920 ರ ಮೊದಲಲ್ಲಿ ಹಿಂದೂ-ಮುಸ್ಲಿಂ ಜಂಟಿ ನಿಯೋಗವೊಂದು ವೈಸರಾಯ್ ಅವರನ್ನು ಭೇಟಿಮಾಡಿತು. ಅವರಿಗೆ ದೊರೆತ ಬಿಚ್ಚುಮಾತಿನ ಉತ್ತರ, ಆಸೆಯನ್ನು ಬಿಟ್ಟುಬಿಡಬೇಕು ಎಂಬುದು. ಆಮೇಲೆ ಇಂಗ್ಲಂಡಿಗೆ ಒಂದು ನಿಯೋಗವನ್ನು ಕಳುಹಿಸಲಾಯಿತು. ಆದರೆ ಪ್ರಧಾನ ಮಂತ್ರಿ ಲಾಯ್ಡ್ ಜಾರ್ಜ್, ಸೋತ ಕ್ರಿಶ್ಚಿಯನ್ ದೇಶಗಳನ್ನು ಹೇಗೋ ಹಾಗೆಯೇ ಟರ್ಕಿಯನ್ನೂ ನಡೆಸಿಕೊಳ್ಳಲಾಗುತ್ತದೆಯೇ ಹೊರತು ಬೇರೆಯಾಗಿ ಅಲ್ಲ ಎಂದು ಕಡ್ಡಿ ತುಂಡಾದಂತೆ ಉತ್ತರಪಿತ್ತರು. ಸೆವರ್ಸ್ (Sevres) ಕರಾರಿನ ಷರತ್ತುಗಳು ಮೇ

ತಿಂಗಳ ಮಧ್ಯಭಾಗದಲ್ಲಿ ಪ್ರಕಟವಾದುವು. ಟರ್ಕಿಯು ಕಾನ್‌ಸ್ಟೆಂಟಿನೋಪಲನ್ನು ಉಳಿಸಿಕೊಂಡಿತು. ಆದರೆ ಗಾತ್ರದಲ್ಲೂ ಜನಸಂಖ್ಯೆಯಲ್ಲೂ ಅಪಾರವಾಗಿ ಕುಗ್ಗಿತು. ಖಿಲಾಫತ್ ಪ್ರಕರಣಕ್ಕೆ ಸಂಬಂಧಿಸಿದಂತೆ ಒಂದು ಸತ್ಯಾಗ್ರಹ ಚಳುವಳಿ ಹೂಡಲು ಗಾಂಧೀಜಿ ನಿರ್ಧರಿಸಿದರು. ಈ ಅಸಹಕಾರ ಚಳುವಳಿಯನ್ನು ಆಗಸ್ಟ್ 1 ನೆಯ ದಿನದಂದು ಪ್ರಾರಂಭಿಸಲಾಯಿತು.

ಅದರ ಯಶಸ್ಸಿಗೆ ಕಾಂಗ್ರೆಸ್ಸಿನ ಸಹಕಾರ ಅಗತ್ಯವಾಗಿತ್ತು. ಅಂತಿಮವಾಗಿ ಅದು ತೀರ್ಮಾನ ಕೈಗೊಳ್ಳುವಂತೆ ಒಲಿಸಲು ಗಾಂಧೀಜಿಗೆ ತುಂಬಾ ಕಷ್ಟವೇ ಆಯಿತು. ಗಾಂಧೀಜಿಯವರ ಕರೆ ಮಿತಗಾಮಿ ತೀವ್ರಗಾಮಿ ಎರಡೂ ಪಕ್ಷಗಳನ್ನು ಆಕರ್ಷಿಸಿತು. ಕಾರಣ, ಅವರು ಮೊದಲನೆಯದರ ಗುರಿಯಾದ ಸಾಮ್ರಾಜ್ಯದಲ್ಲಿಯೇ ಸ್ವರಾಜ್ಯ ಎಂಬುದನ್ನು, ಎರಡನೆಯದರ ದಾರಿಯಾದ ಅಸಹಕಾರದೊಂದಿಗೆ ಬಹಳ ಜಾಣ್ಮೆಯಿಂದ ಕೂಡಿಸಿದ್ದರು. ಕ್ರಾಂತಿಕಾರಿ ಭಯೋತ್ಪಾದಕರೂ ಕೂಡ ಅವರಿಗೆ ಒಂದು ಅವಕಾಶ ಕೊಟ್ಟು ನೋಡೋಣ ಎಂದುಕೊಂಡರು. ಗುಜರಾತು ಮತ್ತು ಬಿಹಾರ ಕಾಂಗ್ರೆಸ್ ಸಮಿತಿಗಳು ಆಗಲೇ ಅವರ ನಿಲುವನ್ನು ಒಪ್ಪಿದ್ದುವು.

1920 ರ ಆಗಸ್ಟ್ ತಿಂಗಳಿನಲ್ಲಿ ತಿಲಕರು ನಿಧನರಾದರು. ಇದರಿಂದ ದಿಟ್ಟ ವಿಮರ್ಶಕರೊಬ್ಬರು ರಂಗದಿಂದ ಆಚೆ ಸರಿದಂತಾಯಿತು. ಸಿ.ಆರ್. ದಾಸರು ಮನಸ್ಸಿನಲ್ಲಿ ಬಿಗುಮಾನ ತಾಳಿದ್ದರೂ ಕೂಡ ಗಾಂಧೀಜಿಯವರು ಬಲಿದಾನ ಮತ್ತು ತ್ಯಾಗಗಳಿಗೆ ಕೊಟ್ಟ ಕರೆ ಅವರ ಭಾವನೆಗಳ ಮೇಲೆ ತೀವ್ರ ಪರಿಣಾಮ ಮಾಡಿದುವು. ಕಲ್ಕತ್ತಾ ಕಾಂಗ್ರೆಸ್ಸಿನ ವಿಶೇಷ ಅಧಿವೇಶನ (1920 ರ ಸೆಪ್ಟಂಬರ್ 4-9) ಅದರ ಆಗುಹೋಗುಗಳ ವಿಚಾರವಾಗಿ ಬಿರುಸಾದ ಚರ್ಚೆ ನಡೆಸಿತು. ಗಾಂಧೀಜಿ ಲೆಜಿಸ್ಲೇಟಿವ್ ಕೌನ್ಸಿಲುಗಳ ಬಹಿಷ್ಕಾರವನ್ನು ಸೂಚಿಸಿದಾಗ ದಾಸ್ ಅವರಿಗೆ ಸವಾಲು ಹಾಕಿದರು: "ಇವು (ಸುಧಾರಣೆಗಳು) ಬ್ರಿಟಿಷ್ ಸರಕಾರ ಕೊಟ್ಟ ಉಡುಗೊರೆಗಳಲ್ಲ. ಅವುಗಳನ್ನು ಬ್ರಿಟಿಷರ ಕೈಯಿಂದ ಕಿತ್ತುಕೊಂಡಿದ್ದೇವೆ. ಕೌನ್ಸಿಲುಗಳನ್ನು ಸ್ವರಾಜ್ಯ ಸಾಧನೆಗೆ ಉಪಕರಣವಾಗಿ ಬಳಸಬೇಕೆಂಬುದು ನನ್ನ ಇಚ್ಛೆ. ನಿಮ್ಮ ಅಂಗೈಯಲ್ಲಿರುವ ಆಯುಧವನ್ನು ಪೂರ್ಣ ಸ್ವರಾಜ್ಯವನ್ನು ತರುವುದಕ್ಕಾಗಿ ಪ್ರಯತ್ನಿಸಬೇಕು." ಅವರು ಕೌನ್ಸಿಲನ್ನು ಸೇರಲು ಇಚ್ಛಿಸಿದರು, ಸಹಾಯ ಮಾಡುವುದಕ್ಕಲ್ಲ, ಅಲ್ಲಿ ಮುಜುಗರ ಉಂಟುಮಾಡುವುದಕ್ಕಾಗಿ. ಅದು ಒಳಗಿನಿಂದ ಮೂಡಿದ ಒಂದು ಬಗೆಯ ಅಸಹಕಾರವಾಗಲಿತ್ತು. ಲಜಪತ್ ರಾಯ್ ಶಾಲೆಗಳ ಬಹಿಷ್ಕಾರದ ವಿರುದ್ಧ ವಾಗಿದ್ದರು. ಬಿಪಿನ್ ಚಂದ್ರಪಾಲ್ ಜಾಗರೂಕತೆಯನ್ನು ಸಿದ್ಧತೆ ಮಾಡಿಕೊಳ್ಳ ಬೇಕೆಂದರು. ಆದರೆ ಮೋತಿಲಾಲ್ ನೆಹರೂ ತಮ್ಮ ಅಭಿಪ್ರಾಯವನ್ನು ಗಾಂಧೀಜಿಯವರ ಕಡೆಗೆ ಒಲಿಸಿದರು. ಇನ್ನೊಂದು ಸಂಧಾನ ನಡೆಯಿತು. ಶಾಲೆಗಳ ಮತ್ತು ನ್ಯಾಯಾಲಯಗಳ ಬಹಿಷ್ಕಾರ ನಿಧಾನವಾಗಿ 'ಕ್ರಮೇಣ' ಆಗತಕ್ಕದ್ದೆಂದು ತೀರ್ಮಾನವಾಯಿತು. ಚುನಾವಣೆಗಳಿಗೆ ನಿಂತಿದ್ದ ಅಭ್ಯರ್ಥಿಗಳು ಹಿಂತೆಗದು ಕೊಳ್ಳಬೇಕು, ಮತದಾರರು ಮತ ನೀಡಲು ನಿರಾಕರಿಸಬೇಕು ಎಂದಾಯಿತು. ಧ್ಯೇಯಗಳಲ್ಲಿ ಸ್ವರಾಜ್ಯವೂ ಸೇರಿತ್ತು. ಅಂತಿಮ ನಿರ್ಧಾರವನ್ನು ನಾಗಪುರ ಕಾಂಗ್ರೆಸ್ ಕೈಗೊಳ್ಳಲಿತ್ತು.

ಹೀಗಾಗಿ ನೂತನ ಸುಧಾರಣೆಗಳ ಪ್ರಕಾರ ಮೊದಲನೆಯ ಚುನಾವಣೆಗಳು ನಡೆದಾಗ ಕಾಂಗ್ರೆಸ್ಸು ಪ್ರಚಾರಮಾಡಲು ಸಾಧ್ಯವಾಗಲಿಲ್ಲ. ದಾಸ್ ಅದನ್ನು ನಾಗಪುರದಲ್ಲಿ ಮೃತವಿಷಯ ಎಂದು ಭಾವಿಸಿದರು. ಜಲಿಯನ್‌ವಾಲಾಬಾಗ್ ಘಟನೆ ನಡೆದಾಗ ಪಂಜಾಬಿನ ಗವರ್ನರನಾಗಿದ್ದ ಓ. ಡ್ವೈಯರ್‌ನನ್ನು ದೋಷ ಮುಕ್ತನನ್ನಾಗಿ ಮಾಡಿದ್ದು ಮತ್ತು ಪೂರ್ಣ ಪ್ರಮಾಣದ ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಬ್ರಿಟಿಷರು ತಿರಸ್ಕರಿಸಿದ್ದು - ಇವುಗಳಿಂದ ಗಾಂಧಿಯವರ ನಿಲುವಿಗೆ ಪುಷ್ಟಿ ದೊರೆತಂತಾಯಿತು. ತಮ್ಮ ಬಂಗಾಳೀ ಪಾಲನ್ನು ಸರಿತೂಗಿಸಿಕೊಂಡು ಹೋಗುವುದು ಸಾಧ್ಯವಿಲ್ಲ ಎಂದು ದಾಸ್ ಅವರಿಗೆ ಮನವರಿಕೆಯಾಯಿತು. ಮಹಮ್ಮದ್ ಆಲಿ ಒಂದು ರಾಜಿ ಸೂತ್ರವನ್ನು ಸೂಚಿಸಿದರು. ದಾಸ್ ಒಂದು ರೀತಿಯ ಅಸಹಕಾರ ನಿರ್ಣಯವನ್ನು ಮಂಡಿಸಿದರು. ಅದರ ಪ್ರಕಾರ ಇಡೀ ಯೋಜನೆ, ಸರಕಾರದೊಂದಿಗೆ ಎಲ್ಲ ರೀತಿಯ ಸ್ವಯಂಪ್ರೇರಿತ ಸಹಕಾರವನ್ನೂ ತ್ಯಜಿಸುವುದು ಒಂದು ಕಡೆಯಾದರೆ ಇನ್ನೊಂದು ಕಡೆ ತೆರಿಗೆಗಳನ್ನು ಕೊಡಲು ನಿರಾಕರಿಸುವುದು-ಈ ಯೋಜನೆಯನ್ನು ಕಾಂಗ್ರೆಸ್ ಸೂಕ್ತವೆಂದು ನಿರ್ಧರಿಸಿದ ಸಮಯದಲ್ಲಿ ಜಾರಿಗೆ ತರುವುದು, ಕೌನ್ಸಿಲುಗಳಿಗೆ ರಾಜೀನಾಮೆ ಕೊಡುವುದು, ವಕೀಲ ವೃತ್ತಿಯ ತ್ಯಾಗ, ಶಿಕ್ಷಣದ ರಾಷ್ಟ್ರೀಕರಣ, ಆರ್ಥಿಕ ಬಹಿಷ್ಕಾರ, ರಾಷ್ಟ್ರಸೇವೆಗಾಗಿ ಕಾರ್ಯಕರ್ತರ ಸಂಘಟನೆ, ರಾಷ್ಟ್ರೀಯ ನಿಧಿಯೊಂದರ ಸಂಗ್ರಹಣ ಮತ್ತು ಹಿಂದೂ ಮುಸ್ಲಿಂ ಐಕ್ಯತೆ-ಇವು ಆ ಯೋಜನೆಯ ವಿವಿಧ ಹಂತಗಳಾಗಿ ಸೂಚಿಸಲ್ಪಟ್ಟುವು. ಮಾಲವೀಯ ಮತ್ತು ಜಿನ್ನಾ ಸ್ವರಾಜ್ಯದ ಗುರಿಯನ್ನು ವಿರೋಧಿಸಿದರು. ಏಕೆಂದರೆ, ಸಾಮ್ರಾಜ್ಯದೊಂದಿಗೆ ಯಾವುದಾದರೂ ಒಂದು ರೀತಿಯ ಸಂಬಂಧವನ್ನು ಉಳಿಸಿಕೊಳ್ಳಲಾಗುತ್ತದೆಯೆ ಇಲ್ಲವೆ ಎಂಬುದನ್ನು ಸ್ಪಷ್ಟಪಡಿಸಿರಲಿಲ್ಲ. ಆದರೆ "ಬರುವ ವರ್ಷ ಉಗ್ರ ಹೋರಾಟ" ಎಂದು ಗಾಂಧೀಜಿ ನೀಡಿದ ಭರವಸೆ ಪರಿಸ್ಥಿತಿಯನ್ನು ಅಂದಿಗೆ ಮುನ್ನೂಕಿತು. ಗಾಂಧೀಜಿಯವರ ವಿರುದ್ಧವಾಗಿ ಕೇವಲ ಎರಡು ಮತಗಳು ಬಿದ್ದುವು.

ನಾಗಪುರ ಸಮ್ಮೇಳನವು ಕಾಂಗ್ರೆಸ್ ಸಂಸ್ಥೆಗೆ ನೂತನವಾದೊಂದು ಸಂವಿಧಾನವನ್ನು ಕೊಟ್ಟು ಅದರ ರಚನೆಯಲ್ಲೇ ಒಂದು ಕ್ರಾಂತಿಯನ್ನು ಉಂಟುಮಾಡಿತು. ಈಗ ಕಾಂಗ್ರೆಸ್ ಆಡಕವಾದ, ಪರಿಣಾಮಕಾರಿಯಾದ ರಾಜಕೀಯ ಸಂಸ್ಥೆಯಾಯಿತು. 15 ಜನ ಸದಸ್ಯರ ಒಂದು ಕಾರ್ಯಕಾರೀ ಸಮಿತಿ, 350 ಜನರಿದ್ದ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಮತ್ತು ಜಿಲ್ಲೆಗಳು, ಪಟ್ಟಣಗಳು, ತಾಲ್ಲೂಕುಗಳು ಮತ್ತು ಗ್ರಾಮಗಳಿಗೂ ಬೇರುಬಿಟ್ಟ ಪ್ರಾಂತೀಯ ಸಂಸ್ಥೆಗಳು ರೂಪುಗೊಂಡುವು. ಕಾರ್ಯಕಾರೀ ಸಮಿತಿಯು ಒಂದೇ ರೀತಿಯ ಜನರಿಂದ ಕೂಡಿದ್ದು ಇಡೀ ವರ್ಷಕಾರ್ಯ ಚಟುವಟಿಕೆಯಲ್ಲಿ ಮಗ್ನವಾಗಿರುತ್ತಿತ್ತು. ಅದರ ನಿರ್ಣಯಗಳು ಬಹುಮಟ್ಟಿಗೆ ಸರ್ವಾನುಮತದಿಂದ ಆಗುತ್ತಿದ್ದುವು. ಬಹಳ ಮುಖ್ಯವಾದ ವಿಚಾರಗಳನ್ನು ಎ.ಐ.ಸಿ.ಸಿ. (ಅಖಿಲ ಭಾರತ ಕಾಂಗ್ರೆಸ್ ಕಮಿಟಿ) ಚರ್ಚಿಸುತ್ತಿತ್ತು. ಅದು ಕಾರ್ಯಕಾರೀ ಸಮಿತಿಯ ನಿರ್ಧಾರಗಳನ್ನು ಪರಿಶೀಲನೆ ಮಾಡುತ್ತಿತ್ತು, ಅದಕ್ಕಿಂತ ಉನ್ನತವಾದ ಅಧಿಕಾರಗಳೂ ಎ.ಐ.ಸಿ.ಸಿ.ಗೆ ಇದ್ದುವು. ಪ್ರಾಂತೀಯ

ಸಮಿತಿಗಳನ್ನು ಭಾಷಾವಾರು ಆಧಾರದ ಮೇಲೆ ಪುನರ್ವ್ಯವಸ್ಥೆ ಮಾಡಲಾಯಿತು. ಪ್ರತಿ ಪ್ರದೇಶಕ್ಕೂ ಒಂದೊಂದು ಅಂತಹ ಸಮಿತಿ ಇರುತ್ತಿತ್ತು. ಐದು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರು ಇದ್ದ ಹಳ್ಳಿಗಳೆಲ್ಲವೂ ಒಂದೊಂದು ಯೂನಿಟ್ಟುಗಳಾಗುತ್ತದ್ದುವು; ಅವುಗಳ ಮೇಲೆ ವಲಯ ಯೂನಿಟ್ಟುಗಳಿರುತ್ತಿದ್ದುವು. ಇನ್ನೂ ಮೇಲೆ ತಾಲ್ಲೂಕು ಯೂನಿಟ್ಟುಗಳು, ಜಿಲ್ಲಾ ಯೂನಿಟ್ಟುಗಳು ಹೀಗೆ ಅನುಲೋಮ ರೀತಿಯಲ್ಲಿ ಇರುತ್ತಿದ್ದುವು. ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನಕ್ಕೆ ಪ್ರತಿನಿಧಿಗಳನ್ನು 50,000 ಕ್ಕೆ ಒಬ್ಬರೆಂಬ ಆಧಾರದಮೇಲೆ ಚುನಾಯಿಸಲಾಗುತ್ತಿತ್ತು. ಇದು ಕಾಂಗ್ರೆಸ್ಸನ್ನು ಹೆಚ್ಚು ಪ್ರಾತಿನಿಧಿಕವಾದ ಸಂಸ್ಥೆಯಾಗಿರುವಂತೆ ಮಾಡಿತು. ಅದರ ಸದಸ್ಯ ಸಂಖ್ಯೆ ಎಲ್ಲೆಯಿಲ್ಲದೆ ಬೆಳೆಯಿತು. ವಾರ್ಷಿಕ ಸದಸ್ಯತ್ವ ಶುಲ್ಕ ಕೇವಲ ನಾಲ್ಕು ಆಣೆ. ಅದೂ ಕಡ್ಡಾಯವಾಗಿರಲಿಲ್ಲ. ಕಾಂಗ್ರೆಸ್ಸಿನ ಧ್ಯೇಯವನ್ನು ಒಪ್ಪಿಕೊಳ್ಳುವುದು, ಅದರ ತತ್ವಗಳನ್ನು ಪಾಲಿಸುವುದು, ಸದಸ್ಯತ್ವಕ್ಕೆ ಇದಿಷ್ಟೇ ಸಾಕಾಗಿತ್ತು. ಇದು ಕಾಂಗ್ರೆಸ್ ಪಕ್ಷವನ್ನು ಭಾರತದ ಕೋಟ್ಯಂತರ ಬಡಜನರ ಎಟುಕಿಗೆ ತಂದಿತು. ಸದಸ್ಯತ್ವದ ಕನಿಷ್ಠ ವಯಸ್ಸನ್ನು 18 ಕ್ಕೆ ಇಳಿಸಿದಾಗ ಸಂಸ್ಥೆ ಹೆಚ್ಚು ಯುವಶಕ್ತಿಯಿಂದ ಕೂಡಿತು. ಕಾಂಗ್ರೆಸ್ಸನ್ನು ಸೇರಿದ ಮುಸ್ಲಿಮರು ಮತ್ತು ಸ್ತ್ರೀಯರ ಸಂಖ್ಯೆಯಲ್ಲಿ ಸ್ಪಷ್ಟವಾದ ಹೆಚ್ಚಳ ಕಂಡುಬಂತು. 1923 ರ ವೇಳೆಗೆ ಗ್ರಾಮೀಣ ಜನರ ಸದಸ್ಯತ್ವ ಸಂಖ್ಯೆ ನಗರಗಳ ಸದಸ್ಯರ ಸಂಖ್ಯೆಗಿಂತ ಇಮ್ಮಡಿಯಾಗಿತ್ತು. ಮೂಲಭೂತ ವ್ಯತ್ಯಾಸ ಇದ್ದುದು ಕೇವಲ ಸಂಸ್ಥೆಯ ಸಾಮಾಜಿಕ ರಚನೆಯಲ್ಲಿ ಮಾತ್ರವಲ್ಲ, ಅದರ ದೃಷ್ಟಿಕೋನ ಮತ್ತು ನೀತಿಗಳಲ್ಲಿ ಆ ವ್ಯತ್ಯಾಸ ಇನ್ನೂ ಅಧಿಕವಾಗಿತ್ತು. ಸದಸ್ಯತ್ವವೆನ್ನುವುದು ನಿಷ್ಕ್ರಿಯವಾಗಿರದೆ, ಮನಃಪೂರ್ವಕವಾದ ಅರ್ಪಣೆಯಾಗಿತ್ತು. ಅದಕ್ಕೆ ತ್ಯಾಗಗಳು ಆವಶ್ಯಕವಾಗಿದ್ದುವು. ಕಾಂಗ್ರೆಸ್ಸು ರಾಜಕೀಯ ಸಮಾಜವಾದದ ಉಪಕರಣವಾಯಿತು. ಖಾದಿ, ಅಸ್ಪೃಶ್ಯತಾ ನಿರ್ಮೂಲನ, ಮದ್ಯಪಾನ ನಿರೋಧ, ರಾಷ್ಟ್ರೀಯ ಶಿಕ್ಷಣ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಅದು ಕೈಗೊಂಡಿತು. ಹಿಂದಿಯನ್ನೂ ಇತರ ಭಾರತೀಯ ಭಾಷೆಗಳನ್ನೂ ಬಳಸಿದುದು ವಿದ್ಯಾವಂತರಿಗೂ ಅವಿದ್ಯಾವಂತ ಸಾಮಾನ್ಯ ಜನರಿಗೂ ನಡುವೆ ಇದ್ದ ತಡೆಯನ್ನು ಮುರಿದುಹಾಕಿತು. ತಿಲಕ್ ಸ್ವರಾಜ್ಯ ನಿಧಿಯನ್ನು ಪ್ರಾರಂಭಮಾಡಿದ್ದು, ಅದರಲ್ಲಿ ಕೇವಲ ಆರೇ ತಿಂಗಳಲ್ಲಿ ಒಂದು ಕೋಟಿ ರೂಪಾಯಿಗಿಂತಲೂ ಹೆಚ್ಚು ಹಣ ಸಂಗ್ರಹವಾಗಿತ್ತು. ಇದರಿಂದ ಸಂಸ್ಥೆ ಆರ್ಥಿಕವಾಗಿ ಭದ್ರವಾಯಿತು. ಹೀಗೆ ಜಾತ್ಯತೀತ ಪಕ್ಷವೊಂದು, ಜನ ಸಾಮಾನ್ಯರ ಬೆಂಬಲದ ಮೇಲೆ ಆಧಾರಗೊಂಡು ಸಾಮ್ರಾಜ್ಯಶಾಹೀ ಪ್ರಭುಗಳನ್ನು ಎದುರಿಸಿ ಹೋರಾಡಲು ನಿರ್ಧರಿಸಿತು. ಗಾಂಧಿ ಅದಕ್ಕೆ ನಾಯಕರು, ಆಯುಧವೂ ನೂತನವಾಗಿತ್ತು.

ಕಾಂಗ್ರೆಸ್ ಅಭ್ಯರ್ಥಿಗಳೆಲ್ಲರೂ ಚುನಾವಣೆಗಳಿಂದ ಹಿಂತೆಗೆದುಕೊಂಡಿದ್ದುದರಿಂದ ಈಗ ಪ್ರಾಧಾನ್ಯ, ವಕೀಲರು ನ್ಯಾಯಾಲಗಳನ್ನು ಬಹಿಷ್ಕರಿಸುವುದರತ್ತ ಬಿದ್ದಿತ್ತು; ಅಂತೆಯೇ ಶೈಕ್ಷಣಿಕ ಸಂಸ್ಥೆಗಳು, ವಿದೇಶೀ ಬಟ್ಟೆ ಮತ್ತು ಮದ್ಯದಂಗಡಿಗಳ ಬಹಿಷ್ಕಾರದ ಮೇಲೂ "ಶಿಕ್ಷಣವನ್ನು ಬೇಕಾದರೆ ಕಾಯಿಸಬಹುದು, ಸ್ವರಾಜ್ಯವನ್ನಲ್ಲ" ಎಂದು ದಾಸ್ ಹೇಳಿದರು. ಭಾರೀ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು

ಶಾಲಾ ಕಾಲೇಜುಗಳನ್ನು ಬಿಟ್ಟುಬಂದರು. ಉಪಾಧ್ಯಾಯರು ಭಾರೀ ಸಂಖ್ಯೆಯಲ್ಲಿ ರಾಜೀನಾಮೆ ಕೊಟ್ಟರು. ಜಾಮಿಯ ಮಿಲಿಯ ಇಸ್ಲಾಮಿಯ, ಕಾಶಿ, ಗುಜರಾತ್, ಬಿಹಾರ್ ವಿದ್ಯಾಪೀಠಗಳು ಅಸ್ತಿತ್ವಕ್ಕೆ ಬಂದುವು. ಆಚಾರ್ಯ ನರೇಂದ್ರದೇವ್, ರಾಜೇಂದ್ರ ಪ್ರಸಾದ್, ಡಾ|| ಜಕೀರ್ ಹುಸೇನ್ ಮತ್ತು ಸುಭಾಸ್ ಚಂದ್ರ ಬೋಸ್ ಈ ರಾಷ್ಟ್ರೀಯ ವಿಶ್ವವಿದ್ಯಾನಿಲಯಗಳಲ್ಲಿ ಬೋಧಿಸುತ್ತಿದ್ದರು. 1921ರ ಸೆಪ್ಟೆಂಬರ್ 30 ರ ವೇಳೆಗೆ ವಿದೇಶೀ ವಸ್ತುಗಳ ಬಹಿಷ್ಕಾರವನ್ನು ಸಂಪೂರ್ಣವಾಗಿ ಸಾಧಿಸಬೇಕಾಗಿತ್ತು. ಶತಮಾನದ ಮೊದಲ ದಶಕದ ಸ್ವದೇಶೀ ಚಳುವಳಿಯಲ್ಲಿ ನಡೆದಂತೆ ಪಿಕೆಟಿಂಗ್ ಮತ್ತು ಬಹಿರಂಗ ದಹನಕಾಂಡಗಳ ಮೂಲಕ ಇದನ್ನು ಸಾಧಿಸಬೇಕಾಗಿತ್ತು. ವಿದ್ಯಾರ್ಥಿಗಳನ್ನು ರಾಷ್ಟ್ರೀಯ ಸ್ವಯಂಸೇವಕ ಪಡೆಯಾಗಿ ಸಂಘಟಿಸಲಾಯಿತು. ಅವರು ರಾಷ್ಟ್ರೀಯತಾ ಪ್ರಚಾರ ಮಾಡಿದರು. ನಿಧಿಗಳನ್ನು ಸಂಗ್ರಹಿಸಿದರು, ಸರಕಾರಕ್ಕೆ ಸಹಕಾರ ಕೊಡುತ್ತಿದ್ದವರ ವಿರುದ್ಧ ಪ್ರದರ್ಶನ ನಡೆಸಿದರು, ಪಂಚಾಯಿತಿಗಳನ್ನು ನಿರ್ವಹಿಸಿದರು ಮತ್ತು ವಿದೇಶೀ ವಸ್ತುಗಳನ್ನು ಮಾರುತ್ತಿದ್ದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಿದರು.

ಅಭೂತಪೂರ್ವವಾದ ಉತ್ಸಾಹದ ಅಲೆಯು ನಾಡನ್ನು ಮುಳುಗಿಸಿತು. ಮೇಲಿನವರು ಕೆಳಗಿನವರು, ಗಂಡಸರು, ಹೆಂಗಸರು, ಹಿಂದೂಗಳು ಮುಸ್ಲಿಮರು, ಸಂಪ್ರದಾಯನಿಷ್ಠರು ಉದಾರವಾದಿಗಳು, ತೀವ್ರಗಾಮಿಗಳು ಎಲ್ಲರೂ ಒಂದೇ ಸಮನಾಗಿ ಆ ಅಲೆಯ ಹೊಡೆತಕ್ಕೆ ಸಿಕ್ಕಿದರು. ಹೆಂಗಸರು ಪರದೆಯನ್ನು ಕಿತ್ತೆಸೆದು ಭಾರೀ ಸಂಖ್ಯೆಯಲ್ಲಿ ಹೋರಾಟದಲ್ಲಿ ಪಾಲ್ಗೊಂಡರು, ತಮ್ಮ ಆಭರಣಗಳನ್ನು ತೆಗೆದು ತಿಲಕ್ ನಿಧಿಗೆ ನೀಡಿದರು ಅಥವಾ ಸಂತೋಷವಾಗಿ ಸೆರಮನೆಗೆ ಹೋದರು.

ಖಿಲಾಫತ್ ಸಮಿತಿಯು ಮುಸ್ಲಿಮರನ್ನು ಸೇನೆಗೆ ಸೇರಿಕೊಳ್ಳಬಾರದೆಂದು ಕೇಳಿಕೊಂಡಿತು. ಇದಕ್ಕಾಗಿ ಆಲೀ ಸಹೋದರರನ್ನು ಬಂಧಿಸಲಾಯಿತು. ಕಾಂಗ್ರೆಸ್ಸು ಸಮಸ್ತ ಭಾರತೀಯರಿಗೂ, ಸರಕಾರಕ್ಕೆ ಯಾವ ರೀತಿಯಲ್ಲಿಯೂ ಸೇವೆ ಸಲ್ಲಿಸಬಾರದೆಂದು ಕರೆ ಕೊಟ್ಟಿತು. ಬಿಸಿ ಏರುತ್ತಿದ್ದಂತೆ ನಿರುದ್ಯೋಗಿಗಳಾಗಿದ್ದ ಕಾರ್ಮಿಕರು, ಕಾರ್ಖಾನೆಯ ಕೆಲಸಗಾರರು, ನಗರದ ಬಡಜನರು ಚಳುವಳಿಗೆ ಸೇರಿಕೊಂಡರು. ಕೈಗಾರಿಕಾ ಕೇಂದ್ರಗಳಲ್ಲಿ ಮಾತ್ರವಲ್ಲದೆ ಅಸ್ಸಾಮಿನ ಕೆಲವು ಟೀ ತೋಟಗಳಲ್ಲಿಯೂ ಭಾರೀ ಮುಷ್ಕರಗಳಾದುವು.

ಗ್ರಾಮೀಣ ಪ್ರದೇಶಗಳು ಸಜೀವವಾಗಿದ್ದು ನೂತನ ಉತ್ಸಾಹದಿಂದ ಉದ್ರೇಕಿತವಾಗಿದ್ದುವು. ತೆರಿಗೆಗಳನ್ನು ಕೊಡಲು ನಿರಾಕರಿಸಬೇಕೆಂದು ಕಾಂಗ್ರೆಸ್ ಕೊಟ್ಟ ಕರೆ, ಆದುವರೆಗೂ ಸುಲಿಗೆಗೆ ಬಲಿಯಾಗಿದ್ದ ಬಡಕೃಷಿಕರ ಹೃದಯಗಳನ್ನು ಮಿಡಿದುವು. ಮಿಡ್ನಾಪುರದ ರೈತರು ಯೂನಿಯನ್ ಬೋರ್ಡ್ ತೆರಿಗೆಗಳನ್ನು ಕೊಡಲು ನಿರಾಕರಿಸಿದರು. ಗುಂಟೂರಿನ ದುಗ್ಗಿರಾಲ ಪಾಲ ಕೃಷ್ಣಯ್ಯ ಅವರ ನೇತೃತ್ವದಲ್ಲಿ ನಡೆದ ಚಳುವಳಿ ಕಣ್ಣು ತೆರೆಸುವಂಥದಾಗಿತ್ತು. ಮುನಿಸಿಪಲ್ ತೆರಿಗೆಗಳನ್ನು ಕೊಡಬೇಕೆಂಬ ಆಜ್ಞೆಯನ್ನು ಉಲ್ಲಂಘಿಸಿ ಚೈರಾಲಾದ ಇಡೀ ಜನತೆ ಆ ಸ್ಥಳವನ್ನೇ ಬಿಟ್ಟು ಬೇರೆಡೆಗೆ ಹೋಗಿ ಹೊಸ ನಗರ ಕಟ್ಟಿಕೊಂಡಿತು. ಕೌನ್ಸಿಲಿಗೆ ಸಮರೂಪದ ಇನ್ನೊಂದು ಕೌನ್ಸಿಲನ್ನು ಬೆಜವಾಡ ರೂಪಿಸಿಕೊಂಡಿತು. ಪೆದ್ದ

ನದಿಪಾಡುವಿನಲ್ಲಿ ಎಲ್ಲ ಗ್ರಾಮಾಧಿಕಾರಿಗಳೂ ರಾಜೀನಾಮೆ ಕೊಟ್ಟುದಲ್ಲದೆ, ಅಲ್ಲಿನ ಶೇ. 95 ಜನ ತೆರಿಗೆ ಕೊಡಲು ನಿರಾಕರಿಸಿದರು. ಗುಂಟೂರಿನಲ್ಲಿ, ಕೃಷ್ಣಾ ಮತ್ತು ಗೋದಾವರಿ ಜಿಲ್ಲೆಗಳಲ್ಲಿ ತೆರಿಗೆ ಕೊಡಲು ನಿರಾಕರಿಸುವ ನಿರ್ಣಯ ಕೈಗೊಳ್ಳಲಾಯಿತು. ಹುಲ್ಲು ಮೇಯಿಸುವ ಶುಲ್ಕ ತೆರುವುದನ್ನು ಪಲ್ನಾಡಿನಲ್ಲಿ ತಿರಸ್ಕರಿಸಲಾಯಿತು. ಆಂಧ್ರ ಪ್ರದೇಶ ಕಾಂಗ್ರೆಸ್ ಸಮಿತಿ ಈ ಕ್ರಮಗಳನ್ನು ಬೆಂಬಲಿಸಿತು. ಖಾದಿ, ಅಹಿಂಸೆ, ಹಿಂದೂ-ಮುಸ್ಲಿಂ ಐಕ್ಯ ಮುಂತಾದ ಇತರ ಷರತ್ತುಗಳನ್ನು ಪೂರೈಸಿದ್ದೇ ಆದರೆ ಆ ಚಳುವಳಿಯನ್ನು ಅಧಿಕೃತ ಎಂದು ಸಾರುವುದಾಗಿ ಅಹಮದಾಬಾದ್ ಕಾಂಗ್ರೆಸ್ ಹೇಳಿತು. ರೈತರ ಸಹಿ ಸಂಗ್ರಹ ಮಾಡಬೇಕು ಎಂದು ಗಾಂಧೀಜಿಯವರು ಹಾಕಿದ್ದ ಷರತ್ತನ್ನೂ ಗುಂಟೂರು ಪೂರೈಸಿತು. ಉತ್ತರ ಪ್ರದೇಶದ ರಾಯ್‌ಬರೇಲಿ ಮತ್ತು ಫೈಜಾಬಾದ್‌ಗಳಲ್ಲಿ ಗುತ್ತಿಗೆದಾರರು ಅಕ್ರಮವಾದ ಸುಂಕಗಳನ್ನು ತೆರಲು ನಿರಾಕರಿಸಿದರು. ಸಹಜವಾಗಿಯೇ ಅವರಿಗೂ ಜಮೀನ್ದಾರರು ಮತ್ತು ಪೊಲೀಸರಿಗೂ ಘರ್ಷಣೆ ಉಂಟಾಯಿತು. ನ್ಯಾಯಾಲಯಗಳಿಗೆ ನುಗ್ಗಿ ಬಂಧಿತ ವ್ಯಕ್ತಿಗಳನ್ನು ಸಂರಕ್ಷಿಸುವ ಪ್ರಯತ್ನ ನಡೆಯಿತು. ರಾಷ್ಟ್ರದ ರಾಜಕೀಯವನ್ನು ಸುಮಾರಾಗಿ ಈ ಸಮಯದಲ್ಲಿ ಪ್ರವೇಶಿಸಿದ ಜವಾಹರಲಾಲ್ ನೆಹರೂ ಅವರು ಈ ಘಟನೆಗಳಿಂದ ಅಪಾರವಾಗಿ ಪ್ರಭಾವಿತರಾದರು. ಕೆಲವು ಮುಖ್ಯವಾದ ಕಲ್ಲಿದ್ದಲ ಗಣಿಗಳಲ್ಲಿ ಮುಷ್ಕರ ನಡೆಯಿತು. ಬಿಹಾರದಲ್ಲಿ ಛೋಟಾ ನಾಗಪುರದ ಆದಿಭಾಷಿಗಳ ತಾನಾ ಭಗತ್ ಚಳುವಳಿ (Tana Bhagat Movement) ಚೌಕಿದಾರ ತೆರಿಗೆಯನ್ನೂ ಗೇಣಿಯನ್ನೂ ಕೊಡಲು ನಿರಾಕರಿಸುವ ಭಯವನ್ನು ಒಡ್ಡಿತು. 'ಒರಿಸ್ಸಾದಲ್ಲಿ ಕನಿಕಾ ರಾಜ್ (Kanika Raj) ಗೇಣಿದಾರರು ಅಬ್‌ವಬ್ (Abwab)ಗಳನ್ನು ಕೊಡುವುದಿಲ್ಲ' ಎಂದರು. ಪಂಜಾಬಿನಲ್ಲಿ ಅಕಾಲಿ ಚಳುವಳಿಯು (Akali Movement) ಗುರುದ್ವಾರಗಳ ನಿರ್ವಹಣೆಯಲ್ಲಿದ್ದ ಭ್ರಷ್ಟಾಚಾರವನ್ನು ನಿರ್ಮೂಲವಾಡುವ ಗುರಿ ಇಟ್ಟುಕೊಂಡಿತು. ಪವಿತ್ರ ದೇವಾಲಯಗಳನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳುವುದೀಗ ರಾಜಕೀಯ ಸ್ವಾತಂತ್ರ್ಯದ ಮೊದಲನಯ ಹೆಜ್ಜೆ ಎಂದು ಭಾವಿಸಲಾಯಿತು. ಮಲಬಾರಿನಲ್ಲಿ ಸ್ಥಳೀಯ ಜಮೀನ್ದಾರರು ಮತ್ತು ಹಣ ಸಾಲಕೊಡುವ ಸಾಹುಕಾರರ ವಿರುದ್ಧ ಮಾಪಿಳ್ಳೆಗಳು ಒಂದು ಚಳುವಳಿ ಪ್ರಾರಂಭಿಸಿದ್ದರು. ಆದರೆ ದುರದೃಷ್ಟವಶಾತ್ ಅದು ಮತೀಯ ಬಣ್ಣವನ್ನು ಪಡೆದುಬಿಟ್ಟಿತು. ವಾಸ್ತವವಾಗಿ ಹೇಳಬೇಕಾದರೆ ಆಗ ಇದ್ದಕ್ಕಿದ್ದಂತೆ, ಭಾರತದ ಹಳ್ಳಿಗಳಲ್ಲಿ ಸಂಚಿತವಾಗಿದ್ದ ಅಗಾಧವಾದ ಶಕ್ತಿಯ ಸ್ವರೂಪ ಪ್ರಮಾಣಗಳ ಅರಿವಾಯಿತು. ಸರಿಯಾಗಿ ನಿರ್ವಹಿಸಿದ್ದೇ ಆದರೆ ಆ ಶಕ್ತಿಸಾಗರವು ಎಂತಹ ಬಲಿಷ್ಠ ಸಾಮ್ರಾಜ್ಯವನ್ನೇ ಆಗಲಿ ಬುಡಮೇಲು ಮಾಡುತ್ತಿತ್ತು. ಬ್ರಿಟಿಷ್ ವಸ್ತ್ರಗಳ ಕೊಳ್ಳುವಿಕೆ ಅಥವಾ ಮದ್ಯದ ಮಾರಾಟಗಳಲ್ಲಿ ಆದ ಕುಸಿತದಿಂದ ಸರಕಾರ ನಿಜವಾಗಿಯೂ ಯೋಚನೆಗೀಡಾಗಲಿಲ್ಲ. ಅವರಿಗೆ ನಿಜವಾಗಿ ಗೊಂದಲ ಕಾತರಗಳನ್ನು ಉಂಟುಮಾಡಿದ ವಿಷಯ, ಭಾರತದ ಎಲ್ಲ ಭಾಗಗಳಲ್ಲಿಯೂ ಜನಸಾಮಾನ್ಯರಲ್ಲಿ ಮೂಡುತ್ತಿದ್ದ ಜಾಗ್ರತಿ.

ಚಳುವಳಿಗೆ ಹೆಚ್ಚಿನ ಹಾಗೂ ಆಕರ್ಷಕವಾದ ಯಶಸ್ಸು ದೊರೆತ ಸಂದರ್ಭವೆಂದರೆ

ವೇಲ್ಸ್‌ನ ರಾಜಕುಮಾರನ ಭೇಟಿಯ ಬಹಿಷ್ಕಾರ. ಮುಂಬಯಿಯಲ್ಲಿ ಹರತಾಳ ನಡೆಯಿತು, ಸಮುದ್ರತೀರದಲ್ಲಿ ಒಂದು ಬಹಿರಂಗ ಸಭೆಯಲ್ಲಿ ಗಾಂಧೀಜಿ ವಿದೇಶೀ ವಸ್ತ್ರದಹನ ನಡೆಸಿದರು. ಆದರೆ ಗುಂಪು ಸಂಯಮ ಕಳೆದುಕೊಂಡು ಯೂರೋಪಿಯನರು ಮತ್ತು ರಾಜಕುಮಾರನಿಗೆ ವಿಧೇಯತೆ ತೋರಿಸಿದ ಪಾರ್ಸಿಗಳ ಮೇಲೆ ಆಕ್ರಮಣ ಮಾಡಿತು. ಪೊಲೀಸರು ಗುಂಡು ಹಾರಿಸಿದರು, ಗಲಭೆಗಳಾದುವು. ಅದರಲ್ಲಿ 53 ಜನ ಸತ್ತರು. ಕಲ್ಕತ್ತಾದಲ್ಲಿ ನಡೆದ ಹರತಾಳ ಸಂಪೂರ್ಣವಾಗಿತ್ತು. ಆದರೆ ಪೊಲೀಸರಿಗೂ ಖಿಲಾಫತೀಯರಿಗೂ ನಡೆದ ಒಂದು ಘರ್ಷಣೆಯಿಂದ ಭಂಗವಾಯಿತು.

ಸರಕಾರಕ್ಕೆ ಇದು ಬಹಳ ಇಕ್ಕಟ್ಟಾಯಿತು. ಅದು ಈಗ ಅತ್ಯುಗ್ರವಾದ ದಮನ ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿತು. ಕಾಂಗ್ರೆಸ್ಸನ್ನೂ, ಖಿಲಾಫತ್ ಸ್ವಯಂಪ್ರೇರಿತ ಸಂಸ್ಥೆಗಳನ್ನೂ ಅಕ್ರಮವಾದುವೆಂದು ಘೋಷಿಸಲಾಯಿತು. ಬಹಿರಂಗ ಸಭೆಗಳನ್ನೂ ಮೆರವಣಿಗೆಗಳನ್ನೂ ಸರಕಾರ ನಿಷೇಧಿಸಿತು. ಯಾವುದಿಲ್ಲದೆ ಯಾವುದೇ ರಾಜಕೀಯ ಚಳುವಳಿ ಮುಂದುವರಿಯಲಾರದೋ ಅಂತಹ ವಾಕ್ ಸ್ವಾತಂತ್ರ್ಯ ಸಂಘಸ್ವಾತಂತ್ರ್ಯಗಳಿಗೇ ಇದು ಸವಾಲಾಗಿತ್ತು. ಸವಾಲನ್ನು ಸ್ವೀಕರಿಸಿ ಆಜ್ಞೆಯನ್ನು ಉಲ್ಲಂಘಿಸಲು ದಾಸ್ ಮುಂದಾದರು. "ನನ್ನ ಮುಂಗೈಗಳ ಮೇಲೆ ಕೈಬೇಡಿಗಳ ಅನುಭವ ನನಗ ಈಗಲೇ ಆಗುತ್ತಿದೆ" ಎಂದರವರು. "ನನ್ನ ದೇಹದ ಮೇಲೆ ಕಬ್ಬಿಣದ ಸರಪಳಿಗಳ ಅನುಭವವಾಗುತ್ತಿದೆ. ಇಡೀ ಭಾರತವೇ ಒಂದು ವಿಶಾಲ ಸೆರಮನೆಯಾಗಿದೆ. ನನ್ನನ್ನು ಬಂಧಿಸಿದರೇನು, ಬಿಟ್ಟರೇನು? ನಾನು ಸತ್ತರೇನು ಬದುಕಿದ್ದರೇನು?" ಅವರ ಹೆಂಡತಿ ಮತ್ತು ಮಗ ಇವರನ್ನೂ ಬಂಧಿಸಿದಾಗ ಸಾವಿರಾರು ಜನ ಸ್ವಯಂಸೇವಕರಾಗಿ ಸೇರಿಕೊಳ್ಳಲು ಮುಂದಾದರು. ಕಲ್ಕತ್ತದ ಸೆರಮನೆಗಳು ತುಂಬಿ ತುಳುಕಿದುವು. ಕಾರಾಗೃಹವು "ಯಾತ್ರೆಯ ಪವಿತ್ರಸ್ಥಳ"ವಾಗಿ ಪರಿಣಮಿಸಿತು. ದಿಕ್ಕು ತೋಚದ ಪೊಲೀಸರು ಸ್ವಯಂಸೇವಕರನ್ನು ವಿವೇಚನೆಯಿಲ್ಲದೆ ಹೊಡೆದು ಬಡಿದು ಹಿಂಸೆ ಮಾಡತೊಡಗಿದರು. ಸಾಮೂಹಿಕ ಬಂಧನಗಳಿಗೆ ಆಜ್ಞೆ ಕೊಡಲಾಯಿತು. ಕೆಲವೇ ತಿಂಗಳಲ್ಲಿ ಸುಮಾರು 30,000 ಜನ ರಾಷ್ಟ್ರೀಯತಾವಾದಿಗಳು ಸೆರಮನೆಯಲ್ಲಿದ್ದರು. ದಾಸ್ ಅವರೇ ಬಂಧನವನ್ನು ಸ್ವಾಗತಿಸಿದರು. ಅವರನ್ನನುಸರಿಸಿ ಮೋತೀಲಾಲ್ ನೆಹರೂ, ಲಜಪತರಾಯ್ ಮತ್ತು ಗೋಪಬಂಧು ದಾಸ್ ಇವರು ಸೆರಮನೆಗೆ ಹೋದರು.

1921 ರ ಕೊನೆಯ ವೇಳೆಗೆ ಗಾಂಧೀಜಿಯ ಹೊರತು ಎಲ್ಲ ಮುಖ್ಯ ನಾಯಕರೂ ಸೆರಮನೆಯಲ್ಲಿದ್ದರು. ಕಾರ್ಯಕಾರೀ ಸಮಿತಿಯು ಪ್ರತಿಯೊಂದು ಪ್ರಾಂತಕ್ಕೂ ಕೆಲವು ಷರತ್ತುಗಳ ಮೇಲೆ ಮಾತ್ರವೇ ಸತ್ಯಾಗ್ರಹ ಮುಷ್ಕರ ನಡೆಸಲು ಅನುಮತಿ ಕೊಟ್ಟಿತ್ತು. ಆದರೆ ಮಾಪಿಳ್ಳ ಕ್ರಾಂತಿ ಮತ್ತು ಮುಂಬಯಿ ಗಲಭೆಗಳು ಗಾಂಧೀಜಿಗೆ ಮುಜುಗರ ಉಂಟುಮಾಡಿದುವು. "ನಿಧಾನವಾಗಿ ಚುರುಕುಗೊಳಿಸಬೇಕು" ಎಂಬುದು ಅವರ ಇಚ್ಛೆಯಾಗಿತ್ತು. ಚಳುವಳಿಯ ಒತ್ತಡವನ್ನು ಅಹಿಂಸಾ ತತ್ವವು ವಿಫಲಗೊಂಡ ನಗರಗಳಿಂದ ಹಳ್ಳಿಗಳಿಗೆ ವರ್ಗಾಯಿಸಬೇಕೆಂದು ಅಪೇಕ್ಷಿಸಿದರು. ಅಹಮದಾಬಾದಿನ ಕಾಂಗ್ರೆಸ್ಸು ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ಮುಷ್ಕರ

ಹೂಡುವುದನ್ನು ಒಪ್ಪಿತ್ತು. ಗಾಂಧೀಜಿ ತಮ್ಮ ಪ್ರಸಿದ್ಧವಾದ ಅಂತಿಮ ಸೂಚನೆಯನ್ನು ವೈಸರಾಯ್ ಅವರಿಗೆ 1922 ರ ಫೆಬ್ರವರಿ 1 ರಂದು ಸಲ್ಲಿಸಿದರು. "ದೇಶಕ್ಕೆ ವಾಕ್ ಸ್ವಾತಂತ್ರ್ಯ, ಸಂಘಸ್ವಾತಂತ್ರ್ಯ, ಮತ್ತು ಪತ್ರಿಕಾ ಸ್ವಾತಂತ್ರ್ಯಗಳಂತಹ ಮೂಲ ಹಕ್ಕುಗಳೂ ಕೂಡಿದಂತೆ ತನ್ನ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಯಾವುದಾದರೂ ಒಂದು ಅಹಿಂಸಾತ್ಮಕ ವಿಧಾನವನ್ನು ಅನುಸರಿಸದೆ ಬೇರೆ ದಾರಿಯೇ ಉಳಿದಿಲ್ಲ." ಗಾಂಧೀಜಿ ಅದನ್ನು ಬಾರ್ದೋಲಿ ಎಂಬ ಗುಜರಾತಿನ ಒಂದು ತಾಲೂಕಿನಲ್ಲಿ ಪ್ರಯೋಗಿಸಲಿದ್ದರು.

ಹೋರಾಟವು ಪ್ರಾರಂಭವಾಗುವುದಕ್ಕೆ ಮುಂಚೆಯೇ ವಿಫಲವಾಯಿತು. ಬಾರ್ದೋಲಿಯು ಸಾಮೂಹಿಕ ಮುಷ್ಕರವನ್ನು ಪ್ರಾರಂಭಿಸುವ ಮುಂಚೆಯೇ ಉತ್ತರ ಪ್ರದೇಶದ ಚೌರಿಚೌರಾದಲ್ಲಿ ಒಂದು ಹಿಂಸಾಕೃತ್ಯ ನಡೆಯಿತು. ಪೊಲೀಸರು ಸ್ವೇಚ್ಛಾಚಾರದಿಂದ ವರ್ತಿಸಿ ಗುಂಡು ಹಾರಿಸಿದುದಕ್ಕೆ ಉತ್ತರವಾಗಿ ಕೆಲವು ರೈತರು ಒಂದು ಪೊಲೀಸ್ ಸ್ಟೇಷನ್ನಿಗೆ ಬೆಂಕಿ ಹಚ್ಚಿದರು. ಇಪ್ಪತ್ತೆರಡು ಮಂದಿ ಪೊಲೀಸರು ಸತ್ತರು. ಕಾರ್ಯಸಮಿತಿಯನ್ನು ಶೀಘ್ರವಾಗಿ ಬಾರ್ದೋಲಿಗೆ ಬರುವಂತೆ ಕರೆ ಕಳಿಸಲಾಯಿತು. ಗಾಂಧೀಜಿಯವರ ಒತ್ತಾಯದಂತೆ ನಾಗರಿಕ ಮುಷ್ಕರವನ್ನು ಕೈಬಿಟ್ಟು, ರಚನಾತ್ಮಕವಾದ ಕಾರ್ಯಕ್ರಮ ಕೈಗೊಳ್ಳಲು ನಿರ್ಧರಿಸಲಾಯಿತು.

ಬಾರ್ದೋಲಿಯ ನಿರ್ಣಯ ಅನೇಕ ರಾಷ್ಟ್ರೀಯ ನಾಯಕರಿಗೆ ಆಘಾತ ಉಂಟು ಮಾಡಿತು. ಸುಭಾಷರು ಅದನ್ನು "ಒಂದು ರಾಷ್ಟ್ರೀಯ ಗಂಡಾಂತರ" ಎಂದು ಕರೆದರು. ಜವಾಹರಲಾಲ್ ನೆಹರೂ ತಮ್ಮ ಆತ್ಮಚರಿತ್ರೆಯಲ್ಲಿ ನಿರ್ಣಯವನ್ನು ಕುರಿತು ತಮ್ಮ "ಆಶ್ಚರ್ಯವನ್ನೂ ದಿಗ್ಭ್ರಮೆಯನ್ನೂ" ವ್ಯಕ್ತಪಡಿಸಿದ್ದಾರೆ. ಅದರಲ್ಲಿ ಎಂ.ಎನ್. ರಾಯ್ ಅವರು ಜನರ ದುರ್ಬಲತೆಗಿಂತ ನಾಯಕರ ದುರ್ಬಲತೆಯನ್ನು ಕಂಡರು. ಇತರ ಕೆಲವರು ಗಾಂಧೀಜಿ ಜನಸಾಮಾನ್ಯರ ರಾಜಕೀಯ ಉಪಕ್ರಮವನ್ನು ಮೊಟಕುಗೊಳಿಸುತ್ತಿದ್ದಾರೆ, ಅವರನ್ನು ಮೇಲುವರ್ಗದ ಜನರ ಕಟ್ಟುನಿಟ್ಟಾದ ಅಧೀನತೆಯಲ್ಲಿಟ್ಟಿದ್ದಾರೆ ಎಂದು ಆಪಾದಿಸಿದರು.

ಈ ನಿರ್ಧಾರದ ಯುಕ್ತಾಯುಕ್ತತೆಯನ್ನು ತಮ್ಮ ಅನುಯಾಯಿಗಳಿಗೆ ವಿವರಿಸಲು ಗಾಂಧೀಜಿಗೆ ತುಂಬಾ ಕಷ್ಟವೇ ಆಯಿತು. ನೆಹರೂ ಅವರಿಗೆ ಅವರು ಭರವಸೆ ಕೊಟ್ಟರು: "ಆ ಯೋಜನೆಯನ್ನು ಕೈಬಿಡದೆ ಹೋಗಿದ್ದರೆ ನಾವು ಅಹಿಂಸಾತ್ಮಕ ಹೋರಾಟವನ್ನು ನಡೆಸುತ್ತಿರಲಿಲ್ಲ, ಮೂಲತಃ ಹಿಂಸಾತ್ಮಕವಾದ ಹೋರಾಟ ನಡೆಸುತ್ತಿದ್ದವು. ನಮ್ಮ ಧ್ಯೇಯ ಈ ಹಿನ್ನಡೆಯಿಂದ ಇನ್ನೂ ದೃಢವಾಗುತ್ತದೆ... ನಮ್ಮ ನೆಲೆಗೆ ಈಗ ನಾವು ಹಿಂದಿರುಗಿದ್ದೇವೆ." ಬಾರ್ದೋಲಿಯ ಘಟನೆಗಿಂತಲೂ ಮುಂಚೆ ನಡೆದ ಎಷ್ಟೋ ಹಿಂಸಾಕೃತ್ಯಗಳ ಉದಾಹರಣೆಗಳನ್ನು ಅವರು ಕೊಟ್ಟರು. ಮತ್ತೆಮತ್ತೆ ಮುಂದಕ್ಕೆ ಹಾಕುವುದರಿಂದ ಸತ್ಯಾಗ್ರಹದ ಪವಿತ್ರ ತತ್ತ್ವವನ್ನು ಬಲಿಗೊಟ್ಟು ಸ್ವರಾಜ್ಯವನ್ನು ಕೊಳ್ಳಲು ತಾವು ಇಚ್ಛಿಸುವುದಿಲ್ಲ ಎಂದು ಎಚ್ಚರಿಕೆ ಕೊಟ್ಟಿದ್ದರು. ಸಾಯುಧ ಶಕ್ತಿಯೆದುರಾಗಿ ನಿರಾಯುಧ ಹೋರಾಟವನ್ನು ಅವರು ನಡೆಸುತ್ತಿದ್ದರು. ಹಿಂಸೆಗೆ ಅವಕಾಶ ಕೊಟ್ಟರೆ ಯಾವ ಪಕ್ಷ ಗೆಲ್ಲುತ್ತದೆಂದು ಅವರಿಗೆ ಗೊತ್ತಿತ್ತು.

## ಉಬ್ಬರ ಇಳಿಯಿತು

ಇಷ್ಟು ಕಾಲವೂ ಲಾರ್ಡ್ ರೀಡಿಂಗ್ (Lord Reading) ಕಾಂಗ್ರೆಸ್ಸಿಗೂ ಖಿಲಾಫತರಿಗೂ ನಡುವೆ ಒಡಕು ಉಂಟುಮಾಡಲು ಪ್ರಯತ್ನ ಮಾಡುತ್ತಿದ್ದನು. ಕಲೀಫನ ಪರವಾಗಿ ಸೆವರ್ಸ್ (Sevres) ಕರಾರನ್ನು ಪರಿಷ್ಕರಿಸುವುದರ ಮೂಲಕ ಇದಕ್ಕೆ ಅವನು ಪ್ರಯತ್ನಿಸಿದನು. ಚಳುವಳಿಯು ಸಡಿಲಗೊಳ್ಳುವವರೆಗೂ ಗಾಂಧೀಜಿಯವರ ಬಂಧನವನ್ನು ಮುಂದಕ್ಕೆ ನೂಕಿದನು. ಅವನ ಅಭಿಪ್ರಾಯದಲ್ಲಿ ಬಾರ್ದೋಲಿ ನಿರ್ಣಯವು "ಸಂಸ್ಥೆಗೆ ಯಾವುದೇ ಸ್ಪಷ್ಟವಾಗಿ ನಿರೂಪಿತವಾದ ಧ್ಯೇಯೋದ್ದೇಶಗಳು ಇಲ್ಲದಂತೆ ಮಾಡಿತು. ಆ ಕ್ಷಣದಿಂದ ಸಂಸ್ಥೆಯ ಐಕ್ಯ ಸಡಲಿ ಅಸ್ತವ್ಯಸ್ತತೆ ಪ್ರವೇಶಿಸಿತು, ಉತ್ಸಾಹ ಇಂಗಿತು. ಪಕ್ಷದ ಮುಂಚೂಣಿಯ ನಾಯಕರಲ್ಲಿ ಭ್ರಮನಿರಸನ, ಅನುತ್ಸಾಹ ಮೈದೋರಿತು." 1922 ನೆಯ ಮಾರ್ಚಿ 10 ನೆಯ ತಾರೀಖು ಅವನು ಗಾಂಧೀಜಿಯವರ ಬಂಧನಕ್ಕೆ ಆಜ್ಞೆ ಮಾಡಿದನು. ಸರಕಾರದ ವಿರುದ್ಧವಾಗಿ ಅವಿಶ್ವಾಸವನ್ನು ಹರಡುತ್ತಿದ್ದಾರೆಂಬುದು ಅವರ ಮೇಲೆ ಹೊರಿಸಿದ ಆರೋಪಣೆ.

ಗಾಂಧೀಜಿಯವರ ವಿಚಾರಣೆ ಐತಿಹಾಸಿಕ ಪ್ರಾಮುಖ್ಯ ಪಡೆದಿತ್ತು. ಅವರು ತಮ್ಮ ಮೇಲಿನ ಆರೋಪಗಳನ್ನು ಒಪ್ಪಿಕೊಂಡರೂ ಅವರ ಕಾರ್ಯಚಟುವಟಿಕೆಗಳ ಬಗ್ಗೆ ನೀಡಿದ ವಿವರಣೆ ಮಹತ್ವಪೂರ್ಣವಾಗಿತ್ತು. ತಮ್ಮ ಹೇಳಿಕೆಯಲ್ಲಿ ಗಾಂಧೀಜಿ, ತಾವು ಅತ್ಯಂತ ವಿಧೇಯರಾಗಿದ್ದ ಬೆಂಬಲಿಗರಾಗಿದ್ದುದಲ್ಲದೆ, ಬ್ರಿಟಿಷರನ್ನು ಮೆಚ್ಚುತ್ತಿದ್ದ ವ್ಯಕ್ತಿಯಾಗಿದ್ದವರು, ಹೇಗೆ ಭಾರತದಲ್ಲಿನ ಬ್ರಿಟಿಷ್ ಆಡಳಿತದ ಅತ್ಯಂತ ಕಟುವಾದ ವಿಮರ್ಶಕರೂ ವಿರೋಧಿಯೂ ಆಗಿ ಪರಿವರ್ತಿತವಾದರು ಎಂಬುದನ್ನು ವಿಸ್ತಾರವಾಗಿ ನಿರೂಪಿಸಿದರು.

"ಒಲ್ಲದ ಮನಸ್ಸಿನಿಂದಲೇ ನಾನು ಒಂದು ನಿರ್ಣಯಕ್ಕೆ ಬಂದೆ. ಬ್ರಿಟಿಷ್ ಸಂಪರ್ಕವು ಭಾರತವನ್ನು, ಹಿಂದೆ ಎಂದಿಗಿಂತಲೂ ಹೆಚ್ಚಾಗಿ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಅಸಹಾಯಕವಾಗಿ ಮಾಡಿತು. ನಿರಾಯುಧ ಭಾರತ ಯಾವುದೇ ಆಕ್ರಮಣವನ್ನು ಎದುರಿಸುವ ಶಕ್ತಿ ಪಡೆಯಲಾರದು. ಅದು ಎಷ್ಟು ದರಿದ್ರವಾಗಿದೆಯೆಂದರೆ ಕ್ಷಾಮಗಳನ್ನು ಎದುರಿಸುವ ಶಕ್ತಿ ಲವಲೇಶವೂ ಅದಕ್ಕಿಲ್ಲವಾಗಿದೆ... ಭಾರತದ ಅರೆಹಸಿವಿನಿಂದ ಬಳಲುತ್ತಿರುವ ಜನಕೋಟಿ ಹೇಗೆ ನಿಧಾನವಾಗಿ ನಿರ್ಜೀವತೆಯ ಸ್ಥಿತಿಗೆ ಕುಸಿಯುತ್ತಿದೆ ಎಂಬುದು ನಗರಜೀವಿಗಳಿಗೆ ಅರ್ಥವಾಗದು. ಅವರು ಅನುಭವಿಸುತ್ತಿರುವ ಅಸಹ್ಯವಾದ ಸುಖ, ಅವರು ವಿದೇಶೀ ಸುಲಿಗೆಕೋರರಿಗಾಗಿ ತಾವು ಮಾಡುವ ದಳ್ಳಾಳಿ ಕೆಲಸವನ್ನು ಪ್ರತಿನಿಧಿಸುತ್ತಿದೆ ಎಂದು ಅವರಿಗೆ ಗೊತ್ತಿಲ್ಲ. ಆ ಲಾಭಗಳೂ ದಳ್ಳಾಳಿಯೂ ಜನಸಾಮಾನ್ಯರಿಂದ ಹೀರಿದಂಥವು. ಬ್ರಿಟಿಷ್ ಭಾರತದಲ್ಲಿ ಕಾನೂನಿನ ಪ್ರಕಾರ ಸ್ಥಾಪಿಸಿದ ಸರಕಾರವನ್ನು ಜನಸಾಮಾನ್ಯರ ಶೋಷಣೆಗಾಗಿಯೇ ನಡೆಸಲಾಗುತ್ತೆ ಎಂಬುದಂತೂ ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಯಾವ ಆಡಂಬರವೂ ಅಂಕಿ ಸಂಖ್ಯೆಗಳ ಕಣ್ಣುಕಟ್ಟು ಹಳ್ಳಿಗಳಲ್ಲಿ ಬರಿಗಣ್ಣಿಗೇ ಕಾಣುವ ಮೂಳೆಗೂಡುಗಳನ್ನು ವಿವರಿಸಲಾರದು..... ನನ್ನ ಅಭಿಪ್ರಾಯದಲ್ಲಿ ಕಾನೂನಿನ ಆಡಳಿತವನ್ನು ತಿಳಿದೋ ತಿಳಿಯದೆಯೋ ಶೋಷಕರ

ಲಾಭಕ್ಕಾಗಿ ದುರುಪಯೋಗಪಡಿಸಿಕೊಳ್ಳಲಾಗಿದೆ. ಅತ್ಯಂತ ದುರದೃಷ್ಟಕರವಾದ ವಿಷಯವೆಂದರೆ, ನಾಡಿನ ಆಡಳಿತದಲ್ಲಿ ತೊಡಗಿರುವ ಇಂಗ್ಲಿಷ್ ಮನುಷ್ಯನೂ ಅವನ ಭಾರತೀಯ ಸಹವರ್ತಿಗಳೂ ತಾವು ನಾನೀಗ ವರ್ಣಿಸಲು ಪ್ರಯತ್ನಿಸಿದ ಅಪರಾಧದಲ್ಲಿ ತೊಡಗಿದ್ದಾರೆಂಬುದನ್ನು ತಿಳಿಯದೆ ಇರುವುದು. ಅನೇಕ ಇಂಗ್ಲಿಷ್ ಮನುಷ್ಯರೂ ಭಾರತೀಯ ಅಧಿಕಾರಿಗಳೂ ಜಗತ್ತಿನಲ್ಲೇ ಅತ್ಯುತ್ಕೃಷ್ಟವಾದ ಮಾದರಿಯ ಆಡಳಿತವೊಂದನ್ನು ತಾವು ನಿರ್ವಹಿಸುತ್ತಿದ್ದೇವೆಂದು ಪ್ರಾಮಾಣಿಕವಾಗಿ ನಂಬಿದ್ದಾರೆ. ಭಾರತವು ನಿಧಾನವಾದರೂ ಸ್ಥಿರವಾದ ಗತಿಯಲ್ಲಿ ಪ್ರಗತಿ ಹೊಂದುತ್ತಿದೆಯೆಂದು ಭಾವಿಸಿದ್ದಾರೆ. ಅವರಿಗೆ ಗೊತ್ತಿಲ್ಲ, ಸೂಕ್ಷ್ಮವೂ ಆದರ ಪರಿಣಾಮಕಾರಿಯೂ ಆದ ಭಯೋತ್ಪಾದನೆ ಮತ್ತು ವ್ಯವಸ್ಥಿತವಾದ ಬಲಪ್ರದರ್ಶನ ಒಂದು ಕಡೆ, ಪ್ರತಿಭಟನೆ ಅಥವಾ ಆತ್ಮಸಂರಕ್ಷಣೆಗಳಿಲ್ಲದಿರುವಿಕೆ ಇನ್ನೊಂದು ಕಡೆ ಜನರನ್ನು ನಿರ್ವೀರ್ಯರನ್ನಾಗಿ ಮಾಡಿ ಅವರಲ್ಲಿ ನಟನೆಯ ಅಭ್ಯಾಸವನ್ನು ಪ್ರಚೋದಿಸಿದೆ..."

ತಮ್ಮ ವಾದವನ್ನು ಮುಕ್ತಾಯಮಾಡುತ್ತಾ ಗಾಂಧೀಜಿ "ಒಳ್ಳೆಯ ಫಲಗಳಿಂದ ಕೂಡಿದ ಸಹಕಾರದಷ್ಟೇ ಮಟ್ಟಿಗೆ, ಆ ಸಂದರ್ಭದಲ್ಲಿ ಕೆಟ್ಟ ಫಲಗಳಿಂದ ಕೂಡಿದ ಅಸಹಕಾರವೂ ಒಂದು ಕರ್ತವ್ಯ" ಎಂದು ತಾವು ನಂಬಿರುವುದಾಗಿ ತಿಳಿದರು. ಕೋರ್ಟು ತಮಗೆ "ಕಾನೂನಿನ ಪ್ರಕಾರ ಉದ್ದೇಶಪೂರ್ವಕವಾದ ಅಪರಾಧಕ್ಕೆ ಮತ್ತು ನನ್ನ ದೃಷ್ಟಿಯಲ್ಲಿ ಒಬ್ಬ ಪೌರನ ಅತ್ಯುನ್ನತ ಕರ್ತವ್ಯಕ್ಕೆ ಏನು ಶಿಕ್ಷೆ ವಿಧಿಸಬಹುದಾಗಿದೆಯೋ ಅದನ್ನು ವಹಿಸಲಿ" ಎಂದು ಕೇಳಿಕೊಂಡರು.

ವಿಚಾರಣೆ ನಡೆಸಿದ ನ್ಯಾಯಾಧೀಶ ಬ್ರೂಮ್‌ಫೀಲ್ಡ್ (Broomfield) "ನಿಮ್ಮ ನಾಡಿನ ಕೋಟ್ಯಂತರ ಜನರ ಕಣ್ಣುಗಳಲ್ಲಿ ನೀವು ಅತಿದೊಡ್ಡ ರಾಷ್ಟ್ರಭಕ್ತ ಮತ್ತು ಶ್ರೇಷ್ಠ ನಾಯಕರು" ಎಂಬುದನ್ನು ಒಪ್ಪಿಕೊಂಡರು. ಆದರೆ "ಕಾನೂನಿಗೆ ಅಧೀನನಾದ ವ್ಯಕ್ತಿಯಾಗಿ, ಕಾನೂನನ್ನು ಉಲ್ಲಂಘಿಸಿದ"ನೆಂದು ತಾನೇ ಒಪ್ಪಿಕೊಂಡವರಾದ ಗಾಂಧೀಜಿಗೆ ಆರು ವರ್ಷಗಳ ಸೆರೆವಾಸದ ಶಿಕ್ಷೆ ವಿಧಿಸಿದರು. 1908 ರಲ್ಲಿ ಲೋಕಮಾನ್ಯ ತಿಲಕರಿಗ ವಿಧಿಸಿದ್ದ ಶಿಕ್ಷೆಯೂ ಇದೇಯ.

ಅನೇಕ ಮುಖಂಡರು ಜೈಲಿನಲ್ಲಿದ್ದರಾಗಿ, ಮೊತ್ತಮೊದಲನೆಯ ಅಸಹಕಾರ ಚಳುವಳಿ ಸಾಮೂಹಿಕ ಸತ್ಯಾಗ್ರಹ ಪ್ರಾರಂಭವೇ ಆಗದೆ ಕೊನೆಗೊಂಡಿತು. ಆಮೇಲೆ ಸ್ವಲ್ಪ ಸಮಯದಲ್ಲಿಯೇ ಖಿಲಾಫತ್ ಪ್ರಶ್ನೆಯೂ ಅಮುಖ್ಯವಾಯಿತು. ಟರ್ಕಿಯಲ್ಲಿ ಮುಸ್ತಫಾ ಕಮಲ್ ಪಾಷಾ 1922 ರ ನವೆಂಬರಿನಲ್ಲಿ, ಅಧಿಕಾರಕ್ಕೆ ಬಂದನು. ಸುಲ್ತಾನನಿಂದ ಎಲ್ಲ ರಾಜಕೀಯ ಅಧಿಕಾರಗಳನ್ನೂ ಕಿತ್ತುಕೊಳ್ಳಲಾಯಿತು. ಕಮಲ್‌ಪಾಷಾ ಟರ್ಕಿಯನ್ನು ಆಧುನೀಕರಿಸಿ ಅದನ್ನು ಜಾತ್ಯತೀತ ರಾಷ್ಟ್ರವಾಗಿ ಮಾಡಲು ಹೊರಟನು. ಕಲೀಫತ್ ನಿರ್ಮೂಲವಾಯಿತು.

ಖಿಲಾಫತ್ ಚಳುವಳಿ ಮತ್ತು ಗಾಂಧೀಜಿ ಹಾಗೂ ಇತರ ಕಾಂಗ್ರೆಸ್ ನಾಯಕರು ರಾಷ್ಟ್ರೀಯತಾ ಚಳುವಳಿಯೊಂದಿಗೆ ಅದನ್ನು ನಂಟುಗೊಳಿಸಿದ ರೀತಿ ಇವುಗಳ ಬಗೆಗೆ ಎರಡು ಅಭಿಪ್ರಾಯಗಳಿಗೆ ಅವಕಾಶವಿದೆ. ಕೆಲವರು ಅದನ್ನು ಸರಿಯಾಗಿ ಕಲ್ಪಿಸಿಕೊಳ್ಳಲಿಲ್ಲವೆಂದೂ, ಅದು ವಕ್ರಗತಿ ಹಿಡಿಯಿತೆಂದೂ ಅಭಿಪ್ರಾಯಪಡುತ್ತಾರೆ.

ಕಾರಣ, ಅದು ತಾತ್ಕಾಲಿಕವಾಗಿಯಾದರೂ ಧಾರ್ಮಿಕ ಅಂಶವನ್ನು ರಾಜಕೀಯ ಚಳುವಳಿಯೊಳಕ್ಕೆ ತಂದು ಹಾಕಿತು. ಹಿಂದೂ ಮುಸ್ಲಿಂ ಐಕ್ಯತೆಯನ್ನು ಅದು ಸಾಧಿಸಲಿಲ್ಲ. ಆದ್ದರಿಂದ ಖಿಲಾಫತ್ ಚಳುವಳಿಯೇ ಒಂದು ತಪ್ಪು ಹೆಜ್ಜೆ ಎನ್ನುತ್ತಾರ ಕೆಲವರು. ಇತರರು ಭಾವಿಸುವುದು, ಅದು ವಾಸ್ತವವಾಗಿ ರಾಷ್ಟ್ರದ ಸಮಸ್ಯೆಯನ್ನೂ, ಎಂದರೆ ಮುಸ್ಲಿಮರ ಸಮಸ್ಯೆಯನ್ನೂ ಒಳಗೊಂಡೇ ತೀರುತ್ತದೆ ಎಂದು ಅವರಿಗೆ ಮನವರಿಕೆ ಮಾಡಿಕೊಡಲು ನಾಯಕರಿಗೆ ಒಂದು ಅವಕಾಶ ಕಲ್ಪಿಸಿತು ಎಂಬುದಾಗಿ. ಈ ಅವಕಾಶವನ್ನು ಉಪಯೋಗಿಸಿಕೊಳ್ಳಲೇಬೇಕಾಗಿತ್ತು ಎನ್ನುತ್ತಾರೆ.

ಈಗ ಹಿಂದಕ್ಕೆ ತಿರುಗಿ ನೋಡಿದರೆ ಒಂದು ಅಂಶ ಸ್ಪಷ್ಟಪಡುತ್ತದೆ. ಖಿಲಾಫತ್ ಚಳುವಳಿಯು ನಗರಗಳ ಮುಸ್ಲಿಮರನ್ನು ರಾಷ್ಟ್ರೀಯ ಚಳುವಳಿಗೆ ಎಳೆದಿತು. ಆ ಕಾಲದ ಎಲ್ಲ ಜನವರ್ಗಗಳಲ್ಲೂ ಸಾಮಾನ್ಯವಾಗಿ ಕಂಡುಬಂದ ವ್ಯಾಪಕವಾದ ಉತ್ಸಾಹ, ಚಳುವಳಿಯಲ್ಲಿ ತಾವು ಪಾಲುಗೊಂಡಿದ್ದೇವೆಂಬ ಭಾವನೆಗಳಿಗೆ ಬಹುಮಟ್ಟಿಗೆ ಕಾರಣವಾಯಿತು. ರಾಷ್ಟ್ರೀಯ ಚಳುವಳಿಯೊಂದು, ಸಮಾಜದ ಒಂದು ವರ್ಗದಮೇಲೆ ದುಷ್ಪರಿಣಾಮ ಮಾಡುವ ಒಂದು ಅಂಶದ ಪರಿಹಾರವನ್ನು ಧ್ಯೇಯವಾಗಿಟ್ಟುಕೊಂಡರೆ ಏನೂ ತಪ್ಪಲ್ಲ ಎಂಬುದೂ ನಿಜ. ರಾಷ್ಟ್ರೀಯತಾ ಚಳುವಳಿ, ಖಿಲಾಫತ್ ಚಳುವಳಿಗಳೆರಡರಲ್ಲೂ ಸಾಮ್ರಾಜ್ಯಶಾಹಿ ವಿರೋಧೀ ಅಂಶವೇ ಪ್ರಧಾನವಾಗಿತ್ತು. ಈ ಸಮಾನ ಅಂಶವನ್ನೇ ಹಿಡಿದು, ಒಟ್ಟಿನಲ್ಲಿ ರಾಷ್ಟ್ರದ ರಾಜಕೀಯ ಮತ್ತು ಆರ್ಥಿಕ ಹಿತಗಳ ರಕ್ಷಣೆ ಸಾಮ್ರಾಜ್ಯಶಾಹಿಯ ವಿರುದ್ಧವಾಗಿ ಹೋರಾಡುವುದೊಂದೇ ದಾರಿ ಎಂಬ ಕೆಚ್ಚು ಬರಿಸಿದ್ದರ ಅದರಲ್ಲಿ ತಪ್ಪೇನೂ ಇರುತ್ತಿರಲಿಲ್ಲ. ಆದರೆ ಇಲ್ಲಿ ಸರಕಾರ ನಡೆಸಿದ ದಬ್ಬಾಳಿಕೆಯ ಕ್ರಮಗಳು, ಟರ್ಕಿಯಲ್ಲಿ ನಡೆದ ಘಟನೆಗಳು ಇವೆಲ್ಲ ಸಂಚು ಹೂಡಿ, ಚಳುವಳಿಯು ಈ ಅಂತಿಮ ಧ್ಯೇಯಗಳನ್ನು ಸಾಧಿಸದಂತೆ ಮಾಡಿದುವು. ಜಾತ್ಯತೀತವೂ ಸಾಮ್ರಾಜ್ಯಶಾಹಿ ವಿರೋಧಿಯೂ ಆದ ಸರಕಾರ ಟರ್ಕಿಯಲ್ಲಿ ಮೂಡಬೇಕು ಎಂದು ರಾಷ್ಟ್ರೀಕೃತ ನಾಯಕತ್ವ ಭಾವಿಸಿತು.

ಈ ಮೊದಲನೆಯ ಅಸಹಕಾರ ಚಳುವಳಿ ಸಂಪೂರ್ಣವಾಗಿ ವಿಫಲವಾಯಿತೆಂದು ನಿರ್ಣಯಿಸುವುದೂ ತಪ್ಪಾಗುತ್ತದೆ. ಜನಸಾಮಾನ್ಯರಲ್ಲಿ ಅವರ ಆರ್ಥಿಕ ಸಮಸ್ಯೆಗಳ ಬಗೆಗೆ ರಾಜಕೀಯವಾಗಿ ಅದಕ್ಕೆ ಇದ್ದ ಕಾರಣ ಅಂದರೆ, ಸಾಮ್ರಾಜ್ಯಶಾಹಿಯ ಬಗೆಗೆ ಜಾಗ್ರತಿಯುಂಟುಮಾಡುವುದರಲ್ಲಿ ವಾಸ್ತವವಾಗಿಯೂ ಅದು ವಿಶೇಷ ಕೊಡುಗೆ ನೀಡಿತು. ವಿದ್ಯಾವಂತರಲ್ಲದ ಹಳ್ಳಿಗರೂ ಕೂಡ ತಮ್ಮ ಕಷ್ಟಸಂಕಟಗಳಿಗೆಲ್ಲ ಸ್ವರಾಜ್ಯವೊಂದೇ ರಾಮಬಾಣ ಎಂದು ಭಾವಿಸತೊಡಗಿದರು. ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸುವುದರಲ್ಲೇ ಅವರು ಒಂದು ನೂತನ ಸ್ವಾತಂತ್ರ್ಯದ ಭಾವನೆಯನ್ನು ಅನುಭವಿಸಿದರು. ಪ್ರಭುತ್ವದ ಭೀತಿಯನ್ನು ಗೆದ್ದರು. ಸಾಮಾನ್ಯ ಜನ, ಗಂಡಸರು ಹೆಂಗಸರು, ಬಡವರು ಬಲ್ಲಿದರು ಸರಕಾರದ ವಿರುದ್ಧವಾಗಿ ನಿಂತು ಅದರ ಕಷ್ಟಗಳನ್ನೂ ಯಾತನೆಗಳನ್ನೂ ಸಂತೋಷದಿಂದ ಅನುಭವಿಸಲು ಅಪೇಕ್ಷೆಯನ್ನೂ ಸಾಮರ್ಥ್ಯವನ್ನೂ ತೋರಿಸಿದರು. ಅಸ್ಪೃಶ್ಯತೆ ಮತ್ತು ಮದ್ಯಪಾನ ಗಳಂತಹ ಸಾಮಾಜಿಕ ಕೆಡುಕುಗಳನ್ನು ಜನ ಹೆಚ್ಚುಹೆಚ್ಚಾಗಿ ಗುರುತಿಸತೊಡಗಿದರು.

ಖಾದಿಗೆ ಕೊಟ್ಟ ಮಹತ್ವ ನಿಜವಾಗಿಯೂ ಗ್ರಾಮೀಣ ಅಗತ್ಯಗಳ ವಾಸ್ತವಿಕ ಮೌಲ್ಯಮಾಪನವಾಗಿತ್ತು. ವಿದೇಶೀ ಆಳುಗರನ್ನೂ ಸರಕಾರವನ್ನೂ ಬಹಿರಂಗವಾಗಿ ತಿರಸ್ಕರಿಸುವ ಪ್ರಯತ್ನದ ಈ ಅನುಭವದಿಂದ ಅವರು ನೂತನವಾಗಿ ಉದಿಸಿದ ಒಂದು ಆತ್ಮವಿಶ್ವಾಸ, ಆತ್ಮಗೌರವ ಭಾವನೆಗಳನ್ನು ಮೂಡಿಸಿಕೊಂಡರು, ಹಿಮ್ಮೆಟ್ಟುವ ಅಪಮಾನಕಾರಕ ದೀನತೆಯ ಭಾವನೆಯನ್ನು ಅಳಿಸಿಹಾಕಿದರು. ಗಾಂಧೀಜಿಗೆ ತಮ್ಮ ಸತ್ಯಾಗ್ರಹದ ಸಾಮರ್ಥ್ಯ ಇರುವುದು ಇಲ್ಲಿಯೇ ಎಂದು ಚೆನ್ನಾಗಿ ಗೊತ್ತಿತ್ತು. ಚಳುವಳಿ ಸೋತದ್ದು ಅಷ್ಟೇನೂ ಮುಖ್ಯವಾಗಿರಲಿಲ್ಲ. ಏಕೆಂದರೆ ಅದು ಕೇವಲ ತಾತ್ಕಾಲಿಕ. ಅವರೇ ವಿವರಿಸಿದಂತೆ "1920ರಲ್ಲಿ ಪ್ರಾರಂಭವಾದ ಹೋರಾಟ ಒಂದು ಮಗುವಿನ ಹೋರಾಟವೇ ಸರಿ. ಅದು ಒಂದು ತಿಂಗಳು ನಡೆಯಬಹುದು, ಒಂದು ವರ್ಷ ನಡೆಯಬಹುದು, ಇಲ್ಲವೇ ಹಲವು ತಿಂಗಳು ಅಥವಾ ಹಲವು ವರ್ಷ ಹಿಡಿಯಬಹುದು."

## ಸ್ವರಾಜ್ಯವಾದಿಗಳು

ಸಾಮೂಹಿಕ ಅಸಹಕಾರ ಚಳುವಳಿಯನ್ನು ಕೈಬಿಟ್ಟಾಗ ವ್ಯಾಪಕವಾಗಿ ನಿರಾಶೆ ಕವಿಯಿತು, ಅದು ರಾಷ್ಟ್ರೀಯತಾ ಹೋರಾಟದಲ್ಲಿದ್ದ ಉತ್ಸಾಹವನ್ನು ಒಮ್ಮೆಲೇ ಕರಗಿಸಿಬಿಟ್ಟಿತು. ಭ್ರಾಂತಿ ನಿವಾರಣೆಯ ಭಾವನೆ ಕೂಡ ಕಂಡುಬಂದಿತು. ಸತ್ಯಾಗ್ರಹದ ಸಾಮರ್ಥ್ಯವನ್ನು ಕುರಿತು ಪ್ರಶ್ನೆಗಳು ಮೂಡಿದುವು. ಕೋಟ್ಯಂತರ ಜನಸಾಮಾನ್ಯ ರನ್ನು ಅಹಿಂಸೆಯ ಕಲೆಯಲ್ಲಿ ತರಪೇತು ಮಾಡುವುದು ನಿಜವಾಗಿಯೂ ಸಾಧ್ಯವೆ ? ಒಂದು ವೇಳೆ ಸಾಧ್ಯ ಎಂದರೂ ಅದಕ್ಕೆ ಎಷ್ಟು ದೀರ್ಘಕಾಲ ಹಿಡಿಸೀತು! ಅನೇಕ ನಾಯಕರು ಕಾರಾಗೃಹದಲ್ಲಿದ್ದುದರಿಂದ ಸಾಮಾನ್ಯ ಜನರು ಅಸ್ತವ್ಯಸ್ತರಾದರು.

ಈ ಹಂತದಲ್ಲಿ ಸಿ.ಆರ್. ದಾಸ್ ಮತ್ತು ಮೋತೀಲಾಲ ನೆಹರೂ ಒಂದು ಹೊಸ ನಾಯಕತ್ವ ಒದಗಿಸಿದರು. ಸಾಮೂಹಿಕ ಅಸಹಕಾರ ಚಳುವಳಿಯ ವಿಚಾರಣಾ ಸಮಿತಿಯು, ದೇಶವು ಇನ್ನೂ ಸಾಮಾನ್ಯವಾದ ಜನಸಮೂಹ ಮಟ್ಟದ ಅಸಹಕಾರ ಚಳುವಳಿಗೆ ಸಿದ್ಧವಾಗಿಲ್ಲವೆಂದೂ ರಚನಾತ್ಮಕ ಕಾರ್ಯಕ್ರಮವೂ ಬಹಳ ಮಿತವಾದ ಪ್ರತಿಕ್ರಿಯೆ ಪಡೆಯುತ್ತಿದೆ ಎಂದೂ ವರದಿ ಮಾಡಿತು. ಆಗ ಸಿ.ಆರ್. ದಾಸ್ ಅವರೂ ಮೋತೀಲಾಲ ನೆಹರೂ ಅವರೂ, ಶಾಸನಸಭೆಗಳನ್ನು ಬಹಿಷ್ಕರಿಸುವುದಕ್ಕೆ ಬದಲಾಗಿ ಕೌನ್ಸಿಲುಗಳಲ್ಲಿ ಅಸಹಕಾರ ಪ್ರಾರಂಭಿಸಬೇಕು ಎಂದು ಸೂಚನೆಕೊಟ್ಟರು. ಒಳಗಿನಿಂದಲೇ ಸುಧಾರಣೆಗಳು ಕಾರ್ಯರೂಪಕ್ಕೆ ಬರದ ಹಾಗೆ ಮಾಡಲು ಕೌನ್ಸಿಲುಗಳಿಗೆ ಪ್ರವೇಶಿಸಬೇಕು ಎಂದು ಅವರು ಹೇಳಿದರು. ಹಲವರು ಕಾಂಗ್ರೆಸ್ಸಿಗರು ಈ ಸೂಚನೆಗೆ ಒಡನೆಯೇ ಪ್ರತಿಕ್ರಿಯೆ ತೋರಿಸಿದರು. ಆದರೆ ಸಂಪ್ರದಾಯನಿಷ್ಠ ಗಾಂಧೀವಾದಿ ಗಳಾಗಿದ್ದ ರಾಜಗೋಪಾಲಾಚಾರಿ, ರಾಜೇಂದ್ರ ಪ್ರಸಾದ್ ಮತ್ತು ವಲ್ಲಭಭಾಯಿ ಪಟೇಲ್ ಮುಂತಾದವರು ಬಹಿಷ್ಕಾರವನ್ನು ಹಾಗೆಯೇ ಮುಂದುವರಿಸಿದರು. ಈ ಎರಡು ಗುಂಪುಗಳನ್ನೂ ಕ್ರಮವಾಗಿ ಬದಲಾವಣೆಯ ಪರರಾದವರು ಮತ್ತು ಬದಲಾವಣೆ ಒಲ್ಲದವರು ಎಂದು ಕರೆಯಲಾಯಿತು. 1922 ರ ಡಿಸೆಂಬರಿನಲ್ಲಿ ನಡೆದ ಗಯಾ ಕಾಂಗ್ರೆಸ್ ಅಧಿವೇಶನದಲ್ಲಿ ಈ ಪ್ರಶ್ನೆಯೇ ಪ್ರಧಾನವಾಯಿತು.

ಅಧ್ಯಕ್ಷರಾಗಿ ಸಿ.ಆರ್. ದಾಸ್ ಕೌನ್ಸಿಲುಗಳ ಪ್ರವೇಶ ಆಗಲೇಬೇಕು ಎಂದು ಕರೆ ನೀಡಿದರು. ಆದರೆ ಆಗ ವಿಶೇಷವಾಗಿ ಪ್ರಚಲಿತವಾಗಿದ್ದದ್ದು ರಾಜಾಜಿಯವರ ಗುಂಪಿನ ಭಾವನೆ. ಸಿ.ಆರ್. ದಾಸರು ರಾಜೀನಾಮೆ ಕೊಟ್ಟು ಮೋತೀಲಾಲ ನೆಹರೂ, ವಲ್ಲಭಭಾಯಿ ಪಟೇಲ್, ಮಾಲವೀಯ ಮತ್ತು ಜಯಕರ್ ಇವರೊಂದಿಗೆ ಕಾಂಗ್ರೆಸ್ಸಿನಲ್ಲಿಯೇ ನೂತನ ಪಕ್ಷವೊಂದನ್ನು ಸ್ಥಾಪಿಸಿದರು. 'ಕಾಂಗ್ರೆಸ್ ಖಿಲಾಫತ್ ಸ್ವರಾಜ್ ಪಾರ್ಟಿ' ಎಂದು ಅದಕ್ಕೆ ಹೆಸರಾಯಿತು. ಅದಕ್ಕೆ ಸಿ.ಆರ್. ದಾಸ್ ಅಧ್ಯಕ್ಷರಾದರು, ಮೋತೀಲಾಲ್ ನೆಹರೂ ಕಾರ್ಯದರ್ಶಿಗಳಲ್ಲಿ ಒಬ್ಬರಾದರು.

ಹೊಸ ಪಕ್ಷವು ಅಹಿಂಸೆಯ ಮೂಲ ತತ್ವಗಳಿಂದ ಕೂಡಿದ ಅಸಹಕಾರವನ್ನು ದೃಷ್ಟಿಯಲ್ಲಿಟ್ಟುಕೊಂಡಿತು. ಅದು ಒಂದು ಸಂವಿಧಾನದ ರಚನೆಯ ಹಕ್ಕನ್ನು ತಮಗೆ ನೀಡಬೇಕು ಎಂದು ಒತ್ತಾಯಮಾಡಿತು. ಇಲ್ಲವಾದರೆ "ಒಂದೇ ರೀತಿಯಾದ, ನಿರಂತರವಾದ, ಸುಸಂಬದ್ಧವಾದ ತಡೆಗಳನ್ನು ಒಡ್ಡುವುದರಿಂದ ಅಸೆಂಬ್ಲಿ ಮತ್ತು ಕೌನ್ಸಿಲುಗಳ ಮೂಲಕ ಸರಕಾರವು ಆಡಳಿತ ನಡೆಸುವುದು ಸಾಧ್ಯವಿಲ್ಲದ ಹಾಗೆ ಮಾಡುವುದು" ಎಂಬ ನೀತಿಯನ್ನು ಅನುಸರಿಸುವುದಾಗಿ ಹೇಳಿತು. ಸಿ.ಆರ್. ದಾಸರ ಕಲ್ಪನಾಶಕ್ತಿ ಮತ್ತು ಉದ್ವೇಗ ಭಾವನೆಗಳು ಮೋತೀಲಾಲರ ನಿಷ್ಪಕ್ಷಪಾತ ಮನೋಭಾವ ಮತ್ತು ದೃಢತೆಗಳಿಗೆ ಅಚ್ಚುಕಟ್ಟಾಗಿ ಹೊಂದಿಕೊಂಡಿದ್ದುವು. 1923 ರ ನವೆಂಬರಿನಲ್ಲಿ ನಡೆದ ಚುನಾವಣೆಗಳಲ್ಲಿ ಅವರು, ಸಿದ್ಧತೆಗೆ ಸಮಯವೇ ಸಾಲದಿದ್ದರೂ ವಾಸ್ತವವಾಗಿ ಉದಾರವಾದಿಗಳನ್ನು ತೊಳೆದುಹಾಕಿದರು. ಸೆಂಟ್ರಲ್ ಪ್ರಾವಿನ್ಸ್‌ನಲ್ಲಿ ಅವರಿಗೆ ಸಂಪೂರ್ಣ ಬಹುಮತ ದೊರಕಿತು. ಬಂಗಾಳದ ಕೌನ್ಸಿಲಿನಲ್ಲಿ ಅವರದು ಅತಿ ದೊಡ್ಡ ಪಕ್ಷ, ಯುನೈಟೆಡ್ ಪ್ರಾವಿನ್ಸ್ ಮತ್ತು ಅಸ್ಸಾಂಗಳಲ್ಲಿ ಎರಡನೆಯ ದೊಡ್ಡ ಪಕ್ಷ. ಇತರ ಪ್ರಾಂತಗಳಲ್ಲಿ ಅವರ ದಾಖಲೆ ಅಷ್ಟು ಉತ್ತಮವಾಗಿರಲಿಲ್ಲ. ಕೇಂದ್ರ ಶಾಸನ ಸಭೆಯಲ್ಲಿ ಅವರು 101 ಸ್ಥಾನಗಳಲ್ಲಿ 42 ಸ್ಥಾನಗಳನ್ನು ಗಿಟ್ಟಿಸಿಕೊಂಡರು.

ಆದರೆ ಬದಲಾವಣೆ ಒಲ್ಲದ ಗುಂಪಿನವರಿಗೆ ಸ್ವರಾಜ್ಯವಾದಿಗಳ ನಿಲುವಿನಲ್ಲಿ ಅದು ಸರಿಯಾದದ್ದು ಎಂಬ ಭಾವನೆ ಬಂದಿರಲಿಲ್ಲ. ಎರಡೂ ಪಕ್ಷಗಳ ನಡುವೆ ಉಗ್ರವಾದ ರಾಜಕೀಯ ಭಿನ್ನಾಭಿಪ್ರಾಯಗಳು ಭುಗಿಲೆದ್ದುವು. ಆದರ ಎರಡೂ ಪಕ್ಷಗಳು ಗಾಂಧೀಜಿಗೆ ಮತ್ತು ಕಾಂಗ್ರೆಸ್ಸಿಗೆ ವಿಧೇಯವಾಗಿಯೇ ಇದ್ದವು. ಸಾಮ್ರಾಜ್ಯ ಶಾಹಿಗ ವಿರೋಧವೇ ಎರಡು ಪಕ್ಷಗಳಲ್ಲೂ ಇತ್ತು, ಚಿಂತನ ಮತ್ತು ನಂಬಿಕೆಗಳಲ್ಲಿ ನಿಜವಾಗಿ ಅವರು ರಾಷ್ಟ್ರೀಯವಾಗಿದ್ದರು. ಹೀಗಾಗಿ ಕೌನ್ಸಿಲಿಗೆ ಪ್ರವೇಶ ಎಂಬ ಬಗಗ ಭಿನ್ನಾಭಿಪ್ರಾಯವಿದ್ದರೂ ಅವರು ಪರಸ್ಪರ ಗೌರವ ಇಟ್ಟುಕೊಂಡಿದ್ದುದರಿಂದ ಒಟ್ಟು ಕಾಂಗ್ರೆಸ್ ಪಕ್ಷದ ಐಕ್ಯತೆಗೆ ಯಾವ ಅಪಾಯದ ಭೀತಿಯೂ ಉಂಟಾಗಲಿಲ್ಲ.

ಕೇಂದ್ರ ಶಾಸನ ಸಭೆಯಲ್ಲಿ ಸ್ವರಾಜ್ಯವಾದಿಗಳು ಒಂದು ಒಕ್ಕೂಟವನ್ನು ನಿರ್ಮಿಸಿ ಅದನ್ನು ರಾಷ್ಟ್ರೀಯ ಪಕ್ಷ (Nationalist Party) ಎಂದು ಕರೆದರು. ಮಿತಗಾಮಿಗಳು, ಮುಸ್ಲಿಮರು ಕೂಡಿ ಒಟ್ಟು ಮೂವತ್ತು ಜನ ಸದಸ್ಯರು ಅದರಲ್ಲಿದ್ದರು. ಪ್ರಾಂತೀಯ ಕೌನ್ಸಿಲುಗಳಲ್ಲೂ ಅಂಥದೇ ವ್ಯವಸ್ಥೆ ಮಾಡಿದರು. ಎಲ್ಲ ರಾಜಕೀಯ ಸೆರೆಯಾಳುಗಳನ್ನೂ ಒಡನೆಯೇ ಬಿಡುಗಡೆ ಮಾಡಬೇಕು, ದಮನಕಾರೀ

ಕಾನೂನುಗಳನ್ನು ಹಿಂತೆಗೆದುಕೊಳ್ಳಬೇಕು, ಪ್ರಾಂತೀಯ ಸ್ವಯಮಾಡಳಿತ ಕೊಡಬೇಕು, ಕೌನ್ಸಿಲುಗಳು ಸರಕಾರದ ಪೂರ್ಣ ಹತೋಟಿಯನ್ನು ಪಡೆಯಲು ಒಂದು ಯೋಜನೆ ತಯಾರಿಸುವುದಕ್ಕಾಗಿ ಒಂದು ದುಂಡುಮೇಜಿನ ಪರಿಷತ್ತು ನಡೆಯಬೇಕು ಎಂದು ಒತ್ತಾಯ ಮಾಡಿದರು. ಸರಕಾರವು ಇದನ್ನು ನಿರಾಕರಿಸಿದರೆ, ಬೇಡಿಕೆಗಳಿಗೆ ಮತ ನೀಡದೆ ಆಡಳಿತವು ಸ್ಥಗಿತವಾಗುವಂತೆ ಮಾಡುತ್ತೇವೆ ಎಂದೂ ಬೆದರಿಕೆ ಹಾಕಿದರು.

ಪ್ರಾರಂಭದಲ್ಲಿ ಮಿತಗಾಮಿಗಳೂ ಹಿಂದೂ ಮತ್ತು ಮುಸ್ಲಿಂ ಮತೀಯವಾದಿಗಳೂ ಸ್ವರಾಜ್ಯವಾದಿಗಳೊಂದಿಗೆ ಸಹಕರಿಸಿದರು. ಬಂಧಿತರ ಬಿಡುಗಡೆ, ದಮನಕಾರಿ ಕಾನೂನುಗಳ ಹಿಂತೆಗೆದುಕೊಳ್ಳುವಿಕೆ ಮುಂತಾದ ಶಿಫಾರಸುಗಳನ್ನು ಒಳಗೊಂಡ ನಿರ್ಣಯಗಳಲ್ಲಿ ಅವರ ಸಹಕಾರವಿತ್ತು. 1925 ರ ಮಾರ್ಚಿ ತಿಂಗಳಲ್ಲಿ, ಗುಜರಾತಿನ ಪ್ರಮುಖ ರಾಷ್ಟ್ರೀಯತಾವಾದಿಯಾಗಿದ್ದ ವಿಠಲಭಾಯಿ ಪಟೇಲ್ ಅವರನ್ನು ಕೇಂದ್ರ ಶಾಸನ ಸಭೆಯ ಅಧ್ಯಕ್ಷರನ್ನಾಗಿ ಚುನಾಯಿಸುವುದರಲ್ಲಿ ಯಶಸ್ವಿಯಾದರು.

ಆದರೆ ಸ್ವರಾಜ್ಯವಾದಿಗಳು ಅಷ್ಟೇನೂ ಸಾಧಿಸಲಾಗಲಿಲ್ಲ. ಹಾಗಾಗಿ 1926 ರ ಮಾರ್ಚಿ ತಿಂಗಳಲ್ಲಿ ಕೇಂದ್ರ ಶಾಸನ ಸಭೆಯಿಂದ ಹೊರ ನಡೆಯಬೇಕೆಂದು ಅವರು ನಿರ್ಧರಿಸಿದರು. ಮೋತೀಲಾಲ್ ಹೇಳಿದರು: "ನಾವು ನೀಡಿದ ಸಹಕಾರವನ್ನು ದ್ವೇಷಪೂರ್ವಕವಾಗಿ ತಿರಸ್ಕರಿಸಲಾಗಿದೆ. ಆದ್ದರಿಂದ ನಮ್ಮ ಧ್ಯೇಯೋದ್ದೇಶಗಳನ್ನು ಸಾಧಿಸಲು ಬೇರೆ ದಾರಿಗಳನ್ನು ನಾವು ಆಲೋಚಿಸಬೇಕಾದ ಕಾಲ ಬಂದಿದೆ."

ಬ್ರಿಟನ್ನಿನಲ್ಲಿ 1923 ರ ಪ್ರಾರಂಭದಲ್ಲಿ ಅಧಿಕಾರಕ್ಕೆ ಬಂದ ಲೇಬರ್ ಸರಕಾರವು ಇದ್ದದ್ದು ಬಹು ಸ್ವಲ್ಪಕಾಲ. ಅಧಿಕಾರದಲ್ಲಿದ್ದಾಗಲೂ ಭಾರತದ ಬಗೆಗೆ ಅದು ನಿರ್ದಿಷ್ಟವಾದ ನೀತಿಯನ್ನು ತಳೆದಿರಲಿಲ್ಲ. ಬಾಲ್ಡ್ವಿನನ (Baldwin) ನೇತೃತ್ವದ ಕನ್ಸರ್ವೇಟಿವ್ ಪಕ್ಷವು ಅಧಿಕಾರಕ್ಕೆ ಹಿಂತಿರುಗಿದಾಗ ಇಂಡಿಯಾ ಆಫೀಸಿನಲ್ಲಿ ಲಾರ್ಡ್ ಬರ್ಕನ್‌ಹೆಡ್ (Lord Birkenhead) ಬಂದನು. ಸಂಪುಟದ ಇತರರಂತೆಯೇ ಅವನಿಗೂ ಮಾಂಟಗೂ-ಚೆಮ್ಸ್‌ಫರ್ಡ್ ಸುಧಾರಣೆಗಳು ಬಹು ದೂರ ಹೋಗಿದ್ದು, ಸದ್ಯಕ್ಕೆ ಸ್ವಲ್ಪ ಕಾಲ ಬೇರಾವುದೇ ಸುಧಾರಣೆಗಳನ್ನು ನೀಡುವುದು ಜಾಣತನವಲ್ಲ ಎಂದು ಅನಿಸಿತು. ಹೇಗೆ ತಾನೆ ಭಾರತವು ಡೊಮಿನಿಯನ್ ಸ್ಥಾನಕ್ಕೆ ಅರ್ಹವಾದೀತು ಎಂಬುದನ್ನು ಕಲ್ಪಿಸಿಕೊಳ್ಳುವುದಕ್ಕೆ ಕೂಡ ಅವನಿಗೆ ಸಾಧ್ಯವಾಗಲಿಲ್ಲ. 1919 ರ ಶಾಸನದಲ್ಲಿ ಸೂಚಿಸಿದಂತೆ ಪರಿಸ್ಥಿತಿಯ ಪುನರ್ ಪರೀಕ್ಷೆಗೆ ಹತ್ತು ವರ್ಷಗಳ ಕಾಲಾವಧಿ ಎಂಬ ನಿಯಮಕ್ಕ ಕಟ್ಟುನಿಟ್ಟಾಗಿ ಅಂಟಿಕೊಳ್ಳಲು ಅವನು ಇಚ್ಛಿಸಿದನು.

ಈ ಮಧ್ಯೆ ದೇಶದಲ್ಲಿ ಮತೀಯತೆ ಅಧಿಕವಾಗುತ್ತಿತ್ತು. ರಾಜಕೀಯ ಜಡತ್ವ ಮತ್ತು ಕ್ಷೋಭೆಗಳು ಅದಕ್ಕೆ ಆಹಾರವಾಗಿದ್ದುವು. ಸ್ವರಾಜ್ಯವಾದಿಗಳಿಗೂ ಮತೀಯತೆಯ ಸೋಂಕು ತಟ್ಟಿತು. ಮದನಮೋಹನ ಮಾಲವೀಯ, ಲಾಲಾ ಲಜಪತರಾಯ್ ಮತ್ತು ಎನ್.ಸಿ. ಕೇಲ್ಕರ್ ಮುಂತಾದವರೊಂದಿಗೆ ಸೇರಿಕೊಂಡು ಕೆಲವರು ಸದಸ್ಯರು "ಸಹಾನುಭೂತಿಯುತ"ರ (Responsivists) ಒಂದು ಗುಂಪು ಕಟ್ಟಿದರು. ಸರಕಾರಕ್ಕೆ ಸಹಕಾರವನ್ನು ನೀಡುವುದಾಗಿ ಹೇಳಿದರು. ಹಾಗ ಮಾಡಿ

ಅವರು ಹಿಂದೂಗಳ ಹಿತಾಸಕ್ತಿಗಳನ್ನು ರಕ್ಷಿಸುತ್ತಿರುವುದಾಗಿ ಹೇಳಿದರು. ಮೋತೀಲಾಲರು ಮತ್ತು ದಾಸ್ ಅವರು ಮುಸ್ಲಿಂ ಪರವಾಗಿದ್ದಾರೆಂದು ದೂರಿದರು. ಈ ಅತಿಮುಖ್ಯ ಸಂಧಿಕಾಲದಲ್ಲಿ 1925ರ ಜೂನ್ ತಿಂಗಳಲ್ಲಿ ಇದ್ದಕ್ಕಿದ್ದಂತೆ ಸಿ.ಆರ್. ದಾಸ್ ನಿಧನರಾದುದು ದುರ್ದೈವ.

1917ರಲ್ಲಿ ಪ್ರಾರಂಭವಾಗಿದ್ದ ಮುಸ್ಲಿಂ ಲೀಗ್ ಮತ್ತು ಹಿಂದೂ ಮಹಾಸಭೆಗಳು ಮತ್ತೆ ಚಟುವಟಿಕೆ ತೋರಿಸಿದುವು. ದೆಹಲಿ, ಲಕ್ನೋ, ಅಲಹಾಬಾದ್, ಜಬ್ಬಲ್‌ಪುರ್, ನಾಗಪುರಗಳಲ್ಲಿ ಮತೀಯ ಗಲಭೆಗಳು ನಡೆದುವು.

ಗಾಂಧೀಜಿಯವರನ್ನು 1924 ರ ಫೆಬ್ರವರಿ 5ರಂದು ಆರೋಗ್ಯದ ಕಾರಣಗಳಿಗಾಗಿ ಬಿಡುಗಡೆ ಮಾಡಲಾಯಿತು. ಅವರು ಜಾತೀಯತೆಯ ವಿಷಸೋಂಕು ಹರಡುವುದನ್ನು ತಪ್ಪಿಸಲು ಪ್ರಯತ್ನಿಸಿದರು. ಮತೀಯ ಗಲಭೆಗಳಲ್ಲಿ ವ್ಯಕ್ತವಾದ ಅಮಾನುಷ ವರ್ತನೆಗಳಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಅವರು ಸೆಪ್ಟೆಂಬರ್ ತಿಂಗಳಲ್ಲಿ 21 ದಿನದ ಉಪವಾಸ ವ್ರತ ಕೈಗೊಂಡರು. ಆದರೆ ಅದು ಹೆಚ್ಚು ಪರಿಣಾಮ ಬೀರಲಿಲ್ಲ.

ಗಾಂಧೀಜಿಯವರ ಉಪವಾಸ ವ್ರತ ಐಕ್ಯತಾ ಸಮ್ಮೇಳನಗಳಿಗೆ ದಾರಿಮಾಡಿತೇ ಹೊರತು, ಅದರಿಂದ ಸಾಮರಸ್ಯ ಸಾಧನೆ ಉಂಟಾಗಲಿಲ್ಲ. ಮುಂದಿನ ಎರಡು ವರ್ಷಗಳಲ್ಲಿ ಮತೀಯತೆ ಇನ್ನೂ ಉಗ್ರವಾಗಿ ಹರಡಿತು. 1925 ರಲ್ಲಿಯೇ 16 ಕ್ಕಿಂತ ಹೆಚ್ಚು ಮತೀಯ ಗಲಭೆಗಳಾದುವು. ಇವುಗಳಲ್ಲಿ ಅತ್ಯಂತ ಮಾರಕವಾಗಿದ್ದವೆಂದರೆ 1926 ರ ಕಲ್ಕತ್ತ ದಂಗೆಗಳು. ಈಗ ಈ ಗಲಭೆಗಳು ಭಾರೀ ನಗರಗಳಿಂದ ಸಣ್ಣ ಪಟ್ಟಣಗಳಿಗೆ ವರ್ಗಾಯಿಸಲ್ಪಡುತ್ತಿದ್ದುವು. 1922 ರಿಂದ 1927 ರ ನಡುವಣ ಅವಧಿಯಲ್ಲಿ 112 ಮತೀಯ ಗಲಭೆಗಳು ನಡೆದುವೆಂದೂ, ಅವುಗಳಲ್ಲಿ 450 ಜನ ಸತ್ತು 5,000 ಜನ ಗಾಯಗೊಂಡರೆಂದೂ ಸೈಮನ್ ಕಮೀಷನ್ ಪಟ್ಟಿಮಾತು. 1927 ಬಹಳ ನಿರಾಶೆಯ ವರ್ಷವಾಗಿತ್ತು. ಎಲ್ಲ ಪಕ್ಷಗಳಿಂದಲೂ ಮತೀಯ ರಾಜಕೀಯ ದಿಂದ ಹೊರಗಿರುತ್ತೇವೆಂದು ಪ್ರಮಾಣಮಾಡಿಸಿಕೊಳ್ಳಲು ಮೋತೀಲಾಲ್ ಮತ್ತು ಆಜಾದ್ ಮಾಡಿದ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ಹೀಗೆ ಹುಚ್ಚುಹುಚ್ಚಾಗಿ ಬೆಳೆಯುತ್ತಿದ್ದ ಹಿಂಸಾಕಾಂಡದ ಮಧ್ಯೆ ಗಾಂಧೀಜಿ ಅಸಹಾಯಕರಾಗಿ, ಸಂಕಟದಿಂದ ಬರೆದರು: "ನನಗೆ ಕೇವಲ ಪ್ರಾರ್ಥನೆ ಮತ್ತು ಅದರ ಉತ್ತರದಲ್ಲಿ ಭರವಸೆ ಇದೆ."

## ಹೊಸ ಮಜಲಿನ ಮೂಲ

1928 ರ ವೇಳೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಟವು ಹೊಸತೊಂದು ಮಜಲನ್ನು ಪ್ರವೇಶಿಸಿತು.

ಹಿಂದಿನ ಐದು ವರ್ಷಗಳಲ್ಲಿ ಬ್ರಿಟಿಷ್ ಸರಕಾರವು ಸಾಮ್ರಾಜ್ಯಶಾಹಿ ವಿರೋಧೀ ಚಳುವಳಿಯನ್ನು, ರಾಜಕೀಯ ದಮನವನ್ನು ತೀವ್ರಗೊಳಿಸುವುದರ ಮೂಲಕ ಎದುರಿಸಿದ್ದಿತು. ಅಸಹಕಾರ ಚಳುವಳಿಯನ್ನು ಕೈಬಿಡಬೇಕೆಂಬ ನಿರ್ಣಯವಾದ ಮೇಲೆ ಕಾಂಗ್ರೆಸ್ಸಿನಲ್ಲಿಯೇ ಸ್ವರಾಜ್ಯವಾದಿ ಪಕ್ಷಕ್ಕೂ ಕೌನ್ಸಿಲುಗಳ ಬಹಿಷ್ಕಾರವೆಂಬ ಮೊದಲಿನ ತೀರ್ಮಾನದಲ್ಲಿ ಬದಲಾವಣೆಯನ್ನು ಒಲ್ಲದ 'ರಚನಾತ್ಮಕ

ಕಾರ್ಯಕರ್ತ'ರಿಗೂ ನಡುವ ಬಿಕ್ಕಟ್ಟು ಉಂಟಾಗಿತ್ತು. ಹಿಂದೂಗಳಲ್ಲಿನ **ಸಂಘಟನ** ಹಾಗೂ **ಶುದ್ಧಿ** ಚಳುವಳಿಗಳು ಮತ್ತು ಮುಸ್ಲಿಮರಲ್ಲಿ **ತನ್‌ಜೀಮ್** ಮತ್ತು **ತಬ್ಲೀಘ್** ಚಳುವಳಿಗಳ ಫಲಿತಾಂಶವಾಗಿ ಎರಡೂ ಪಕ್ಷದ ಧಾರ್ಮಿಕ ತೀವ್ರಗಾಮಿಗಳಲ್ಲಿ ಮತಾಂತರ ಮತ್ತು ಪುನರ್ ಮತಾಂತರಗಳು ಅಧಿಕವಾಗಿದ್ದುವು. ಇವು ಮತೀಯ ಸಹಿಷ್ಣುತೆಗೆ ನೆರವಾಗಲಿಲ್ಲ. ಅಪನಂಬಿಕೆ ಮತ್ತು ಅವಿಶ್ವಾಸಗಳು ಬೆಳೆದುವು.

ಭಾರತದ ಬೇರೆ ಬೇರೆ ಭಾಗಗಳಲ್ಲಿ ಕಾರ್ಮಿಕ ವರ್ಗವು ಒಡೆದು ಮುಂದುವರಿದ ಮತ್ತು ಹಿಂದುಳಿದ ಪಂಗಡಗಳಾಗಿತ್ತು. ತಕ್ಕಮಟ್ಟಿಗೆ ಯುವಕರಾಗಿದ್ದವರಿಗೆ ರಷ್ಯಾದಿಂದ ಹರಡುತ್ತಿದ್ದ ಸಮಾಜವಾದೀ ಆದರ್ಶಗಳು ಗೊತ್ತಿದ್ದುವು. 1927 ರಲ್ಲಿ ಸೋವಿಯತ್ ರಷ್ಯಾ ಹತ್ತನೆಯ ವಾರ್ಷಿಕೋತ್ಸವವನ್ನು ಆಚರಿಸಿತ್ತು. ನಿಷ್ಠಾವಂತ ರಾಜಕೀಯ ವ್ಯಕ್ತಿಗಳ ಚಿಕ್ಕಪುಟ್ಟ ಗುಂಪುಗಳು ಕೆಲವು ಪಟ್ಟಣಗಳಲ್ಲಿ, ವಿಶೇಷವಾಗಿ ಮಹಾರಾಷ್ಟ್ರ ಮತ್ತು ಪೂರ್ವ ಯು.ಪಿ. ಪ್ರಾಂತಗಳಲ್ಲಿದ್ದ ಕಾರ್ಮಿಕರಿಗೆ ಹಾಗೂ ಹಳ್ಳಿಗಳಲ್ಲಿನ ವಿಶೇಷವಾಗಿ ಪಂಜಾಬಿನಲ್ಲಿನ ಹಳ್ಳಿಗಳ, ರೈತರಿಗೆ ಕಮ್ಯೂನಿಸಂ ಅನ್ನು ಕುರಿತಾದ ತಮ್ಮದೇ ವ್ಯಾಖ್ಯಾನ ವಿವರಣೆಗಳನ್ನು ಹರಡುತ್ತಿದ್ದರು. ಅವರ ಉದ್ದೇಶಗಳಲ್ಲಿ ಒಂದು, ಹೆಚ್ಚುಮಟ್ಟಿಗೆ ಮಧ್ಯಮ ವರ್ಗದ ಒಲವುಳ್ಳ ಕಾಂಗ್ರೆಸ್ (ಅದು ಮಧ್ಯಮ ವರ್ಗದ ಅತ್ಯಂತ ಪ್ರಗತಿಯುತವಾದ ಪಕ್ಷ ಎಂದು ಅವರು ಭಾವಿಸಿದ್ದರು) ಮಾನವೀಯ, ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಜನಸಾಮಾನ್ಯರನ್ನು ಕುರಿತಂತೆ ವ್ಯವಹರಿಸಬೇಕು ಎಂಬುದು. ಇದರ ಜೊತೆಗೆ ಕೈಗಾರಿಕೆಗಳಲ್ಲಿ ಕಾರ್ಯಪರಿಸ್ಥಿತಿ, ಭೂಮಿಯ ಹಂಚಿಕೆ, ಅಲ್ಲದ ತನ್ನದೇ ಆದ ಆಡಳಿತ ಸುಧಾರಣೆಗಳು ಇವೂ ಇದ್ದುವು. ಅವರು ಕಾಂಗ್ರೆಸ್ಸಿಗೆ ಇರುವುದಕ್ಕಿಂತಲೂ ಹೆಚ್ಚು ತೀವ್ರಗಾಮಿಯಾದ ಒಂದು ರಾಜಕೀಯ ಕಾರ್ಯಕ್ರಮವನ್ನು ಒಪ್ಪಿಕೊಳ್ಳಬೇಕೆಂದೂ ಅಪೇಕ್ಷಿಸಿದರು.

ಪರಿಸ್ಥಿತಿ ಹೀಗಿರುತ್ತಾ ರಾಜಕೀಯ ಪಂಗಡಗಳು ಕಾರ್ಮಿಕ ವರ್ಗ ಮತ್ತು ಬಡಕೃಷಿಕ ವರ್ಗಗಳೊಂದಿಗ ಸಂಪರ್ಕ ಸ್ಥಾಪಿಸುವುದಕ್ಕೂ ಪ್ರಯತ್ನಿಸುತ್ತಿದ್ದುವು. ಈ ಪಂಗಡಗಳು ಮುಖ್ಯವಾಗಿ ಮತೀಯ ಹಿತಾಸಕ್ತಿಗಳ ಮೇಲೆ ಒತ್ತಡ ಬೀರಿ ಮುಸ್ಲಿಂ ಬಡರೈತರು, ನಗರಗಳಲ್ಲಿನ ಕಾರ್ಮಿಕರು, ಹಿಂದೂಗಳಲ್ಲಿನ ಕಳಜಾತಿಗಳು ಮುಂತಾದವರ ಮೇಲೆ ಪ್ರಭಾವ ಹರಡಲು ಪ್ರಯತ್ನಿಸಿದರು. ಅವರು ಕೇಳುತ್ತಿದ್ದುದು ವಿಶೇಷ ಸೌಲಭ್ಯಗಳು, ಲೆಜಿಸ್ಲೇಟಿವ್ ಕೌನ್ಸಿಲುಗಳಲ್ಲಿ ರಾಜಕೀಯ ಪ್ರಾತಿನಿಧ್ಯ ಮತ್ತು ಶಿಕ್ಷಣದಲ್ಲಿ ವಿಶೇಷವಾಗಿ ಅವಕಾಶ ದೊರಕುವಿಕೆ ಮತ್ತು ಸಾಮಾಜಿಕ ಯೋಗಕ್ಷೇಮ ಸೌಲಭ್ಯಗಳು. ಒಂದು ಪ್ರಜಾಸತ್ತಾತ್ಮಕ ಸಮಾಜದಲ್ಲಿ ತಮ್ಮನ್ನು ಮಿಕ್ಕವರೊಂದಿಗ ಸಮಾನವಾಗಿ ಪರಿಗಣಿಸಬೇಕೆಂದೂ ಅವರು ಇಚ್ಛಿಸಿದರು. ಈ ಮನೋಭಾವವು ವಿಶೇಷವಾಗಿ "ಅಸ್ಪೃಶ್ಯರು" ಎನಿಸಿಕೊಂಡವರಲ್ಲಿ ಕಂಡುಬಂದಿತು. ಇವರ ನಿಮ್ನ ವರ್ಗಗಳು ಮತ್ತು ನಾಮಶೂದ್ರರೇ ಮೊದಲಾದ ಪೂರ್ವ ಬಂಗಾಳದ ಕೃಷಿಕರಲ್ಲಿ ಕೆಲವು ಭಾಗದ ಜನರಲ್ಲಿಯೂ ಇದು ವ್ಯಕ್ತವಾಯಿತು. ಇವರ ವಿಧಾನವಾದರೂ ಎಂದಿನಂತೆಯೇ ಆಗಲೂ 'ಒಡೆದು ಆಳು' ನೀತಿಯನ್ನು ಅನುಸರಿಸುತ್ತಿದ್ದ ಸರಕಾರದೊಂದಿಗ ನೇರ ವ್ಯವಹಾರ. ಕೊನೆಯದಾಗಿ, ಮದರಾಸಿನಲ್ಲಿ ಬ್ರಾಹ್ಮಣೇತರ

ರನ್ನು ಪ್ರತಿನಿಧಿಸುತ್ತದೆಂದು ಹೇಳಿಕೊಂಡ ಜಸ್ಟಿಸ್ ಪಾರ್ಟಿ (Justice Party)ಯು, ಬ್ರಾಹ್ಮಣರೇ ಪ್ರಧಾನವಾಗಿದ್ದರೆಂದು ಹೇಳಲ್ಪಟ್ಟ ಕಾಂಗ್ರೆಸ್ಸನ್ನು ವಿರೋಧಿಸಿತು.

ಗಾಂಧಿ ಮತ್ತು ಅವರ ಅನುಯಾಯಿಗಳು ಹಿಂದೂ ಧರ್ಮದಲ್ಲಿ ಇದ್ದ ಮತೀಯ ಪ್ರವೃತ್ತಿಗಳಿಗೆ ಚಿಕಿತ್ಸೆ ಮಾಡುವಂತೆ ಅಸ್ಪೃಶ್ಯತೆಯ ಭಾವನೆಯನ್ನು ನಾಶಪಡಿಸಲು ಪ್ರಯತ್ನಿಸಿದರು. ಮುಖ್ಯವಾಗಿ ಮುಂಬಯಿಯಲ್ಲಿ, ಕಮ್ಯೂನಿಸ್ಟ್ ಚಳುವಳಿಯು ಕಾರ್ಮಿಕರನ್ನು ಮತೀಯುತೆಯ ವೃತ್ತದಿಂದಾಚೆಗೆ ಸೆಳೆದು, ಬೇರೆ ಬೇರೆ ಎಂಬ ಭಾವನೆಯನ್ನು ಹೋಗಲಾಡಿಸಿ, ಅವರನ್ನು ಒಂದು ವರ್ಗವಾಗಿ ಐಕ್ಯಗೊಳಿಸಲು ಶ್ರಮಿಸಿತು. ಅಂತೂ 1920 ರ ಸುಮಾರಿನಲ್ಲಿ ಸಾಮ್ರಾಜ್ಯಶಾಹಿ ವಿರೋಧೀ ರಂಗದಲ್ಲಿಯೇ ಕಂಡುಬಂದ ಪರಸ್ಪರ ರಾಜಕೀಯ ಭಿನ್ನಾಭಿಪ್ರಾಯಗಳು, ಅನೇಕ ಪಂಗಡಗಳಲ್ಲಿ ತಾಂಡವವಾಡುತ್ತಿದ್ದ ಮತೀಯ ಭಾವನೆಗಳು, ಕಾಂಗ್ರೆಸ್ಸೇತರ ಪಕ್ಷಗಳಿಗೆ ಸರಕಾರವು ಜನರನ್ನು ಸೆಳೆಯುತ್ತಿದ್ದ ರೀತಿ-ಇವೆಲ್ಲ ಕೂಡಿ, ಸಮಾಜವನ್ನು ವಿಭಿನ್ನ ವರ್ಗಗಳು ಪಂಗಡಗಳಾಗಿ ಒಡೆದು ಚೂರುಚೂರು ಮಾಡುವ ಭೀತಿಯನ್ನು ಒಡ್ಡಿದುವು. ಈ ಪ್ರವೃತ್ತಿಗಳು ರಾಷ್ಟ್ರೀಯತಾ ಚಳುವಳಿಯನ್ನು ದುರ್ಬಲಗೊಳಿಸಿದುವು.

ಆದರ ಹೇಗೋ 1927 ರ ನವೆಂಬರಿನಲ್ಲಿ ಅದಕ್ಕೆ ಐಕ್ಯತೆಯ ಹೊಸ ಆಧಾರವೊಂದು ಸಿಕ್ಕಿತು. ಲಂಡನ್ನಿನಿಂದ ಬ್ರಿಟಿಷ್ ಮಂತ್ರಿ ಸಂಪುಟವು ಒಂದು ಘೋಷಣೆ ಹೊರಡಿಸಿತು. ಇನ್ನೂ ಮುಂದಿನ ಸುಧಾರಣೆಗಳನ್ನು ಮಾಡಲು ಮತ್ತು ಸಾಂಸದಿಕ ಪ್ರಜಾಸತ್ತೆಯನ್ನು ವಿಸ್ತರಿಸಲು ಭಾರತ ಎಷ್ಟುಮಟ್ಟಿಗೆ ಅರ್ಹವಾಗಿದೆ ಎಂಬುದನ್ನು ಪರಿಶೀಲಿಸಲು ಎರಡು ವರ್ಷ ಮೊದಲೇ ಒಂದು ರಾಯಲ್ ಕಮೀಷನ್ ನೇಮಿಸುವುದಾಗಿ ಆ ಘೋಷಣೆ ಹೇಳಿತು. ಬ್ರಿಟಿಷ್ ರಾಜಕಾರಣಿಯಾದ ಸರ್ ಜಾನ್ ಸೈಮನ್ (Sir John Simon) ಈ ಕಮೀಷನ್ನಿನ ಅಧ್ಯಕ್ಷ ಎಂದೇ ಜನಬಳಕೆಯಲ್ಲಿ ಅದಕ್ಕೆ ಸೈಮನ್ ಕಮೀಷನ್ ಎಂದು ಹೆಸರಾಯಿತು. ಅದರಲ್ಲಿನ ಇತರ ಏಳು ಮಂದಿ ಸದಸ್ಯರಲ್ಲಿ ಯಾರೂ ಭಾರತೀಯರಾಗಿರಲಿಲ್ಲ. ರಾಷ್ಟ್ರೀಯತಾ ಚಳುವಳಿಯನ್ನು ಮೊಟಕುಗೊಳಿಸಬಹುದು ಎಂಬುದಾಗಿ ಆಸೆಪಟ್ಟಿದ್ದ ಸಾಮ್ರಾಜ್ಯಶಾಹಿ, ಆ ಘೋಷಣೆಗೆ ಸ್ವಾಗತರೂಪವಾಗಿ ಕಂಡುಬಂದ ಕ್ರೋಧ, ಘೋಷಗಳಿಂದ ನಿರಾಶೆಗೊಂಡಿತು. 1927 ರ ಮದರಾಸ್ ಅಧಿವೇಶನದ ಕಾಂಗ್ರೆಸ್ ಅಧ್ಯಕ್ಷ ಶ್ರೀನಿವಾಸ ಅಯ್ಯಂಗಾರ್, ಕಮೀಷನ್ನಿನ ವಿಚಾರಣಾ ಕಾರ್ಯಕ್ರಮವನ್ನು ಕಾಂಗ್ರೆಸ್ ಬಹಿಷ್ಕರಿಸಬೇಕೆಂದು ಕರೆ ನೀಡಿದರು: "ಭಾರತೀಯರಿಗೆ ತಮ್ಮದೇ ಸಂವಿಧಾನವನ್ನು ಒಂದು ದುಂಡುಮೇಜಿನ ಪರಿಷತ್ತಿನ ಮೂಲಕವೋ (ಸಂಬಂಧ ಪಟ್ಟ ಎಲ್ಲ ಪಂಗಡಗಳೂ ಸೇರಿದಂತೆ) ಇಲ್ಲವೇ ಸಾಂಪ್ರದಾಯಕವಾದ ಪಾರ್ಲಿಮೆಂಟಿನಲ್ಲೋ ನಿರ್ಧರಿಸಿ ರೂಪಿಸಿಕೊಳ್ಳಲು ಹಕ್ಕಿದೆ. ಕಮೀಷನನ್ನು ನೇಮಿಸಿ ಆ ಹಕ್ಕನ್ನು ಸ್ಪಷ್ಟವಾಗಿ ವಂಚಿಸಲಾಗಿದೆ. ಸ್ವರಾಜ್ಯಕ್ಕೆ ಅಥವಾ ಯಾವುದೇ ಬಗೆಯ ಜವಾಬ್ದಾರಿ ಸರಕಾರಕ್ಕೆ ನಮಗೆ ಅರ್ಹತೆಯಿದೆಯೋ ಇಲ್ಲವೋ ಎಂದು ವಿಚಾರಣೆ ನಡೆಸುವುದಕ್ಕೆ ನಾವು ಭಾಗಿಗಳಾಗುವುದು ಸಾಧ್ಯವಿಲ್ಲದ ಮಾತು. (ಬಹಿಷ್ಕಾರಕ್ಕೆ) ಮೂರನೆಯ

ಕಾರಣ ಇದು: ಕಮೀಷನ್ನಿನಲ್ಲಿ ಭಾರತೀಯರು ಯಾರೂ ಇಲ್ಲದಂತೆ ಮಾಡಿ ಉದ್ದೇಶಪೂರ್ವಕವಾಗಿ ಭಾರತೀಯ ಆತ್ಮಗೌರವಕ್ಕೆ ಮುಖಭಂಗ, ಅವಮರ್ಯಾದೆ ಮಾಡಲಾಗಿದೆ" ಎಂದು ಹೇಳಲಾಯಿತು.

ಕಾಂಗ್ರೆಸ್ಸು ಮೊದಲನೆಯ ಮತ್ತು ಎರಡನೆಯ ಕಾರಣಗಳನ್ನು ಒತ್ತಿ ಹೇಳಿದರೆ, ಭಾರತೀಯರ ಆತ್ಮಗೌರವಕ್ಕೆ ಅವಮರ್ಯಾದೆ ಎಂಬ ಮೂರನೆಯ ಕಾರಣ ತೇಜ್ ಬಹದ್ದೂರ್ ಸಪ್ರು ಮೊದಲಾದ ಉದಾರವಾದಿಗಳ ಮನಸ್ಸಿಗೆ ತಟ್ಟಿತು. ಅವರು ನಿಷ್ಠಾವಂತರಾಗಿ ಸಾಂಸದಿಕ ವ್ಯವಹಾರಗಳ ಕಲೆಯಲ್ಲಿ ನಿಷ್ಣಾತರಾಗಿದ್ದು, ಸರಕಾರದೊಂದಿಗೆ ಭಾರೀ ಪ್ರಮಾಣದಲ್ಲಿ ಸಹಕರಿಸುತ್ತಾ ಸಾಂಸದಿಕ ಆಚರಣೆಗಳಲ್ಲಿ ಆಸಕ್ತರಾಗಿದ್ದವರು. ಆದ್ದರಿಂದ ಕಾಂಗ್ರೆಸ್, ಲಿಬರಲ್ ಫೆಡರೇಷನ್ ಮತ್ತು ಮೊದಮೊದಲಲ್ಲಿ ಮುಸ್ಲಿಂ ಲೀಗ್ ಕೂಡ ಸೇರಿಕೊಂಡು ಸೈಮನ್.ಕಮೀಷನನ್ನು ಬಹಿಷ್ಕರಿಸತಕ್ಕದ್ದು ಎಂದು ನಿರ್ಧರಿಸಿದುವು. ಕಮೀಷನ್ ಎಲ್ಲೆಲ್ಲಿ ಹೋದರೂ ಎದುರಾದ "ಸೈಮನ್ ಹಿಂತಿರುಗು" ಎಂಬ ಕಾಂಗ್ರೆಸ್ಸಿನ ಘೋಷಣಾವಾಕ್ಯ ರಾಷ್ಟ್ರೀಯ ಹೋರಾಟದಲ್ಲಿ ಐಕ್ಯತೆಯ ಗಂಟನ್ನು ಬಿಗಿಯಾಗಿ ಬಂಧಿಸಿತು. ಅದು ಸಾಮಾಜಿಕ ಐಕ್ಯವಾಗಿರಲಿಲ್ಲ, ರಾಜಕೀಯ ಕಾರ್ಯನಿಯೋಜನೆಯ ಸಾಮ್ಯವೂ ಆಗಿರಲಿಲ್ಲ; ಆದರೆ ಕೊನೆಯ ಪಕ್ಷ ಸಾಮ್ರಾಜ್ಯಶಾಹೀ ನೀತಿಗೆದುರಾಗಿ ಸಮಾನ ವಿರೋಧವಾಗಿದ್ದಿತು. 1928 ರ ಫೆಬ್ರವರಿ 8 ರಂದು ಕಮೀಷನ್ ಮುಂಬೈಯಲ್ಲಿ ಬಂದಿಳಿದಾಗ ಪ್ರಚಂಡ ಮೆರವಣಿಗೆಗಳು, "ಸೈಮನ್ ಹಿಂತಿರುಗು" ಎಂಬ ಘೋಷಣೆಗಳು, ಕಪ್ಪು ಬಾವುಟ ಪ್ರದರ್ಶನಗಳು, ಭಿತ್ತಿಪತ್ರಗಳು ಎದುರಾದುವು. ಚೌಪಾತಿ ಕಡಲ ದಂಡೆಯಲ್ಲಿ ಅಂದೇ ಸಂಜೆ ನಡೆದ ಬೃಹತ್ ಬಹಿರಂಗ ಸಭೆಯಲ್ಲಿ ಐವತ್ತು ಸಾವಿರ ಜನರು ನೆರೆದರು. ಬೇರೆ ಬೇರೆ ಪಕ್ಷಗಳು ಕ್ಯಾಬಿನೆಟ್ ನಿರ್ಣಯವನ್ನು ಖಂಡಿಸಿದುವು. ನವದೆಹಲಿಯಲ್ಲಿನ ಕೌನ್ಸಿಲ್ ಆಫ್ ಸ್ಟೇಟ್ ಮಟ್ಟಿಗೆ, ಅದೂ ಬಹುಪಾಲು ಬ್ರಿಟಿಷರಿಂದ ನಾಮಕರಣಗೊಂಡ ಸದಸ್ಯರೇ ತುಂಬಿದ್ದ ಕೌನ್ಸಿಲ್ ಸಹಕರಿಸಲು ಒಪ್ಪಿತು.

ಈ ಮಧ್ಯೆ, ಒತ್ತಡವು ಟ್ರೇಡ್ ಯೂನಿಯನ್ ಚಳುವಳಿಯ ಬಲವರ್ಧನೆ ಮತ್ತು ಕಾರ್ಮಿಕ ವರ್ಗದ ಕಾರ್ಯಪರಿಸ್ಥಿತಿಗಳ ಸುಧಾರಣೆಗಳಿಗೆ ಮಹತ್ವವಿದ್ದರೂ ಕೂಡ, ರಾಷ್ಟ್ರೀಯ ಹೋರಾಟದಲ್ಲಿ ಕಾರ್ಮಿಕರು ಹೆಚ್ಚುಹೆಚ್ಚಾಗಿ ಪಾಲುಗೊಳ್ಳತೊಡಗಿದರು. 1927 ರಲ್ಲಿ ಮುಂಬಯಿಯಲ್ಲಿ ಕಾರ್ಮಿಕರು ಮತ್ತು ಕೃಷಿಕರು ಕೂಡಿ, ಕನಿಷ್ಠ ಭೂ ಒಡುವಳಿ ಶಾಸನದ ಕರಡನ್ನು (Draft Minimum Land Holdings Act) ವಜಾ ಮಾಡಬೇಕೆಂದು ಸರಕಾರವನ್ನು ಒತ್ತಾಯ ಮಾಡಿದರು. ಆ ಶಾಸನದಿಂದ ಶ್ರೀಮಂತರಾಗಿದ್ದ ರೈತರು ಹೊಂದಿರಬಹುದಾಗಿದ್ದ ಭೂಮಿಯ ಪ್ರಮಾಣ ಹೆಚ್ಚುತ್ತಿತ್ತು. ಸ್ಥಳೀಯ ಬಡ ರೈತರನ್ನು ಹೆಚ್ಚು ಬಡತನಕ್ಕೆ ಇಳಿಸುತ್ತಿತ್ತು. ಸಂಪೂರ್ಣವಾಗಿ ಖಾಸಗೀ ಬ್ರಿಟಿಷ್ ವ್ಯವಹಾರ ಸಂಸ್ಥೆಯೊಂದರ ಒಡೆತನದಲ್ಲಿದ್ದ ಬೆಂಗಾಲ್ ನಾಗಪುರ್ ರೈಲ್ವೆ ಕಂಪೆನಿಗೆ ಸೇರಿದ ಖರಗ್‌ಪುರ್ ಲೋಕೋಮೋಟಿವ್ ರಿಪೇರಿ ಕಾರ್ಯಾಗಾರದಲ್ಲಿ ಕಾರ್ಮಿಕರು ಒಂದು ಚಳುವಳಿ ಪ್ರಾರಂಭಿಸಿದರು.

ಅಲ್ಪವೇತನ ಮತ್ತು ಕಂಪೆನಿ ಅಧಿಕಾರಿಗಳ ಸ್ವಚ್ಛಂದ ವರ್ತನಗಳ ವಿರುದ್ಧವಾಗಿ ಪ್ರಾರಂಭವಾದ ಆ ಮುಷ್ಕರವು ಒಂದು ಸಾರ್ವತ್ರಿಕ ಚಳುವಳಿಯ ರೂಪವನ್ನೇ ತಳೆಯಿತು. ಜವಾಹರಲಾಲ್ ನೆಹರೂ ಆಗತಾನೇ ಮೇಲೆ ಬರುತ್ತಿದ್ದ ಟ್ರೇಡ್ ಯೂನಿಯನ್ ವ್ಯವಸ್ಥಾಪಕ ವಿ.ವಿ. ಗಿರಿ ಮೊದಲಾದ ಅನೇಕ ರಾಷ್ಟ್ರೀಯ ನಾಯಕರು ಈ ಚಳುವಳಿಗೆ ಬೆಂಬಲ ಕೊಟ್ಟರು. ಜವಾಹರಲಾಲ್ ನೆಹರೂ ಈ ಸಂದರ್ಭದಲ್ಲಿ ಭಾರತೀಯ ಯುವಕರ ವಾಮಪಕ್ಷದ ಬೆಂಬಲ ಗಳಿಸಿದರು. ಯೂರೋಪಿನಲ್ಲಿ ರೂಪುಗೊಂಡಿದ್ದ ಸಾಮ್ರಾಜ್ಯಶಾಹಿ ಮತ್ತು ಫ್ಯಾಸಿಸಂ (Fascism)ಗಳ ವಿರುದ್ಧ ಸ್ಥಾಪಿಸಿದ್ದ ಹೋರಾಟದ ಲೀಗಿಗೆ ಸದಸ್ಯರಾದರು. ಅದು ಮಾಸ್ಕೋದಲ್ಲಿ ಸೋವಿಯತ್ ರಷ್ಯಾ ಏರ್ಪಡಿಸಿದ್ದ ಮೂರನೆಯ ಅಂತರರಾಷ್ಟ್ರೀಯ ಜಾಗತಿಕ ಕಾರ್ಮಿಕರ ಸಮ್ಮೇಳನದ ಬಗೆಗೆ ಸಹಾನುಭೂತಿ ವ್ಯಕ್ತಪಡಿಸಿತು.

ವಾಮಪಕ್ಷದ ಕಾರ್ಯಕರ್ತರೂ ಸಮಾಜವಾದೀ ಆದರ್ಶಗಳಿಂದ ಆಕರ್ಷಿತರಾದ ನಾಯಕರೂ ಸೈಮನ್ ಕಮೀಷನಿನ ಬಹಿಷ್ಕಾರವನ್ನು ಕುರಿತು ಸಹಾನುಭೂತಿ ಹೊಂದಿದ್ದರು. ಚಳುವಳಿಯಲ್ಲಿ ಕಾರ್ಮಿಕರು ಪಾಲುಗೊಂಡಿದ್ದರಿಂದ ಜನಸಾಮಾನ್ಯ ಚಳುವಳಿ 1928 ಮತ್ತು 1929 ರಲ್ಲಿ ಪ್ರಬಲವಾಯಿತು."ಸೈಮನ್ ಹಿಂತಿರುಗು" ಚಳುವಳಿಯು ವಿದ್ಯಾರ್ಥಿ ಒಕ್ಕೂಟವೊಂದರ ರಚನೆಗೆ ದಾರಿಮಾಡಿತು. ಈ ಸಂಸ್ಥೆಯು ಮೊದಲಿಗೆ ಕಾಲೇಜು ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಹಾಗೂ ಸಮಾಜವಾದೀ ಪ್ರಜ್ಞೆಯನ್ನು ಮೂಡಿಸಲು ಪ್ರಯತ್ನಿಸಿತು.

ನಾಯಕತ್ವದ ಮಟ್ಟದಲ್ಲಾದರೋ ಈ ಬಹಿಷ್ಕಾರ ಚಳುವಳಿಯು ಭಾರತೀಯ ಸಂವಿಧಾನವೊಂದರ ಯೋಜನೆಗಳನ್ನು ರೂಪಿಸುವ ಪ್ರಯತ್ನಕ್ಕೂ ದಾರಿಮಾಡಿತು. 1927 ರ ಮದರಾಸ್ ಕಾಂಗ್ರೆಸ್ ಅಧಿವೇಶನದಲ್ಲಿ ಜವಾಹರಲಾಲ್ ನೆಹರೂ ಮಂಡಿಸಿ, ಸುಭಾಷ್ ಬೋಸರ ಗುಂಪು ಸಮರ್ಥಿಸಿದ ಒಂದು ನಿರ್ಣಯವು, ಕಾಂಗ್ರೆಸ್ಸಿನ ಅಂತಿಮ ಧ್ಯೇಯವು ಪೂರ್ಣ ಸ್ವರಾಜ್ಯ, ಅಂದರೆ, ಭಾರತಕ್ಕೆ ಪೂರ್ಣ ಸ್ವಾತಂತ್ರ್ಯ ಗಳಿಸುವುದು ಎಂಬುದು, ಅಂಗೀಕೃತವಾಯಿತು. ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಆಗಿದ್ದ ಲಾರ್ಡ್ ಬರ್ಕನ್‌ಹೆಡ್ (Lord Birkenhead) ಸ್ವರಾಜ್ಯ ಪಕ್ಷಕ್ಕೆ ಒಂದು ಸವಾಲು ಹಾಕಿದ್ದನು. ಭಾರತದ ಜನತೆಯ ಬಹುಮಟ್ಟಿನ ಜನರ ಒಪ್ಪಿಗೆಯನ್ನು ಪಡೆದ ಒಂದು ಸಂವಿಧಾನವನ್ನು ರಚಿಸಬೇಕು ಎಂಬುದೇ ಆ ಸವಾಲು. ಅದನ್ನೂ ಕೈಗೆತ್ತಿಕೊಳ್ಳಲಾಯಿತು. ಅಂದರೆ, ಬ್ರಿಟಿಷ್ ಸರಕಾರ ಒಪ್ಪಿದ, ಸಾಮ್ರಾಜ್ಯದ ಚೌಕಟ್ಟಿನೊಳಗೇ ಇದ್ದ ಒಂದು ವ್ಯವಸ್ಥೆ ಇದಕ್ಕಾಗಿ ರೂಪುಗೊಳ್ಳಬೇಕಾಯಿತು. ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಅಖಿಲ ಭಾರತ ಲಿಬರಲ್ ಫೆಡರೇಷನ್, ಮುಸ್ಲಿಂ ಲೀಗ್ ಮತ್ತು ಇತರ ಸಂಸ್ಥೆಗಳು ಕೊನೆಗೆ 1928 ರ ಆಗಸ್ಟ್ ತಿಂಗಳಲ್ಲಿ ಲಕ್ನೋದಲ್ಲಿ ಸಭೆ ಸೇರಿದುವು. ಅಖಿಲ ಪಕ್ಷಗಳ ಸಮ್ಮೇಳನದ ಮಾದರಿಯಲ್ಲಿ ನೆರೆದ ಆ ಸಭೆ ಪ್ರಸಿದ್ಧ ಸ್ವರಾಜ್ಯವಾದೀ ನಾಯಕ ಮೋತೀಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ನೇಮಿತವಾಗಿದ್ದ ಸಮಿತಿಯು ರಚಿಸಿದ್ದ ಒಂದು ಕರಡು ಸಂವಿಧಾನವನ್ನು ಅಂಗೀಕರಿಸಿತು.

## ಮೋತೀಲಾಲ್ ನೆಹರೂ ವರದಿ

ಈ ವರದಿಯು ಜವಾಬ್ದಾರಿ ಸರಕಾರಕ್ಕೆ ಅವಕಾಶ ಮಾಡಿತು. ಅಂದರೆ, ಜನತೆಯಿಂದ ಚುನಾಯಿತವಾದ ಶಾಸಕಾಂಗವು ಕಾರ್ಯಾಂಗಕ್ಕಿಂತ ಮೇಲಧಿಕಾರವುಳ್ಳದ್ದೆಂಬ ವ್ಯವಸ್ಥೆ. ಆಗ ಭಾರತದಲ್ಲಿ ಇದ್ದದ್ದು ಕಾರ್ಯಾಂಗದ ಪಾರಮ್ಯ. ದ್ವಿಸದನ ಪ್ರಭುತ್ವದ ಸಂಸತ್ತನ್ನೂ (Sovereign Parliament)ಅದು ನಿರೂಪಿಸಿತು. ಆ ಸಂಸತ್ತಿಗೆ, ಕೆನಡಾ ಅಥವಾ ಆಸ್ಟ್ರೇಲಿಯಾ ಮುಂತಾದ ಬ್ರಿಟಿಷ್ ಸಾಮ್ರಾಜ್ಯದೊಳಗಿನ ಡೊಮಿನಿಯನ್ ಪಾರ್ಲಿಮೆಂಟುಗಳು ಪಡೆದಿರುವ ಸ್ವಯಮಾಧಿಕಾರಗಳನ್ನೇ ಕೊಡಲಾಗಿತ್ತು. ಸೆನೇಟಿನಲ್ಲಿ ಪ್ರಾಂತೀಯ ಕೌನ್ಸಿಲುಗಳಿಂದ ಪ್ರಮಾಣಾನುಸಾರಿ ಪ್ರಾತಿನಿಧ್ಯದ ಆಧಾರದಿಂದ ಚುನಾಯಿತರಾದ 200 ಸದಸ್ಯರಿರುವುದು. ಪ್ರಜಾಪ್ರತಿನಿಧಿ ಸಭೆ (House of Representatives)ಯಲ್ಲಿ ಯುವಕ ಮತದಾನ ಪದ್ಧತಿಯಿಂದ ಚುನಾಯಿತರಾದ 500 ಸದಸ್ಯರಿರತಕ್ಕದ್ದು. ಬಂಗಾಳದಲ್ಲಿ ಮುಸ್ಲಿಮರಿಗೆ, ವಾಯುವ್ಯ ಗಡಿ ಪ್ರಾಂತದಲ್ಲಿ ಮುಸ್ಲಿಮೇತರರಿಗೆ ಹೊರತು ಉಳಿದಂತೆ ಪಾರ್ಲಿಮೆಂಟಿನಲ್ಲಿ ಯಾವುದೇ ಮತೀಯ ಪಂಗಡಗಳಿಗೆ ಯಾವುದೇ ವಿಶೇಷ ಪ್ರಾತಿನಿಧ್ಯ ಇಲ್ಲ. ಪ್ರಾಂತೀಯ ಕೌನ್ಸಿಲ್ಲುಗಳಲ್ಲಾದರೆ, ಅಲ್ಪಸಂಖ್ಯಾತರಿಗೆ ಜನಸಂಖ್ಯೆಯ ಆಧಾರದ ಮೇಲೆ ಸ್ಥಾನಗಳನ್ನು ವಿಶೇಷವಾಗಿ ಮೀಸಲಾಗಿರಿಸುವುದಿತ್ತು. ಇದಕ್ಕೆ ಮುಸ್ಲಿಮರೇ ಬಹುಸಂಖ್ಯಾತರಾಗಿರುವ ಪಂಜಾಬ್ ಮತ್ತು ಬಂಗಾಳಗಳು ಅಪವಾದವಾಗಿದ್ದುವು. ಈ ಎರಡು ಪ್ರದೇಶಗಳಲ್ಲಿ ಸ್ಥಾನಗಳ ಮೀಸಲಾತಿಗೆ ಅವಕಾಶವಿರಲಿಲ್ಲ. ಪ್ರಾತಿನಿಧ್ಯವು ಯುವಕ ಮತದಾನದ ಮೂಲಕ ಮಾತ್ರವೇ ಆಗುವುದಿತ್ತು.

ಮೋತೀಲಾಲ್ ನೆಹರೂ ವರದಿಯು 1928 ರಲ್ಲಿ ಕಾಂಗ್ರೆಸ್ ನಾಯಕತ್ವದ ಹಿರಿಯ ಪೀಳಿಗೆಯ ಸಾಂಪ್ರದಾಯಿಕ ದೃಷ್ಟಿಗಳನ್ನು ಚಿತ್ರಿಸುತ್ತದೆ. ಯುವಕ ಪೀಳಿಗೆಯ ಪೂರ್ಣ ಸ್ವರಾಜ್ಯಕ್ಕಾಗಿ ಬೇಡಿಕೆಯನ್ನು ಒಪ್ಪಿಕೊಂಡು ಅವರು, ಸಾಮ್ರಾಜ್ಯದೊಳಗೆಯೇ ಡೊಮಿನಿಯನ್ ಸ್ಥಾನಮಾನ ಎಂದು ಅದಕ್ಕೆ ವ್ಯಾಖ್ಯಾನ ಮಾಡಿದರು. ಸಂಪೂರ್ಣವಾಗಿ ಪ್ರಜಾಸತ್ತಾತ್ಮಕ ಮತ್ತು ಜಾತ್ಯತೀತ ತತ್ವಗಳನ್ನು ಒಪ್ಪಿಕೊಳ್ಳುವುದಕ್ಕೂ ಅವರು ಸಿದ್ಧರಾಗಿರಲಿಲ್ಲ. ಮತೀಯತೆಯ ಪ್ರಶ್ನೆಯನ್ನು ದಯೆ ದಾಕ್ಷಿಣ್ಯವಿಲ್ಲದೆ ಕರಾರುವಾಕ್ಕಾಗಿ ಖಂಡಿಸಲು ಅವರು ಪ್ರಯತ್ನಿಸಲಿಲ್ಲ. ಕೇಂದ್ರ ಪಾರ್ಲಿಮೆಂಟು, ಪ್ರಾಂತೀಯ ಕೌನ್ಸಿಲು ಎರಡು ಹಂತಗಳಲ್ಲೂ ಎಲ್ಲ ಪ್ರಜೆಗಳಿಗೂ ಸಮಾನ ಪ್ರಾತಿನಿಧ್ಯ ಎಂಬ ತತ್ವಕ್ಕೆ ಅಪವಾದಗಳನ್ನು ಮಾಡಲಾಯಿತು. ಆದರೆ ಇದು ಸಮಾನ ಯುವಕ ಮತದಾನ ಪದ್ಧತಿಯ ಮೇಲೆ ಆಧಾರಗೊಂಡ ರಾಷ್ಟ್ರೀಯತೆಯ ಪಾಶ್ಚಾತ್ಯ ಕಲ್ಪನೆಯೊಂದನ್ನು ಭಾರತದಲ್ಲಿ ದುರುಪಯೋಗಪಡಿಸಿಕೊಂಡ ರೀತಿ ಮತ್ತು ದೌರ್ಬಲ್ಯಗಳನ್ನು ಈ ಮನೋಧರ್ಮ ಸೂಚಿಸಿತು. ವಾಸ್ತವವಾಗಿ ಕಾಂಗ್ರೆಸ್ಸಿಗೆ ಸೇರದ, ಅಪಾರ ಹಿಂದೂ ಬಹುಮತದಲ್ಲಿ ವಿಶ್ವಾಸವಿಡಲು ಭರವಸೆ ಎಂಬಂತೆ ತಮ್ಮ ಅಲ್ಪಸಂಖ್ಯಾಕತೆಯ ಕ್ಷೇಮ ರಕ್ಷಣೆಯನ್ನು ಬಯಸಿದ ಮುಸ್ಲಿಂ ರಾಷ್ಟ್ರೀಯವಾದಿಗಳಿಗೆ ಇಂತಹ ವಿಶೇಷ ಪ್ರಾತಿನಿಧ್ಯ ಸೂಚನೆಗಳು ಮಾತ್ರವೇ ತೃಪ್ತಿ ಉಂಟುಮಾಡುತ್ತಿದ್ದುವು.

ಇನ್ನೂ ಹೆಚ್ಚು ಅತಿರೇಕದ ಮುಸ್ಲಿಂ ಲೀಗಿನೊಂದಿಗೆ ಬಿರುಕು ಕಂಡುಬಂದದ್ದು 1928 ರ ಡಿಸೆಂಬರಿನಲ್ಲಿ. ಕಲ್ಕತ್ತಾದಲ್ಲಿ ಕಾಂಗ್ರೆಸ್ ಅಧಿವೇಶನ ನಡೆದಾಗಲೇ ನೆರೆದ ಅಖಿಲ ಪಕ್ಷಗಳ ಸಮ್ಮೇಳನವು ನೆಹರೂ ವರದಿಯನ್ನು ಅಂಗೀಕರಿಸಲಿತ್ತು. 1921 ರ ವರೆಗೂ ಕಾಂಗ್ರೆಸ್ ನಾಯಕರಾಗಿದ್ದು ಈಗ ಪ್ರಮುಖ ಮತೀಯ ನಾಯಕರಾಗಿದ್ದ ಮಹಮ್ಮದ್ ಆಲಿ ಜಿನ್ನಾ ಅವರು ಪಾರ್ಲಿಮೆಂಟಿನಲ್ಲೂ ಬಂಗಾಳ ಮತ್ತು ಪಂಜಾಬ್ ಪ್ರಾಂತೀಯ ಕೌನ್ಸಿಲುಗಳಲ್ಲೂ ಮುಸ್ಲಿಮರಿಗೆ ಇನ್ನೂ ಹೆಚ್ಚು ಪ್ರಾತಿನಿಧ್ಯ ಬೇಕು ಎಂದು ಒತ್ತಾಯಮಾಡಿದರು. ಈ ಪ್ರಾಂತಗಳಲ್ಲಿ ಬಹು ಸಂಖ್ಯೆಯಲ್ಲಿದ್ದ, ಸೌಲಭ್ಯ ಸಾಲದ ಮುಸ್ಲಿಮರು ಶಿಕ್ಷಣಾವಕಾಶಗಳ ಬಳಿಕೆ, ಉದ್ಯೋಗಾವಕಾಶಗಳು ಮತ್ತು ಸಾಮಾಜಿಕ ಕ್ಷೇಮ ಸೌಕರ್ಯಗಳು ಮುಂತಾದುವನ್ನು ಶಾಸಕಾಂಗದ ಅಧಿಕಾರವನ್ನು ಉಪಯೋಗಿಸಿ ಪಡೆಯುವ ಹಾಗೆ ಮುಸ್ಲಿಂ ಪ್ರಾಧಾನ್ಯ ಕಂಡುಬರಬೇಕು ಎಂದು ಅವರು ವಾದಿಸಿದರು. ಬ್ರಿಟಿಷರಿಗೆ ಅತಿವಿಧೇಯರಾದ ಮುಸ್ಲಿಂ ರಾಜಕಾರಣಿಗಳಾಗಿದ್ದ ಆಗಾಖಾನ್ ಮತ್ತು ನೂತನ ವಿದ್ಯಾವಂತ ವೃತ್ತಿಜೀವಿ ವರ್ಗಗಳನ್ನು ಪ್ರತಿನಿಧಿಸಿದ ಸರ್ ಮಹಮದ್ ಷಫೀ, ಮಧ್ಯಮ ವರ್ಗದ ಹೆಚ್ಚು ಮುಂದುವರಿದ ಹಿಂದೂ ವರ್ಗಗಳಿಂದ ಸ್ಥಳೀಯ ಅಧಿಕಾರಗಳನ್ನು ಅಪಹರಿಸಲು ಉತ್ಸುಕರಾಗಿದ್ದ ಮಧ್ಯಮ ವರ್ಗದ ಕುಲೀನರು ಮತ್ತು ವರ್ತಕರು ಇವರೆಲ್ಲ ಜಿನ್ನಾರಿಗೆ ಬೆಂಬಲ ನೀಡಿದರು. ಇತರ ಮುಸ್ಲಿಂ ರಾಜಕಾರಣಿಗಳ ಒಂದು ಶ್ರೇಣಿಗೆ ಸೇರಿದ ಡಾ॥ ಅನ್ಸಾರಿ, ಮಹಮುದಾಬಾದಿನ ರಾಜ; ಉತ್ತರ ಪ್ರದೇಶದ ಒಬ್ಬ ಭೂಮಾಲೀಕ ಅಥವಾ ಬಿಹಾರದ ನ್ಯಾಯಾಧಿಪತಿ ಸರ್ ಆಲಿ ಇಮಾಂ-ಇವರು ಸಲಹೆ ಕೊಟ್ಟ ಪ್ರಜಾಸತ್ತಾತ್ಮಕ ತತ್ವಗಳಿಗೆ ಅದೇ ಮಟ್ಟಿನ ರಿಯಾಯಿತಿ ತೋರಿಸಲು ಅವರು ಸಿದ್ಧರಾಗಿರಲಿಲ್ಲ. ಹಿಂದೂ ಮತೀಯರೂ ಅಷ್ಟೇ ದೃಢ ಮನೋಭಾವ ತಾಳಿದರು. ಪಂಜಾಬಿನಲ್ಲಿ ತಾವು ಭಾಷಾ ದೃಷ್ಟಿಯಿಂದಲೂ ಧಾರ್ಮಿಕವಾಗಿಯೂ ಅಲ್ಪ ಸಂಖ್ಯಾತರಾಗಿದ್ದೇವೆಂದು ಸಿಖ್ ಮತೀಯರು ಈಗ ವಿಶೇಷ ಪ್ರಾತಿನಿಧ್ಯ ಕೇಳತೊಡಗಿದರು. ಜಿನ್ನಾ ಮತ್ತು ಸಿಖ್ ಮತೀಯವಾದಿಗಳು ಸಮ್ಮೇಳನವನ್ನು ತ್ಯಜಿಸಿ ನಡೆದರು. ಮೋತೀಲಾಲ್ ವರದಿಯು ಉದ್ದೇಶಿಸಿದ್ದ "ಸಾರ್ವತ್ರಿಕ ಅಂಗೀಕಾರದ ನ್ಯಾಯಯುತ ಕ್ರಮ"ವು ವಿಧೀರನೆ ಕುಸಿದುಬಿತ್ತು.

ಈ ಬೆಳವಣಿಗೆಗಳಿಂದ ಡೊಮಿನಿಯನ್ ಸ್ಥಾನಮಾನದ ವಿಚಾರವಾದ ಟೀಕೆ ಬಲವಾಯಿತು. ಕಾಂಗ್ರೆಸ್ಸಿನ ಸಾಮಾನ್ಯ ಕಾರ್ಯದರ್ಶಿಗಳಾಗಿದ್ದು, ವಾಮಪಕ್ಷೀಯ ಯುವಕರನ್ನು ಪ್ರತಿನಿಧಿಸುತ್ತಿದ್ದ ಜವಾಹರಲಾಲ್ ನೆಹರೂ ಮತ್ತು ಸುಭಾಷ್ ಬೋಸರು ಈ ಟೀಕೆಗಳನ್ನು ಧ್ವನಿಸತೊಡಗಿದರು. ಈಗ ಅವರು ಪೂರ್ಣ ಸ್ವರಾಜ್ಯ ಎಂಬ ಮದರಾಸು ನಿರ್ಣಯವನ್ನು ಜಾರಿಗೆ ತರಬೇಕೆಂದು ಕಾಂಗ್ರೆಸ್ಸನ್ನು ತುಯ್ಯತೊಡಗಿದರು. ಮೋತೀಲಾಲ್ ನೆಹರೂ ಅಧ್ಯಕ್ಷರಾಗಿದ್ದ ಕಲ್ಕತ್ತಾ ಕಾಂಗ್ರೆಸ್ ಅಧಿವೇಶನದಲ್ಲಿ ನಿರ್ಣಯಕ್ಕೆ ನೆಹರೂ ವರದಿಯನ್ನು ಪೋಷಿಸುವಂತಹ ಒಂದು ಉಪವಾಕ್ಯವನ್ನು ಸೇರಿಸಲಾಯಿತು. ಅದು ಹೀಗಿತ್ತು: "ಈ ನಿರ್ಣಯದಲ್ಲಿರುವ ಯಾವ ಅಂಶವೂ, ಕಾಂಗ್ರೆಸ್ಸಿನ ಹೆಸರಿನಲ್ಲಿ ಸಂಪೂರ್ಣ ಸ್ವರಾಜ್ಯಕ್ಕಾಗಿ ನಡೆಸುವ ಪ್ರಚಾರ ಕಾರ್ಯವನ್ನು ಮುಂದುವರಿಸಲು ಅಡ್ಡಿಯಾಗುವುದಿಲ್ಲ." 1929 ರ

ಒಳಗಾಗಿ ಬ್ರಿಟಿಷ್ ಸರ್ಕಾರವು ಮೋತೀಲಾಲ್ ವರದಿಯನ್ನು ಒಪ್ಪಿಕೊಳ್ಳದಿದ್ದರೆ ಮುಂದಿನ ಲಾಹೋರ್ ಕಾಂಗ್ರೆಸ್ ಅಧಿವೇಶನವು ಒಂದು ನೂತನ ನಾಗರಿಕ ಅಸಹಕಾರ ಚಳುವಳಿಗೆ ಕರೆ ಕೊಡುತ್ತದೆ ಎಂದೂ ಕಲ್ಕತ್ತ ಕಾಂಗ್ರೆಸ್ ನಿರ್ಣಯಿಸಿತು.

ಸಂಧಾನದಿಂದ ಭಿನ್ನಾಭಿಪ್ರಾಯಗಳು ಪರಿಹಾರವಾಗಿ, ಪಕ್ಷದ ಐಕ್ಯತೆಯು ಬೆಸುಗೆ ಬಿದ್ದಿತ್ತು. ಅಹಮದಾಬಾದಿನಲ್ಲಿ ಆರು ವರ್ಷಗಳ ನಿವೃತ್ತಿಯ ನಂತರ ಮತ್ತೆ ಗಾಂಧೀಜೀ ಕಾಂಗ್ರೆಸ್ಸಿನ ಅತ್ಯಂತ ವರಿಷ್ಠ ನಾಯಕರಾಗಿ ಮೇಲೇರುತ್ತಿದ್ದರು. ಘರ್ಷಣೆಗಳನ್ನು ಸಾಮರಸ್ಯದಿಂದ ಇತ್ಯರ್ಥಪಡಿಸಿಕೊಳ್ಳಬೇಕೆಂದು ಅಪೇಕ್ಷಿಸುತ್ತಿದ್ದ ಅವರೇ ಈ ಐಕ್ಯತೆಗೆ ಮುಖ್ಯ ಕಾರಣ. ಲಾಹೋರ್ ಕಾಂಗ್ರೆಸ್ ಅಧಿವೇಶನಕ್ಕೆ ತಂದೆಯನ್ನು ಅನುಸರಿಸಿ ಜವಾಹರಲಾಲ್ ನೆಹರೂ ಅಧ್ಯಕ್ಷರಾಗಬೇಕೆಂದೂ ಗಾಂಧೀಜೀ ವ್ಯವಸ್ಥೆ ಮಾಡಿದರು.

ಕಾಂಗ್ರೆಸ್ಸಿನ ಲಾಹೋರ್ ಸಮ್ಮೇಳನ ಕಿಂಚಿತ್ತೂ ಕೊರೆಯಿಲ್ಲದಂತೆ ಸಂಪೂರ್ಣ ಸ್ವರಾಜ್ಯಕ್ಕಾಗಿ ಕಾಂಗ್ರೆಸ್ಸನ್ನು ಬದ್ಧಗೊಳಿಸಿತು. ಕಾಮನ್‌ವೆಲ್ತಿನೊಳಗೇ ಇದ್ದು ಡೊಮಿನಿಯನ್ ಸ್ಥಾನಮಾನ ಪಡೆಯುವ ವಿಚಾರ ಇನ್ನು ಉಳಿಯಲಿಲ್ಲ. "ಯಾವಾಗಲೂ ತೀರಾ ಅಲ್ಪ, ಯಾವಾಗಲೂ ತೀರಾ ವಿಳಂಬ" ಎಂಬ ಸುಧಾರಣಾ ಸೂತ್ರದ ತೂಗುಯ್ಯಾಲೆ ಕೊನೆಗೊಂಡಿತು.

1929 ರ ಡಿಸೆಂಬರ್ 31ರಂದು, ಗಂಟೆ ದನಿಗಳು ಮಧ್ಯರಾತ್ರಿಯ ಸಮಯವನ್ನು ಮೊಳಗಿ ನೂತನ ವರ್ಷವನ್ನು ಹೊಸಿಲು ದಾಟಿಸಿದಾಗ, ರಾವೀ ನದಿಯ ದಂಡೆಯ ಮೇಲೆ ನೆರೆದಿದ್ದ ಲಕ್ಷಾಂತರ ಜನರು, ಜವಾಹರಲಾಲ್ ನೆಹರೂ ತ್ರಿವರ್ಣ ಧ್ವಜವನ್ನು ಹಾರಿಸುವ ದೃಶ್ಯವನ್ನು ಈಕ್ಷಿಸಿದರು. "ಇನ್ನೂ ಬ್ರಿಟಿಷರ ದಾಸ್ಯದಲ್ಲಿರುವುದು ಮಾನವತ್ವಕ್ಕೂ ದೈವತ್ವಕ್ಕೂ ವಿರುದ್ಧವಾಗಿ ಎಸಗುವ ಅಪರಾಧ" ಎಂದು ಅವರು ಗರ್ಜಿಸುವುದನ್ನು ಆಲಿಸಿದರು.

ಹೊಸ ಆಸೆ ಹರಡಿತ್ತು, ಹೊಸ ಉದ್ವೇಗ ಹೊಮ್ಮಿತ್ತು. ಗಾಳಿಯು ಸ್ವತಂತ್ರರಾಗಲೇಬೇಕೆಂದು ಕಟಿಬದ್ಧರಾದ ಜನತೆಯ ಸಿದ್ಧಾಂತದಿಂದ ತುಂಬಿ ಬೀಸಿತು.

# V

## ಸ್ವಾತಂತ್ರ್ಯದ ಸೂಚನೆಗಳು

20 ನೆಯ ಶತಮಾನದ ಮೂರನೆಯ ದಶಕದ ವರ್ಷಗಳಲ್ಲಿ ಸ್ವಾತಂತ್ರ್ಯದ ಹೋರಾಟ ಅನೇಕ ಹೆಜ್ಜೆಗಳನ್ನು ಮುಂದಿಟ್ಟಿತು. ಈ ದಶಕವು ಪ್ರಾರಂಭವಾದದ್ದು ಎರಡನೆಯ ಅಸಹಕಾರ ಚಳುವಳಿಯಿಂದ; ಎರಡನೆಯ ಮಹಾಯುದ್ಧ ಮತ್ತು ಭಾರತೀಯನನ್ನು ಅವನ ಸಮ್ಮತಿಯಿಲ್ಲದೆಯೇ ಅದರಲ್ಲಿ ತೊಡಗಿಸಿದುದರ ವಿರುದ್ಧ ಪ್ರತಿಭಟನೆ ಸೂಚಿಸಲು ಪ್ರಾಂತಗಳಲ್ಲಿ ಕಾಂಗ್ರೆಸ್ ರಾಜೀನಾಮೆ ಕೊಟ್ಟಿದ್ದರಿಂದ ಅದು ಮುಗಿಯಿತು. ಆದರೆ ಈ ಹತ್ತು ವರ್ಷಗಳಲ್ಲಿ ರಾಷ್ಟ್ರೀಯ ಹೋರಾಟವು ಸಾಗಿದ ನಡೆಯನ್ನು ಗುರುತಿಸುವುದಕ್ಕೆ ಮುಂಚಿತವಾಗಿ ಎರಡನೆಯ ದಶಕದ ಕೊನೆಗೆ ಮತ್ತು ಮೂರನೆಯ ದಶಕದ ಮೊದಲಿಗೆ ಕ್ರಾಂತಿಕಾರೀ ಭಯೋತ್ಪಾದಕ ಹಿಂಸಾಕೃತ್ಯಗಳು ಮತ್ತೆ ಮೇಲೆದ್ದುದನ್ನು ನಾವು ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ. ಈ ಅವಧಿಯಲ್ಲೇ ಕಾರ್ಮಿಕ ಚಳುವಳಿಯೂ ಶಕ್ತಿ ತುಂಬಿಕೊಂಡಿತು ಮತ್ತು ದೇಶದ ರಾಜಕೀಯ ಚಿಂತನೆಯಲ್ಲಿ ಸಮಾಜವಾದೀ ಮತ್ತು ಕಮ್ಯೂನಿಸ್ಟ್ ಭಾವನೆಗಳು ಒಂದು ದೃಢವಾದ ಸ್ಥಾನ ಪಡೆದುವು. ಇವೆಲ್ಲವೂ ಸೇರಿ ಮೂರನೆಯ ದಶಕದ ರಾಜಕೀಯ ಬೆಳವಣಿಗೆಗಳ ಮೇಲೆ ಪ್ರಭಾವ ಬೀರಿದುವು.

1928 ರಲ್ಲಿಯೇ ಭಾರತದಲ್ಲಿ 203 ಮುಷ್ಕರಗಳು ನಡೆದುವು. ಅವುಗಳಲ್ಲಿ 5,05,000 ಜನ ಕಾರ್ಮಿಕರು ಭಾಗವಹಿಸಿದ್ದರು. ಮುಂಬಯಿ ಮತ್ತು ದಕ್ಷಿಣ ಮಹಾರಾಷ್ಟ್ರಗಳ ಹತ್ತಿಬಟ್ಟೆ ಉದ್ಯಮದ ಗಿರಣಿ ಕಾಮಗಾರ್ ಯೂನಿಯನ್‌ಗಳಲ್ಲಿ ಸದಸ್ಯರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಏರಿತ್ತು. ದಕ್ಷಿಣ ಭಾರತ, ಮದರಾಸು ಮತ್ತು ದಕ್ಷಿಣ ಮರಾಠಾ ರೈಲ್ವೆಗಳ ಕೆಲಸಗಾರರು ಕ್ರಾಂತಿಗೆ ಕರೆಕೊಡುವ ಸಂಘಗಳನ್ನು ಪ್ರಾರಂಭಿಸಿದ್ದರು. **ಕೀರ್ತಿ, ಮಜ್ದೂರ್, ಕಿಸಾನ್, ಸ್ಪಾರ್ಕ್** ಮತ್ತು **ಕ್ರಾಂತಿ** ಮೊದಲಾದ ಕಮ್ಯೂನಿಸ್ಟ್ ವರ್ತಮಾನ ಪತ್ರಿಕೆಗಳು ನಗರಗಳಲ್ಲಿ ಹರಡಿದ್ದುವು. ಯುವಕ ಸಂಘಗಳು (Youth Clubs) ಸ್ಥಾಪಿತವಾಗಿದ್ದುವು. ಕೆಳ ಮಧ್ಯಮ ವರ್ಗದ ವಿದ್ಯಾರ್ಥಿಗಳಲ್ಲಿ ಅವು ತುಂಬ ಜನಪ್ರಿಯವಾಗಿದ್ದುವು. ಮೇಲು ಮಧ್ಯಮ ವರ್ಗದವರನ್ನು ಮತ್ತು ಕಾಂಗ್ರೆಸ್ಸಿನ ಸ್ವರಾಜ್ಯವಾದೀ ನಾಯಕರನ್ನು ಕಂಡರೆ ಅವರಿಗೆ ಸ್ವಲ್ಪ ಸಹಾನುಭೂತಿ. ಆದರೆ ಅವರೇನೂ ಸ್ವತಂತ್ರವಾಗಿ ವ್ಯವಸ್ಥಿತ ರೀತಿಯಲ್ಲಿ ಸಮಾಜವಾದಕ್ಕಾಗಿ ಹೋರಾಟ ನಡಸಲಿಲ್ಲ. ಭಾರೀ ಪ್ರಮಾಣದ ನಗರಗಳ ಕಾರ್ಮಿಕ ವರ್ಗವನ್ನು ಒಳಗೊಂಡಂತೆ ಕಾರ್ಮಿಕ ಸಂಘಟನೆಗಳನ್ನು ಮಾಡಿ ಸಮಾಜವಾದದ ಆಧಾರದ ಮೇಲೆ ಉತ್ತಮ ಸ್ಥಾನಮಾನಗಳಿಗಾಗಿ ಅವರು

ಹೋರಾಡುವಂತೆ ಅವರಿಗೆ ತರಪೇತು ಕೊಡಲಿಲ್ಲ. ಭಾರತೀಯ ಕಾರ್ಮಿಕ ವರ್ಗವನ್ನು ಅಂತರರಾಷ್ಟ್ರೀಯ ಕಾರ್ಮಿಕ ವರ್ಗದ ಚಳುವಳಿಗಳೊಂದಿಗೆ ಕೂಡಿಸಲು ಅವರು ಕ್ರಮ ಕೈಗೊಳ್ಳಲೂ ಇಲ್ಲ.

ಕಲ್ಕತ್ತಾ ಕಾಂಗ್ರೆಸ್ ಅಧಿವೇಶನ ಮತ್ತು ಸರ್ವಪಕ್ಷ ಸಮ್ಮೇಳನಗಳ ಸಮಯದಲ್ಲಿ ಕಮ್ಯೂನಿಸ್ಟರು ಮೊದಲನೆಯ ಅಖಿಲ ಭಾರತ ಕಾರ್ಮಿಕ ಮತ್ತು ಕೃಷಿಕ ಪಕ್ಷಗಳ ಸಮ್ಮೇಳನವನ್ನು ಸೇರಿಸಿದರು. ಈ ಸಮ್ಮೇಳನವು ಶ್ರಮಜೀವಿ ವರ್ಗದ ಹೋರಾಟದ ಅಗತ್ಯ; "ತತ್ವತಃ ಯಾವ ಪರಿಹಾರವೂ ಇಲ್ಲದೆ" ಭೂಮಾಲೀಕತ್ವದ ನಿರ್ಮೂಲನ; ದಿನದ ಕೆಲಸದ ವೇಳೆಯಲ್ಲಿ ಇಳಿತಾಯ ಮತ್ತು ಕನಿಷ್ಠ ವೇತನ; ಪತ್ರಿಕಾ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಮತ್ತು ಟ್ರೇಡ್ ಯೂನಿಯನ್ ಸಂಘ ಸ್ವಾತಂತ್ರ್ಯ - ಇವುಗಳನ್ನು ಒತ್ತಿ ಹೇಳಿತು. 1928 ರಲ್ಲಿ ಅಪೇಕ್ಷಣೀಯವಾದ ತಾತ್ಕಾಲಿಕ ಗುರಿಯಾಗಿಯಾದರೂ ಡೊಮಿನಿಯನ್ ಸ್ಥಾನಮಾನವನ್ನು ಕಾಂಗ್ರೆಸ್ ಒಪ್ಪಿದ್ದನ್ನು ಅದು ಟೀಕಿಸಿತು.

ಸೈಮನ್ ವಿರೋಧೀ ಚಳುವಳಿಯ ಕಾವು ವಾಮಪಕ್ಷಕ್ಕೆ ಸರಿಯುತ್ತಿದೆ ಎಂದು ಬ್ರಿಟಿಷ್ ಆಳುಗರು ಭಾವಿಸಿದರು. ಇನ್ನೊಂದು ರಾಯಲ್ ಕಮೀಷನ್ ನೇಮಕವಾಯಿತು. ಕಾರ್ಮಿಕ ವಿಚಾರಗಳನ್ನು ಕುರಿತ ವ್ಹಿಟ್ಲೀ ಕಮೀಷನ್ (Whitley Commision on Labour) ಅದು. ಕಮೀಷನ್ ಭಾರತಕ್ಕೆ ಭೇಟಿ ಕೊಟ್ಟು, ಕಾರ್ಮಿಕ ಸಂಬಂಧಗಳನ್ನು ಉತ್ತಮಪಡಿಸುವಿಕೆ ಮತ್ತು ಕಾರ್ಮಿಕ ಹಿತಾಸಕ್ತಿಗಳ ಉತ್ತಮೀಕರಣಗಳಿಗೆ ಮಾರ್ಗಗಳನ್ನು ಸೂಚಿಸಲಿತ್ತು. ವಾಮಪಕ್ಷೀಯ ಚಳುವಳಿಗ ಇವೇ ಮುಖ್ಯವಾದ ಶಕ್ತಿಮೂಲಗಳಾಗಿದ್ದುವು. ಕಾರ್ಮಿಕ ವರ್ಗದವರಿಗ ಸುಮ್ಮನೆ ಸಮಾಜವಾದ ಕ್ರಾಂತಿ ಎಂದು ಅಸ್ಪಷ್ಟವಾಗಿ ಮಾತನಾಡುವ ನಾಯಕರಿಗಿಂತಲೂ ಹೆಚ್ಚಾಗಿ ಸರಕಾರವು ತಮ್ಮ ಯೋಗಕ್ಷೇಮದಲ್ಲಿ ಅತೀವವಾದ ಆಸಕ್ತಿ ತಳದಿದೆ ಎಂಬ ತಪ್ಪುಭಾವನ ಬರುವಂತೆ ಮಾಡುವುದೇ ಈ ಕಮೀಷನ್ನಿನ ಉದ್ದೇಶವಾಗಿತ್ತು. ಸುಧಾರಣಾವಾದಿಯಾಗಿದ್ದ ವ್ಹಿಟ್ಲೀ ಕಮೀಷನ್ 1929 ರಲ್ಲಿ ಭಾರತಕ್ಕ ಬಂದಾಗ ಅನೇಕ ಕಾರ್ಮಿಕ ಸಂಸ್ಥಗಳು ಅದನ್ನು ಬಹಿಷ್ಕರಿಸಿದುವು. 1928 ರಲ್ಲಿ ಸರಕಾರವು ಕೇಂದ್ರ ಶಾಸನ ಸಭೆಯ ಮೂಲಕ ಉದ್ಯಮ ವಿವಾದ ಮಸೂದೆ (Trade Disputes Bill) ಯೊಂದನ್ನು ಜಾರಿಗೆ ತರಲು ಪ್ರಯತ್ನಿಸಿತು. ತಮಗ ಅನುಕೂಲ ಮಾಡಿಕೊಡುವುದಿರಲಿ, ವಾಸ್ತವವಾಗಿ ತಮ್ಮ ಕ್ರಿಯಾ ಸ್ವಾತಂತ್ರ್ಯವನ್ನೇ ಕತ್ತರಿಸುವಂತ ಸಾರ್ವಜನಿಕ ಕ್ಷೇಮ ಶಾಸನ (Public Safety Act)ಕ್ಕ ತಿದ್ದುಪಡಿಗಳನ್ನು ತರಲು ಪ್ರಯತ್ನಿಸಿದ್ದಿತು. ಇದನ್ನು ಭಾರತದ ಕಾರ್ಮಿಕರು ಮರೆತಿರಲಿಲ್ಲ. ಈಗ ಸೂಚಿತವಾದ ಶಾಸಕಾಂಗ ಕ್ರಮಗಳಾದರೂ ಹೀಗಿದ್ದುವು: ಪ್ರಾಂತಗಳಲ್ಲಿ ಶಾಂತಿ ಶಿಸ್ತುಗಳ ವ್ಯವಸ್ಥ ಕುಸಿದಿದೆ ಎಂದು ಮನವರಿಕೆಯಾದಾಗ (ಶಾಸಕಾಂಗದ ಹತೋಟಿಯಿಲ್ಲದೆಯೇ) ಕಾರ್ಯಾಂಗವು ಮುಷ್ಕರಗಳನ್ನು ತಡೆಯಬಹುದು, ತುರ್ತು ಕ್ರಮಗಳನ್ನು ಕೈಗೊಳ್ಳಬಹುದು ಎಂದು ಅವಕಾಶ ಕೊಡುತ್ತಿದ್ದುವು. ಭಾರತದಲ್ಲಿ ವಾಮಪಂಥೀಯ ಪ್ರವೃತ್ತಿಗಳಿಗ ಬೆಂಬಲ ಕೊಡುವ ಜಾಗತಿಕ ಸಂಸ್ಥೆಗಳೊಂದಿಗ ಸಂಪರ್ಕ ಬೆಳೆಸಿ, ಅವುಗಳಿಂದ ಧನಸಹಾಯ ಪಡೆಯುದ ಹಾಗೆ ಭಾರತೀಯ ರಾಜಕೀಯ ಪಕ್ಷಗಳಿಗ ಹೆಚ್ಚುಹೆಚ್ಚಾಗಿ ಅಸ್ತಿಪಡಿಸುವುದೂ ಅವುಗಳ

ಉದ್ದೇಶವಾಗಿತ್ತು. ಮೋತೀಲಾಲ್ ನೆಹರೂ ಅವರ ನೇತೃತ್ವದ ಕೇಂದ್ರ ಶಾಸನಸಭೆ ಈ ಮಸೂದೆಗಳನ್ನು ತಿರಸ್ಕರಿಸಿತು.

1929 ರ ಮಾರ್ಚಿ ತಿಂಗಳಲ್ಲಿ ಗಿರಣಿ ಕಾಮ್‌ಗಾರ್ ಯೂನಿಯನ್ ಮತ್ತು ರೈಲ್ವೆ ಕೆಲಸಗಾರರು ಜಂಟಿಯಾಗಿ ಕರೆಕೊಟ್ಟಿದ್ದ ಒಂದು ಸಾಮಾನ್ಯ ಮುಷ್ಕರ ಮುಂಬಯಿಯಲ್ಲಿ ನಡೆಯಿತು. ಇದು 1928 ರ ಚಳುವಳಿಗಳಲ್ಲಿ ಭಾಗವಹಿಸಿದ್ದ ಕೆಲಸಗಾರರನ್ನು ವಜಾಮಾಡಿ ಅವರ ಸ್ಥಾನದಲ್ಲಿ ಪಠಾಣ ಕಾರ್ಮಿಕರಿಗೆ ಉದ್ಯೋಗ ಕೊಟ್ಟಿದ್ದನ್ನು ಪ್ರತಿಭಟಿಸುವುದಕ್ಕಾಗಿ ನಡೆಯಿತು. ಈ ಕಾನೂನುಗಳ ಉದ್ದೇಶ ಯೂನಿಯನ್ನಿನ ಐಕ್ಯತೆಯನ್ನು ಒಡೆಯುವುದು ಎಂದೂ, ಅದರ ಫಲವಾಗಿ ಗಿರಣಿಗಳಲ್ಲಿ ಹಿಂದೂ ಮುಸ್ಲಿಂ ಗಲಭೆಗಳಾಗಿವೆ ಎಂದೂ ಮುಷ್ಕರ ಹೂಡಿದ್ದ ಕಾರ್ಮಿಕರು ಹೇಳಿದರು. ಮುಷ್ಕರವು ಕಾನ್‌ಪುರ ಮತ್ತು ಕಲ್ಕತ್ತಾಗಳಿಗೆ ಹರಡಿತು. ಇದಾದ ಕೂಡಲೇ 1929 ರ ಮಾರ್ಚ್ 20ರಂದು ದೇಶಾದ್ಯಂತ ಮೂವತ್ತಮೂರು ಜನ ಪ್ರಮುಖ ಕಾರ್ಮಿಕ ನಾಯಕರನ್ನು ಬಂಧಿಸಲಾಯಿತು. ಬ್ರಿಟಿಷ್ ಚಕ್ರಾಧಿಪತ್ಯಕ್ಕೆದುರಾಗಿ ಕ್ರಾಂತಿಯ ಒಳಸಂಚು ಹೂಡಿದರೆಂಬುದೇ ಅವರ ಮೇಲೆ ಹೊರಿಸಿದ ಆಪಾದನೆ. ಬಂಧಿತರಾದ ನಾಯಕರಲ್ಲಿ ಮುಜಫರ್ ಅಹಮದ್, ಡಾಂಗ್, ಮಿರಜ್‌ಕರ್ ಮತ್ತು ಪಿ.ಸಿ. ಜೋಶಿ ಇವರೂ ಇದ್ದರು. ಮುಂದೆ ಇವರೆಲ್ಲರೂ ಸುಪ್ರಸಿದ್ಧ ಕಮ್ಯೂನಿಸ್ಟರಾದರು. ಜೊತೆಗೆ ಸೆರೆಗೊಳಗಾದವರಲ್ಲಿ ಮುಂಬಯಿಯಲ್ಲಿ ಕಮ್ಯೂನಿಸ್ಟರಿಗೆ ನೆರವಾಗಲೆಂಬ ಉದ್ದೇಶದಿಂದ ಕಳುಹಿಸಿದ್ದ ಇಬ್ಬರು ಬ್ರಿಟಿಷ್ ಕಮ್ಯೂನಿಸ್ಟರು, ಬೆನ್ ಬ್ರಾಡ್ಲೀ (Ben Bradley) ಮತ್ತು ಫಿಲಿಪ್ ಸ್ಪ್ರ್ಯಾಟ್ (Philip Spratt)ಸೇರಿದ್ದರು. ಕೆಲವರು ಕಮ್ಯೂನಿಸ್ಟರಲ್ಲದ ತೀವ್ರಗಾಮಿ ನಾಯಕರೂ ಇದ್ದರು. ಲೆಜಿಸ್ಲೇಟಿವ್ ಅಸೆಂಬ್ಲಿಯು ಅನುಮತಿಸಲು ನಿರಾಕರಿಸಿದ್ದ ಎರಡು ದಮನಕಾರೀ ಶಾಸನಗಳನ್ನು ಜಾರಿಗೆ ತರಲು ವೈಸರಾಯ್ ಲಾರ್ಡ್ ಇರ್ವಿನ್ (Lord Irwin) ಒಂದು ವಿಶೇಷ ಸುಗ್ರೀವಾಜ್ಞೆ ಹೊರಡಿಸಿದನು. 'ಸಂಚುಕೋರರನ್ನು' ಮೀರತ್ತಿಗೆ, ಕಾರ್ಮಿಕ ವರ್ಗದ ಐಕ್ಯತೆಯ ಮುಖ್ಯ ಕೈಗಾರಿಕಾ ಕೇಂದ್ರಗಳಿಂದ ಬಹುದೂರಕ್ಕೆ ಕರೆದೊಯ್ಯಲಾಯಿತು. ಅಲ್ಲಿ ಅನೇಕ ವರ್ಷಗಳ ಕಾಲ ವಾಸ್ತವವಾಗಿ 1933 ರ ವರೆಗೆ "ಮೀರತ್ ಒಳಸಂಚು ಮೊಕದ್ದಮೆ" ನಡೆಯಿತು. ಕೊನೆಗೆ ಬಂಧಿತರಲ್ಲಿ ಅನೇಕರನ್ನು ಅಪರಾಧಿಗಳೆಂದು ತೀರ್ಪುಕೊಟ್ಟು ಬೇರೆ ಬೇರೆ ಅವಧಿಯ ಕಾರಾಗೃಹ ವಾಸದ ಶಿಕ್ಷೆಯನ್ನು ಅವರಿಗೆ ವಿಧಿಸಲಾಯಿತು. ಕಮ್ಯೂನಿಸ್ಟರು ತಮ್ಮ ಆದರ್ಶಗಳು ಮತ್ತು ಪ್ರಭುತ್ವ ವಿರೋಧೀ ನಿಲುವಿನ ಸಮರ್ಥನೆ ಇವುಗಳನ್ನು ಒಳಗೊಂಡ ಸುದೀರ್ಘವಾದ ಮನವಿ ಸಲ್ಲಿಸಿದರು. ಆದರೆ ಅದನ್ನು ಅಡಗಿಸಲಾಯಿತು.

ಈಚೆಗೆ ತಿಳಿದುಬಂದಿರುವ ಅಂಶಗಳಿಂದ, ಸರಕಾರವು ಆಗ ಜವಾಹರಲಾಲ್ ನೆಹರೂ ಅವರನ್ನೂ ಒಬ್ಬ ಸಂಚುಕೋರರೆಂದು ಬಂಧಿಸಬೇಕೆಂದು ಯೋಚಿಸಿತ್ತು ಎಂಬುದು ಗೊತ್ತಾಗಿದೆ. ಆದರ ಅಂಥದೊಂದು ಘಟನೆಯು ಉಂಟುಮಾಡಬಹುದಾದ ವಿಕ್ಷುಬ್ಧ ಪರಿಸ್ಥಿತಿಗೆ ಹೆದರಿ ಸರಕಾರ ಹಿಂಜರಿದಿತ್ತು. ಮೀರತ್ ಬಂಧಿತರಿಗೆ ನ್ಯಾಯದ ನೆರವು ಒದಗಿಸಲು ನೆಹರೂ ಪ್ರಯತ್ನಮಾಡಿದರು. ಆದರೆ 1929-31 ರ ಘಟನೆಗಳು ಕಮ್ಯೂನಿಸ್ಟ್ ವಿಚಾರಣೆಯನ್ನು ಜನರ ಗಮನದಿಂದ ಅತ್ತ ಸರಿಸಿದುವು.

ಅಂತೂ 1929 ವರ್ಷವಿಡೀ ಮುಷ್ಕರಗಳು ಮುಂದುವರಿದುವು. ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ (ಎ.ಐ.ಟಿ.ಯು.ಸಿ.) ನಾಗಪುರ ಅಧಿವೇಶನದಲ್ಲಿ ಟ್ರೇಡ್ ಯೂನಿಯನ್ ವಾದಿಗಳ ವಾಮಪಕ್ಷಕ್ಕೆ ಕಾಂಗ್ರೆಸ್ಸಿಗರ ಬೆಂಬಲ ದೊರಕಿತು. ವ್ಹಿಟ್ಲೆ ಕಮೀಷನ್ನನ್ನು ಸಂಪೂರ್ಣವಾಗಿ ಬಹಿಷ್ಕರಿಸುವುದು, ಎ.ಐ.ಟಿ.ಯು.ಸಿ.ಯನ್ನು ಸಾಮ್ರಾಜ್ಯಶಾಹಿ ವಿರೋಧೀ ಲೀಗ್ (League Against Imperialism) ನೊಂದಾಗಿ ಕೂಡಿಸುವುದು, ಈ ಎರಡು ಅಂಶಗಳಿಗೂ ಬೆಂಬಲ ಸಿಕ್ಕಿತು. ಈ ಬೇಡಿಕೆಗಳ ಪರವಾಗಿರದ ಎನ್.ಎಂ. ಜೋಶಿ ಗುಂಪು ಸೋತಿತು. ಎ.ಐ.ಟಿ.ಯು.ಸಿ.ಯನ್ನು ತ್ಯಜಿಸಿ ಅವರು ಅಖಿಲ ಭಾರತ ಟ್ರೇಡ್ ಯೂನಿಯನ್ ಫೆಡರೇಷನ್ (AITUF) ಎಂಬ ಸಂಘವನ್ನು ಸ್ಥಾಪಿಸಿಕೊಂಡರು. ಈ ಸಂಸ್ಥೆಯು ಕ್ರಾಂತಿಕಾರೀ ಉದ್ದೇಶಗಳನ್ನು ತ್ಯಜಿಸಿತು, ರಾಜಕೀಯ ಬೇಡಿಕೆಗಳನ್ನೂ ವರ್ಜಿಸಿತು. ಕಾರ್ಮಿಕರ ಆರ್ಥಿಕ ಪರಿಸ್ಥಿತಿಗಳನ್ನು ಸುಧಾರಿಸುವ ಧ್ಯೇಯವೊಂದನ್ನು ಮಾತ್ರ ಉಳಿಸಿಕೊಂಡಿತು. ಆದರೆ ಸ್ಥೂಲವಾಗಿ ಹೇಳುವುದಾದರೆ ಕಾರ್ಮಿಕ ವರ್ಗದ ಇನ್ನೂ ಹೆಚ್ಚು ತೀವ್ರಗಾಮಿ ಪಂಗಡಗಳು ಭಾರತ ರಾಷ್ಟ್ರೀಯ ಕಾಂಗ್ರೆಸ್ ವ್ಯವಸ್ಥೆಗೊಳಿಸುತ್ತಿದ್ದ ರಾಷ್ಟ್ರೀಯ ಚಳುವಳಿಯಲ್ಲಿ ಪಾಲುಗೊಳ್ಳಲಿಲ್ಲ. ಜವಾಹರಲಾಲ್ ನೆಹರೂ ತಮ್ಮ ಆತ್ಮಕತೆಯಲ್ಲಿ ಬರೆದಂತೆ:

> "ಕಾರ್ಮಿಕರ ಮುಂದುವರಿದ ಪಂಗಡಗಳು ರಾಷ್ಟ್ರೀಯ ಕಾಂಗ್ರೆಸ್ಸಿನ ಬಗೆಗೆ ದೂರತೆಯ ಮನೋಭಾವ ತಳೆದರು. ಅದರ ನಾಯಕರನ್ನು ಅವರು ಅಪನಂಬುಗೆಯಿಂದ ನೋಡಿದರು, ಅದರ ಆದರ್ಶಗಳನ್ನು ಬೂರ್ಷ್ವಾ ರೀತಿಯದು, ಪ್ರಗತಿವಿರೋಧಿಯಾದದ್ದು ಎಂದು ಭಾವಿಸಿದರು. ಕಾರ್ಮಿಕ ದೃಷ್ಟಿಕೋನದಿಂದ ಅದು ಹಾಗಿದ್ದದ್ದು ನಿಜ."

ಹೀಗೆ ಭಿನ್ನ ಮನೋಧರ್ಮಗಳಿಂದಾಗಿ - ಒಂದು ಸಂಪ್ರದಾಯನಿಷ್ಠ, ಇನ್ನೊಂದು ತೀವ್ರಗಾಮಿ, ಮತ್ತು ಸರಕಾರದ ದಬ್ಬಾಳಿಕೆಯಿಂದಾಗಿ ಮೂರನೆಯ ದಶಕದ ಪ್ರಾರಂಭದಲ್ಲಿ ರಾಷ್ಟ್ರೀಯತೆಯ ಉದ್ಬೋಧನೆಯಲ್ಲಿ ಕಾರ್ಮಿಕರ ಪಾಲು ದುರ್ಬಲವಾಯಿತು.

ಪಂಜಾಬ್, ಉತ್ತರ ಪ್ರದೇಶ ಮತ್ತು ಬಂಗಾಳದಲ್ಲಿ ಕೆಳಮಧ್ಯಮ ವರ್ಗದ ಯುವಜನರಲ್ಲಿ ವಿನಾಶಕಾರೀ ಕೃತ್ಯಗಳು ಮತ್ತೆ ಕಾಣಿಸಿಕೊಂಡುವು. ಕಾಂಗ್ರೆಸ್ಸಿನ ಮಿತಗಾಮಿಯೂ ಅಹಿಂಸಾತ್ಮಕವೂ ಆದ ನೀತಿಗಳಿಂದ ಅವರು ಕ್ಷುಬ್ಧರಾಗಿದ್ದರು. 1925 ರಲ್ಲಿ ಉತ್ತರ ಪ್ರದೇಶದಲ್ಲಿ ಬಂಗಾಳಿಗಳೂ ಸೇರಿದ್ದ ಪ್ರಸಿದ್ಧವಾದ ಕಾಕೋರಿ ಒಳಸಂಚು ಮೊಕದ್ದಮೆ ನಡೆಯಿತು. ಆಪಾದಿತರಲ್ಲಿ ಮೂವರಾದ ರಾಮಪ್ರಸಾದ್ ಬಿಸ್ಮಿಲ್, ರೋಷನ್‌ಲಾಲ್ ಮತ್ತು ಅಷಫರುಲ್ಲಾ ಅವರಿಗೆ ಮರಣದಂಡನೆ ವಿಧಿಸಿ, ಗಲ್ಲಿಗೇರಿಸಲಾಯಿತು. ಸರಕಾರದ ಸಂದೇಹಕ್ಕೆ ಒಳಗಾಗಿದ್ದ ಇನ್ನೂ ಕೆಲವರು ಬಂಧನವನ್ನು ತಪ್ಪಿಸಿಕೊಂಡು ಕಣ್ಮರೆಯಾಗಿದ್ದರು. 1928 ರ ವೇಳೆಗೆ ಹಾಗೆ ತಪ್ಪಿಸಿಕೊಂಡು ಹೋಗಿದ್ದವರಲ್ಲಿ ಇನ್ನೂ ಸ್ವತಂತ್ರವಾಗಿದ್ದವರು ಚಂದ್ರಶೇಖರ ಆಜಾದ್ ಮಾತ್ರ. ಹಿಂದೂಸ್ಥಾನ್ ರಿಪಬ್ಲಿಕನ್ ಸೈನ್ಯದ (Hindustan Republican Army) ಹೆಸರನ್ನು ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್



ದಂಡಿಯಲ್ಲಿ ಗಾಂಧೀಜಿಯವರಿಂದ ಉಪ್ಪಿನ ಕಾನೂನು ಉಲ್ಲಂಘನೆ



ಖಾನ್ ಅಬ್ದುಲ್ ಗಫಾರ್ ಖಾನ್



ಅಬುಲ್ ಕಲಮ್ ಆಜಾದ್

GREAT MARCH FOR LIBERTY BEGINS.

Mahatma Starts With His Chosen Band Of 78.

RUMOURS OF IMPENDING ARREST BELIED.

Ashram Besieged By Eager Crowds.

SOUL-STIRRING SCENES ON BIDDING FAREWELL.

1,000 WOMEN PARTICIPATE IN HUGE PROCESSION

CONGRESS FLAG HOISTED IN JAPAN.

FIRST STEP TOWARDS SWARAJ

LABOUR GOVT. CAN'T PLAY TORY GAME

"Daily Herald" Quotes Burke On "Great Empire & Little Minds"

"NO REPRESSIVE POLICY IN INDIA".

ವೃತ್ತಪತ್ರಿಕೆಗಳಲ್ಲಿ ದಂಡಿಯಾತ್ರೆ



ಜವಾಹರಲಾಲ್ ನೆಹರೂ



1938 ರಲ್ಲಿ ಸ್ಪೇನ್‌ನಲ್ಲಿ ಕೃಷ್ಣಮೆನನ್, ಜನರಲ್ ಲಿಸ್ಟರ್ ಮತ್ತು
ಜವಾಹರಲಾಲ್ ನೆಹರೂ



ಗೋವಿಂದ್ ವಲ್ಲಭ್ ಪಂತ್



ಜಯಪ್ರಕಾಶ್ ನಾರಾಯಣ್



ಆಜಾದ್ ಹಿಂದ್ ಸೈನ್ಯದ ಒಂದು ಮಹಿಳಾ ಪಡೆ

ಎಂದು ಬದಲಾಯಿಸಲಾಯಿತು. ಅದರ ಧ್ಯೇಯ ಭಾರತ ಸಮಾಜವಾದೀ ಗಣರಾಜ್ಯದ ಸ್ಥಾಪನೆಯಾಯಿತು.

ಅಕ್ಟೋಬರ್ 30 ರಂದು ಸೈಮನ್ ಕಮೀಷನ್ ಲಾಹೋರಿಗೆ ವಿಚಾರಣೆಗೆಂದು ಬಂದಾಗ ಹಿಂದಿನಂತೆಯೇ "ಹಿಂದಿರುಗು ಸೈಮನ್" ಘೋಷಣೆಯೇ ಎದುರಾಯಿತು. ಈಗ ಪ್ರದರ್ಶನದ ನಾಯಕರಾಗಿದ್ದವರು ಪಂಜಾಬಿನ ಪ್ರಮುಖ ವ್ಯಕ್ತಿಯಾಗಿದ್ದ ಲಾಲಾ ಲಜಪತರಾಯ್. ಅಹಿಂಸಾತ್ಮಕ ಮೆರವಣಿಗೆಯನ್ನು ಹೊಡೆದು ಚದುರಿಸಲು ಪೋಲೀಸರು ಪ್ರಯತ್ನಿಸಿದರು. ದೊಂಬಿ ಹೊಡೆದಾಟದಲ್ಲಿ ಲಜಪತರಾಯ್ ಅವರಿಗೆ ಗಾಯಗಳಾದುವು; ಆಮೇಲೆ ಅವರು ಮೃತರಾದರು. ಲಾಠೀ ಹೊಡೆತದ ಉಸ್ತುವಾರಿ ವಹಿಸಿದ್ದ ಪೋಲೀಸ್ ಸೂಪರಿಂಟೆಂಡೆಂಟ್ ಸಾಂಡರ್ಸ್ (Saunders)ನನ್ನು ಭಗತ್ ಸಿಂಗ್ ಗುಂಡಿಟ್ಟು ಕೊಂದನು. ಭಗತ್ ಸಿಂಗ್ ಪಂಜಾಬ್ ನೌಜವಾನ್ ಭಾರತ್ ಸಭಾದ ನಾಯಕನೂ, ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ ಸದಸ್ಯನೂ ಆಗಿದ್ದನು. ತನ್ನ ಸಹವರ್ತಿಗಳೊಂದಿಗೆ ಭಗತ್ ಸಿಂಗ್ ತಪ್ಪಿಸಿಕೊಂಡನು. 1907 ರಲ್ಲಿ ಹುಟ್ಟಿದ ಅವನು ಅಜಿತ್ ಸಿಂಗರ ಸೋದರಳಿಯ. 1928 ರಲ್ಲಿ ನೌಜವಾನ್ ಭಾರತ್ ಸಭಾ ಪಂಜಾಬಿನಲ್ಲಿ ಕೀರ್ತಿ ಕಿಸಾನ್ ಪಾರ್ಟಿಯ ಸಂಪರ್ಕ ಪಡೆಯಿತು. ಅಕ್ಟೋಬರ್‌ನಲ್ಲಿ ಭಗತ್ ಸಿಂಗನೂ ಅವನ ಸಹವರ್ತಿಗಳೂ ದಹಲಿಯಲ್ಲಿ ಫೇರೋಜ್‌ಷಾಹಾ ಕೋಟ್ಲಾ ಬಳಿ ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ (H.S.R.A.) ರಚನೆಗಾಗಿ ಒಂದು ಸಭೆಯಲ್ಲಿ ಭಾಗವಹಿಸಿದ್ದರು. ಜನಸಾಮಾನ್ಯರು ಕೂಡಿದ ಸಾಮೂಹಿಕ ಕ್ರಾಂತಿಕಾರೀ ಚಟುವಟಿಕೆಯು ದೇಶವನ್ನು ವಸಾಹತು ದಾಸ್ಯದಿಂದ ವಿಮೋಚನೆಗೊಳಿಸುತ್ತದೆ ಎಂಬುದು ಸಭೆಯ ನಂಬಿಕೆಯಾಗಿತ್ತು. ಎಂದೇ "ಜನತೆಗಾಗಿ ಜನತೆಯಿಂದ ಕ್ರಾಂತಿ" ಎಂಬ ಘೋಷಣೆಯನ್ನು ಅದು ಮುಂದಿಟ್ಟಿತು. ಹಳ್ಳಿಗರಿಗೆ ರಾಜಕೀಯ ಸ್ಥಿತಿಗತಿಗಳನ್ನು ವಿವರಿಸುವುದೂ ಅಗತ್ಯ ಎಂದು ಅದು ನಂಬಿತ್ತು. ಕ್ರಾಂತಿಕಾರೀ ಹೋರಾಟದಲ್ಲಿ ಭಯೋತ್ಪಾದನೆ ಅನಿವಾರ್ಯವಾದ ಒಂದು ಹಂತ ಎಂದು ಒತ್ತಿಹೇಳಿತು. ವೈಯಕ್ತಿಕ ವೀರಾವೇಶ ಪ್ರದರ್ಶನ ಮತ್ತು ಬಲಿದಾನಗಳ ಮೂಲಕ ಜನತೆಯನ್ನು ಜಾಗ್ರತಗೊಳಿಸುವುದು ಅದರ ಗುರಿಯಾಗಿತ್ತು.

ಈ ನಂಬಿಕೆಗಳ ಆಧಾರದ ಮೇಲೆ ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ ಮರೆಯಿಂದ ಹೊರಗೆ ಬರಲು ನಿರ್ಧರಿಸಿತು. ಭಾರತೀಯರ ಕಣ್ಣೆದುರಿಗೆ ನಿಂತು ತನ್ನ ಕೆಲಸಗಳಿಗೆ ತಾನೇ ಪೂರ್ಣ ಹೊಣೆಯಾಗಿರಲು ತೀರ್ಮಾನಿಸಿತು. 1929 ರ ಏಪ್ರಿಲ್ 8 ರಂದು ಕೇಂದ್ರ ವಿಧಾನಸಭೆಯಲ್ಲಿ ಅರ್ಥ ಖಾತೆಯ ಸದಸ್ಯನು ಉದ್ಯಮ ವಿವಾದ ಮಸೂದೆ ಮತ್ತು ಸಾರ್ವಜನಿಕ ಯೋಗಕ್ಷೇಮ ತಿದ್ದುಪಡಿ ಮಸೂದೆಗಳನ್ನು ಜಾರಿಗೆ ತರುವುದಕ್ಕಾಗಿ ಒಂದು ವಿಶೇಷ ಸುಗ್ರೀವಾಜ್ಞೆಯನ್ನು ಘೋಷಿಸಲಿದ್ದನು. ಈ ನಿರಂಕುಶ ದಬ್ಬಾಳಿಕೆಯನ್ನು ಪ್ರತಿಭಟಿಸುವುದರ ಸೂಚನೆಯಾಗಿ ಭಗತ್ ಸಿಂಗನೂ ಬಟುಕೇಶ್ವರ ದತ್ತನೂ ಪ್ರೇಕ್ಷಕರ ಗ್ಯಾಲರಿಯಿಂದ ಸರಕಾರೀ ಉಪಸ್ಥಿತರಿದ್ದ ಕಡೆಗೆ ಒಂದು ಬಾಂಬನ್ನು

ಎಸೆದರು. 'ಕೆಂಪು ಕರಪತ್ರ' ಎಂಬ ಹೆಸರಿನ ಒಂದು ಪ್ರಕಟಣೆಯ ಪ್ರತಿಗಳನ್ನು ಸಭೆಯ ಎಲ್ಲ ಕಡೆಗೂ ತೂರಿದರು. ಭಾರೀ ಶಬ್ದದಿಂದ ಸಿಡಿದ ಬಾಂಬು ಹಾನಿಕಾರಕವಾಗಿರಲಿಲ್ಲವಾಗಿ ಯಾರಿಗೂ ಅದರಿಂದ ಗಾಯವಾಗಲಿಲ್ಲ. ಕ್ರಾಂತಿಕಾರರಿಗೆ ಯಾರನ್ನೂ ಕೊಲ್ಲುವ ಅಥವಾ ಗಾಯಗೊಳಿಸುವ ವಿಚಾರವಿರಲಿಲ್ಲ. ಒಂದು ಕರಪತ್ರದಲ್ಲಿ ವಿವರಿಸಿದಂತೆ, ಅವರು "ಕಿವುಡರಿಗೆ ಕಿವಿ ಕೇಳುವಂತೆ ಮಾಡಲು" ಬಯಸಿದ್ದರು. ಆಮೇಲೆ ಅವರು ತಮ್ಮನ್ನು ಬಂಧಿಸಲು ಅವಕಾಶ ಮಾಡಿಕೊಟ್ಟರು. ಅದರಿಂದ ನ್ಯಾಯಾಲಯವನ್ನೇ ವೇದಿಕೆಯಾಗಿ ಮಾಡಿಕೊಂಡು ತಮ್ಮ ಆದರ್ಶಗಳನ್ನು ಜನತೆಯ ಮುಂದೆ ವಿವರಿಸಲು ಸಾಧ್ಯವಾಗುತ್ತದೆಂದು ಅವರು ಭಾವಿಸಿದರು. ಕಮ್ಯೂನಿಸ್ಟರು ಮೀರತ್ತಿನಲ್ಲಿ ಮಾಡುತ್ತಿದ್ದುದೂ ಇದನ್ನೇ.

ಕಮ್ಯೂನಿಸ್ಟ್ ಕಾರ್ಮಿಕ ವ್ಯವಸ್ಥಾಪಕರಿಗೂ ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ನಿಗೂ ಕೆಲವು ಮೂಲ ಅಂಶಗಳಲ್ಲಿಯೇ ಭಿನ್ನತೆಗಳಿದ್ದುವು. ಆದರೆ ಕಾರ್ಯವಿಧಾನದಲ್ಲಿ, ಆದರ್ಶದಲ್ಲಿ ಕೆಲವು ಹೋಲಿಕೆಗಳೂ ಗೋಚರವಾಗುತ್ತವೆ. ಒಟ್ಟಿನಲ್ಲಿ ಎರಡು ಗುಂಪುಗಳೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅನಾಗರಿಕ ದಬ್ಬಾಳಿಕೆ ಹಾಗೂ ಒಡಕುಂಟುಮಾಡುವ ಕುಟಿಲತೆಗಳ ವಿರುದ್ಧವಾಗಿ ಒಂದು ಸವಾಲನ್ನು ಒಡ್ಡಿದುವು. ಜನಸಾಮಾನ್ಯರು ಕಮ್ಯೂನಿಸಂಗೆ ಸಿದ್ಧರಾಗಿರಲಿಲ್ಲವಾಗಿ, ಮತ್ತು ಸೌಲಭ್ಯಗಳು ಸಾಲದಿದ್ದ ಕೆಳ ಮಧ್ಯಮ ವರ್ಗದಲ್ಲಿ 1905 ರ ಚಳುವಳಿಯಿಂದ ಈಚೆಗೆ ಭಯೋತ್ಪಾದಕರ ನಾಯಕ ಪೂಜೆ ಪ್ರಚಲಿತವಾಗಿದ್ದಿತಾಗಿ, ಭಗತ್ ಸಿಂಗ್ ಮತ್ತು ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ ಜನರ ಮನಸ್ಸನ್ನು ವಿಶೇಷವಾಗಿ ಅಪಹರಿಸಿದರು. ಲಾಹೋರ್ ಕಾಂಗ್ರೆಸ್ ಆದ ನಂತರ ಪ್ರಾರಂಭವಾದಾಗ ನಾಗರಿಕ ಸತ್ಯಾಗ್ರಹ ಚಳುವಳಿಗೆ ಅವರೆಲ್ಲರೂ ಮುತ್ತುವಂತೆ ಮಾಡಿದರು. ಆದರೆ ವಾಸ್ತವವಾಗಿ ಕಾಂಗ್ರೆಸ್ಸಿನಲ್ಲಿಯೇ ಐಕ್ಯತೆಯಿರಲಿಲ್ಲ. ಗಾಂಧೀಜಿಗೂ ಅವರ ನಿಕಟ ಅನುಯಾಯಿಗಳಿಗೂ ಅಹಿಂಸೆಯೇ ಶ್ರದ್ಧೆಯ ವಸ್ತುವಾಗಿತ್ತು. ಯಾವುದೇ ಸಂದರ್ಭದಲ್ಲಿಯೂ ಅವರು ಹಿಂಸೆಯನ್ನೂ ಯಾವುದೇ ಬಗೆಯ ಭಯೋತ್ಪಾದನೆಯನ್ನೂ ಒಪ್ಪುತ್ತಿರಲಿಲ್ಲ. ಕ್ರಾಂತಿಕಾರೀ ಚಟುವಟಿಕೆಗಳಿಗೆ ಅವರು ಸಂಪೂರ್ಣವಾಗಿ ವಿರೋಧಿಯಾಗಿದ್ದರು. ಗಾಂಧಿಯವರನ್ನೂ, ಅವರ ನಾಯಕತ್ವ ಮತ್ತು ಕಾರ್ಯನಿಯೋಜನೆಗಳೇ ಆಗಿನ ಪರಿಸ್ಥಿತಿಯಲ್ಲಿ ಅತ್ಯುತ್ತಮವಾದವುಗಳು, ಅವು ಯಶಸ್ವಿಯಾಗುವ ಸಂಭವವೇ ಅತ್ಯಧಿಕ ಎಂಬುದನ್ನೂ ಒಪ್ಪಿಕೊಂಡಿದ್ದ ಇತರರೂ ಇದ್ದರು. ಸರಕಾರದೊಂದಿಗೆ ನಡೆಸುವ ಹೋರಾಟ ಸಮವಾಗಿರುವುದಿಲ್ಲವೆಂಬುದರಿಂದ ಅವರು ಹಿಂಸೆಯನ್ನು ತ್ಯಜಿಸಿದರು. ಕ್ರಾಂತಿಕಾರರು ತಮ್ಮದೇ ಆದ ದಾರಿಯಲ್ಲಿ ಬ್ರಿಟಿಷರನ್ನು ದುರ್ಬಲಗೊಳಿಸಿ, ಸ್ವಾತಂತ್ರ್ಯ ಹೋರಾಟಕ್ಕಾಗಿ ಜನತೆಯ ಬೆಂಬಲವನ್ನು ಗಳಿಸುವುದಾದರೆ, ಭಯೋತ್ಪಾದಕರ ಕೃತ್ಯಗಳನ್ನೂ ಸಾಮ್ರಾಜ್ಯಶಾಹಿಯ ವಿರುದ್ಧವಾದ ಮತ್ತೊಂದು ಹೊಡೆತವೆಂಬಂತೆ ಭಾವಿಸಬಹುದು. ಎರಡೂ ಬಗೆಯ ಚಳುವಳಿಗಳು ಅಗತ್ಯ ಎಂದು ಇತರ ಕೆಲವರು ಭಾವಿಸಿದ್ದರು. ಇದೇ ರೀತಿ ಸಮಾಜವಾದವನ್ನು ಕುರಿತು

ಕಾಂಗ್ರೆಸ್ಸಿನಲ್ಲಿಯೇ ಭಿನ್ನಾಭಿಪ್ರಾಯಗಳಿದ್ದುವು. ಕೆಲವರು ಪ್ರಾಮಾಣಿಕವಾಗಿ ಎಡಪಕ್ಷದ ಚಿಂತನೆಯುಳ್ಳವರು. ಇತರರು ಸ್ಪಷ್ಟವಾಗಿ ಅದಕ್ಕೆ ವಿರೋಧಿಗಳು. ಗಾಂಧೀಜಿ ಮತ್ತು ಅವರ ಅನುಯಾಯಿಗಳಿಗೆ ನಂಬಿಕೆಯಿದ್ದ ರಾಜಕೀಯ ಮತ್ತು ಆರ್ಥಿಕ ಕಾರ್ಯಕ್ರಮದಲ್ಲಿ ಸಮಾಜವಾದದ ಸಮಾನತೆ ಮತ್ತು ಧನಸಂಚಯ ವಿರೋಧೀ ತತ್ತ್ವಗಳಿದ್ದುವು. ಆದರೆ ಅದರಲ್ಲಿ ಸರಕಾರದ ಮಾಲೀಕತ್ವ ಮತ್ತು ವ್ಯಕ್ತಿಗಿಂತ ಮೇಲಾಗಿ ಸಮಾಜದ ಪ್ರಾಮುಖ್ಯ ಎಂಬಂತಹ ಮೂಲಭೂತವಾದ ತತ್ತ್ವಗಳು ಇರಲಿಲ್ಲ. ವಾಸ್ತವವಾಗಿ ಗಾಂಧೀಜಿ ವಿಕಾಸದಲ್ಲಿ ನಂಬಿಕೆಯುಳ್ಳವ ರಾಗಿದ್ದರು. ಅಂತಹ ಆದರ್ಶ ಪೌರರಿಂದಾದ ಸಮಾಜದಲ್ಲಿ ಸರಕಾರ ಆಳ ಬೇಕಾಗಿರುವ ಅವಕಾಶವೇ ಬಹಳ ಕಡಮೆ.

ಈ ಕಾರಣಗಳಿಂದಾಗಿ ಧ್ಯೇಯಗಳು ಒಂದೇ ಆದರೂ ಭಯೋತ್ಪಾದಕರಿಗೂ ಕಾಂಗ್ರೆಸ್ ನಾಯಕರಿಗೂ ನಡುವೆ ಸಂಬಂಧ ಕಲ್ಪಿಸುವ ಕೊಂಡಿಗಳಿರಲಿಲ್ಲ. ಆದ್ದರಿಂದ ಸೂಕ್ತ ನಾಯಕತ್ವದ ನಿರ್ದೇಶನವಿಲ್ಲದೆ ಜನತೆಯ ಪ್ರತಿಕ್ರಿಯೆ ಸ್ವಲ್ಪ ಮಟ್ಟಿಗೆ ದುರ್ಬಲವಾಗಿತ್ತು.

ಹಾಗೆಯೇ ಕ್ರಾಂತಿಕಾರಿಗಳೂ ಕೂಡ ಒಂದು ನಿರ್ಧಾರಪೂರ್ವಕವಾದ ಹೋರಾಟಕ್ಕಾಗಿ ತಮಗೆ ದೊರೆತ ಅವಕಾಶದ ಪೂರ್ಣ ಪ್ರಯೋಜನ ಪಡೆದುಕೊಳ್ಳಲಿಲ್ಲ. ತಮ್ಮನ್ನು ತಾವು ಬಿಟ್ಟುಕೊಡುವುದರಲ್ಲಿ ಅವರು ತೋರಿಸಿದ ಬಲಿದಾನ ಮತ್ತು ಆದರ್ಶವಾದಗಳೂ ವ್ಯವಸ್ಥೆಯ ಕೊರತೆಯೂ ಒತ್ತಡವನ್ನು ದುರ್ಬಲಗೊಳಿಸಿದುವು. ಒಂದು ಕೇಂದ್ರ ಚಾಲಕಶಕ್ತಿ ಇಲ್ಲ ಎಂದು ಭಾಸವಾಗುತ್ತಿತ್ತು.

ಸರಕಾರವು ಭಗತ್ ಸಿಂಗ್ ಮತ್ತು ಅವನ ಸಹವರ್ತಿಗಳ ಮೇಲೆ ಮೊಕದ್ದಮೆ ಪ್ರಾರಂಭಿಸಿತು. ಲಾಹೋರ್ ಒಳಸಂಚು ಮೊಕದ್ದಮೆ ಎಂದು ಅದನ್ನು ಕರೆದರು. ಆಪಾದಿತರಲ್ಲಿ ಕೆಲವರು ತಮ್ಮನ್ನು ಸರಕಾರದ ವಿರುದ್ಧವಾಗಿ ಬಹಿರಂಗವಾಗಿ ಯುದ್ಧ ಘೋಷಿಸಿದ ರಾಜಕೀಯ ಸೆರೆಯಾಳುಗಳಂತಲ್ಲದ ಇತರ ಸಾಮಾನ್ಯ ಅಪರಾಧಿಗಳೊಂದಿಗೆ ಸಮಾನವಾಗಿ ನಡೆಸಿಕೊಳ್ಳುತ್ತಿರುವುದನ್ನು ಪ್ರತಿಭಟಿಸಿದರು. ತಮ್ಮ ನಿಲುವಿನ ಕಡೆಗೆ ಜನತೆಯ ಗಮನವನ್ನು ಸೆಳೆಯಬೇಕೆಂದು ಅವರು ಉಪವಾಸ ಸತ್ಯಾಗ್ರಹ ಹೂಡಿದರು. ಕೊನೆಗೆ ಜೈಲಿನ ಅಧಿಕಾರಿಗಳು ಬಲಾತ್ಕಾರವಾಗಿ ಅವರಿಗೆ ಆಹಾರವನ್ನು ತುರುಕಬೇಕಾಯಿತು. ಅವರು ಹುತಾತ್ಮರಾಗಿ ಸತ್ತು ಹೋಗದಿರಲಿ ಎಂಬುದಾಗಿ. ಆದರೆ "ಕೊನೆಯುಸಿರಿನವರಗೂ ನಾನು ಹೀಗೆಯೇ ಇರುತ್ತೇನೆ" ಎಂದದ್ದೇ ಕೊನೆಯ ಮಾತಾದ ಜತೀನ್ ದಾಸ್ ಆಹಾರವನ್ನಾಗಲೀ ಔಷಧವನ್ನಾಗಲಿ ತಗೆದುಕೊಳ್ಳಲು ಇಚ್ಛಿಸಲಿಲ್ಲ. 1929 ರ ಸಪ್ಟಂಬರ್ 13 ರಂದು ಅವರು ಮೃತರಾದರು.

ಭಗತ್ ಸಿಂಗ್ ಮತ್ತು ಅನೇಕ ಇತರ ಕ್ರಾಂತಿಕಾರೀ ಭಯೋತ್ಪಾದಕರು 1925 ರ ನಂತರ ಮಾರ್ಕ್ಸ್‌ವಾದದ ಕೆಲವು ಮೂಲಭೂತ ವಿಚಾರಗಳನ್ನು ತಮ್ಮಲ್ಲಿ ರೂಢಿಸಿಕೊಂಡಿದ್ದರು. ಈಗ ಅವರಲ್ಲಿ ಹಲವರು ಜೈಲಿನಲ್ಲಿದ್ದು, ಮತ್ತೆ ಅನೇಕರು ಹೊರಗಿದ್ದು, ವೈಯಕ್ತಿಕ ಭಯೋತ್ಪಾದನ ಮತ್ತು ಭಾವನೆಗಳನ್ನು ಮತ್ತೆ ಪರೀಕ್ಷೆಗೆ

ಒಡ್ಡಿಕೊಂಡರು. ಕೊನೆಗೆ ಜನತೆಯ ಸಾಮೂಹಿಕವಾದ ಸಾಮಾಜಿಕ ಕ್ರಾಂತಿ ಯೆದುರಿಗೆ ಅವು ಸಲ್ಲವು ಎಂದು ಅವನ್ನು ಬಿಟ್ಟುಕೊಟ್ಟರು. ಇದರಿಂದಾಗಿ ಉತ್ತರ ಭಾರತದಲ್ಲಿ ಭಯೋತ್ಪಾದಕ ಚಳುವಳಿ ಕ್ಷೀಣಿಸಿತು.

ಲಾಹೋರಿನಲ್ಲಿ ಕಾಂಗ್ರೆಸ್ ಕೈಗೊಂಡ ಪೂರ್ಣ ಸ್ವರಾಜ್ಯ ನಿರ್ಣಯಕ್ಕೂ ಮುಂಚಿನ ಇನ್ನೂ ಕೆಲವು ಬೆಳವಣಿಗೆಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಮಾತ್ರವೇ ಮೂರನೆಯ ದಶಕದ ಸ್ವಾತಂತ್ರ್ಯ ಹೋರಾಟವನ್ನು ಸರಿಯಾದ ನಿಲುವಿನಿಂದ ನೋಡುವುದಕ್ಕೆ ಸಹಾಯವಾಗುವುದು. ಬ್ರಿಟಿಷ್ ಮಹಾಚುನಾವಣೆಗಳಲ್ಲಿ ಲೇಬರ್ ಪಕ್ಷವು ಜಯಿಸಿತ್ತು. ಸಮಾಜವಾದಿಯೂ ಹಿಂದೆ ಭಾರತದ ರಾಷ್ಟ್ರೀಯತೆಯ ವಿಶ್ವಾಸಿಯೂ ಆಗಿದ್ದ ರ್‍ಯಾಮ್ಸೇ ಮ್ಯಾಕ್‌ಡೊನಾಲ್ಡ್ (Ramsey macdonald)ನೂತನ ಪ್ರಧಾನ ಮಂತ್ರಿಯಾಗಿದ್ದನು. ಆದರೆ ಬ್ರಿಟಿಷ್ ಚಕ್ರಾಧಿಪತ್ಯದ ಮೂಲಭಾವನೆ ಯನ್ನೂ ಅವನು ಘೋಷಿಸುವಂತೆ ಕಂಡಿತು. ಸಾಮ್ರಾಜ್ಯಶಾಹಿಯನ್ನು ಅವನು ಸಮರ್ಥಿಸಿದುದು ಅವನ ಭಾರತೀಯ ಮೆಚ್ಚುಗರಿಗೆ ನಿರಾಶೆಯುಂಟುಮಾಡಿತು. ವೈಸರಾಯ್ ಆಗಿದ್ದ ಲಾರ್ಡ್ ಇರ್ವಿನ್ ಸಲಹೆ ಪಡೆಯಲು ಇಂಗ್ಲೆಂಡಿಗೆ ಹೋದನು. ಹಿಂದಿರುಗಿಬಂದು 1929 ರ ಅಕ್ಟೋಬರ್ ತಿಂಗಳಲ್ಲಿ ಒಂದು ಹೇಳಿಕೆ ಕೊಟ್ಟನು: ಸೈಮನ್ ಕಮೀಷನ್ನಿನ ಅಂತಿಮ ವರದಿ ಬಂದ ಮೇಲೆ ಆ ಸೂಚನೆಗಳಿಗೆ ಎಲ್ಲ ಪಕ್ಷಗಳ ಅತ್ಯಂತ ಹೆಚ್ಚು ಪ್ರಮಾಣದ ಒಪ್ಪಿಗೆ ಪಡೆಯುವ ಸಲುವಾಗಿ ಒಂದು ದುಂಡುಮೇಜಿನ ಪರಿಷತ್ತನ್ನು ಕೂಡಿಸಲಾಗುತ್ತದೆ ಎಂಬುದಾಗಿ. 1929 ರ ಕೊನೆಯ ಭಾಗದಲ್ಲಿ ಒಂದು ಅಖಿಲ ಪಕ್ಷ ಸಮ್ಮೇಳನ ನಡೆಯಿತು. ಗಾಂಧೀಜಿ ಮತ್ತು ಮೋತೀಲಾಲ್ ನೆಹರೂ ಅವರ ನಾಯಕತ್ವದಲ್ಲಿ ಆ ಸಮ್ಮೇಳನವು ಅಕ್ಟೋಬರ್‌ನಲ್ಲಿ ಇರ್ವಿನ್ ಮಾಡಿದ ಘೋಷಣೆಯನ್ನು ಸ್ವಾಗತಿಸುವ, ಬ್ರಿಟಿಷರ ಸದ್ಭಾವನೆಗೆ ದ್ಯೋತಕವಾಗಿ ಎಲ್ಲ ರಾಜಕೀಯ ಸೆರೆಯಾಳುಗಳಿಗೂ ಕ್ಷಮಾದಾನ ನೀಡಲು ಕರೆಕೊಡುವ ಒಂದು ಪ್ರಣಾಳಿಕೆಗೆ ಸಹಿ ಹಾಕಿತು. ಮೊದಲು ಜವಾಹರ್‌ಲಾಲ್ ನೆಹರೂ ಇಷ್ಟು ಸಂಧಾನಾತ್ಮಕವಲ್ಲದ ಬೇರೊಂದು ಪ್ರಣಾಳಿಕೆಯನ್ನು ಸುಭಾಷ್ ಬೋಸರೊಂದಿಗೆ ಕೂಡಿಕೊಂಡು ಪ್ರಕಟಿಸಲು ನಿಶ್ಚಯಿಸಿದ್ದರು. ಆದರೆ ತಮಗೆ ರಾಜಕೀಯ ಸಲಹೆ ನೀಡುತ್ತಿದ್ದ ತಮ್ಮ ತಂದೆ ಮತ್ತು ಗಾಂಧೀಜಿ ತಯಾರಿಸಿದ ಪ್ರಣಾಳಿಕೆಗೆ ರುಜುಹಾಕುವಂತೆ ಅವರನ್ನು ಪ್ರೇರೇಪಿಸಲಾಯಿತು. ಮಹಮದ್ ಆಲಿ ಜಿನ್ನಾ ಅವರೂ ದೆಹಲಿ ಪ್ರಣಾಳಿಕೆಗೆ ಒಪ್ಪಿಗೆ ನೀಡಿದರು. ಆದರೆ ಅದು ಇರ್ವಿನ್ ಘೋಷಣೆಗೆ ಬೇಷರತ್ತಾಗಿ ಬೆಂಬಲ ನೀಡಬೇಕೆಂದು ಅವರು ಅಪೇಕ್ಷಿಸಿದ್ದರು. ಹೀಗಾಗಿ, ಲಾಹೋರ್ ಕಾಂಗ್ರೆಸ್ಸಿನ ಸುಪ್ರಸಿದ್ಧ ಸ್ವಾತಂತ್ರ್ಯ ನಿರ್ಣಯಕ್ಕೆ ಸ್ವಲ್ಪವೇ ಮುಂಚೆ ರಾಷ್ಟ್ರೀಯವಾದಿಗಳು ಐಕ್ಯತೆಯಿಂದ ಬಹುದೂರವಾದ ಒಂದು ನಿಲುವು ಪ್ರದರ್ಶಿಸಿದ್ದರು. ಹಳಬರಿಗೂ ಹೊಸಬರಿಗೂ ನಡುವೆ, ಅಧಿಕಾರ ಕ್ಷೀಣಿಸುತ್ತಿದ್ದ ಮಿತಗಾಮಿ ನಾಯಕರಿಗೂ ಯುವಕರ ಕಲ್ಪನೆಯ ಮೇಲೆ ಪ್ರಭಾವ ಬೀರುತ್ತಿದ್ದ ವಾಮಪಕ್ಷೀಯ ನಾಯಕರಿಗೂ ನಡುವೆ ಭಿನ್ನಾಭಿಪ್ರಾಯಗಳಿದ್ದುವು. ಒಂದು ಪಕ್ಷವು ಸದ್ಯಕ್ಕೆ ಸಿಕ್ಕಿದುದರಲ್ಲಿ, ಸಾಮ್ರಾಜ್ಯದಲ್ಲಿಯೇ ಇರುವ ಡೊಮಿನಿಯನ್ ಸ್ಥಾನಮಾನದಲ್ಲಿ ತೃಪ್ತಿಯನ್ನು ಕಂಡಿತ್ತು. ಇನ್ನೊಂದು ಪಕ್ಷವು ಪೂರ್ಣ ಸ್ವರಾಜ್ಯಕ್ಕಾಗಿ

ದೃಢವಾದ ನಿಲುವು ತಳೆದಿತ್ತು. ಗಾಂಧೀಜಿ ಮತ್ತು ಮೋತೀಲಾಲ್ ಒಂದು ಕಡೆ, ಜವಾಹರಲಾಲ್ ನೆಹರೂ, ಸುಭಾಷ್ ಬೋಸ್ ಮತ್ತು ತೀವ್ರಗಾಮಿ ಗುಂಪು ಇನ್ನೊಂದು ಕಡೆ. ಈ ಭಿನ್ನಾಭಿಪ್ರಾಯಗಳ ಮಧ್ಯೆ 1930ರ ವರ್ಷಗಳ ರಾಜಕೀಯ ಧ್ವನಿಯನ್ನು ರೂಪಿಸಿದವನು ಜವಾಹರಲಾಲ್ ನೆಹರೂ.

ಪರಿಸ್ಥಿತಿ ಬೇರೆಯೇ ಆಯಿತು. ದೆಹಲಿ ಪ್ರಣಾಳಿಕೆಯು ನಿರೀಕ್ಷಿಸಿದ ಅಂಶಗಳಿಗಾದರೂ ಬ್ರಿಟಿಷ್ ಸರಕಾರವು ಒಪ್ಪುವಂತೆ ಮಾಡಲು ವೈಸರಾಯ್ ಅಸಮರ್ಥನಾದನು. ಇದು ಇರ್ವಿನನಿಗೂ ತೀವ್ರಗಾಮಿ ವಿರೋಧಿಗಳಿಗೂ ನಡುವೆ ಬೆಳೆಯುತ್ತಿದ್ದ ಸ್ನೇಹವಿಶ್ವಾಸಗಳು ಕುಸಿದು ಬೀಳುವಂತೆ ಮಾಡಿತು. ಡಿಸೆಂಬರ್ 23 ರಂದು, ಲಾಹೋರ್ ಕಾಂಗ್ರೆಸ್ ಅಧಿವೇಶನಕ್ಕೆ ಸ್ವಲ್ಪ ಮುಂಚೆ ತಮ್ಮನ್ನು ಭೆಟ್ಟಿಮಾಡಿದ ಗಾಂಧೀಜಿ, ಮೋತೀಲಾಲ್ ಮತ್ತು ಜಿನ್ನಾರೊಂದಿಗೆ ಅವನು, ದುಂಡುಮೇಜಿನ ಪರಿಷತ್ತಿನಲ್ಲಿ ಸರಕಾರವು ಯಾವುದೇ ರೀತಿಯಲ್ಲಿ ಬದ್ಧವಾಗುವಂತೆ ಮಾಡಲು ತಾನು ಅಸಮರ್ಥನಾಗಿರುವುದಾಗಿ ಹೇಳಿಬಿಟ್ಟನು. ಕೊನೆಯ ಗಳಿಗೆಯಲ್ಲಿ ಗಾಂಧೀಜಿ ವಾಮಪಕ್ಷದ, ಯಾವ ಷರತ್ತೂ ಇಲ್ಲದ ಪೂರ್ಣ ಸ್ವರಾಜ್ಯದ ತೀರ್ಮಾನಕ್ಕೆ ತಮ್ಮ ನಿಲುವನ್ನು ಬದಲಾಯಿಸಿಕೊಂಡರು. "ನನ್ನ ಹಿಂದಿನ ನಿಲುವುಗಳೆಲ್ಲವನ್ನೂ ಸಂಪೂರ್ಣವಾಗಿ ಕೈಬಿಟ್ಟಿದ್ದೇನೆ" ಎಂದು ಅವರು ಹೇಳಿದಂತೆ ವರದಿಯಾಗಿದೆ. ವಾಮ ಪಕ್ಷದ ನಿಲುವನ್ನು ಸೇರಿಸಿಕೊಂಡದ್ದರಿಂದ ಗಾಂಧೀಜಿ ಅದರ ಖಂಡಿತವಾದಿತ್ವದ ನಿಲುವನ್ನು ದುರ್ಬಲಗೊಳಿಸಿದಂತಾಯಿತೆಂಬುದಾಗಿ ಕೆಲವರು ಭಾವಿಸುತ್ತಾರೆ.

ಡಿಸೆಂಬರ್ 30 ರಂದು ಲಾಹೋರಿನಲ್ಲಿ, ಇನ್ನೂ ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್ನಿನ ಚಟುವಟಿಕೆಗಳಿಂದ ಕ್ಷುಬ್ಧವಾಗಿದ್ದ ನಗರದಲ್ಲಿ, ಕಾಂಗ್ರೆಸ್ಸು ಒಂದು ನಿರ್ಣಯವನ್ನು ಅಂಗೀಕರಿಸಿತು. ಆ ನಿರ್ಣಯವು ದೆಹಲಿ ಪ್ರಣಾಳಿಕೆಯನ್ನು ಅನುಮೋದಿಸಿ, ಲಾರ್ಡ್ ಇರ್ವಿನನ ಈಚಿನ ನಿಲುವಿನಿಂದಾಗಿ, ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸುವುದರಿಂದ ಏನೂ ಪ್ರಯೋಜನವಿಲ್ಲ ಎಂದು ಹೇಳಿತು. ಮೋತೀಲಾಲ್ ನೆಹರೂ ಸಮಿತಿ ಒಂದು ಸಂವಿಧಾನ ರಚನೆಗಾಗಿ ರೂಪಿಸಿದ್ದ ಯೋಜನೆಯೂ ರದ್ದಾಗಿದೆ ಎಂದು ಘೋಷಿಸಿ, ಪೂರ್ಣ ಸ್ವಾತಂತ್ರ್ಯಕ್ಕಾಗಿ ಒಂದು ಚಳುವಳಿಯನ್ನು ಪ್ರಾರಂಭಿಸಬೇಕಾದ ಕಾಲ ಈಗ ಪ್ರಾಪ್ತವಾಗಿದೆ ಎಂದು ಸಾರಿತು.

ಕಾಂಗ್ರೆಸ್ ನಿರ್ಣಯವು ಅದನ್ನು ಸತ್ಯಾಗ್ರಹ (Civil Disobedience) ಎಂದು ವರ್ಣಿಸಿತ್ತು. ಬದಲಾವಣೆ ಒಲ್ಲದ ಗುಂಪಿನವರು ಇದನ್ನು ಎಲ್ಲ ಶಾಸಕಾಂಗ, ಕಾರ್ಯಾಂಗ, ಮತ್ತಿತರ ಸರಕಾರೀ ಅಂಗಗಳನ್ನು ಸಂಪೂರ್ಣವಾಗಿ ಬಹಿಷ್ಕರಿಸು ವುದು ಎಂದು ವ್ಯಾಖ್ಯಾನಿಸಿದ್ದರು. ಗಾಂಧೀಜಿಯೂ ಯುವಕರು ಬೆಂಬಲ ಕೊಡುತ್ತಿದ್ದ ಹಿಂಸಾತ್ಮಕ ಕ್ರಾಂತಿಯ ಹೆದರಿಕೆಯಿಂದಾಗಿ, ಇದನ್ನೇ ಬೆಂಬಲಿಸಿದ್ದರು. ಅವರು ಹೇಳಿದರು: "ಈಗ ತಾಂಡವವಾಡುತ್ತಿರುವ ಅಶಿಸ್ತು ಮತ್ತು ರಹಸ್ಯ ಅಪರಾಧಗಳಿಂದ ದೇಶವನ್ನು ರಕ್ಷಿಸಬೇಕಾದರೆ ಸತ್ಯಾಗ್ರಹವೊಂದರಿಂದ ಮಾತ್ರವೇ ಸಾಧ್ಯ. ಏಕೆಂದರೆ ಭಾಷಣಗಳನ್ನಾಗಲೀ, ನಿರ್ಣಯಗಳು ಮತ್ತು ಸಮ್ಮೇಳನ ಗಳನ್ನಾಗಲಿ ಲಕ್ಷಿಸದ, ಕೇವಲ ನೇರ ಚಟುವಟಿಕೆಯೊಂದರಲ್ಲೇ ನಂಬಿಕೆಯಿರುವ

ಹಿಂಸಾಪರವಾದ ಪಕ್ಷವೊಂದು ದೇಶದಲ್ಲಿದೆ." ಶಾಸನ ಸಭೆಗಳಿಗ ಹೋರಾಟವನ್ನು ಒಯ್ಯಬೇಕೆಂಬ ಸ್ವರಾಜ್ಯವಾದಿ ನಿಲುವನ್ನೂ ಕೈಬಿಡಲಾಗಿತ್ತು. ಸುಭಾಷ್ ಬೋಸರು ರಚನಶೀಲವಾದ ಕ್ರಾಂತಿಕಾರೀ ಚಳುವಳಿಯೊಂದನ್ನು ರೂಪಿಸಬೇಕೆಂಬ ನಿರ್ಣಯ ವನ್ನು ಮಂಡಿಸಿದರು. "ಸರಕಾರದ ಎದುರಾಗಿಯೇ ಅದಕ್ಕೆ ಸಮಾನಾಂತರವಾಗಿ ಕಾಂಗ್ರೆಸ್ಸು ದೇಶದಲ್ಲಿ ಒಂದು ಸರಕಾರವನ್ನು ಸ್ಥಾಪಿಸಬೇಕು. ಅದಕ್ಕಾಗಿ ನಾಡಿನ ಕಾರ್ಮಿಕರ, ಕೃಷಿಕರ ಮತ್ತು ಯುವಕರ ಸಂಘಟನೆ ಮಾಡುವ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕು" ಎಂಬ ಆ ನಿರ್ಣಯವೂ ವಿಫಲವಾಯಿತು.

ಆದರೂ, ಸ್ವಾತಂತ್ರ್ಯ ಚಳುವಳಿಯ ಆಂತರಿಕ ಸ್ವರೂಪವನ್ನು ದುರ್ಬಲಗೊಳಿಸಿದ ವಿರೋಧ ಭಾವಗಳನ್ನು ಗುರುತಿಸುವಾಗ, 1930 ರ ಜನವರಿ 1 ನೆಯ ತಾರೀಕಿನಂದು ಮೂಡಿದ ಐಕ್ಯತೆಯ ಭಾವನೆಯ ಪ್ರಾಮಾಣಿಕತೆಯನ್ನು ನಾವು ಅಲಕ್ಷಿಸುವಂತಿಲ್ಲ. ಭಾರತದ ಜನಕೋಟಿ ಕಾಂಗ್ರೆಸ್ಸಿನ ಪೂರ್ಣ ಸ್ವರಾಜ್ಯದ ಬೇಡಿಕೆಗೆ ಸಹಾನುಭೂತಿ ತೋರಿಸಿತು. ಈ ಬೇಡಿಕೆ ಯುವಕರಿಗೆ ಮಾತ್ರವಲ್ಲ, ಹಿರಿಯ ತಲೆಮಾರಿನವರಿಗೆ, ಮಿತಗಾಮಿ ಸ್ವರಾಜ್ಯವಾದಿಗಳಿಗೆ ಮತ್ತು ಕಾಂಗ್ರೆಸ್ಸಿನ ಬದಲಾವಣೆ ಒಲ್ಲದ ಜನರಿಗೆ-ಎಲ್ಲರಿಗೂ ಸಾರ್ವತ್ರಿಕವಾಗಿ ಅರ್ಥಪೂರ್ಣವಾಗಿ ಕಂಡಿತು. ಸರಕಾರವು ಭಾರತದ ಜನ ಸ್ವಯಮಾಡಳಿತ ಹೊಂದುವುದನ್ನು ಅವಿಶ್ವಾಸದಿಂದ ಕಾಣುತ್ತಿದೆ, ಭಾರತ ಪ್ರಗತಿ ಹೊಂದಬೇಕಾದರೆ ಸ್ವಾತಂತ್ರ್ಯವೊಂದೇ ದಾರಿ - ಎಂಬುದನ್ನು ಅವರು ಪ್ರಾಮಾಣಿಕವಾಗಿ ಅರಿತುಕೊಂಡರು. ಪೂರ್ಣ ಸ್ವರಾಜ್ಯದ ಬೇಡಿಕೆಯನ್ನು ಅನುಮೋದಿಸಿದವರೆಂದರೆ ಮುಸ್ಲಿಂ ಲೀಗ್, ಬ್ರಿಟಿಷ್ ಸಹಯೋಗದಲ್ಲಿ ನಂಬಿಕೆ ಯಿದ್ದ ಸ್ಥಳೀಯ ಪಂಗಡಗಳು ಮತ್ತು ಉದಾರವಾದಿಗಳಾದ ಜನ ಮಾತ್ರ. ಅವರು ಬಹಳ ಅಲ್ಪಸಂಖ್ಯೆಯಲ್ಲಿದ್ದರು. ಇಷ್ಟು ಮಟ್ಟಿಗೆ "ಸೈಮನ್ ಹಿಂದಿರುಗು" ಚಳುವಳಿಯು ಸೃಷ್ಟಿಸಿದ್ದ ಒಪ್ಪಂದದ ಐಕ್ಯತೆ ಮುಂದುವರಿದಿತ್ತು.

ಸ್ವಾತಂತ್ರ್ಯಕ್ಕಾಗಿ ಚಳುವಳಿಯನ್ನು ವ್ಯವಸ್ಥೆಗೊಳಿಸಲು ಚಿಕ್ಕ ಸ್ಥಳೀಯ ಗುಂಪುಗಳನ್ನು ರೂಪಿಸಬೇಕೆಂದು ಸುಭಾಷ್ ಬೋಸ್ ಮತ್ತು ಇತರರು ಅಪೇಕ್ಷಿಸಿದುದನ್ನು ಅಲಕ್ಷಿಸುವಂತಿಲ್ಲ. ಆದರೆ 1930 ರಲ್ಲಿ ಭಾರತಾದ್ಯಂತ ಚಳುವಳಿಗೆ ಕೊಟ್ಟ ಬೆಂಬಲ ಮುಖ್ಯವಾಗಿ ಗಾಂಧೀಜಿಯವರ ರಾಷ್ಟ್ರೀಯತೆ, ಆತ್ಮಗೌರವ ಮತ್ತು ಗ್ರಾಮಗಳಲ್ಲಿ ರಚನಶೀಲ ಕಾರ್ಯಚಟುವಟಿಕೆಗಳ ಸಂದೇಶದ ಫಲವಾಗಿತ್ತು.

### *ಸತ್ಯಾಗ್ರಹ ಚಳುವಳಿಗಾಗಿ ಸಿದ್ಧತೆಗಳು*

1930 ರ ಜನವರಿ ಭಾರತದಲ್ಲಿ ಅತ್ಯಧಿಕ ಉತ್ಸಾಹದ ತಿಂಗಳು. ಚಳುವಳಿಯ ಪ್ರಾರಂಭಕ್ಕೆ ದಿನವನ್ನು ಗೊತ್ತುಮಾಡಿರಲಿಲ್ಲ. ಅಥವಾ ಯಾವುದೇ ಕಾರ್ಯಕ್ರಮ ವನ್ನೂ ಇನ್ನೂ ಯೋಜಿಸಿರಲಿಲ್ಲ. ಗಾಂಧೀಜಿ ಇವುಗಳನ್ನು ನಿರ್ಧರಿಸಬೇಕಾಗಿತ್ತು. ಅವರು ಹಿಂದೆ ಚೌರಿಚೌರಾದಲ್ಲಿ ಆದಂತೆ ಚಳುವಳಿಯನ್ನು ರದ್ದುಮಾಡುವುದಿಲ್ಲ ಅಥವಾ ಹಿಂತೆಗೆದುಕೊಳ್ಳುವುದಿಲ್ಲ ಎಂದೇನೋ ಭರವಸೆ ಕೊಟ್ಟಿದ್ದರು. ನೆಹರೂ ಇದನ್ನು ತಮ್ಮ ಆತ್ಮಕತೆಯಲ್ಲಿ ಉಲ್ಲೇಖಿಸಿದ್ದಾರೆ:

"ಅವರು (ಗಾಂಧೀಜಿ) ಸತ್ಯಾಗ್ರಹವು ಪ್ರಾರಂಭವಾದ ಮೇಲೆ ಯಾವುದೋ

ಒಂದು ಆವೇಶದ ಹಿಂಸಾಕೃತ್ಯದ ಕಾರಣವಾಗಿ ಅದನ್ನು ನಿಲ್ಲಿಸುವುದಿಲ್ಲ ಎಂಬ ಭಾವನೆಯನ್ನು ನಮಗೆ ಉಂಟುಮಾಡಿದ್ದರು.... ಈ ಭರವಸೆಯೇ ನಮ್ಮಲ್ಲಿ ಹಲವರಿಗೆ ತುಂಬ ತೃಪ್ತಿಯನ್ನು ಉಂಟುಮಾಡಿತ್ತು."

ಒಂದು ಪ್ರಣಾಳಿಕೆಯನ್ನು ಅಥವಾ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಬಹಿರಂಗವಾಗಿ 1930 ರ ಜನವರಿ 26 ರಂದು ಭಾರತಾದ್ಯಂತ ಎಷ್ಟು ಸಾಧ್ಯವೋ ಅಷ್ಟು ಭಾರೀ ಸಂಖ್ಯೆಯಲ್ಲಿ ಜನ ಕೈಗೊಳ್ಳಬೇಕು ಎಂದು ಅಂಗೀಕರಿಸಲಾಯಿತು. ಆ ದಿನವೇ ಸತ್ಯಾಗ್ರಹ ಪ್ರಾರಂಭವಾಗಲಿತ್ತು. ಅದನ್ನು ಸ್ವಾತಂತ್ರ್ಯ ದಿನ ಎಂದು ಘೋಷಿಸಲಾಯಿತು.

ಎಲ್ಲ ಸಾಮ್ರಾಜ್ಯಶಾಹಿ ವಿರೋಧಿಗಳಿಗೂ, ಉದಾರವಾದಿಗಳಿಗೂ, ತೀವ್ರಗಾಮಿ ಪ್ರಜಾಸತ್ತಾತ್ಮಕತಾವಾದಿಗಳಿಗೂ, ಸಮಾಜವಾದಿಗಳಿಗೂ ಸಮಾನವಾಗಿ ಅರ್ಥವಾಗುವ ಭಾಷೆಯಲ್ಲಿ, ಅವರ ಮನವೊಲಿಸುವ ರೀತಿಯಲ್ಲಿ ಚಳುವಳಿಯನ್ನು ಪ್ರಾರಂಭಿಸಲು ಕಾರಣಗಳೇನೆಂಬುದನ್ನು ವಿವರಿಸುತ್ತಾ ಈ ಸ್ವಾತಂತ್ರ್ಯ ಪ್ರತಿಜ್ಞೆ ಮೊದಲಾಗಿತ್ತು:

"ಭಾರತದ ಜನರಿಗೆ ಬೇರೆ ಜನರಂತೆಯೇ ಸ್ವಾತಂತ್ರ್ಯ ಪಡೆಯಲು, ತಮ್ಮ ದುಡಿಮೆಯ ಫಲವನ್ನು ಸವಿಯಲು ಮತ್ತು ಬೆಳವಣಿಗೆಯ ಪೂರ್ಣಾವಕಾಶಗಳು ದೊರಕುವಂತೆ ಜೀವನದ ಅಗತ್ಯಗಳನ್ನು ಹೊಂದಿರಲು ತಮ್ಮದೇ ಆದ ಅನನ್ಯವಾದ ಹಕ್ಕಿದೆ ಎಂದು ನಾವು ನಂಬುತ್ತೇವೆ. ಯಾವುದೇ ಸರಕಾರವು ಜನರಿಗೆ ಈ ಹಕ್ಕುಗಳನ್ನು ವಂಚಿಸಿ ಅವರನ್ನು ತುಳಿಯುತ್ತಿದ್ದರೆ, ಅದನ್ನು ಬದಲಾಯಿಸಲು ಅಥವಾ ನಿರ್ಮೂಲಗೊಳಿಸಲು ಕೂಡ ಆ ಜನರಿಗೆ ಹಕ್ಕಿದೆ ಎಂದೂ ನಾವು ನಂಬುತ್ತೇವೆ. ಭಾರತದಲ್ಲಿನ ಬ್ರಿಟಿಷ್ ಸರಕಾರವು, ಭಾರತದ ಜನತೆಗೆ ಸ್ವಾತಂತ್ರ್ಯವನ್ನು ವಂಚಿಸಿರುವುದು ಮಾತ್ರವಲ್ಲ, ಜನಸಾಮಾನ್ಯರ ಶೋಷಣೆಯ ಮೇಲೆಯೇ ತಾನು ನಿಂತಿದೆ. ಭಾರತವನ್ನು ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ನಾಶಮಾಡಿದೆ. ಆದ್ದರಿಂದ ಭಾರತವು ಬ್ರಿಟಿಷ್ ಸಂಬಂಧವನ್ನು ಕಡಿದೆಸೆಯಬೇಕು ಮತ್ತು ಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯವನ್ನು ಸಾಧಿಸಬೇಕು ಎಂದು ನಾವು ನಂಬುತ್ತೇವೆ."

ಈ ಪ್ರತಿಜ್ಞಾವಚನ ಎಲ್ಲ ಜನವರ್ಗಗಳಿಗೂ ಪಂಗಡಗಳಿಗೂ ಸಮಾನವಾಗಿ ಒಪ್ಪಿಗೆಯಾಗಬೇಕಾಗಿತ್ತು ಎಂದೇ ಕೆಲವೊಂದು ಅಂಶಗಳನ್ನು ಅದು ಸೇರಿಸಲಿಲ್ಲ. ಗ್ರಾಮೀಣ ಜನತೆ ಶತಮಾನಗಳ ಕಾಲದಿಂದ ಯಾವುದರ ಆಧಾರದ ಮೇಲೆ ಬದುಕಿತ್ತೋ ಆ ಪ್ರಾಚೀನ ಕೈಕಸಬುಗಳು ಮತ್ತು ಕೃಷಿ ಉತ್ಪಾದನೆಗಳ ವಿನಾಶವೇ ದೇಶದ ಆರ್ಥಿಕ ಅವನತಿಗೆ ಕಾರಣ ಎಂದು ಸೂಚಿಸಲಾಗಿತ್ತು. ಬ್ರಿಟನ್ನಿಗೆ ಹೊಸಹೊಸ ಮಾರ್ಗಗಳಲ್ಲಿ ಸಂಪತ್ತು ಹರಿದುಹೋಗುತ್ತಿದ್ದ ವಿಚಾರವನ್ನು ಉಲ್ಲೇಖಿಸಿತ್ತು. ಆದರೆ ಸಾಮ್ರಾಜ್ಯಶಾಹಿಯ ಪಕ್ಷಪಾತ ರೀತಿಯಿಂದ ಆಧುನಿಕ ಕೈಗಾರಿಕೋದ್ಯಮವು ದುಸ್ಥಿತಿಗೆ ಬಂದಿದ್ದ ಸಮಸ್ಯೆಗಳನ್ನು ಅದು ಹೇಳಲಿಲ್ಲ.

ರಾಜಕೀಯ ಅವನತಿಗೆ ಕಾರಣವನ್ನು 'ಶಿಕ್ಷಣ ವಿಧಾನ'ಕ್ಕೆ ಆರೋಪಿಸಲಾಯಿತು. ಇದು ಬಹಳ ಅಸಮರ್ಪಕವಾದ ವಿವರಣೆ ನಿಜ. ಇನ್ನು ಆಧ್ಯಾತ್ಮಿಕ ಅವನತಿಯಾದರೋ, ಬಲಾತ್ಕಾರದ ನಿರಾಯುಧೀಕರಣ, ಭಾರತೀಯರು ಶಸ್ತ್ರಾಸ್ತ್ರಗಳನ್ನು ಹೊಂದಿರಲು ಅನುಮತಿ ನೀಡಿಲ್ಲವಾದುದರ ಫಲ ಎಂದು ಹೇಳಲಾಯಿತು. 'ಯಾವಾಗಲೂ ಕಾರ್ಯತತ್ಪರವಾಗಿರುವ ಸೈನ್ಯ'ದ ಅಸ್ತಿತ್ವ ಮತ್ತು ಅದರ ಪರಿಣಾಮವಾಗಿ ಆಂತರಿಕ ಭದ್ರತೆಗಾಗಿ ವಿದೇಶೀ ಸೈನ್ಯ ಬಲವನ್ನು ಅವಲಂಬಿಸಬೇಕಾಗಿದ್ದದ್ದೂ ಇದಕ್ಕೆ ಕಾರಣ ಎಂದು ಅದರಲ್ಲಿ ಹೇಳಿತ್ತು. ಇವೆಲ್ಲವುಗಳಿಂದಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಬಲ ಆಯುಧವಾಗಿ ಗಾಂಧೀಜಿಯ ಅಹಿಂಸಾತ್ಮಕ ಸತ್ಯಾಗ್ರಹದ ಸಮರ್ಥನೆ ಬಂದಿತು:

"ನಮ್ಮ ಸ್ವಾತಂತ್ರ್ಯವನ್ನೇ ನಾವು ಪಡೆಯಬೇಕಾದರೆ ಇರುವ ಅತ್ಯಂತ ಪರಿಣಾಮಕಾರಿಯಾದ ವಿಧಾನ ಹಿಂಸೆಯ ಮೂಲಕ ಅಲ್ಲ ಎಂದು ನಾವು ಅರಿತುಕೊಂಡಿದ್ದೇವೆ. ಆದ್ದರಿಂದ ನಾವು ಬ್ರಿಟಿಷ್ ಸರಕಾರದೊಂದಿಗೆ ಹೊಂದಿರುವ ಎಲ್ಲ ಬಗೆಯ ಸ್ವಯಂಪ್ರೇರಿತ ಸಂಬಂಧಗಳನ್ನೂ ಎಷ್ಟು ಸಾಧ್ಯವೋ ಅಷ್ಟು ಮಟ್ಟಿಗೆ ಹಿಂತೆಗೆದುಕೊಳ್ಳುವ ಮೂಲಕ ಸಿದ್ಧವಾಗೋಣ. ಕರ ನಿರಾಕರಣೆಯೂ ಸೇರಿದಂತೆ ಸತ್ಯಾಗ್ರಹಕ್ಕೆ ಸಿದ್ಧರಾಗೋಣ. ನಾವು ಸ್ವಯಂಪ್ರೇರಿತ ಸಹಾಯವನ್ನು ಹಿಂತೆಗೆದುಕೊಂಡು, ಪ್ರಚೋದನೆಯ ಸಮಯದಲ್ಲಿಯೂ ಕೆರಳದೆ, ತೆರಿಗೆ ಕೊಡುವುದನ್ನು ನಿಲ್ಲಿಸಿದ್ದೇ ಆದ ಪಕ್ಷದಲ್ಲಿ, ಈ ಅಮಾನುಷ ಆಡಳಿತದ ಮುಗಿವು ಖಂಡಿತ ಎಂದು ನಮಗೆ ಮನವರಿಕೆಯಾಗಿದೆ."

ಆಮೇಲೆ ಪೂರ್ಣ ಸ್ವರಾಜ್ಯ ಸ್ಥಾಪನೆಗಾಗಿ ಕಾಂಗ್ರೆಸ್ಸು ಕಾಲಕಾಲಕ್ಕೆ ಕೊಡುವ ಸೂಚನೆಗಳಿಗೆ ಬದ್ಧರಾಗಿರುತ್ತೇವೆ ಎಂಬ ಪ್ರಮಾಣವಾಕ್ಯ ಇತ್ತು. ನಾಡನ್ನು ಆವರಿಸಿದ್ದ 'ನಾಲ್ಕು ಮುಖವಾದ ಗಂಡಾಂತರ'ದ ವಿಶ್ಲೇಷಣೆಯಲ್ಲಿ ಸಮಾಜವಾದದ ಭಾವನೆಗಳು ಇರಲಿಲ್ಲ. ಕಾರ್ಯಕಾರೀ ಸಮಿತಿಯು ಹಾಕಿಕೊಂಡ ದಾರಿ, ವಿದೇಶೀ ಆಳುಗರನ್ನು ಹೃದಯ ಪರಿವರ್ತನೆ ಮಾಡಿಕೊಳ್ಳುವಂತೆ ಮನವಿ ಮಾಡಿಕೊಳ್ಳುವುದು, ಆದರೆ ಅದರ ಯಶಸ್ಸು ಆಳುವ ವರ್ಗದ ಧೋರಣೆಯನ್ನು ಅವಲಂಬಿಸಿತ್ತು.

ಈ ಸಮಯದಲ್ಲಿ ಗಾಂಧೀಜಿ ತಮ್ಮ ಪತ್ರಿಕೆ ಯಂಗ್ ಇಂಡಿಯಾದಲ್ಲಿ ಒಂದು ಲೇಖನ ಬರೆದರು. ಅದರಲ್ಲಿ ಆಡಳಿತ ಸುಧಾರಣೆಯ ಹನ್ನೊಂದು ಅಂಶಗಳನ್ನು ಅವರು ಪಟ್ಟಿಮಾಡಿದ್ದರು. ಅವುಗಳನ್ನು ಲಾರ್ಡ್ ಇರ್ವಿನ್ ಒಪ್ಪಿಕೊಳ್ಳುವುದೇ ಆದರೆ ಸತ್ಯಾಗ್ರಹದ ಕರೆಯನ್ನು ಹಿಂತೆಗೆದುಕೊಳ್ಳುವುದಾಗಿ ಗಾಂಧಿ ನಂಬಿದ್ದರು. ತಮ್ಮ ಕಾರ್ಯನಿಯೋಜನೆಯ ಬಗೆಗೆ ಅವರಿಗೇ ಇನ್ನೂ ಖಚಿತವಾದ ಭರವಸೆ ಯಿರಲಿಲ್ಲ. ಭಾರತದ ಮಹಾಕವಿ ಮತ್ತು ರಾಷ್ಟ್ರೀಯತಾವಾದಿ ರವೀಂದ್ರನಾಥ ಠಾಕೂರ್ ಗಾಂಧಿಗಿಂತಲೂ ತೀವ್ರಗಾಮಿ. ಅವರು ಕೇಳಿದಾಗ ಗಾಂಧಿ ಉತ್ತರವಿತ್ತರು:

"ರಾತ್ರಿ ಹಗಲು ಒಂದೇ ಸಮನೆ ಉದ್ರೇಕದಿಂದ ಆಲೋಚಿಸುತ್ತಲೇ ಇದ್ದೇನೆ. ಕತ್ತಲೆಯಿಂದ ಹೊರಬರಲು ಇನ್ನೂ ನನಗೆ ಯಾವ ಬೆಳಕೂ ಕಾಣುತ್ತಿಲ್ಲ."

ಮಾರ್ಚಿ 6ನೆಯ ತಾರೀಖು ಗಾಂಧೀಜಿ ಇರ್ವಿನನಿಗೆ ಒಂದು ಪತ್ರ ಬರೆದರು: "ಹನ್ನೊಂದು ಅಂಶಗಳ" ಸೂತ್ರದಲ್ಲಿ ಪಟ್ಟಿಮಾಡಿದ ಕೆಡುಕುಗಳನ್ನು ತಕ್ಷಣವೇ ತೆಗೆದುಹಾಕಬೇಕು, ಇಲ್ಲವಾದರೆ ಗ್ರಾಮೀಣ ರೈತರಿಗೂ ತಿಳಿಯುವ ರೀತಿಯಲ್ಲಿ ಬ್ರಿಟಿಷ್ ಕಾನೂನುಗಳನ್ನು ತಾವು ಮುರಿಯಬೇಕಾಗುತ್ತದೆ ಎಂದು ತಿಳಿಸಿದರು. ಆತ್ಮಕಥೆಯಲ್ಲಿ ನೆಹರೂ ಇದರ ಬಗ್ಗೆ ಬರೆದರು:

> "ನಾವು ಸ್ವಾತಂತ್ರ್ಯದ ವಿಚಾರವಾಗಿ ಮಾತನಾಡುತ್ತಿರುವಾಗ ನಮ್ಮ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳನ್ನು ಪಟ್ಟಿಮಾಡುವುದರಲ್ಲಿ ಔಚಿತ್ಯವೇನಿತ್ತು? ಈ ಸ್ವಾತಂತ್ರ್ಯ ಎಂಬ ಶಬ್ದವನ್ನು ಬಳಸಿದಾಗ ಗಾಂಧೀಜಿ ನಾವು ಕೊಡುತ್ತಿದ್ದ ಅರ್ಥವನ್ನೇ ಅದಕ್ಕೆ ಕೊಡುತ್ತಿದ್ದರೇ ಅಥವಾ ನಾವಿಬ್ಬರೂ ಬೇರೆ ಬೇರೆ ಭಾಷೆಗಳನ್ನು ಆಡುತ್ತಿದ್ದವೇ ?"

### *ಉಪ್ಪಿನ ಸತ್ಯಾಗ್ರಹ*

ಕೊನೆಗೊಮ್ಮೆ ಗಾಂಧೀಜಿ ನಿರ್ಧಾರಕ್ಕೆ ಬಂದರು. ಸಬರಮತಿ ಆಶ್ರಮದಿಂದ ತಮ್ಮ 78 ಮಂದಿ ಆರಿಸಿದ ಅನುಯಾಯಿಗಳೊಂದಿಗೆ 1930 ರ ಮಾರ್ಚಿ 12 ನೆಯ ತಾರೀಖು ಹೊರಟು ಗುಜರಾತಿನ ಹಳ್ಳಿಗಳ ಮೂಲಕ 200 ಮೈಲು ನಡೆದು ಸಮುದ್ರತೀರದ ದಂಡೀ ಎಂಬಲ್ಲಿಗೆ ಬರುವವರಿದ್ದರು. ಅಲ್ಲಿ ಗಾಂಧೀಜಿ ಮತ್ತು ಅವರ ಅನುಯಾಯಿಗಳು ಶಾಸನ ವಿರುದ್ಧವಾಗಿ ಆದರೆ ಬಹಿರಂಗವಾಗಿ ಉಪ್ಪು ತಯಾರಿಸಿ ಕಾನೂನನ್ನು ಮುರಿಯುವವರಿದ್ದರು. ಗಾಂಧೀಜಿ ತಮ್ಮ ದಂಡೀ ಯಾತ್ರೆಯನ್ನು ಪ್ರಾರಂಭಿಸಿದಾಗ ಒಟ್ಟಿನಲ್ಲಿ ರಾಷ್ಟ್ರೀಯತಾ ಪ್ರಜ್ಞೆ ವಿದ್ಯುದಾಘಾತ ಪಡೆದಂತೆ ಜಾಗೃತವಾಯಿತು. ತಮ್ಮ ಕೈದೊಣ್ಣೆಯ ಮೇಲೆ ಬಾಗಿಕೊಂಡು ಆ ತೆಳ್ಳನೆಯ ರೈತನಂತಹ ಮೂರ್ತಿಯು ನಡೆಯುತ್ತಿದ್ದರೆ ಹಳ್ಳಿಗರು ಮಹಾತ್ಮನನ್ನು ನೋಡಲು ದಾರಿಯುದ್ದಕ್ಕೂ ಹಿಂಡುಹಿಂಡಾಗಿ ನೆರೆದರು. ವಿಪರೀತವಾದ ತೆರಿಗೆಯಿಂದ ದಿನನಿತ್ಯದ ಅಗತ್ಯ ವಸ್ತುವಿನ ಬೆಲೆಯನ್ನು ದುಬಾರಿಯಾಗಿ ಮಾಡಿದ್ದ ಕಾನೂನನ್ನು ಅವರು ಮುರಿಯುವುದನ್ನು ನೋಡಲು ಅವರು ನೆರೆದರು. ದಂಡಿಯತ್ತ ನಡೆಯುತ್ತಿದ್ದ ಅಹಿಂಸಾ ಸೇನಾದಳವನ್ನು ಸೇರಲು ಸ್ವಯಂಸೇವಕರು ಭಾರೀ ಸಂಖ್ಯೆಯಲ್ಲಿ ಬಂದರು.

ಭಾರತಾದ್ಯಂತ ದೊಡ್ಡ ದೊಡ್ಡ ನಗರಗಳಲ್ಲಿ ಕೆಳಮಧ್ಯಮವರ್ಗದ ಜನರಲ್ಲಿ ಉದ್ರೇಕ ತುಂಬಿ ಸೂಸಿತು. ಇದರ ಒಂದು ಅಭಿವ್ಯಕ್ತಿ, ಅಹಿಂಸಾ ಸತ್ಯಾಗ್ರಹ ಚಳುವಳಿಗೆ ಸ್ತ್ರೀಯರ ಪ್ರವೇಶ. ಏಪ್ರಿಲ್ 30 ರಂದಿನ **ಯಂಗ್ ಇಂಡಿಯಾ** ಪತ್ರಿಕೆಯಲ್ಲಿ ಗಾಂಧೀಜಿ ಭಾರತೀಯ ನಾರಿಯರಿಗೆ ಚರಕಾದಲ್ಲಿ ನೂಲು ತೆಗೆಯಬೇಕೆಂದೂ, ತಮ್ಮ ಗೃಹಕೃತ್ಯದ ಮೂಲೆಗಳಿಂದ ಹೊರಬಂದು ವಿದೇಶೀ ವಸ್ತುಗಳನ್ನು, ಮದ್ಯಗಳನ್ನು ಮಾರುತ್ತಿದ್ದ ಅಂಗಡಿಗಳ ಮುಂದೆ ಹಾಗೂ ಸರಕಾರಿ ಸಂಸ್ಥೆಗಳ ಮುಂದೆ ಪಿಕೆಟಿಂಗ್ ಮಾಡಬೇಕೆಂದೂ ಕರೆ ನೀಡಿದರು. ಇದಕ್ಕಿಂತ ಮುಂಚೆ, ಎಲ್ಲೋ ಕೆಲವರು ಸ್ತ್ರೀಯರು, ಸಿ.ಆರ್. ದಾಸ್, ಮೋತೀಲಾಲ ನೆಹರೂ ಮುಂತಾದ ರಾಷ್ಟ್ರನಾಯಕರ ಕುಟುಂಬಗಳಿಗೆ ಸೇರಿದವರು, ಕೆಲವು ಕಾಲೇಜು

ವಿದ್ಯಾರ್ಥಿನಿಯರು ಬಹಿರಂಗ ರಾಜಕೀಯ ಪ್ರದರ್ಶನಗಳಲ್ಲಿ ಪಾಲುಗೊಳ್ಳುತ್ತಿದ್ದರು. ಈಗ ಹೆಚ್ಚು ಸಂಖ್ಯೆಯಲ್ಲಿ ಅವರು ಭಾಗವಹಿಸಿ, ತಾವಾಗಿ ಸೆರಮನೆಗೆ ಹೋದರು. ಆ ಕಾಲಕ್ಕೆ ಸಂಪ್ರದಾಯ ಪ್ರಧಾನವಾಗಿದ್ದ ನಗರ ದೆಹಲಿಯಲ್ಲೇ ರಾಜಕೀಯ ಚಟುವಟಿಕೆಗಳಿಗಾಗಿ 1,600 ಜನ ಸ್ತ್ರೀಯರನ್ನು ಬಂಧಿಸಲಾಯಿತು. ಮುಂಬಯಿ ಯಲ್ಲಿ ಬಹು ಸಂಖ್ಯೆಯ ಮಧ್ಯಮವರ್ಗದ ಸ್ತ್ರೀಯರು ರಾಷ್ಟ್ರೀಯ ಹೋರಾಟವನ್ನು ಸೇರಿದರು. ಸತ್ಯಾಗ್ರಹ ಚಳುವಳಿಯು ಇನ್ನೇನನ್ನೂ ಸಾಧಿಸಲಿಲ್ಲವಾದರೂ, ಭಾರತೀಯ ಸ್ತ್ರೀಯರ ಸಾಮೂಹಿಕ ಸಾಮಾಜಿಕ ಜಾಗೃತಿಗೆ ಬಹುವಾಗಿ ಕಾರಣವಾಯಿತು ಎಂಬುದಾಗಿ ಬ್ರಿಟಿಷ್ ವಕ್ತಾರರೂ ಬರೆದರು. ಇದು ಆ ಚಳುವಳಿಯ ಸಹಜ ಮುಖಗಳಲ್ಲೊಂದಾಗಿತ್ತು. ಭಾರತೀಯ ನಾರಿಯರ ದಾಸ್ಯವಿಮೋಚನೆಯಲ್ಲಿ ಮುಕ್ಕಾಲು ಶತಮಾನದ ಸಾಮಾಜಿಕ ಸುಧಾರಣಾ ಚಳುವಳಿಗಳು ಪಡೆಯದಿದ್ದ ಸಿದ್ಧಿಯನ್ನು ಕೆಲವೇ ವಾರಗಳಲ್ಲಿ ಅದು ಸಾಧಿಸಿತು.

ಈ ಮಧ್ಯೆ 1930 ರ ಏಪ್ರಿಲ್-ಮೇ ತಿಂಗಳ ಬೇಸಗೆಯ ಬಿಸಿಲಿನಲ್ಲಿ ಸ್ವಯಂ ಸೇವಕರ ಸಾಲುಸಾಲು ದಳಗಳು ಉಪ್ಪು ಕಾನೂನುಗಳನ್ನು ಉಲ್ಲಂಘಿಸಿದುವು. ಗಾಂಧೀಜಿಯನ್ನು ಸತ್ಯಾಗ್ರಹ ನಡೆಸಿ ಧರಸನಾದ ಸರಕಾರೀ ಉಪ್ಪಿನ ಗದ್ದೆಯಲ್ಲಿ ಉಪ್ಪು ತಯಾರಿಸುವುದಕ್ಕೆ ಮುಂಚೆಯೇ ಬಂಧಿಸಲಾಯಿತು. ಅವರ ಸ್ಥಾನದಲ್ಲಿ ಅಬ್ಬಾಸ್ ತ್ಯಾಬ್ಜಿ ನಾಯಕರಾಗಿ ನಿಂತರು. ಮುಂಬಯಿ ನಗರದ ರಾಷ್ಟ್ರೀಯವಾದಿ ಮುಸ್ಲಿಮರ ಮನೆತನದ ನಾಯಕರಾಗಿದ್ದರು ತ್ಯಾಬ್ಜಿ. ಅವರನ್ನೂ ಬಂಧಿಸಲಾಯಿತು. ಮುಂದಿನ ನೇತಾರರು ಉಗ್ರ ಕವಯತ್ರಿ, ರಾಷ್ಟ್ರೀಯವಾದಿ ಸರೋಜಿನಿ ನಾಯ್ಡು. ಸರೋಜಿನಿಯವರು ಮೇ 26 ರಂದು ಧರಸನಾದ ಮೇಲೆ ಆಕ್ರಮಣ ನಡೆಸಲು ಮಾಡಿದ ಪ್ರಯತ್ನವನ್ನು ವೆಬ್ ಮಿಲ್ಲರು (Webb Miller) ಎಂಬ ಅಮೆರಿಕನ್ ಪತ್ರಿಕೋದ್ಯಮಿ ವಿಸ್ತಾರವಾಗಿ ವರ್ಣಿಸಿದ್ದಾರೆ. ಬಹು ಕಷ್ಟದಿಂದ ಆ ಸ್ಥಳವನ್ನು ವೆಬ್ ಮಿಲ್ಲರ್ ತಲುಪಿಸಿದರು.

> "ಮುಂಚಲನೆ ಪ್ರಾರಂಭವಾಗುವುದಕ್ಕೆ ಮೊದಲು ಶ್ರೀಮತಿ ನಾಯ್ಡು ಪ್ರಾರ್ಥನೆ ಸಲ್ಲಿಸಲು ಕರೆ ಕೊಟ್ಟರು. ಇಡೀ ಜನಸಮೂಹ ಬಾಗಿ ಪ್ರಾರ್ಥನೆ ಮಾಡಿತು. ಆಕೆ ಅವರಿಗೆ ಎಚ್ಚರಿಕೆ ಕೊಟ್ಟರು: 'ಭಾರತದ ಗೌರವ ನಿಮ್ಮ ಕೈಯಲ್ಲಿದೆ. ನಿಮ್ಮನ್ನು ಅವರು ಹೊಡೆಯುತ್ತಾರೆ, ಅದನ್ನು ನೀವು ಪ್ರತಿಭಟಿಸಕೂಡದು; ಹೊಡೆತಗಳನ್ನು ತಪ್ಪಿಸಿಕೊಳ್ಳಲು ಕೈಯನ್ನು ಎತ್ತುವುದೂ ಸಲ್ಲದು.' ಗುಂಪಿನ ಉತ್ಸಾಹಭರಿತ ಚೀರಾಟ ಆಕೆಯ ಭಾಷಣವನ್ನು ಮುಗಿಸಿತು."

"ನಿಧಾನವಾಗಿ ಮೌನವಾಗಿ ಗುಂಪು ಉಪ್ಪಿನ ಗದ್ದೆಗಳ ಕಡೆಗೆ ಅರ್ಧ ಮೈಲು ನಡಿಗೆಯನ್ನು ಪ್ರಾರಂಭಿಸಿತು... ಉಪ್ಪಿನ ರಾಶಿಗಳ ಸುತ್ತ ನೀರು ತುಂಬಿದ ಕುಳಿಗಳಿದ್ದುವು. ನಾನೂರು ಜನ ಸೂರತ್ತಿನ ದೇಶೀಯ ಪೋಲೀಸರು ಅವುಗಳಿಗೆ ಕಾವಲಾಗಿ ನಿಂತಿದ್ದರು... ಐದಾರು ಜನ ಬ್ರಿಟಿಷ್ ಅಧಿಕಾರಿಗಳು ಅವರಿಗೆ ಆಜ್ಞೆ ನೀಡುತ್ತಿದ್ದರು. ಪೋಲೀಸರ ಕೈಯಲ್ಲಿ ಲಾಠಿಗಳು-ಐದು ಅಡಿ ಉದ್ದದ ಗಟ್ಟಿಯಾದ, ಅಂಚಿಗೆ ಉಕ್ಕಿನ ಮುಸುಕುಹಾಕಿದ ದೊಣ್ಣೆಗಳು-ಇದ್ದುವು. (ಮುಳ್ಳು ಬೇಲಿಯ)

ಒಳಗೆ ಇಪ್ಪತ್ತೈದು ಮಂದಿ ಬಂದೂಕು ಧರಿಸಿದ ಸೈನಿಕರು ಸಾಲಾಗಿ ನಿಂತಿದ್ದರು.

...ಪೋಲೀಸು ಅಧಿಕಾರಿಗಳು ಮುನ್ನಡೆದು ಬರುತ್ತಿದ್ದ ಜನರಿಗೆ ತಕ್ಷಣವೇ ಚದುರಿಹೋಗಬೇಕೆಂದು ಆಜ್ಞೆ ಮಾಡಿದರು. ಈಚೆಗೆ ಜಾರಿಗೆ ತರಲಾದ ಕಾನೂನೊಂದರ ಪ್ರಕಾರ ಯಾವುದೇ ಒಂದು ಸ್ಥಳದಲ್ಲಿ ಐದು ಜನಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಗುಂಪು ಕೂಡುವಂತಿರಲಿಲ್ಲ. ಅದರ ಪ್ರಕಾರ ಒಡನೆಯೇ ಚದುರಬೇಕೆಂದು ಅಧಿಕಾರಿಗಳು ಎಚ್ಚರಿಸಿದರು. ಇದನ್ನು ಅಲಕ್ಷಿಸಿ ಗುಂಪು ಮುನ್ನಡೆಯಿತು. ದೇಶೀಯ ಪೊಲೀಸರ ಗುಂಪು ಮುಂದೆ ನುಗ್ಗಿ ಉಕ್ಕು ಕಟ್ಟಿದ ಲಾಠಿಗಳಿಂದ ಸತ್ಯಾಗ್ರಹಿಗಳ ತಲೆಯ ಮೇಲೆ ಹೊಡೆತಗಳನ್ನು ಒಂದೇ ಸಮನೇ ಸುರಿಸಿತು. ಒಬ್ಬನೇ ಒಬ್ಬ ಸತ್ಯಾಗ್ರಹಿಯೂ ಹೊಡೆತವನ್ನು ತಡೆಯಲು ಕೈ ಎತ್ತಲಿಲ್ಲ. ಹೇವರಿಕೆಯುಂಟುಮಾಡುವ ಆ ಲಾಠಿಯ ಹೊಡೆತ ಅರಕ್ಷಿತವಾಗಿದ್ದ ತಲೆಗಳ ಮೇಲೆ ಪಟಪಟನೆ ಬಡಿಯುತ್ತಿದ್ದ ಸದ್ದನ್ನು ನಾನು ಕೇಳಿದೆ. ನೋಡುತ್ತಿದ್ದ ಜನ ಜಂಗುಳಿ ಒರಲಿತು; ಪ್ರತಿ ಹೊಡೆತಕ್ಕೂ ಅನುಕಂಪದ ನೋವು ನುಂಗಿ ನಿಟ್ಟುಸಿರು ಬಿಟ್ಟಿತು.

...ಎರಡೋ ಮೂರೋ ನಿಮಿಷಗಳಲ್ಲಿ ನೆಲದ ಮೇಲೆ ದೇಹಗಳು ಚೆಲ್ಲಾಡಿದ್ದುವು. ಅವರ ಬಿಳಿಯ ಬಟ್ಟೆಗಳ ಮೇಲೆ ದಟ್ಟವಾದ ರಕ್ತದ ಕಲೆಗಳು ಇಳಿದುವು... ಮೊದಲಿನ ಸಾಲಿನ ಪ್ರತಿಯೊಬ್ಬ ಸತ್ಯಾಗ್ರಹಿಯನ್ನೂ ಹೊಡೆದು ಉರುಳಿಸಿದ ಮೇಲೆ ದೋಲಿಗಳನ್ನು ತೆಗೆದುಕೊಂಡು ಜನ ಬಂದರು. ಕೆಳಗೆ ಬಿದ್ದಿದ್ದ ಗಾಯಾಳುಗಳನ್ನು ಸಾಗಿಸಿಕೊಂಡು ಹೋದರು...

...ಆಮೇಲೆ ಸತ್ಯಾಗ್ರಹಿಗಳ ಇನ್ನೊಂದು ಸಾಲು ಮುಂದೆ ನಿಂತಿತು. ಸಂಯಮವನ್ನು ಕಳೆದುಕೊಳ್ಳಬಾರದೆಂದು ನಾಯಕರು ಅವರಿಗೆ ಮನವಿ ಮಾಡಿಕೊಳ್ಳುತ್ತಿದ್ದರು... ಅವರು ಮುನ್ನಡೆದರು. ಸಂಗೀತದ ಅಥವಾ ಜಯ ಘೋಷದ ಪ್ರೋತ್ಸಾಹವಿಲ್ಲದೆ, ತೀವ್ರಗಾಯ ಅಥವಾ ಮೃತ್ಯುವನ್ನು ತಪ್ಪಿಸಿಕೊಳ್ಳುವ ಸಂಭವವೇ ಇಲ್ಲದೆ ಅವರು ಮುನ್ನಡೆದರು. ಪೋಲೀಸರು ನುಗ್ಗಿದರು, ಕ್ರಮಬದ್ಧವಾಗಿ, ಯಾಂತ್ರಿಕವಾಗಿ ಎರಡನೆಯ ಶ್ರೇಣಿಯ ಸತ್ಯಾಗ್ರಹಿಗಳನ್ನು ಬಡಿದು ಉರುಳಿಸಿದರು... ಜೊತೆಜೊತೆಗೇ ಹದಿನೆಂಟು ಜನ ಗಾಯಾಳುಗಳನ್ನು ದೋಲಿಯುವರು ಸಾಗಿಸುವುದನ್ನೂ ನಾನು ನೋಡಿದೆ, ಉಳಿದ ನಲವತ್ತೆರಡು ಜನ ರಕ್ತ ಪರಿಸುತ್ತಾ, ದೋಲಿ ಹೊರುವವರಿಗಾಗಿ ಕಾಯುತ್ತಾ ಅಲ್ಲೇ ನೆಲದ ಮೇಲೆ ಬಿದ್ದಿದ್ದುದನ್ನೂ ನೋಡಿದೆ..."

ಆಮೇಲೆ ವೆಬ್ ಮಿಲ್ಲರ್ ವಿಸ್ತಾರವಾಗಿ ಹೇಗೆ ಭಾರತೀಯ ಪೋಲೀಸರು ಅಲ್ಲಿ ಕಾದು ನಿಂತಿದ್ದ ಜನಸಮೂಹದ ಮೇಲೆ ಆಕ್ರಮಣ ನಡೆಸಿ, ಚದುರಬೇಕೆಂಬ ಆಜ್ಞೆಯನ್ನು ಉಲ್ಲಂಘಿಸಿ ತಮ್ಮ ಸರದಿಗಾಗಿ ಕಾದು ಕುಳಿತಿದ್ದ ಅವರನ್ನು ಹೇಗೆ ಸದೆಬಡಿದರು ಎಂಬುದನ್ನು ವರ್ಣಿಸಿದ್ದಾರೆ. ಮಿಲ್ಲರರ ಪ್ರತಿಕ್ರಿಯೆ ಇದು:

> "ಸ್ವಲ್ಪವೂ ಪ್ರತಿಭಟಿಸದ ಜನರನ್ನು ಕ್ರಮಬದ್ಧವಾಗಿ ರಕ್ತದ ಮುದ್ದೆಗಳಾಗುವಂತ ಬಡಿದು ಚಚ್ಚುತ್ತಿದ್ದ ನೋಟವು ನನಗೆ ಎಷ್ಟರಮಟ್ಟಿಗೆ ಮೈನಡುಗಿಸಿ ಜುಗುಪ್ಸೆಯುಂಟುಮಾಡಿತೆಂದರೆ, ನಾನು ಅಲ್ಲಿಂದ ಹೊರಬಂದುಬಿಡಬೇಕಾಯಿತು... ಅಸಹಾಯಕತೆಯ ಕ್ರೋಧ ಮತ್ತು ಸಂಕಟಗಳು ನನ್ನಲ್ಲಿ ಹೊತ್ತಿ

ಉರಿದುವು. ಅದು ಅವರ್ಣನೀಯ."

ಅಹಿಂಸಾತ್ಮಕ ಸಂಘಟನೆ ಅನೇಕ ವೇಳೆ ಇನ್ನೇನು ಕುಸಿಯುವುದರಲ್ಲಿತ್ತು. ನಾಯಕರು ತೀವ್ರವಾಗಿ ಉದ್ರಿಕ್ತರಾಗಿದ್ದ ಜನರಿಗೆ ಗಾಂಧೀಜಿಯವರ ಬುದ್ಧಿವಾದವನ್ನು ಮರೆಯದಿರುವಂತೆ ಹೇಳುತ್ತಲೇ ಇದ್ದರು. ನಿರಾಯುಧರಾಗಿದ್ದ ಜನಸಮೂಹ ಒಟ್ಟಾಗಿ ಸೇರಿ ಪೋಲೀಸರ ಮೇಲೆ ಸಾಮೂಹಿಕ ಆಕ್ರಮಣ ನಡೆಸುವ ಅಂಚಿಗೆ ಬಂದಂತೆ ತೋರಿತು. ಬ್ರಿಟಿಷ್ ಪೋಲೀಸು ಸೂಪರಿಂಟೆಂಡೆಂಟ್ ತನ್ನ ಬಂದೂಕುಧಾರಿ ಜನರನ್ನು ಒಂದು ಸಣ್ಣ ಗುಡ್ಡದ ಮೇಲಕ್ಕೆ ಕಳಿಸಿದನು, ಅಲ್ಲಿಂದ ಜನಸಮೂಹದ ಮೇಲೆ ಗುಂಡು ಹಾರಿಸಲು ಸಿದ್ಧರಾಗಿರುವುದಕ್ಕಾಗಿ. ಆದರೆ ನಾಯಕರು ಸ್ವಯಂಸೇವಕರನ್ನು ಹತೋಟಿಯಲ್ಲಿಟ್ಟರು.

ಅಂದು ಪೂರ್ವಾಹ್ಣ 11.00 ಗಂಟೆ ವೇಳೆಗೆ ವಿಪರೀತ ಬಿಸಿಲಾಯಿತು. ಉಷ್ಣತೆ 116° ಫ್ಯಾರನ್ ಹೀಟ್‌ಗಳಿಗೇರಿತ್ತು. ಪ್ರದರ್ಶನ ನಿಧಾನವಾಗಿ ಇಳಿಯಿತು. 320 ಜನರಿಗೆ ತೀವ್ರವಾದ ಗಾಯಗಳಾಗಿದ್ದುವು, ಇಬ್ಬರು ಸತ್ತಿದ್ದರು. ಅವರನ್ನು ನೋಡಿಕೊಳ್ಳಲು ಇದ್ದ ರಾಷ್ಟ್ರೀಯ ಡಾಕ್ಟರರು ಎಲ್ಲೋ ಕೆಲವರು ಮಾತ್ರ. ಮಿಲ್ಲರ್ ಅವರು ಈ ಕತೆಯನ್ನು ಪತ್ರಿಕೆಗಳಿಗೆ ಕಳುಹಿಸಲು ಪ್ರಯತ್ನಿಸಿದಾಗ ಅಧಿಕಾರಿಗಳು ಮೊದಲು ಅದನ್ನು ತಡೆದರು. ಆಮೇಲೆ ಅದನ್ನು ಕತ್ತರಿ ಪ್ರಯೋಗಕ್ಕೊಳ ಪಡಿಸಿದರು. ಆಮೇಲೆ ಬಹಳ ಕಾಲವಾದ ಮೇಲೆ ಮಿಲ್ಲರ್ ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು.

ಗಾಂಧೀಜಿಯವರ ಬಂಧನವನ್ನು ಪ್ರತಿಭಟಿಸಿ ಭಾರತಾದ್ಯಂತ ಪ್ರದರ್ಶನ ಗಳಾದುವು. ಮುಂಬಯಿಯಲ್ಲಿ ಭೆಂಡಿಬಜಾರ್, ವಾಡಾಲಾ ಮುಂತಾದ ಕಡೆಗಳಲ್ಲಿ ಗಲಭೆಗಳಾದುವು. ಆದರೆ ಯೂರೋಪಿಯನ್ ವಸತಿಗಳ ಮುಂದೆ ನಡೆದುಹೋದ ಮೆರವಣಿಗೆ ಸಂಪೂರ್ಣವಾಗಿ ಅಹಿಂಸಾತ್ಮಕವಾಗಿತ್ತು. ಮದರಾಸಿನಲ್ಲಿ ಪೋಲೀಸರ ಹೊಡೆತಕ್ಕೆ ವಿವೇಚನೆಯೇ ಇರಲಿಲ್ಲ. ಬ್ರಿಟಿಷ್ ವಸ್ತ್ರಗಳ ಬಹಿಷ್ಕಾರ ಬಂಗಾಳ, ಬಿಹಾರ ಮತ್ತು ಒರಿಸ್ಸಾಗಳಲ್ಲಿ ಅತ್ಯಧಿಕವಾಗಿತ್ತು. ಉತ್ತರ ಪ್ರದೇಶದಲ್ಲಿ ಕೃಷಿಕರು ಮತ್ತು ಜಮೀನ್ದಾರರು ತೆರಿಗೆಯನ್ನು ಕೊಡದೆ ತಡೆಹಿಡಿಯುವಂತೆ ಕರೆ ಕೊಡಲಾಯಿತು. ಅಕ್ಟೋಬರ್ ನಂತರ ಕೃಷಿಕರು ಜಮೀನ್ದಾರರಿಗೆ ಗೇಣಿ ಕೊಡಕೂಡದೆಂದು ಕರೆ ನೀಡಲಾಯಿತು. ಮಧ್ಯಪ್ರಾಂತಗಳಲ್ಲಿ ಅರಣ್ಯ ತೆರಿಗೆಗಳ ವಿರುದ್ಧವಾಗಿ ಸತ್ಯಾಗ್ರಹವನ್ನು ಹೂಡಲಾಯಿತು. ಕರ್ನಾಟಕದಲ್ಲೂ ಕರ ನಿರಾಕರಣೆಯ ಚಳುವಳಿ ಯಶಸ್ವಿಯಾಯಿತು.

ಚಳುವಳಿಯು ಬೇಗ ಹರಡಿ ದೇಶದ ದೂರದೂರದ ಭಾಗಗಳಿಗೆ ಮುಟ್ಟಿತು. ಪಶ್ಚಿಮದ ಬೆಟ್ಟಪ್ರದೇಶಗಳಲ್ಲಿ ಬ್ರಿಟಿಷ್ ಆಳಿಕೆಯ ವಿರುದ್ಧ ಪಠಾಣ ಬುಡಕಟ್ಟಿನ ಜನ ಪದೇ ಪದೇ ದಂಗೆಯೇಳುತ್ತಿದ್ದರು. ದೇರಾ ಇಸ್ಮಾಯಿಲ್ ಖಾನ್, ಪೆಷಾವರ್, ಬನ್ನು ಮತ್ತು ಕೋಹತ್ ನದೀ ಕಣಿವೆಗಳು ಮುಂತಾದ ಪ್ರದೇಶಗಳ ಜನ ಸ್ಥಳೀಯ ಅಧಿಕಾರಿಗಳ ಕೈಕೆಳಗೆ ಹೆಚ್ಚು ಸ್ಥಿರವಾದ ಕೃಷಿ ಪರಿಸ್ಥಿತಿಗಳಲ್ಲಿ ನೆಲಸಿದ್ದರು.

ಪೆಷಾವರಿನ ಬಳಿಯ ಉಟ್‌ಮಂಜೈ ಗ್ರಾಮದ ಮುಖಂಡರಲ್ಲಿ ಒಬ್ಬರಾದ ಖಾನ್ ಅಬ್ದುಲ್ ಗಫಾರ್ ಖಾನ್ ಮೊದಲನೆಯ ಪಠಾಣ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದರು.

1919 ರಲ್ಲಿ ನಡೆದ ಹಿಜರತ್ ಮತ್ತು ಆಫ್ಘನ್ ಪರ ಚಳುವಳಿಗಳಿಗೆ ಬೆಂಬಲ ನೀಡಿ ನಡೆಸಿದ ಚಟುವಟಿಕೆಗಳಿಂದಾಗಿ ಅವರನ್ನು ಕಾರಾಗೃಹದಲ್ಲಿರಿಸಲಾಗಿತ್ತು. ಆಮೇಲೆ ಆ ಪ್ರಾಂತದಿಂದ ಬಹಳ ದೀರ್ಘಕಾಲ ಹೊರಗೇ ಇದ್ದರು. 1929 ಕ್ಕೆ ಸ್ವಲ್ಪ ಮುಂಚೆ ಅವರು ಹಿಂದಿರುಗಿ ಬಂದರು. ಆಧುನಿಕ ಶಿಕ್ಷಣದ ಸೌಲಭ್ಯ ಪಡೆದಿದ್ದ ತಮ್ಮ ಹಿರಿಯ ಸಹೋದರ ಡಾಕ್ಟರ್ ಖಾನ್ ಸಾಹಿಬ್ ಅವರೊಂದಿಗೆ ಗಾಂಧೀಜಿಯ ಅಹಿಂಸಾತ್ಮಕ ಸತ್ಯಾಗ್ರಹದ ಪರವಾಗಿ ಅನೇಕ ಪಠಾಣರನ್ನು ಸಂಘಟಿಸಿದ್ದರು. ತಮ್ಮ ಶೀಲ, ಸಾಮರ್ಥ್ಯ ಮತ್ತು ದೃಢ ನಿರ್ಧಾರಗಳಿಂದಾಗಿ ಅವರಿಗೆ 'ಗಡಿನಾಡ ಗಾಂಧಿ' ಎಂಬ ಹೆಸರು ಬಂದಿತು. ಮೊದಲು ಅವರು ಪಠಾಣ ಜಿರ್ಗಾ ಅಥವಾ ಜನಾಂಗದ ಕೌನ್ಸಿಲಿನ ರಾಷ್ಟ್ರೀಯತೆಯ ಶಾಖೆಯನ್ನು ಸಂಘಟಿಸಿದರು. ಕಾಂಗ್ರೆಸ್ ಸ್ವಯಂಸೇವಕರ ಘಟಕಗಳಂತೆ ಈ ಘಟಕವೂ ಇದ್ದಿತು. ಇವರನ್ನು ಖುದೀ ಖಿದ್ಮತ್‌ಗಾರ್ (Khudi Khidmatgar) ದೇವರ ಸೇವಕರು ಎಂಬುದಾಗಿ ಕರೆಯುತ್ತಿದ್ದರು. ಅವರು ಧರಿಸುತ್ತಿದ್ದ ಸಮವಸ್ತ್ರದಿಂದಾಗಿ 'ಕೆಂಪು ಅಂಗಿಯವರು' (Red Shirts) ಎಂದೂ ಜನಪ್ರಿಯರಾದರು. ಅವರು ಪಠಾಣ ಪ್ರಾಂತೀಯ ಐಕ್ಯತೆ ಮತ್ತು ವಸಾಹತು ಶಾಹಿಯ ಹಾಗೂ ಕುಶಲಕಲಾಕಾರರನ್ನು ದಾರಿದ್ರ್ಯಕ್ಕೆ ತಳ್ಳಿದುದರ ವಿರುದ್ಧ ಹೋರಾಟಗಳಿಗೆ ಕರೆಯಿತ್ತರು. 1930 ರಲ್ಲಿ ಖುದೀ ಖಿದ್ಮತ್‌ಗಾರರ ಸಂಖ್ಯೆ 80,000 ಆಗಿತ್ತು. ಗಾಂಧಿಯವರು ನಾಯಕರಾಗಿ ದೇಶದ ಉಳಿದ ಭಾಗಗಳಲ್ಲಿನ ಜನರನ್ನು ನಿಯಂತ್ರಿಸಿದುದಕ್ಕಿಂತ ಅಬ್ದುಲ್ ಗಫಾರ್ ಖಾನರಿಗೆ ತಮ್ಮ ಅನುಯಾಯಿಗಳ ಉಗ್ರ ಭಾವೋದ್ವೇಗಗಳನ್ನು ತಡೆದು ಹತೋಟಿಯಲ್ಲಿಡುವುದು ಕಷ್ಟತರವಾದ ಕೆಲಸವಾಯಿತು.

ಪೇಷಾವರಿನಲ್ಲಿ ಸತ್ಯಾಗ್ರಹ ಚಳುವಳಿಯು ಏಪ್ರಿಲ್ 20 ರಂದು ಪ್ರಾರಂಭ ವಾಗಬೇಕಾಗಿತ್ತು. ಭಾರೀ ಸಂಖ್ಯೆಯಲ್ಲಿ ಬಡರೈತರು ಈದ್ ಹಬ್ಬದ ಆಚರಣೆಗಾಗಿ ಅಲ್ಲಿ ನೆರೆಯುವವರಿದ್ದರು. ಅನೇಕ ಗಡಿನಾಡ ಜನ ಬಯಲು ಪ್ರದೇಶಗಳಲ್ಲಿ ಕೆಲಸಮಾಡಿ ಹಬ್ಬದಲ್ಲಿ ಪಾಲುಗೊಳ್ಳಲು ತಮ್ಮ ಸ್ಥಳಕ್ಕೆ ಹಿಂದಿರುಗುವವರಿದ್ದರು. ಸ್ಥಳೀಯ ಕಾಂಗ್ರೆಸ್ಸಿಗರನ್ನು ಬಂಧಿಸಿದಾಗ ನಗರಗಳ ಜನತೆ ಪ್ರತಿಭಟನೆ ಸೂಚಿಸಿತು. ಬಂಧಿತರನ್ನು ಪೋಲೀಸರಿಂದ ಬಿಡಿಸಿಕೊಳ್ಳಲು ಪ್ರಯತ್ನಮಾಡಿತು. ಬುಡಕಟ್ಟು ಜನರೂ ಸೇರಿಕೊಂಡರು. ಎರಡೂ ಕಡೆ ಉದ್ವೇಗ ಹೆಚ್ಚಿ ಪರಸ್ಪರ ಗುಂಡು ಹಾರಿಸಿದರು. ಜನಸಾಮಾನ್ಯರ ಗಲಭೆ ಎದ್ದಿತು. ಆಯುಧಗಳಿಂದ ಸಜ್ಜಾಗಿದ್ದ ಬ್ರಿಟಿಷ್ ವಾಹನಗಳಿಗೆ ಅಡ್ಡಲಾಗಿ ಭಾರೀ ತಡೆಗಳನ್ನು ಒಡ್ಡಿದರು. ಪೇಷಾವರ್ ದಂಗೆಯನ್ನು ಅಡಗಿಸಲೆಂದೇ ಅವುಗಳನ್ನು ಕಳುಹಿಸಲಾಗಿತ್ತು. ಅಧಿಕಾರಿಗಳು ಮತ್ತು ನಗರದ ಮೇಲುವರ್ಗದ ಕುಲೀನರು ಮಿಲಿಟರಿ ಕಂಟೋನ್ಮೆಂಟಿನಲ್ಲಿ ಆಶ್ರಯ ಪಡೆದರು. ಈ ಮಧ್ಯೆ ಯುದ್ಧಪ್ರೇಮಿಗಳಾದ ಸುಧಾರಕರೂ ಮತ್ತು ರಾಷ್ಟ್ರೀಯ ವಾದಿಗಳೂ ಆಗಿದ್ದ ಅಕಾಲಿಗಳು ಸೈನ್ಯದ ಭಾರತೀಯ ಯೋಧರಲ್ಲಿ ಕ್ರಾಂತಿ ಮನೋಭಾವವನ್ನು ಪ್ರಚೋದಿಸುತ್ತಿದ್ದರು. ರಾಯಲ್ ಘಡ್‌ವಾಲ್ ರೈಫಲ್ಸ್, ಕ್ರಾಕ್‌ಓಲ್ ಸೋಲ್ಜರ್ಸ್ ಎಂಬ ಎರಡು ದಳಗಳಿಗೆ ಜನಸಮೂಹದ ಮೇಲೆ ಗುಂಡು ಹಾರಿಸಬೇಕೆಂದು ಅಪ್ಪಣೆ ಮಾಡಿದಾಗ, ಅವರು ತಮ್ಮ ಒಪ್ಪಿ ಸಹವರ್ತಿಯ ಮನವಿಗೆ

ಒಗೊಟ್ಟು ಗುಂಡುಹಾರಿಸಲು ನಿರಾಕರಿಸಿದರು. ಆ ಸಹವರ್ತಿ ಚಂದರ್ ಸಿಂಗ್ ಘರವಾಲ. ಸೈನಿಕರು ಮುಸ್ಲಿಂ ಪಠಾಣ ಸೋದರರೊಂದಿಗೆ ಭ್ರಾತೃತ್ವ ಬೆಳೆಸಿದರು. ಇದು 'ಒಡೆದು ಆಳು' ಎಂಬ ಬ್ರಿಟಿಷ್ ನೀತಿಯ ದೌರ್ಬಲ್ಯಕ್ಕೆ ಸಾಕ್ಷಿಯಾಗಿತ್ತು. ಶೋಷಣೆಗೆ ಒಳಗಾದ ಜನರಿಗೆ ಐಕ್ಯತೆಯಿಂದಿರಲು ಶಿಕ್ಷಣ ಕೊಟ್ಟದ್ದೇ ಆದರೆ ಆ ನೀತಿಯು ಉಳಿಯುವುದು ಸಾಧ್ಯವಿರಲಿಲ್ಲ.

ಘಢ್‌ವಾಲಿ ಸೇನಾತುಕಡಿಗಳನ್ನು ಬ್ರಿಟಿಷ್ ಸೇನೆಗಳು ಕಂಟೋನ್ಮೆಂಟಿನಿಂದಲೂ ಬಳಸಿ ನಿಂತುವು. ಅವರನ್ನು ಅಲ್ಲೇ ವಿಚಾರಣೆ ಮಾಡಲಾಯಿತು. ಅವರ ನಾಯಕರಲ್ಲಿ ಕೆಲವರನ್ನು ದಂಗೆಯೆದ್ದುದಕ್ಕಾಗಿ ಮರಣದಂಡನೆಗೊಳಪಡಿಸಲಾಯಿತು. ಮೇ ತಿಂಗಳ ಮೊದಲ ಭಾಗದಲ್ಲಿ ಬೆಟ್ಟಗಾಡುಗಳ ಆಫ್ರಿಡಿ ಮತ್ತು ಮೊಹಮಂಡ್ ಬುಡಕಟ್ಟುಗಳು ದಂಗಯೆದ್ದು ಪೇಷಾವರಿನ ದಂಗೆಯನ್ನು ಕೂಡಿಕೊಳ್ಳಲು ನಡೆದುವು; ಪಂಜಾಬಿನಲ್ಲಿ ಪೇಷಾವರಿಗಾಗಿ ಐಕ್ಯತೆಯನ್ನು ಪ್ರದರ್ಶಿಸುವ ಪ್ರದರ್ಶನ ನಡೆಯಿತು. ಇದನ್ನು ಮುಖ್ಯವಾಗಿ ನಡೆಸಿದವರು ಅಕಾಲಿಗಳು, ಸ್ಥಳೀಯ ಚಳುವಳಿಗಾರರಿಗೆ ನೆರವಾಗಲು ಒಂದು ಗುಂಪು ಜನರನ್ನು ಅವರು ಕಳುಹಿಸಿಕೊಟ್ಟರು. ಈ ತುಕಡಿಯನ್ನು ಬ್ರಿಟಿಷ್ ಸೇನೆಯು ಝೀಲಂ ನದಿಯ ಬಳಿ ತಡೆಯಿತು. ಕೊನೆಗೆ ಬ್ರಿಟಿಷ್ ಸೇನೆಯು ವಾಯುವ್ಯ ಗಡಿ ಪ್ರಾಂತಕ್ಕೆ ನಡೆದು ಆದಿವಾಸಿ ಜನಗಳನ್ನು ಮತ್ತೆ ಬೆಟ್ಟಗಳಿಗೆ ಓಡಿಸಿದಕ್ಕಟ್ಟಿತು.

ಪೂರ್ವ ಬಂಗಾಳದ ಬಂದರು ಚಿತ್ತಗಾಂಗ್‌ನಲ್ಲಿ ಸ್ಥಳೀಯ ಕೆಳ ಮಧ್ಯಮ ವರ್ಗದ ಯುವಕರು ಒಂದು ಸಶಸ್ತ್ರ ಕ್ರಾಂತಿ ನಡೆಸಿದರು. ಅವರ ನಾಯಕ ಸುಪ್ರಸಿದ್ಧ ಭಯೋತ್ಪಾದಕ ಸೂರ್ಯಸೇನ್. ಅವರು ಏಕಕಾಲದಲ್ಲಿ ಪೂರ್ವ ಬಂಗಾಳದ ಬ್ರಿಟಿಷ್ ಮದ್ದು ಗುಂಡುಗಳ ಭಂಡಾರಗಳ ಮೇಲೆ ಆಕ್ರಮಣ ನಡೆಸುವ ಹಂಚಿಕ ಹಾಕಿದ್ದರು.

ಸೂರ್ಯಸೇನನ ದಳಪತಿಗಳು, ಅಂಬಿಕಾ ಚಕ್ರವರ್ತಿ, ಸ್ಥಳೀಯ ಕಾಂಗ್ರೆಸ್ಸಿಗರಾದ ಲೋಕನಾಥ್ ಬಾಲ್ ಮತ್ತು ಮುಂದೆ ಪ್ರಸಿದ್ಧ ಕಮ್ಯೂನಿಸ್ಟ್ ಆದ ಗಣೇಶ ಘೋಷ್- ಇವರು ಸ್ಥಳೀಯ ಶಾಲಾ ಕಾಲೇಜು ವಿದ್ಯಾರ್ಥಿಗಳನ್ನು ಪ್ರಚೋದಿಸಿದರು. ಇವರಲ್ಲಿ ಆನಂದ ಗುಪ್ತ ಮತ್ತು ಟೆಗ್ರಾ (ಟೈಗರ್) ಬಾಲ್ ಮೊದಲಾದ ಯುವಕರೂ, ಕಲ್ಪನಾ ದತ್ ಮತ್ತು ಪ್ರೀತಿಲತಾ ವಾಡೇದಾರ್ ಮೊದಲಾದ ಧೈರ್ಯಶಾಲಿ ಯುವತಿಯರೂ ಇದ್ದರು.

ಸೂರ್ಯಸೇನ್ ಒಂದು ಪ್ರಣಾಳಿಕೆಯನ್ನು ಪ್ರಕಟಿಸಿದನು. ಇಂಡಿಯನ್ ರಿಪಬ್ಲಿಕನ್ ಆರ್ಮಿ (Indian Republican Army) ಚಿತ್ತಗಾಂಗ್ ಶಾಖೆಯ ಹೆಸರಿನಿಂದ ಹೊರಟಿದ್ದ ಆ ಪ್ರಣಾಳಿಕ ಭಾರತೀಯರಿಗೆ ಬ್ರಿಟಿಷ್ ಆಳಿಕೆಯ ವಿರುದ್ಧವಾಗಿ ಯುದ್ಧಕ್ಕೆ ಸಿದ್ಧರಾಗುವಂತೆ ಕರ ಕೊಟ್ಟಿತು. ಅವನು ಮತ್ತು ಅವನ ಸಹವರ್ತಿಗಳು ಅಂದು ರಾತ್ರಿಯೇ ಚಿತ್ತಗಾಂಗಿನ ಯೂರೋಪಿಯನರ ಮೇಲ ಮುತ್ತಿಗೆ ಹಾಕಲು ನಾಲ್ಕು ಕೇಂದ್ರಗಳಿಗ ನುಗ್ಗಿದರು. ಪೋಲೀಸ್ ಶಸ್ತ್ರಾಗಾರಕ್ಕೆ ಐವತ್ತು ಮಂದಿ ಯುವಕರು ಧಾಳಿಯಿಟ್ಟರು. ಅವರು ಸುಳುಹುಗೊಡದಿರಲು ಬ್ರಿಟಿಷ್ ಇಂಡಿಯನ್ ಸೈನ್ಯದ ಸಮವಸ್ತ್ರಗಳನ್ನೇ ಧರಿಸಿದ್ದರು. ಈ ಘಟನಗ ಚಿತ್ತಗಾಂಗ್

ಶಸ್ತ್ರಾಗಾರದ ಧಾಳಿ ಎಂದೇ ಹೆಸರಾಯಿತು.

ಆದರೆ ಅವಸರದಲ್ಲಿ ಧಾಳಿಕಾರರು ತಾವು ವಶಪಡಿಸಿಕೊಂಡ ಲೂಯಿ ಬಂದೂಕುಗಳಿಗೂ, ರೈಫಲುಗಳಿಗೂ ತಕ್ಕ ತೋಟಾಗಳನ್ನು ತೆಗೆದುಕೊಳ್ಳಲಿಲ್ಲ. ಒಂದು ಪುಟ್ಟ ಸೇನಾದಳ, ಅಷ್ಟಾಗಿ ಆಯುಧಗಳೂ ಇಲ್ಲದುದು, ಡೆಪ್ಯುಟಿ ಇನ್‌ಸ್ಪೆಕ್ಟರ್-ಜನರಲ್ ಆಫ್ ಪೋಲೀಸ್ ಅವನ ನೇತೃತ್ವದಲ್ಲಿ ಅವರನ್ನು ಎದುರಿಸಿತು. ದಾಳಿಕಾರರು ನಗರದಿಂದ ಹಿಂದಕ್ಕೆ ಓಡಿಹೋಗಿ ಚಿತ್ತಗಾಂಗಿನಿಂದ ಆಚೆ ಕಾಡಿನೊಳಕ್ಕೆ ನುಸುಳುವಂತೆ ಮಾಡಿತು. ಮೇ 22 ರಂದು ಐವತ್ತೇಳು ಜನ ಕ್ರಾಂತಿಕಾರರನ್ನು ಜಲಾಲಾಬಾದ್ ಬೆಟ್ಟದ ಮೇಲೆ ಬ್ರಿಟಿಷ್ ಸೈನಿಕರು ಸುತ್ತುವರಿದರು. ಆದರೂ ಅವರಲ್ಲಿ ಅನೇಕರು ತಪ್ಪಿಸಿಕೊಂಡು ಗೆರಿಲ್ಲಾ ಹೋರಾಟವನ್ನು ಮುಂದುವರಿಸುತ್ತಿದ್ದರು. ಅದಕ್ಕೆ ಮುಂಚೆ 64 ಬ್ರಿಟಿಷ್ ಸೈನಿಕರನ್ನು ಕೊಲ್ಲಲಾಗಿತ್ತು. ಕ್ರಾಂತಿಕಾರರಲ್ಲಿ ಅತ್ಯಂತ ಕಿರಿಯ ವಯಸ್ಸಿನವನಾದ ಟೆಗ್ರಾ ಬಾಲ್ ಮೊದಲ ಸುತ್ತಿನ ಗುಂಡೇಟಿನಲ್ಲಿಯೇ ಮಾರಕವಾದ ಗಾಯಗಳನ್ನು ಪಡೆದನು. ಅವನು ಲೋಕನಾಥನಿಗೆ ಹೇಳಿದ ಕೊನೆಯ ಮಾತುಗಳು: "ನಾನು ಹೋಗುತ್ತಿದ್ದೇನೆ, ಕೊನೆಯವರೆಗೂ ಹೋರಾಡು."

ಇದಾದ ಮೇಲೆ ಕ್ರಾಂತಿಕಾರರ ಹಿಂಸಾಕೃತ್ಯಗಳು ಬಂಗಾಳದಲ್ಲಿ ಹರಡಿದುವು. ಆಗಸ್ಟ್ ತಿಂಗಳಲ್ಲಿ ಢಾಕಾ ಮಿಟ್‌ಫೋರ್ಡ್ ಹಾಸ್ಪಿಟಲ್ ಶಾಲೆಯ ವಿದ್ಯಾರ್ಥಿ ಬೆನಾಯ್ ಬೋಸ್ ಒಬ್ಬ ವರಿಷ್ಠ ಬ್ರಿಟಿಷ್ ಅಧಿಕಾರಿಯನ್ನು ಗುಂಡಿಟ್ಟು ಕೊಂದನು. ಆಮೇಲೆ ತಲೆತಪ್ಪಿಸಿಕೊಂಡನು. ಡಿಸೆಂಬರಿನಲ್ಲಿ ಬಾದಲ್ ಮತ್ತು ದಿನೇಶ್ ಎಂಬ ಇನ್ನಿಬ್ಬರೊಂದಿಗೆ ಕೂಡಿಕೊಂಡು ಅವನು "ರೈಟರ್ಸ್ ಬಿಲ್ಡಿಂಗ್" (Writer's Buildings) ಅನ್ನು ಪ್ರವೇಶಿಸಿದನು. ಅದು ಕಲ್ಕತ್ತದ ಡಾಲ್‌ಹೌಸೀ ಚೌಕದಲ್ಲಿದ್ದ ಸರಕಾರೀ ಕೇಂದ್ರ ಕಟ್ಟಡ. ಜೈಲುಗಳ ಇನ್ಸ್‌ಪೆಕ್ಟರ್-ಜನರಲ್‌ನನ್ನು ಅವರು ಹೊಡೆದು ಕೊಂದರು. ಆಮೇಲೆ ಅಂಗಳದಲ್ಲಿ ಓಡಾಡುತ್ತಾ ಕಂಡಕಂಡ ಯೂರೋಪಿಯನ್ ಅಧಿಕಾರಿಗಳನ್ನೆಲ್ಲ ಗುಂಡಿಟ್ಟು ಕೊಲ್ಲತೊಡಗಿದರು. ಸೆರೆಗೆ ಸಿಕ್ಕುವುದಕ್ಕೆ ಬದಲಾಗಿ ಬಾದಲ್ ಸಯನೈಡ್ ಸೇವಿಸಿ ಮೃತನಾದನು. ಬೆನಾಯ್ ಮತ್ತು ದಿನೇಶ್ ತಮಗೆ ತಾವೇ ಗುಂಡು ಹೊಡೆದುಕೊಂಡರು. ಕೆಲವೇ ದಿನಗಳಲ್ಲಿ ಬೆನಾಯ್ ಬೋಸ್ ಸತ್ತುಹೋದನು. ಆದರೆ ದಿನೇಶನು ಚೇತರಿಸಿಕೊಂಡನು. ಅವನನ್ನು ವಿಚಾರಣೆಗೊಳಪಡಿಸಿ ಗಲ್ಲಿಗೇರಿಸಲಾಯಿತು.

ಉತ್ತರದಲ್ಲಿ ಸುಪ್ರಸಿದ್ಧ ವ್ಯಕ್ತಿಯಾದ ಚಂದ್ರಶೇಖರ ಆಜಾದನಿಂದ ಭಯೋತ್ಪಾದನ ಕೃತ್ಯಗಳು ಸಜೀವವಾಗಿ ಉಳಿದುವು. ಪೋಲೀಸರು ಅವನ ಸಹಾಯಕರಾಗಿದ್ದವರನ್ನು ಹಿಡಿದರು. ಅವನ ಒದಗಣೆಯ ಮೂಲಗಳನ್ನು ಹಿಡಿದರು. ಆದರೆ ಚಂದ್ರಶೇಖರನು ಅವರಿಗೆ ಸಿಕ್ಕಲಿಲ್ಲ. 1931 ರ ಫೆಬ್ರವರಿಯಲ್ಲಿ ಅವನಿಗೆ ವಂಚನೆ ಮಾಡಿ ಪೋಲೀಸರಿಗೆ ಹಿಡಿದುಕೊಡಲಾಯಿತು. ಅಲಹಾಬಾದಿನ ಆಲ್‌ಫ್ರೆಡ್ ಉದ್ಯಾನವನದಲ್ಲಿ ಕೊನೆಯವರೆಗೂ ಹೋರಾಡುತ್ತಾ ಬಂದೂಕದ ಗುಂಡುಗಳು ಮೈಯೆಲ್ಲಾ ತುಂಬಿ ಅವನು ಕೊನೆಯುಸಿರೆಳೆದನು. ಆದಕ್ಕಿಂತ ಮುಂಚೆ 1930 ರಲ್ಲಿ ಲಾಹೋರ್ ಒಳಸಂಚು ಮೊಕದ್ದಮೆಗೆ ಸಂಬಂಧಿಸಿದ ಸುಗ್ರೀವಾಜ್ಞೆಯು

ಪ್ರಕಾರ ವಿಶೇಷವಾದ ಅಧಿಕಾರಗಳನ್ನು ಸರಕಾರ ಪಡೆದುಕೊಂಡಿತ್ತು. ಆದರಿಂದ ಭಗತ್ ಸಿಂಗ್ ಮತ್ತು ಅವನ ಸಹವರ್ತಿಗಳನ್ನು, ಸಾಮಾನ್ಯವಾದ ಸಾಕ್ಷ್ಯಾಧಾರಗಳು ಅಥವಾ ಅಪೀಲಿನ ಹಕ್ಕು ಯಾವುದೂ ಇಲ್ಲದೆ ವಿಚಾರಣೆ ನಡೆಸಬಹುದಾಗಿತ್ತು. ಅಕ್ಟೋಬರ್ 7 ರಂದು ಭಗತ್ ಸಿಂಗ್, ಸುಖದೇವ್ ಮತ್ತು ರಾಜಗುರು ಇವರನ್ನು ಮರಣದಂಡನೆಗೊಳಪಡಿಸಲಾಯಿತು. ಮಿಕ್ಕವರನ್ನು ಆಜೀವ ಗಡಿಪಾರು ಮಾಡಲಾಯಿತು. ಅವರಲ್ಲಿ ಅನೇಕರನ್ನು ಅಂಡಮಾನಿನ ಭಯಂಕರವಾದ ಕೋಶ ಕಾರಾಗೃಹಕ್ಕೆ ನೂಕಲಾಯಿತು.

ಈ ಕ್ರಾಂತಿಕಾರಿ ಭಯೋತ್ಪಾದಕ ದಾಳಿಗಳು ಪೂರ್ವ ಬಂಗಾಳ, ಉತ್ತರ ಪ್ರದೇಶಗಳ ಕೆಳ ಮಧ್ಯಮ ವರ್ಗದ ಯುವಕರಲ್ಲಿ ಭುಗಿಲೆದ್ದಿದ್ದ ರಾಷ್ಟ್ರಪ್ರೇಮದ ಆವೇಗವನ್ನು ಪ್ರತಿಬಿಂಬಿಸುತ್ತವೆ. ಈ ಆವೇಗಗಳು ಸಾಂಪ್ರದಾಯಿಕ ರಾಷ್ಟ್ರೀಯತಾ ಚಳುವಳಿಯ ಪಾತ್ರಗಳಲ್ಲಿ ಅಭಿವ್ಯಕ್ತಿ ಪಡೆಯುವುದು ಸಾಧ್ಯವಾಗಲಿಲ್ಲ. ಗಾಂಧೀಜಿಯವರ ಅಹಿಂಸೆಯ ತತ್ತ್ವವೂ ಅವರ ಕಲ್ಪನೆಗೆ ಮೆಚ್ಚಿಕೆ ಆಗಲಿಲ್ಲ. ಆದ್ದರಿಂದ ಅವರು ಹೀಗೆ ವಿನಾಶಕಾರೀ ಕೃತ್ಯಕ್ಕೆ ತೊಡಗಿದರು. ಆದರೆ ಅವರ ಹಿಂಸಾ ಕೃತ್ಯಗಳಲ್ಲಿಯೇ ಅವರದೇ ವಿನಾಶದ ಬೀಜಗಳೂ ಅಡಗಿರುತ್ತಿದ್ದುವು. ಅವುಗಳಲ್ಲಿ ಭಾಗವಹಿಸಿದ ಬಾಲಕ ಬಾಲಕಿಯರ ಧೈರ್ಯ ಸಾಹಸಗಳಿದ್ದರೂ, ಪೋಲೀಸರ ಮತ್ತು ಸರಕಾರದ ಸೈನ್ಯಶಕ್ತಿಯ ಎದುರು ಅವರು ಸೋಲುವುದು ಖಚಿತವೇ ಆಗಿರುತ್ತಿತ್ತು. ಬ್ರಿಟಿಷರ ಪಾಲಿಗೆ ಇವುಗಳಲ್ಲಿ ಭೀತಿ ಏನೂ ಇರಲಿಲ್ಲ. ಕ್ರಾಂತಿಕಾರಿ ಭಯೋತ್ಪಾದಕರನ್ನು ಹಿಡಿದು ನಿರ್ಮೂಲ ಮಾಡಿಬಿಡಬೇಕೆಂಬ ಹಟದ ಮನೋಭಾವ ಮಾತ್ರ ಅವರಲ್ಲಿ ಇದ್ದದ್ದು. ಇದಕ್ಕೆ ಒಂದು ಕಾರಣ, ಭಯೋತ್ಪಾದಕ ಮುತ್ತಿಗೆಗಳ ಹಿಂದೆಯೇ ಸಹಾನುಭೂತಿಯುತವಾದ ಜನತಾ ದಂಗೆಗಳು ಏಳುತ್ತಿರಲಿಲ್ಲ. ಜನಸಾಮಾನ್ಯರು ಹಿಂಸಾತ್ಮಕ ಕ್ರಾಂತಿಗೆ ಇನ್ನೂ ಸಿದ್ಧರಾಗಿರಲಿಲ್ಲ. ಏಕೆಂದರೆ, ಕ್ರಾಂತಿಕಾರರು ಅವರನ್ನು ರಾಜಕೀಯದಲ್ಲಿ ಜಾಗೃತಗೊಳಿಸಿರಲಿಲ್ಲ ಅಥವಾ ವ್ಯವಸ್ಥೆಗೊಳಿಸಿರಲಿಲ್ಲ.

ಇನ್ನೊಂದು ಜನತಾ ಕ್ರಾಂತಿ ಎದ್ದದ್ದು ದಕ್ಷಿಣ ಮಹಾರಾಷ್ಟ್ರದ ಹತ್ತಿ ಬೆಳೆಯುವ ಜಿಲ್ಲೆಗಳಲ್ಲಿ, ಷೋಲಾಪುರದ ಕೆಲಸಗಾರರಲ್ಲಿ. ಇಲ್ಲಿ ಸ್ಥಳೀಯ ಕಾಂಗ್ರೆಸ್ ಸಮಿತಿಯು ಒಂದು 'ಯುದ್ಧ ಮಂಡಲಿ'ಯನ್ನು ರೂಪಿಸಿ ಸತ್ಯಾಗ್ರಹ ಚಳುವಳಿಯನ್ನು ಪ್ರಾರಂಭಿಸಿತು. ನಗರದಲ್ಲಿ ರಾಷ್ಟ್ರ ಧ್ವಜವನ್ನು ಹಾರಿಸಲಾಯಿತು. ಪೋಲೀಸರು ಮತ್ತು ಬ್ರಿಟಿಷ್ ಸರಕಾರಕ್ಕೆ ವಿಧೇಯರಾಗಿದ್ದ ಇತರ ಅಧಿಕಾರಿಗಳು ರೈಲ್ವೆ ಸ್ಟೇಷನ್ನಿಗೆ ಹಿಮ್ಮೆಟ್ಟಿದರು. ಷೋಲಾಪುರದಿಂದ ಸುದ್ದಿ ಬಂದೊಡನೆಯೇ ಬ್ರಿಟಿಷ್ ಆಡಳಿತ ಅಲ್ಲಿ "ಬ್ಲಾಕೌಟ್" ಘೋಷಿಸಿತು. ದೊಂಬಿಯನ್ನು ಅಡಗಿಸಲು ಎರಡು ದಳಗಳ 2,000 ಬ್ರಿಟಿಷ್ ಸೈನಿಕರನ್ನು ಕಳುಹಿಸಬೇಕಾಯಿತು. ದಂಗೆಯೆದ್ದಿದ್ದ ಕ್ರಾಂತಿಕಾರರಲ್ಲಿ ಅನೇಕರನ್ನು ಗಲ್ಲಿಗೇರಿಸಲಾಯಿತು ಅಥವಾ ಸೆರೆಗೆ ಹಾಕಲಾಯಿತು.

ಈ ಕ್ರಾಂತಿಕಾರೀ ಚಟುವಟಿಕೆಗಳ ಜೊತೆಗೆ ಅನೇಕ ಕೃಷಿಕ ಚಳುವಳಿಗಳೂ ಬೆಳೆದುವು. 1930 ರ ಕರನಿರಾಕರಣ ಮುಷ್ಕರ ಈ ಚಳುವಳಿಗಳಿಗೆ ದಾರಿಮಾಡಿತ್ತು. ಆದರೆ ಅವುಗಳ ಮೂಲ ಇದ್ದದ್ದು ಇನ್ನೂ ಆಳದಲ್ಲಿ, ಭೂ ಮಾಲೀಕರು

ಕೃಷಿಕರನ್ನು ಶೋಷಿಸುತ್ತಿದ್ದುದರಲ್ಲಿ.

ಜಗತ್ತಿನಾದ್ಯಂತ ಬಂಡವಾಳಶಾಹಿಗೆ ಉಂಟಾದ ಸಂದಿಗ್ಧ ಪರಿಸ್ಥಿತಿಯ ಕಾರಣವಾಗಿ, ಕೃಷಿ ಉತ್ಪನ್ನ ವಸ್ತುಗಳ ಅಂತರರಾಷ್ಟ್ರೀಯ ಮಾರುಕಟ್ಟೆ ಬೆಲೆಗಳು ಕುಸಿದಿದ್ದುವು. ಮಾರಾಟದಿಂದ ಬಂದ ಲಾಭದಲ್ಲಿ ಕೃಷಿಕನ ಪಾಲು ಕಡಮೆಯಾದುದರಿಂದ ಅವರು 'ಭೂ ಮಾಲೀಕರಿಗೆ ಬಾಕಿಯನ್ನು ಕೊಡಲು ಅಸಮರ್ಥರಾದರು. ಗೇಣಿಯ ರೂಪದಲ್ಲಿ ಅವರಿಗೂ ಭೂಕಂದಾಯದ ಮತ್ತಿತರ ತೆರಿಗೆಗಳ ರೂಪದಲ್ಲಿ ಸರಕಾರಕ್ಕೂ ಕೊಡಲಾರದಾದರು.

1930 ರ ಮಾರ್ಚಿ ತಿಂಗಳಲ್ಲಿ ಉತ್ತರ ಪ್ರದೇಶ ಕಾಂಗ್ರೆಸ್ ಕಮಿಟಿಯು (ಜವಾಹರಲಾಲ್ ನೆಹರೂ ಇದಕ್ಕೆ ಅಧ್ಯಕ್ಷರಾಗಿದ್ದರು) ಒಂದು ನಿರ್ಣಯವನ್ನು ಅನುಮೋದಿಸಿತು. ರಾಷ್ಟ್ರೀಯ ಯೋಜನೆಯು ಭೂಕಂದಾಯದ ಇಳಿತಾಯ, ಹಣ ಸಾಲ ಕೊಟ್ಟವರಿಗೆ ಭಾಗಶಃ ಪರಿಹಾರ ಕೊಟ್ಟು ಎಲ್ಲ ಸಾಲಗಳನ್ನೂ ವಜಾ ಮಾಡುವುದು, ಭೂ ಮಾಲೀಕರಿಗೆ ಗೇಣಿದಾರರನ್ನು ತಮಗೆ ಇಚ್ಛೆ ಬಂದಹಾಗೆ ಬಿಡಿಸುವ ಸ್ವೇಚ್ಛಾಧಿಕಾರವನ್ನು ತಗ್ಗಿಸುವುದು-ಇವುಗಳನ್ನು ಒಳಗೊಳ್ಳಬೇಕು ಎಂದು ಹೇಳಿತು. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಮೊದಲನೆಯ ಅಂಶವನ್ನು ಒಪ್ಪಿಕೊಂಡಿತು. ಅದರಿಂದ ಭೂ ಮಾಲೀಕರು ಮತ್ತು ಕೃಷಿಕರು ಇಬ್ಬರಿಗೂ ತೃಪ್ತಿಯಾಯಿತು. ಆದರೆ ಉಳಿದ ಅಂಶಗಳನ್ನು ಅದು ಒಪ್ಪಲಿಲ್ಲ.

ಅಲಹಾಬಾದ್ ಜಿಲ್ಲೆಯ ಔಧ್‌ನಲ್ಲಿ ಕರನಿರಾಕರಣ ಚಳುವಳಿ ಪ್ರಾರಂಭವಾಯಿತು. ಅಲ್ಲಿ ಎಂ.ಎನ್. ರಾಯ್ ಮತ್ತು ಅವರ ಸಂಗಡಿಗರು ಕಾಂಗ್ರೆಸ್ಸನ್ನು ಸೇರಿದರು. ಸಮಾಜವಾದೀ ಭಾವನೆಗಳನ್ನು ಹಳ್ಳಿಗಳಲ್ಲಿ ಹರಡಿದರು. ಪೂರ್ವ ಬಂಗಾಳದ ಕಿಶೋರ್‌ಗಂಜ್ ಕೇವಲ ಸೆಣಬು ಮಾತ್ರ ಬೆಳೆಯುತ್ತಿದ್ದ ಪ್ರದೇಶ. ಪ್ರಪಂಚಾದ್ಯಂತ ಸೆಣಬಿನ ಬೆಲೆ ಇಳಿದುಹೋಯಿತು. ಜಾಗತಿಕ ಬಂಡವಾಳಶಾಹಿಯ ಕುಸಿತದ ನೇರ ಫಲವಾಗಿತ್ತದು. ಇದರಿಂದ ಸೆಣಬು ಬೇಸಾಯ ಮಾಡುತ್ತಿದ್ದ ಎಲ್ಲ ಕೃಷಿಕರಿಗೂ ಆಘಾತವುಂಟಾಯಿತು. ಬಾಡಿಗೆ ಕೊಡಲು ಅವರು ನಿರಾಕರಿಸಿದರು. ಕಲ್ಕತ್ತಾ ಕಾರ್ಮಿಕರ ಬೆಂಬಲ ಮತ್ತು ಸಹಾನುಭೂತಿ ಅವರಿಗೆ ಸಿಕ್ಕಿದುವು. ಕೃಷಿಕ ಚಳುವಳಿಯನ್ನು ಅಳಿಸಿಹಾಕಲು ಕಿಶೋರ್‌ಗಂಜ್‌ಗೆ ಸೈನ್ಯ ದಳಗಳನ್ನು ಕಳುಹಿಸಿಕೊಡಬೇಕಾಯಿತು. ಬೀರಾರಿನ ಬಲ್ಡಾನಾ ಜಿಲ್ಲೆಯಲ್ಲಿ ಡಿಸೆಂಬರ್ ತಿಂಗಳಲ್ಲಿ ಬೇಸಾಯಗಾರರು ತಮ್ಮ ಪ್ರಧಾನ ಬೆಳೆಯಾದ ಹತ್ತಿಯನ್ನು ಕೊಂಡು ಲೂಟಿಮಾಡಿದ ವರ್ತಕರು ಮತ್ತು ಸಾಲಿಗರ ಕೈಗೆ ಸಿಕ್ಕಿ ವಿಪರೀತ ಕಷ್ಟಪಟ್ಟರು. ಸ್ಥಳೀಯ ಭೂಮಾಲೀಕರು ಗೇಣಿದಾರರ ಮತ್ತು ಕೃಷಿ ಕೆಲಸಗಾರರ ಶೋಷಣೆಯನ್ನು ಅಧಿಕಗೊಳಿಸಿದರು. ಆದ್ದರಿಂದ ಬಲ್ಡಾನಾ ಕಾರ್ಮಿಕರು ಮತ್ತು ಬೇಸಾಯಗಾರರು ಒಂದು ರೈತ ಸಂಘವನ್ನು ರೂಪಿಸಿಕೊಂಡು ತೆರಿಗೆಗಳನ್ನು ಕೊಡಬಾರದೆಂದು ನಿರ್ಧರಿಸಿದರು, ಅಂತೆಯೇ ಗೇಣಿಯನ್ನೂ ಮತ್ತು ಬಡ್ಡಿಯನ್ನೂ ಸಹ ಬ್ರಿಟಿಷ್ ತೆರಿಗೆ ವಸೂಲಿ ಅಧಿಕಾರಗಳನ್ನು ವ್ಯವಸ್ಥಿತವಾಗಿ ರೈತ ಸ್ವಯಂಸೇವಕರು ಪ್ರತಿಭಟಿಸಿದರು. ಹಳ್ಳಿಯಿಂದ ಹಳ್ಳಿಗೆ ನಗಾರಿಯನ್ನು ಬಡಿದುಕೊಂಡು ಸಾಲುಕಟ್ಟಿ ನಡೆದರು. ಸಾಲಿಗರ (Money Lender) ಮತ್ತು ಭೂ ಮಾಲೀಕರ ಆಸ್ತಿಪಾಸ್ತಿಗಳನ್ನು,

ಬೆಳೆಗಳನ್ನು ವಶಪಡಿಸಿಕೊಳ್ಳುತ್ತಾ ಅವರ ಮನೆಗಳಿಗೆ ಬೆಂಕಿಯಿಡುತ್ತಾ ನಡೆದರು. ಈ ಚಳುವಳಿ ಅನೇಕ ಜಾತಿಗಳನ್ನು ಒಂದಾಗಿಸಿತು, ಹಿಂದೂಗಳು ಮುಸ್ಲಿಮರು ಒಂದಾದರು, ವಾಸ್ತವವಾಗಿ ಗ್ರಾಮೀಣ ಬಡಜನರ ದಂಗೆಯಾಗಿತ್ತು ಇದು. ಪೋಲೀಸರಿಗೆ ಸಹಾಯ ಮಾಡಲು, ಹಾಗೂ ದಂಗೆಯನ್ನು ಅಡಗಿಸಲು ಸರಕಾರವು ಬಲ್ವಾನಾಕ್ಕೆ ಸೈನ್ಯವನ್ನು ಕಳುಹಿಸಬೇಕಾಯಿತು.

ಈ ಬಗೆಯ ರೈತ ಕ್ರಾಂತಿಗಳನ್ನು ಜಗತ್ತು ಗಮನಿಸಲಿಲ್ಲ. ಭಾರತ ದೇಶವೇ ಗಾಂಧೀಜಿಯವರ ದಂಡೀ ಯಾತ್ರೆಯ ಕಡೆಗೆ ಗಮನ ಹರಿಸಿದ ಹಾಗೆ ಈ ಕಡೆಗೆ ಹರಿಸಲಿಲ್ಲ. ಆದರೆ ಅಖಿಲ ಭಾರತ ಕಿಸಾನ್ ಸಭಾದ ಮೊದಲಿನ ಕೇಂದ್ರ ಬಿಂದುಗಳಾಗಿ ಈ ಕ್ರಾಂತಿಗಳು ಮುಖ್ಯವಾದುವು. ರೈತರಲ್ಲಿ ತಾವು ಅನುಭವಿಸುತ್ತಿದ್ದ ಶೋಷಣೆಗೆ ಸಾಮ್ರಾಜ್ಯಶಾಹಿಯೇ ಕಾರಣ ಎಂಬ ಅರಿವು ಮೂಡುವಂತೆ ಮಾಡಲು ಕಿಸಾನ್ ಸಭಾ ಬಹುವಾಗಿ ಶ್ರಮಿಸಿತು. ಹೋರಾಟದ ಹಾದಿ ಹಿಡಿದು ರೈತವರ್ಗ ತಮ್ಮ ಅನುಕೂಲಕ್ಕಾಗಿಯೇ ಹೋರಾಡಿದರೂ, ಗ್ರಾಮಪ್ರದೇಶಗಳಲ್ಲಿ ಕೆಲಸ ಮಾಡಿದ ನಗರಗಳ ಕ್ರಾಂತಿಕಾರಿ ವೀರರ ಧೈರ್ಯ ಸಾಹಸಗಳ ಬಗೆಗೆ ಸಹಾನುಭೂತಿ ಹೊಂದಿದ್ದರು. ಹೀಗಾಗಿ 1930 ರ ಸತ್ಯಾಗ್ರಹ ಚಳುವಳಿಯನ್ನು ಹಿಂಬಾಲಿಸಿ ಹಲವು ಬಗೆಯ ಜನತಾ ಚಳುವಳಿಗಳು ಕಾಣಿಸಿಕೊಂಡಿದ್ದನ್ನು ನೋಡಬಹುದು. ಗಾಂಧೀಜಿಯವರ ಅಹಿಂಸೆಯ ಪ್ರಕಾರ ನೋಡುವುದಾದರೆ ಅವೆಲ್ಲವೂ ವ್ಯವಸ್ಥಿತವಾದುವಾಗಿರಲಿಲ್ಲ.

### *ಸರಕಾರದ ಪ್ರತಿಕ್ರಿಯೆ*

ಜನತಾ ಚಳುವಳಿಗಳು ಉಗ್ರರೂಪವನ್ನು ತಳೆಯುವುದಕ್ಕೆ ಮೊದಲೇ ಸರಕಾರೀ ಪ್ರತಿಕ್ರಿಯೆ ಸ್ನೇಹಸಂಧಾನಗಳಿಂದ ಬಹುದೂರದ್ದಾಗಿತ್ತು. ವಾಸ್ತವವಾಗಿ ಅದು ಪ್ರಚೋದಕವಾಗಿತ್ತು ಎನ್ನಬೇಕು. ಏಪ್ರಿಲ್ ಕೊನೆಗೆ ವಿಶೇಷಾಜ್ಞೆಗಳು ಹೊರಟವು. ವೃತ್ತಪತ್ರಿಕೆಗಳು ಜಾಮೀನು ಹಣ ಕಟ್ಟಬೇಕಾಯಿತು. ಕಾಂಗ್ರೆಸ್ ಸಂಸ್ಥೆಗಳನ್ನು ಶಾಸನಬಾಹಿರವೆಂದು ಸಾರಲಾಯಿತು. ಈ ಸಂಸ್ಥೆಗಳ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಸರಕಾರಕ್ಕೆ ಅಧಿಕಾರ ದೊರಕಿತು. ಕಾನೂನು ಭಂಗ ಮಾಡಿದ ಇಡೀ ಗುಂಪುಗಳನ್ನೇ ಬಂಧಿಸಲಾಯಿತು. ಮೇ ಮೊದಲ ಭಾಗದ ವೇಳೆಗೆ ಕಾಂಗ್ರೆಸ್ ನಾಯಕರೆಲ್ಲರನ್ನೂ ಸೆರೆಗೆ ಹಾಕಲಾಗಿತ್ತು. ಆಗ ಪ್ರಾರಂಭವಾಯಿತು ಕಾಂಗ್ರೆಸ್ ವಲಯಗಳಲ್ಲಿ ಮತ್ತು ಅವರಿಗೆ ಸಹಾನುಭೂತಿ ತೋರಿಸುತ್ತಿದ್ದವರಲ್ಲಿ ಭೀತಿಯ ಪ್ರಚಂಡ ಜ್ವಾಲೆ.

ಕಾಂಗ್ರೆಸ್ಸು ಅಧಿಕಾರಿಗಳಲ್ಲದವರ ಒಂದು ಮಂಡಲಿಯನ್ನು ನೇಮಕ ಮಾಡಿತು. ಬೇರೆ ಬೇರೆ ಜನ ಸರಕಾರದ ವಿರುದ್ಧವಾಗಿ ಭಯೋತ್ಪಾದನೆಯ ಆಪಾದನೆಗಳನ್ನು ತಂದರು. ಅದನ್ನು ಮಂಡಲಿ ಪರಿಶೀಲಿಸಿ, ಕಾಂಗ್ರೆಸ್ಸಿನ ಆಪಾದನೆ (The Congress Indictment) ಎಂಬ ಹೆಸರಿನಲ್ಲಿ ತನ್ನ ವರದಿಯನ್ನು ಪ್ರಕಟಿಸಿತು. ಭಾರತದ ಬೇರೆ ಬೇರೆ ಭಾಗಗಳಲ್ಲಿ ಅಧಿಕಾರಿಗಳು ನಡೆಸಿದ ಭೀಕರ ಭಯೋತ್ಪಾದಕ ಘಟನೆಗಳನ್ನು ಅದು ಒಳಗೊಂಡಿತ್ತು. ಎಲ್ಲ ಘಟನೆಗಳಲ್ಲೂ ಸಮಾನವಾಗಿದ್ದ ಕತೆ, ಅಲ್ಲಿ ಜನತಾ

ಚಳುವಳಿ ಆದ ಮೇಲೆ ಬ್ರಿಟಿಷ್ ಅಧಿಕಾರಿಗಳು ದಾರಿಯಲ್ಲಿ ಸಿಕ್ಕಿಸಿಕ್ಕಿದ ಹೆಂಗಸರು ಗಂಡಸರ ಮೇಲೆ ನಡೆಸಿದ ಕ್ರೂರ ಅನಾಗರಿಕ ಹಲ್ಲೆಯದು. ಮದರಾಸಿನಲ್ಲಿ ಮೊದಲ ಬಾರಿಗೆ, ಮುಂದೆ ಭಾರತದ ಎಲ್ಲೆಡೆಯಲ್ಲೂ ಸಾಮಾನ್ಯವಾಗಿ ಪರಿಣಮಿಸಿದ ಒಂದು ವಿಧಾನ ನಡೆದದ್ದು ಹೀಗೆ ಎಂದು ಕೇಳುತ್ತೇವೆ:

"ಪೋಲೀಸರು ನ್ಯಾಯಬಾಹಿರವಾದ ಸಭೆಗಳನ್ನು ಜನ ನಡೆಸುವುದನ್ನು ತಡೆಯಲು ಹೊಸತೊಂದು ವಿಧಾನವನ್ನು ಅನುಸರಿಸಿದರು. ವಿವಿಧ ಕೇಂದ್ರಗಳಲ್ಲಿ ಪಿಕೆಟ್ ಮಾಡುತ್ತಿದ್ದ ಸ್ವಯಂಸೇವಕರನ್ನು ಒಂದು ಕಡೆ ಕೂಡಿಸಿ, ಅವರನ್ನು ಲಾರಿಗಳಲ್ಲಿ ತುಂಬಿಕೊಂಡು ನಗರದಿಂದ ಬಹುದೂರಕ್ಕೆ ಹೋಗಿ ಅಲ್ಲಿ ಬಿಟ್ಟು ಬಿಡುತ್ತಿದ್ದರು. ಅವರು ಕೈಯಲ್ಲಿ ಕಾಸಿಲ್ಲದೆ, ದಾರಿಯನ್ನು ಹುಡುಕಿಕೊಂಡು ತಮ್ಮ ಸ್ಥಳಕ್ಕೆ ಬಂದು ಸೇರಬೇಕಾಗುತ್ತಿತ್ತು."

ಕರ್ನಾಟಕದ ಅಂಕೋಲಾ ಮತ್ತು ಸಿದ್ಧಾಪುರ ತಾಲೂಕುಗಳಲ್ಲಿ 2,000 ಜನರಿಂದ ಕೂಡಿದ 330 ಕುಟುಂಬಗಳಿಗೆ ಸೇರಿದ ಭೂಮಿಕಾಣೆಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. 166 ಮನೆಗಳನ್ನು ವಶಪಡಿಸಿಕೊಳ್ಳಲಾಯಿತು, ಚರಾಸ್ತಿಗಳನ್ನೂ ಕಿತ್ತುಕೊಂಡರು. ಈ ಶಿಕ್ಷೆಗೊಳಗಾದ ಜನ ಬಹಳ ಬಡವರಾಗಿದ್ದವರು, ಬಹಳ ಕಡಮೆ ಆಸ್ತಿಯುಳ್ಳವರು. ಹೀಗೆ ಸರಕಾರ ಮುಟ್ಟುಗೋಲು ಹಾಕಿಕೊಂಡು ಆಸ್ತಿಗಳನ್ನು ಕೊಂಡುಕೊಂಡು ಅನಂತರ ಹರಾಜು ಮಾಡಿದವರ ಮನೆಗಳ ಮುಂದೆ 37 ಜನ ಸ್ತ್ರೀ ಸತ್ಯಾಗ್ರಹಿಗಳು ಉಪವಾಸಮಾಡಿದರು. ಆದರೆ ಆಸ್ತಿಗಳನ್ನು ಅವರಿಂದ ಕೊಳ್ಳುವ ಜನ ಇನ್ನೂ ಇದ್ದರು ಎನ್ನುವ ಅಂಶವೇ ಗಾಂಧೀ ತತ್ತ್ವವನ್ನು ಇಡೀ ರಾಷ್ಟ್ರ ಇನ್ನೂ ಸ್ವೀಕರಿಸಿರಲಿಲ್ಲ ಎಂಬ ಅಂಶವನ್ನು ವ್ಯಕ್ತಪಡಿಸಿತು.

ಬಂಗಾಳದಲ್ಲಂತೂ ಗುಂಡೇಟು ಮತ್ತು ಲಾಠೀ ಹೊಡೆತಗಳು ದಿನದಿನದ ಸಾಮಾನ್ಯ ಕ್ರಿಯೆಗಳಾಗಿದ್ದುವು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಕಟ್ಟಡವನ್ನು ಪ್ರವೇಶಿಸಿ ಪೋಲೀಸರು ತರಗತಿಗಳಲ್ಲಿ ಕುಳಿತಿದ್ದ ಮುಗ್ಧ ವಿದ್ಯಾರ್ಥಿಗಳನ್ನು ದಯೆ ದಾಕ್ಷಿಣ್ಯವಿಲ್ಲದೆ ಸದೆಬಡಿದರು. ಗುಜರಾತಿನಲ್ಲಿ ಕೃಷಿಕರು ಗಡಿದಾಟಿ ಬರೋಡಾದ ರಾಜಸಂಸ್ಥಾನವನ್ನು ಪ್ರವೇಶಿಸತೊಡಗಿದರು. ಈ ಘಟನೆಯನ್ನು ವರದಿ ಮಾಡುತ್ತಾ, ಭಾರತೀಯರ ಇಂಗ್ಲಿಷ್ ಮಿತ್ರರಾಗಿದ್ದ ಎಚ್.ಎನ್. ಬ್ರೇಲ್ಸ್‌ಫರ್ಡ್ (H.N. Brailsford) ಹೀಗೆ ಬರೆದರು:

"ಕೊಯ್ಯಲು ತುಂಬ ತಡವಾಗಿದ್ದ ತುಂಬು ಬೆಳಸನ್ನು ಕೆಲವರು ಬೆಂಕಿಯಿಟ್ಟು ಸುಟ್ಟುಹಾಕಿದರು. ಅವರ ಶಿಬಿರಗಳಲ್ಲೊಂದಕ್ಕೆ ನಾನು ಹೋಗಿದ್ದೆ. ಚಾಪೆ ತಡಿಕೆಗಳ ಗೋಡೆ, ತಾಳೆಗರಿಗಳ ಚಾವಣಿಗಳಿಂದ ತಾತ್ಕಾಲಿಕ ವಸತಿಗಳನ್ನು ಅವರು ಕಟ್ಟಿಕೊಂಡಿದ್ದಾರೆ. ... ಅವರು ಏಕೆ ಮನೆಬಿಟ್ಟು ಬಂದರೆಂದು ನಾನು ಒಂದು ದೊಡ್ಡ ಗುಂಪನ್ನು ಕೇಳಿದೆ. ಹೆಂಗಸರು ತಟಕ್ಕನೆ ಸರಳವಾಗಿ ಉತ್ತರ ಕೊಟ್ಟರು. 'ಏಕೆಂದರೆ, ಮಹಾತ್ಮಾಜೀ ಸೆರೆಮನೆಯಲ್ಲಿರುವುದರಿಂದ'. ಗಂಡಸರಿಗೆ ಆರ್ಥಿಕ ದುಃಸ್ಥಿತಿಯ ಅರಿವು ಇನ್ನೂ ಉಳಿದಿತ್ತು. ಅವರು ಹೇಳಿದರು: 'ಕೃಷಿಯಿಂದ ಪ್ರಯೋಜನವಿಲ್ಲ. ತೆರಿಗೆ ನ್ಯಾಯವಲ್ಲದಷ್ಟು ಭಾರವಾಗಿದೆ' ಒಬ್ಬಿಬ್ಬರು ಹೇಳಿದರು: 'ಸ್ವರಾಜ್ಯ ಗೆಲ್ಲುವುದಕ್ಕೆ'."

ಹಿಂದಿರುಗಿ ಬರಬೇಕೆಂದು ಬಯಸಿದ ಜನರಿಗೆ ಸೂರತ್ ಪೋಲೀಸರು ಹೇಗೆ ಭಯಪಡಿಸುತ್ತಿದ್ದರು ಎಂಬುದನ್ನು ಬ್ರೇಲ್ಸ್‌ಫರ್ಡ್ ವಿಸ್ತಾರವಾಗಿ ವರದಿಮಾಡಿದನು:

ಪಶ್ಚಿಮ ಬಂಗಾಳದ ಮಿಡ್ನಾಪುರ ಜಿಲ್ಲೆಯಲ್ಲಿ ಗೂರ್ಖಾ ದಳಗಳೂ ಪೊಲೀಸರೂ ಕ್ರೂರವಾದ ಹಿಂಸಾ ಕಾಂಡವನ್ನೇ ಪ್ರಾರಂಭಿಸಿದರು. ಹೆಂಗಸರ ಶೀಲಗೌರವವನ್ನೂ ಅವರು ಬಿಡಲಿಲ್ಲ. ಸರಳ ಸ್ವಭಾವದ ರೈತರು ತಮ್ಮ ಗುಡಿಸಲುಗಳಿಗೆ ಬೆಂಕಿಯಿಡುತ್ತಿದ್ದುದನ್ನು, ಈ ಜಗತ್ತಿನಲ್ಲಿ ತಮ್ಮದೆನಿಸಿದ್ದ ಚೂರುಪಾರುಗಳನ್ನು ನಾಶಪಡಿಸುತ್ತಿದ್ದುದನ್ನು ನಗುನಗುತ್ತ ಸಹಿಸಿದರೇ ಹೊರತು, ತೆರಿಗೆ ಕೊಡಲು ಒಪ್ಪಲಿಲ್ಲ.

## ಮೊದಲನೆಯ ದುಂಡುಮೇಜಿನ ಪರಿಷತ್ತು

1930 ರ ಮಧ್ಯಭಾಗದಲ್ಲಿ ಈ ಎಲ್ಲ ವಿಕ್ಷೋಭೆಗಳಿಗೂ ಕಾರಣವಾಗಿದ್ದ ಸೈಮನ್ ಕಮೀಷನ್ ಅಂತಿಮವಾಗಿ ತನ್ನ ವರದಿಯನ್ನು ಸಲ್ಲಿಸಿತು. ನವೆಂಬರಿನಲ್ಲಿ ಬ್ರಿಟಿಷ್ ಸರಕಾರವು ಲಂಡನ್ ನಗರದಲ್ಲಿ ಮೊದಲನೆಯ ದುಂಡುಮೇಜಿನ ಪರಿಷತ್ತನ್ನು ನಡೆಸಿತು. ಅಖಿಲ ಪಕ್ಷಗಳ ಸಮ್ಮೇಳನಕ್ಕೆ ಬ್ರಿಟಿಷರು ಕೊಟ್ಟ ರೂಪಾಂತರ ಅದು. ಯಾಮ್ಸೇ ಮ್ಯಾಕ್ಡೊನಾಲ್ಡ್ ಅದಕ್ಕೆ ಅಧ್ಯಕ್ಷನಾಗಿದ್ದನು. ಸಹಜವಾಗಿಯೇ ಈ ಪರಿಷತ್ತನ್ನು ಕಾಂಗ್ರೆಸ್ ಬಹಿಷ್ಕರಿಸಿತು. ಇತರ ಭಾರತೀಯ ಸದಸ್ಯರು ಹಾಗೂ ಭಾರತದ ರಾಜರುಗಳ ಪ್ರತಿನಿಧಿಗಳು ದೇಶೀಯ ರಾಜ್ಯಗಳನ್ನು ಒಳಗೊಂಡ ಒಂದು ಭಾರತೀಯ ಒಕ್ಕೂಟ (Indian Federation) ವನ್ನು ಸ್ಥಾಪಿಸಬೇಕೆಂದೂ ಪಾರ್ಲಿಮೆಂಟರಿ ಸ್ವರೂಪದ ಸರಕಾರವಿರಬೇಕೆಂದೂ ಒಪ್ಪಿಕೊಂಡರು. ಜಂಟಿ ಜವಾಬ್ದಾರಿಯ ಆಧಾರದ ಮೇಲೆ ನಿಂತ ಕ್ಯಾಬಿನೆಟ್ ಮಾದರಿಯ ಕಾರ್ಯಾಂಗವಿದ್ದ ಡೊಮಿನಿಯನ್ ಸ್ಥಾನಮಾನ ಪರಿಷತ್ತಿಗೆ ಒಪ್ಪಿಗೆಯಾಯಿತು.

ಇಷ್ಟಾದ ಒಡನೆಯೇ ಸೆರೆಯಲ್ಲಿದ್ದ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯರನ್ನು ಬಿಡುಗಡೆ ಮಾಡಲಾಯಿತು. ದುಂಡುಮೇಜಿನ ಪರಿಷತ್ತಿನ ಪ್ರತಿನಿಧಿಗಳು ಭಾರತಕ್ಕೆ ಹಿಂದಿರುಗಿದರು. ತೇಜ್ ಬಹದ್ದೂರ್ ಸಪ್ರು ಅವರು ಗಾಂಧೀಜಿಯವರನ್ನು ಸಂಧಿಸಿ ಅವರು ಲಾರ್ಡ್ ಇರ್ವಿನನನ್ನು ಭೇಟಮಾಡ ಬೇಕೆಂದೂ, ಕಾಂಗ್ರೆಸ್ಸಿನ ಹೆಸರಿನಲ್ಲಿ ಸಂಧಾನ ನಡೆಸಬೇಕೆಂದೂ ಒತ್ತಾಯ ಮಾಡಿದರು.

ಈ ಮಧ್ಯೆ, 1930 ರ ಡಿಸೆಂಬರ್ ತಿಂಗಳಲ್ಲಿ ಅಲಹಾಬಾದ್ ಸಮ್ಮೇಳನದಲ್ಲಿ ಮುಸ್ಲಿಂ ಲೀಗ್ ಸತ್ಯಾಗ್ರಹ ಚಳುವಳಿಯನ್ನು ಬಹಿರಂಗವಾಗಿಯೇ ವಿರೋಧಿಸಿತ್ತು. ಇದರಿಂದಾಗಿ, ಗಾಂಧೀಜಿಯವರು ಈ ಹಿತಗಳನ್ನು ಕುರಿತು ಆಲೋಚಿಸುತ್ತಲೇ ಇಲ್ಲವೆಂದೂ, ಆದ್ದರಿಂದ ಇಡೀ ದೇಶದ ಪ್ರತಿನಿಧಿ ಎಂಬ ಕಾಂಗ್ರೆಸ್ಸಿನ ನಿಲುವು ಅಲ್ಲಿ ಸಲ್ಲದೆಂದೂ ಇರ್ವಿನ್ ಆಕ್ಷೇಪಿಸಲು ಕಾರಣವಾಯಿತು.

## ಗಾಂಧಿ-ಇರ್ವಿನ್ ಒಪ್ಪಂದ

ಫೆಬ್ರವರಿ 17 ರಿಂದ ಮಾರ್ಚ್ 5 ರವರೆಗೆ ಗಾಂಧೀಜಿ ದೆಹಲಿಯಲ್ಲಿ ವೈಸರಾಯ್

ಅವರೊಂದಿಗೆ ಮಾತುಕತೆ ನಡೆಸಿ, ಪರಿಹಾರಕ್ಕೆ ಬರಲು ಪ್ರಯತ್ನಿಸಿದರು. ಕಾಂಗ್ರೆಸ್ಸಿನ ಸ್ವಾತಂತ್ರ್ಯ ನಿರ್ಣಯ, ಜನವರಿ 26 ನೆಯ ತಾರೀಖಿನ ಪ್ರತಿಜ್ಞೆ ಇವುಗಳನ್ನು ಅಲಕ್ಷಿಸಲಾಯಿತು. ಇದು ನೆಹರೂ ಹಾಗೂ ಇತರ ವಾಮಪಕ್ಷೀಯ ನಾಯಕರಿಗೆ ತುಂಬ ನೋವುಂಟುಮಾಡಿತು. ಕಾಂಗ್ರೆಸ್ಸು ಮೊದಲನೆಯ ದುಂಡು ಮೇಜಿನ ಪರಿಷತ್ತಿನಲ್ಲಿ ಒಪ್ಪಿಕೊಂಡ ಒಪ್ಪಂದಗಳ ಆಧಾರದ ಮೇಲೆ ಚರ್ಚೆ ನಡೆಸಬೇಕೆಂಬುದನ್ನು ಗಾಂಧೀಜಿ ಒಪ್ಪಿಕೊಂಡರು. ಸತ್ಯಾಗ್ರಹ ಚಳುವಳಿಯನ್ನು ಹಿಂತೆಗೆದುಕೊಳ್ಳುವುದು, ಅದರಲ್ಲಿ ನೊಂದವರಿಗೆ ಸರಕಾರವು ಸಹಾನುಭೂತಿಯುತ ಪರಿಹಾರ ಕೊಡುವ ಭರವಸೆ ನೀಡುವುದು - ಎಂದಾಯಿತು. 1931 ರ ಮಾರ್ಚಿ 5 ನೆಯ ತಾರೀಖು ಬೆಳಗಿನ ಜಾವ 2-30 ಗಂಟೆಗೆ ಈ ಮಾತುಕತೆಗಳ ಫಲವನ್ನು ಚರ್ಚಿಸಲು ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಸಭೆ ಸೇರಿದಾಗ, ಅದು ಎರಡು ಭಾಗವಾಗಿ ಒಡೆಯಿತು. ಅನೇಕರು ವೈಸರಾಯಿಯೇ ಸಂಧಾನ ಮಾಡಬೇಕಾಗಿ ಬಂದುದರಿಂದ ಅದೊಂದು ವಿಜಯ ಎಂದು ಪ್ರಶಂಸಿಸಿದರು. ಇತರರು ಸಂತೋಷಪಡಲಿಲ್ಲ. ಮಹಾತ್ಮಾ ಅವರು ತಮ್ಮ ಅಭಿಪ್ರಾಯಗಳನ್ನು ನೆಹರೂ ಅವರಿಗೆ ಖಾಸಗಿಯಾಗಿ ಹೇಳುವವರಿದ್ದರು. ಮುಂದೆ ನೆಹರೂ ಬರೆದರು:

> "ವ್ಯಾಖ್ಯಾನವು (ಸರಕಾರದ ರೂಪವನ್ನು ಕುರಿತ ಚರ್ಚೆಗಳಿಗೆ ಕಾರಣವಾದ ಒಪ್ಪಂದದ 2ನೆಯ ಉಪವಾಕ್ಯದ) ನನಗೆ ಬಲಾತ್ಕಾರದ ವಾದವಾಗಿ ಅನಿಸಿತು. ನನ್ನ ಮನಸ್ಸು ಅದಕ್ಕೆ ಒಪ್ಪಿರಲಿಲ್ಲ. ಆದರೆ ಆತನ ಮಾತುಗಳಿಂದ ಸ್ವಲ್ಪ ಮಟ್ಟಿಗೆ ಮನಸ್ಸು ಸಾಂತ್ವನಗೊಂಡಿತು... ಒಂದೆರಡು ದಿನ ಏನು ಮಾಡಬೇಕೆಂದು ತಿಳಿಯದೆ ತೊಳಲಾಡಿದೆ. ಆಗ ಆ ಒಪ್ಪಂದವನ್ನು ನಿವಾರಿಸುವ ಪ್ರಶ್ನೆಯೇ ಇರಲಿಲ್ಲ..."

ವಾಸ್ತವವಾಗಿ ಮಾರ್ಚಿ 5 ನೆಯ ತಾರೀಖಿನಂದೇ ಎರಡೂ ಪಕ್ಷಗಳು ಒಪ್ಪಂದಕ್ಕೆ ಸಹಿ ಹಾಕಿದುವು. ಇದು ಗಾಂಧಿ-ಇರ್ವಿನ್ ಒಪ್ಪಂದ ಎಂದು ಪ್ರಸಿದ್ಧವಾಯಿತು.

ವೈಸರಾಯ್ ಜೊತೆಯ ಮಾತುಕತೆಗಳಲ್ಲಿ ಗಾಂಧೀಜಿ ಇತರ ಅನೇಕ ಅಂಶಗಳನ್ನು ಎತ್ತಿದ್ದರು. ಅವುಗಳಲ್ಲಿ ಒಂದು ವಿಶೇಷಾಜ್ಞೆಗಳ ಮೂಲಕ "ಹಿಂಸಾಕೃತ್ಯಗಳಿಗಾಗಿದ್ದ" ರಾಜಕೀಯ ಸೆರೆಯಾಳುಗಳಿಗೆ ಕ್ಷಮಾದಾನ ನೀಡುವ ವಿಚಾರ. ಗಾಂಧೀಜಿ ಆ ವಿಶೇಷ ಸುಗ್ರೀವಾಜ್ಞೆಗಳನ್ನೇ ಹಿಂತೆಗೆದುಕೊಳ್ಳಬೇಕೆಂದು ಮನವಿ ಮಾಡಿಕೊಂಡರು. ಯಾರ ಭೂಮಿಕಾಣೆಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆಯೋ ಅವರಿಗೆ ಪರಿಹಾರವನ್ನು ಕೊಡಬೇಕು ಎಂದೂ ಅವರು ಅಪೇಕ್ಷಿಸಿದರು. ಸರಕಾರವು ತಾನು ಹೊಂದಿರುವ ಉಪ್ಪಿನ ಮೇಲಣ ಸ್ವಾಮ್ಯವನ್ನು ಕೊನೆಗೊಳಿಸಬೇಕು ಎಂದೂ ಹೇಳಿದರು. ಗಾಂಧೀಜಿ ಎತ್ತಿದ ಈ ಎಲ್ಲ ಪ್ರಶ್ನೆಗಳ ವಿಷಯದಲ್ಲೂ ಇರ್ವಿನ್ ಬಹಳ ಬಿಗಿಯಾಗಿದ್ದನು. ಕೆಲವು ಪ್ರದೇಶಗಳಲ್ಲಿ ಭೂಕಂದಾಯವನ್ನು ಎಲ್ಲೋ ಸ್ವಲ್ಪ ಇಳಿಸಲು ಒಪ್ಪಿದನು. ಅಷ್ಟೇ ಹೊರತು, ಮುಖ್ಯ ವಿಚಾರಗಳಲ್ಲಿ ಅಂದರೆ, ಭಗತ್ ಸಿಂಗ್, ಸುಖದೇವ್ ಮತ್ತು ರಾಜಗುರು ಇವರ ಮೇಲಣ ಮರಣ ದಂಡನೆಯನ್ನು ತಗೆಯಬೇಕೆಂಬ ವಿಚಾರದಲ್ಲಿ ಅವನು ದೃಢವಾಗಿ ನಿರಾಕರಿಸಿದ್ದು ಮಾತ್ರವಲ್ಲ, ಅದನ್ನು ಮುಂದಕ್ಕ ತಳ್ಳುವುದಕ್ಕೂ ಇಚ್ಛೆಸಲಿಲ್ಲ. ಮಾರ್ಚಿ 23 ರಂದು ಅವರನ್ನು

ಗಲ್ಲಿಗೇರಿಸಲಾಯಿತು. ಅನೇಕ ವಿಷಯಗಳಲ್ಲಿ ಸರಕಾರದ ದಮನ ನೀತಿ ಸ್ವಲ್ಪವೂ ಸಡಿಲವಾಗಲಿಲ್ಲ. ಗಾಂಧೀಜಿ ತಮಗೆ ಬೇಕಾಗಿದ್ದ ರಿಯಾಯಿತಿಗಳನ್ನು ಪಡೆಯುವುದರಲ್ಲಿ ವಿಫಲರಾದರು.

### *ಕರಾಚಿ ಕಾಂಗ್ರೆಸ್*

ಲಾಹೋರ್ ಸಮ್ಮೇಳನವಾದ ಮೇಲೆ ಮೊದಲನೆಯ ಬಾರಿಗೆ ಕಾಂಗ್ರೆಸ್ ಕರಾಚಿಯಲ್ಲಿ ಅಧಿವೇಶನ ನೆರೆಯಿತು. ಇದು ಭಗತ್ ಸಿಂಗ್, ಸುಖದೇವ್ ಮತ್ತು ರಾಜಗುರು ಅವರ ಮರಣದಂಡನೆಯಾದ ಆರು ದಿನಕ್ಕೆ, ಅಂದರೆ ಮಾರ್ಚ್ 29 ರಂದು. ಕಾಂಗ್ರೆಸ್ಸಿನ ಅಧಿಕೃತ ಇತಿಹಾಸಕಾರ ಪಟ್ಟಾಭಿ ಸೀತಾರಾಮಯ್ಯನವರ ಪ್ರಕಾರ "ಆ ಸಮಯದಲ್ಲಿ ಭಗತ್ ಸಿಂಗನ ಹೆಸರು ದೇಶಾದ್ಯಂತ ಸುಪ್ರಸಿದ್ಧವಾಗಿತ್ತು. ಅವನು ಗಾಂಧೀಜಿಯವರಷ್ಟೇ ಜನಪ್ರಿಯತೆ ಗಳಿಸಿದ್ದನು." ವಾಸ್ತವವಾಗಿ ಗಾಂಧೀಜಿ ಕರಾಚಿ ಸಮ್ಮೇಳನದಲ್ಲಿ ಭಾಗವಹಿಸಲು ಬಂದಾಗ ವಿರೋಧ ಪ್ರದರ್ಶನಗಳು ಕೂಡ ನಡೆದುವು. ಕ್ರಾಂತಿಕಾರ ಭಯೋತ್ಪಾದಕರು ತೋರಿಸಿದ ಅಸೀಮ ಧೈರ್ಯ, ಸಾಹಸ, ಬಲಿದಾನಗಳನ್ನು ಪ್ರಶಂಸಿಸುವ ನಿರ್ಣಯವೊಂದನ್ನು ಕೂಡ ಅನುಮೋದನೆಗಾಗಿ ಸೂಚಿಸಲಾಯಿತು. ಇದು ಸಂಸ್ಥೆಯ ಅಹಿಂಸಾತ್ಮಕ ಸ್ವರೂಪಕ್ಕೆ ವಿರುದ್ಧವಾಗಿದ್ದಿತಷ್ಟೆ. ಅದಕ್ಕೆ ಪೂರ್ವ ಪೀಠಿಕೆಯಾಗಿ ಒಂದು ಉಪವಾಕ್ಯವನ್ನು ಸೇರಿಸಿದ ಮೇಲೆ ಗಾಂಧೀಜಿ ಅದನ್ನು ಒಪ್ಪಿದರು. ತಿದ್ದುಪಡಿಯಾದ ಮೇಲೆ ಅದು ಹೀಗಿತ್ತು:

> "ಕಾಂಗ್ರೆಸ್ಸು ರಾಜಕೀಯ ಹಿಂಸಾವಿಧಾನಕ್ಕೆ ಸಂಬಂಧಿಸದ ಹಾಗೆ, ಯಾವುದೇ ರೂಪದಲ್ಲೂ ಆಕಾರದಲ್ಲೂ ಅದನ್ನು ಒಪ್ಪದೆ,... ಅವರ ಧೈರ್ಯ ಮತ್ತು ಬಲಿದಾನಗಳನ್ನು ಮೆಚ್ಚುತ್ತದೆ."

ಈ ತಿದ್ದುಪಡಿಯನ್ನು ಸುಭಾಷ್ ಬೋಸರ ಬೆಂಬಲದಿಂದ ಯುವಕ ಸ್ವಯಂಸೇವಕರು ವಿರೋಧಿಸಿದರು. ಆದರೆ ಅಲ್ಪ ಬಹುಮತದಿಂದ ವಿಫಲರಾದರು.

ಸ್ಥೂಲವಾಗಿ ಹೇಳುವುದಾದರೆ, ಕರಾಚಿ ಅಧಿವೇಶನದ ಮುಖ್ಯ ರಾಜಕೀಯ ನಿರ್ಣಯವು ಮದರಾಸ್ ಕಲ್ಕತ್ತಾಗಳ ರಾಜೀ ನಿಲುವಿಗೇ ಹೋಯಿತು. ಅದು ಪೂರ್ಣ ಸ್ವರಾಜ್ಯಕ್ಕೆ ಕರೆಯಿತ್ತಿತ್ತು. ಆದರೆ ಧ್ಯೇಯೋದ್ದೇಶಗಳ ಪುನರ್ ಪರಿಶೀಲನೆಗೆ ದಾರಿ ತೆರೆದ ಗಾಂಧೀ-ಇರ್ವಿನ ಒಪ್ಪಂದವನ್ನು ಒಪ್ಪಿಕೊಂಡಿತು. 1930 ರ ಜನವರಿಯಲ್ಲಿ ಮೂಡಿದ್ದ ಉತ್ಸಾಹ ಕ್ರಮೇಣ ಇಳಿದುಹೋದುದು ಸಹಜವಾಗಿಯೇ ಇದೆ. ಆಗಿನ ಪರಿಸ್ಥಿತಿಯಲ್ಲಿ ಜನಸಾಮಾನ್ಯರು ಭಾಗವಹಿಸುವುದಕ್ಕೆ ಅವಕಾಶವೇ ಇರಲಿಲ್ಲ. ಮುಂದಿನ ಹೆಜ್ಜೆಯನ್ನು ನಿರ್ಣಯಿಸುವುದು ನಾಯಕರ ಪಾಲಿಗೆ ಬಿಟ್ಟ ಕೆಲಸವಾಗಿತ್ತು.

ಆದರೆ ಒಂದು ರೀತಿಯಲ್ಲಿ ಕರಾಚಿ ಅಧಿವೇಶನ 1930 ರ ಜನವರಿಗಿಂತ ಒಂದು ಹೆಜ್ಜೆ ಮುಂದೆ ಹೋಯಿತು ಎನ್ನಬೇಕು. ಮೂಲಭೂತ ಹಕ್ಕುಗಳು ಮತ್ತು ಆರ್ಥಿಕನೀತಿಗಳನ್ನು ಕುರಿತು ಒಂದು ನಿರ್ಣಯವನ್ನು ಅಲ್ಲಿ ಅಂಗೀಕರಿಸಲಾಯಿತು. ಅದು ಪಕ್ಷಕ್ಕಿದ್ದ ಭವಿಷ್ಯತ್ತಿನ ಪ್ರಜಾಪ್ರಭುತ್ವದ ರಾಜಕೀಯ, ಆರ್ಥಿಕ, ಸಾಮಾಜಿಕ ಯೋಜನೆಗಳನ್ನು ನಿರೂಪಿಸಿತು. ಇದನ್ನು ಈ ಮೊದಲು ಸ್ಪಷ್ಟವಾಗಿ ರೂಪಿಸಿರಲಿಲ್ಲ.

ಮುಖ್ಯ ಅಂಶಗಳು ಹೀಗಿದ್ದುವು:

i) ಜನತೆಯ ಮೂಲಹಕ್ಕುಗಳ ಭರವಸೆ.

ii) ಜನರ ಎಲ್ಲ ವರ್ಗಗಳ ಜಾತೀಯ ಮತ್ತು ಧಾರ್ಮಿಕ ದುರ್ಬಲತೆಯನ್ನು ಹೋಗಲಾಡಿಸುವುದು.

iii) ಪ್ರಾಂತೀಯ ರಾಷ್ಟ್ರಭಾಷೆಗಳನ್ನು ಬೆಳೆಸುವುದು, ಭಾಷಾವಾರು ಆಧಾರದ ಮೇಲೆ ಭಾರತದ ಪ್ರಾಂತಗಳನ್ನು ರೂಪಿಸುವುದು.

iv) ತೆರಿಗೆಗಳ ಇಳಿತಾಯ.

v) ಬಲತ್ಕಾರದ ದುಡಿಮೆ ಅಥವಾ 'ಬೆಗರ್' ಪದ್ಧತಿಯ ನಿಷೇಧ. ಇದು ಹಿಂದುಳಿದ ಪ್ರದೇಶಗಳು ಮತ್ತು ಅನೇಕ ದೇಶೀಯ ರಾಜ್ಯಗಳಲ್ಲಿ ಪ್ರಚಲಿತವಾಗಿದ್ದಿತು.

vi) ಉಪ್ಪಿನ ಸುಂಕವನ್ನು ತೆಗೆಯುವುದು.

vii) ಆರೋಗ್ಯಕರವಾದ ಕಾರ್ಯ ಪರಿಸ್ಥಿತಿ, ಕನಿಷ್ಠ ವೇತನ, ನಿರುದ್ಯೋಗ ವಿಮೆ, 8 ಗಂಟೆ ಕಾಲದ ದುಡಿಮೆ, ವೇತನ ಸಹಿತ ರಜೆ-ಕಾರ್ಮಿಕರ ಈ ವಿಶೇಷ ಹಕ್ಕುಗಳ ರಕ್ಷಣೆ.

ಕಾಂಗ್ರೆಸ್ಸು ತಮ್ಮ ಕೃಷಿಸಂಬಂಧಿಯಾದ ಯೋಜನೆ ಹೇಗಿರಬೇಕೆಂಬುದನ್ನು ರೂಪಿಸಲು ತೊಡಗಿತು. ಆದರೆ ಕರಾಚಿ ಅಧಿವೇಶನದಲ್ಲಿ ಅರೆ-ಊಳಿಗ ಮಾನ್ಯ ಪದ್ಧತಿಯ ಭಾರಿ ಎಸ್ಟೇಟುಗಳ ನಿರ್ಮೂಲನದ ಬೇಡಿಕೆಯನ್ನು ತರುವುದು ಆಗಲಿಲ್ಲ. ಇದರಿಂದ ವಾಮಪಕ್ಷೀಯವಾದ ಕ್ರಾಂತಿಕಾರೀ ಚಟುವಟಿಕೆಗಳು 1930 ರಲ್ಲಿ ಎಷ್ಟೇ ಸೋತಿದ್ದರೂ ನಾಯಕರು ಕೊನೆಯ ಪಕ್ಷ ತೀವ್ರಗಾಮಿಯಾದ ಪ್ರಜಾಪ್ರಭುತ್ವದ ಕೆಲವೊಂದು ಸೂತ್ರಗಳನ್ನಾದರು ಒಪ್ಪಿಕೊಳ್ಳಲೇಬೇಕಾಯಿತು ಎಂಬುದು ವ್ಯಕ್ತವಾಗುತ್ತದೆ. ಹಿಂದಿನ ನಾಲ್ಕು ವರ್ಷಗಳಲ್ಲಿ ನಡೆದ ಜನತಾ ಕ್ರಾಂತಿಯ ಫಲ ಇದು. ಸ್ವಾತಂತ್ರ್ಯ ಹೋರಾಟದ ಉಳಿದ ಭಾಗದಲ್ಲಿ ರಾಷ್ಟ್ರೀಯ ನಾಯಕರು ಈ ಪ್ರಜಾಸತ್ತಾತ್ಮಕದ ತತ್ತ್ವಗಳನ್ನಿಟ್ಟುಕೊಂಡೇ ಮುಂದುವರಿಯಬೇಕಾಯಿತು. ಹೀಗಾಗಿ ಕರಾಚಿ ಅಧಿವೇಶನ, ಮನವೊಲಿಸುವುದು ಎಂಬ ತತ್ತ್ವದ ಮೇಲೆ ಒಳ ಹೊರ ಘರ್ಷಣೆಗಳನ್ನು ಪರಿಹರಿಸಿಕೊಳ್ಳಬೇಕೆಂಬ ಗಾಂಧೀ ನೀತಿಯ ವಿಜಯವನ್ನು ನಿರೂಪಿಸಿತು. ಅದರ ಜೊತೆಗೇ ಕಾಂಗ್ರೆಸ್ ಕಾರ್ಯ ನಿಯೋಜನೆಯಲ್ಲಿ ಪ್ರಧಾನವಾದ ಅಂಶವಾಗಿ ತೀವ್ರಗಾಮಿ ಮತ್ತು ಸಮಾಜವಾದಿ ಮನೋಧರ್ಮವನ್ನು ಸೇರಿಸಿತು.

## ಎರಡನೆಯ ದುಂಡುಮೇಜಿನ ಪರಿಷತ್ತು ಮತ್ತು ಮತೀಯ ಪ್ರಶ್ನೆ

ಕಾಂಗ್ರೆಸ್ಸಿನೊಂದಿಗೇ ಕಾರ್ಮಿಕರು ಮತ್ತು ಕೃಷಿಕರ ಪಕ್ಷ, ಅಖಿಲ ಭಾರತ ಯುವಕ ಪಕ್ಷಗಳೂ ಕರಾಚಿಯಲ್ಲಿ ಅಧಿವೇಶನ ನೆರೆದುವು. ಮೊದಲನೆಯದು ಕಾರ್ಮಿಕ ಹಾಗೂ ಕೃಷಿಕ ವಿಚಾರವಾಗಿ ಒಂದು ಯೋಜನೆ ಹಾಕಿಕೊಂಡಿತು. ಅದು ಕಾಂಗ್ರೆಸ್ಸಿನ ಮೂಲಹಕ್ಕುಗಳು ಮತ್ತು ಆರ್ಥಿಕ ನೀತಿಗಳ ಮೇಲಣ ನಿರ್ಣಯಕ್ಕಿಂತಲೂ ಮುಂದ

ಹೋಯಿತು. ಎರಡನೆಯದಾದರೋ ಪೂರ್ಣ ಸ್ವರಾಜ್ಯಕ್ಕಾಗಿ ಹೋರಾಟವನ್ನು ಮುಂದುವರಿಸಬೇಕೆಂದು ಕರೆಯಿತ್ತಿತು. ಗಾಂಧಿ-ಇರ್ವಿನ್ ಒಪ್ಪಂದವನ್ನೂ, ಎರಡನೆಯ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಬೇಕೆಂಬ ಕಾಂಗ್ರೆಸ್ ನಿರ್ಣಯವನ್ನೂ ಅದು ಖಂಡಿಸಿತು.

ಇದು ಒಂದು ಕಡೆಯಾದರೆ, ಇನ್ನೊಂದು ಕಡೆ ಮತೀಯ ಸಮಸ್ಯೆಯ ತೀವ್ರತೆ ಅಧಿಕವಾಗುತ್ತಲೇ ಹೋಯಿತು. ಆಗಲೇ ಮಾರ್ಚಿ 24 ಮತ್ತು 25 ರಂದು ಕಾನ್‌ಪುರದಲ್ಲಿ ಹಿಂಸಾತ್ಮಕವಾದ ಮತೀಯ ಗಲಭೆ ನಡೆದಿತ್ತು. ಎರಡೂ ಪಕ್ಷಗಳಲ್ಲಿ ಕೆಲವು ಜನ ಸತ್ತಿದ್ದರು. ಇದು ಮತೀಯ ದೊಂಬಿ, ಗಲಭೆಗಳ ಮರುಕಳಿಕೆಯಾಯಿತು. ಜಿನ್ನಾ ಮತ್ತು ಪ್ರಗತಿ ವಿರೋಧಿ ಮುಸ್ಲಿಂ ಪಂಗಡಗಳು ತಾವು ಕಾಂಗ್ರೆಸ್ ರಾಜಕೀಯ ಯೋಜನೆಗೆ ಸೇರುವುದಿಲ್ಲವೆಂದು ಘೋಷಿಸಿದರು.

1931ರ ಏಪ್ರಿಲಿನಿಂದ ಜೂನ್‌ವರೆಗೆ ಕಾಂಗ್ರೆಸ್ಸು ಎರಡನೆಯ ದುಂಡುಮೇಜಿನ ಪರಿಷತ್ತಿನಲ್ಲಿ ತಾನು ಮಂಡಿಸಬೇಕಾಗಿರುವ ಅಭಿಪ್ರಾಯಗಳನ್ನು ಚರ್ಚಿಸಿತು. ಸರಕಾರವು ಅವಕಾಶ ಕೊಟ್ಟಿದ್ದಂತೆ ಹೆಚ್ಚು ಸಂಖ್ಯೆಯ ಪ್ರತಿನಿಧಿ ಸಮೂಹವನ್ನು ಕಳುಹಿಸಲು ಇಷ್ಟಪಡದೆ ಕಾಂಗ್ರೆಸ್ಸನ್ನು ಪ್ರತಿನಿಧಿಸಲು ಗಾಂಧೀಜಿ ಒಬ್ಬರನ್ನು ಮಾತ್ರ ಆರಿಸಲಾಯಿತು. ಡಾ. ಅನ್ಸಾರಿಯವರಂತಹ ರಾಷ್ಟ್ರೀಯವಾದಿ ಮುಸ್ಲಿಮರು ಕಾಂಗ್ರೆಸ್ಸಿಗರಾಗಿ ಗಾಂಧಿಯವರೊಡನೆ ಲಂಡನ್ನಿಗೆ ಹೋದರು. ಕಾಂಗ್ರೆಸ್ಸು ಪ್ರಗತಿವಾದಿ ಮುಸ್ಲಿಂ ಅಭಿಪ್ರಾಯವನ್ನೂ ಪ್ರತಿನಿಧಿಸುತ್ತಿದೆ ಎಂಬ ಭಾವನೆ ಬ್ರಿಟಿಷ್ ಜನಾಭಿಪ್ರಾಯದಲ್ಲಿ ಮೂಡುವ ಸಾಧ್ಯತೆ ಇದರಿಂದ ಇತ್ತು. ಆದರೆ ಕಾಂಗ್ರೆಸ್ಸು ಅನ್ಸಾರಿಯವರು ತಮ್ಮ ಸ್ವಂತ ನಿಲುವಿನಿಂದಲೇ ಪರಿಷತ್ತಿಗೆ ನಾಮಕರಣಗೊಳ್ಳಬೇಕು ಎಂದು ಬಯಸಿತು. ಸುಭಾಷ್ ಬೋಸರು ಎತ್ತಿ ತೋರಿಸಿದಂತೆ, ಗಾಂಧೀಜಿ ಹೇಳತೊಡಗಿದ್ದರು: "ಮುಸ್ಲಿಮರು ಐಕ್ಯತೆಯಿಂದ ಹೊಸ ಸಂವಿಧಾನದಲ್ಲಿ ಪ್ರಾತಿನಿಧ್ಯ, ಮತದಾರ ವರ್ಗ ಮುಂತಾದ ವಿಷಯಗಳಲ್ಲಿ ಬೇಡಿಕೆ ತರುವುದಾದ ಪಕ್ಷದಲ್ಲಿ ಅದನ್ನು ತಾವು ಅಂಗೀಕರಿಸಬಹುದು." ಮುಂದೆ ಗಾಂಧೀಜಿಯೇ ಸ್ಪಷ್ಟವಾಗಿ ಬೇರೆ ಬೇರೆ ಮತದಾರವರ್ಗವನ್ನು ತಾವು ಒಪ್ಪುವುದಿಲ್ಲ ಎಂದು ಹೇಳಿದ್ದಕ್ಕೆ ಕಾರಣ ಸುಭಾಷ್ ಬೋಸರ ದೃಢನಿಲುವು ಮತ್ತು ರಾಷ್ಟ್ರೀಯವಾದಿ ಮುಸ್ಲಿಮರು ನೀಡಿದ ಒಂದು ಹೇಳಿಕೆ:

> "ಯಾವುದೇ ಕಾರಣಕ್ಕಾಗಿ ಮಹಾತ್ಮಾ ಅವರು ಹಿಂದೂ ಮತ್ತು ಮುಸ್ಲಿಮರಿಗೆ ಸಮಾನವಾದ ಒಂದೇ ಒಂದು ಮತದಾರವರ್ಗ ಬೇಡಿಕೆಯನ್ನು ಕೈಬಿಟ್ಟು, ಪ್ರತಿಯೊಂದು ಕೋಮಿಗೂ ಬೇರೆಬೇರೆ ಮತದಾರ ವರ್ಗ ಬೇಕೆಂಬ ಪ್ರಗತಿ ವಿರೋಧಿಗಳ ಬೇಡಿಕೆಯನ್ನು ಅಂಗೀಕರಿಸುವುದಾದರೆ, ತಾವು (ಅಂದರೆ ರಾಷ್ಟ್ರೀಯವಾದಿಗಳಾದ ಮುಸ್ಲಿಮರು) ಪ್ರಗತಿ ವಿರೋಧಿಗಳನ್ನೂ ಮಹಾತ್ಮಾ ಅವರನ್ನೂ ವಿರೋಧಿಸುತ್ತಾರೆ. ಏಕೆಂದರೆ, ಬೇರೆ ಬೇರೆ ಮತದಾರ ವರ್ಗ ಎನ್ನುವುದು ಒಟ್ಟು ದೇಶಕ್ಕೆ ಮಾತ್ರವಲ್ಲ, ಬೇರೆ ಬೇರೆ ಜನಾಂಗಗಳಿಗೂ ಅಪಾಯಕಾರಿ."

ಆಗಸ್ಟ್ ತಿಂಗಳಲ್ಲಿ ಇರ್ವಿನನ ಸ್ಥಾನದಲ್ಲಿ ಲಾರ್ಡ್ ವಿಲ್ಲಿಂಗ್‌ಡನ್ (Lord

Willingdon) ವೈಸರಾಯ್ ಆಗಿ ಬಂದನು. ಹೊಸ ವೈಸರಾಯ್ ಮೂಲತಃ ಉದಾರ ನಿಲುವನ್ನು ತಳೆಯಲು ಸಿದ್ಧನಾಗಿರಲಿಲ್ಲ. ಪ್ರಾಂತೀಯ ಸರಕಾರಗಳು ಗಾಂಧಿ-ಇರ್ವಿನ್ ಒಪ್ಪಂದವನ್ನು ಮುರಿಯುತ್ತಿವೆ, ರಾಜಕೀಯ ಅಪರಾಧಿಗಳ ಬಗ್ಗೆ ಒಪ್ಪಂದದ ಪ್ರಕಾರ ನಡೆದುಕೊಳ್ಳುತ್ತಿಲ್ಲ ಎಂಬ ಆಕ್ಷೇಪಣೆಯನ್ನು ಅವನು ತಳ್ಳಿಹಾಕಿದ್ದು ಮಾತ್ರವಲ್ಲ, ವಿವಾದಗಳನ್ನು ಪರಿಹರಿಸಲು ಒಂದು ಪಂಚಾಯಿತಿಯನ್ನು ನೇಮಿಸಬೇಕೆಂಬ ಗಾಂಧೀಜಿಯವರ ಕೋರಿಕೆಯನ್ನೂ ತಿರಸ್ಕರಿಸಿದನು. ಅವನ ಅಧಿಕಾರಿಗಳು ಭಾವಿಸಿದ್ದು, ಇದರಿಂದ ಕಾಂಗ್ರೆಸ್ ತಮಗೆ ಸಮಾನವಾದ ಅಧಿಕಾರ ಸ್ಥಾಪಿಸಿದಂತಾಗುತ್ತದೆ ಎಂಬುದಾಗಿ. ಈ ಮಧ್ಯೆ ವಾಯುವ್ಯಗಡಿ ಪ್ರಾಂತ ಮತ್ತು ಉತ್ತರ ಪ್ರದೇಶಗಳಲ್ಲಿ ಖುದಿ ಖಿದ್ಮತ್‌ಗಾರರನ್ನು ಮತ್ತು ಕರನಿರಾಕರಣ ಪ್ರಚಾರಕರನ್ನು ಹಿಂಸಿಸುವುದು ಏಕಪ್ರಕಾರವಾಗಿ ಮುಂದುವರಿದಿತ್ತು. ಗಾಂಧೀಜಿ ಆಗಸ್ಟ್ ತಿಂಗಳಲ್ಲಿ ಲಂಡನ್ನಿಗೆ ಹೋಗುವುದಿಲ್ಲವೆಂದು ನಿರಾಕರಿಸುವುದರ ಮೂಲಕ ಈ ಪ್ರಶ್ನೆಯನ್ನು ಇತ್ಯರ್ಥಪಡಿಸಲು ನೋಡಿದರು. ಆದರೆ ವಿಲ್ಲಿಂಗ್‌ಡನ್ ಬಹಳ ಬಿಗಿಯಾದ ನಿಲುವು ತಳೆದಿದ್ದನು. ಇತರ ಮುಸ್ಲಿಂ ಪ್ರತಿನಿಧಿಗಳು ಅನ್ಸಾರಿಯವರ ಸ್ವತಂತ್ರ ಪ್ರತಿನಿಧಿ ನೇಮಕಕ್ಕೆ ವಿರೋಧಿಗಳಾಗಿದ್ದುದರಿಂದ ಅವರನ್ನು ಪರಿಷತ್ತಿಗೆ ನಾಮಕರಣ ಮಾಡುವುದಿಲ್ಲ ಎಂದೂ ನಿರ್ಧರಿಸಿದನು. ವಾಸ್ತವದಲ್ಲಿ, ಬ್ರಿಟಿಷ್ ಸರಕಾರವು ತಮ್ಮ "ಒಡೆದು ಆಳು" ನೀತಿಯ ಭಾಗವಾಗಿ ಹಿಂದೂ ಮುಸ್ಲಿಂ ಮತೀಯವಾದಿಗಳ ನಿಲುವನ್ನು ಭದ್ರಪಡಿಸಲು ನಿರ್ಧರಿಸಿತ್ತು. ಅನ್ಸಾರಿಯವರಂತಹ ರಾಷ್ಟ್ರೀಯ ವಾದಿಗಳನ್ನು ಪರಿಷತ್ತಿಗೆ ನಾಮಕರಣ ಮಾಡಲಿಲ್ಲ. ಆದರೆ, ಹಿಂದೂ, ಸಿಖ್ ಮತ್ತು ಮುಸ್ಲಿಂ ಮತೀಯವಾದಿಗಳಿಗೆ ಅವರು ದೇಶದಲ್ಲಿ ಹೊಂದಿದ್ದ ರಾಜಕೀಯ ಪ್ರಭಾವದ ಪ್ರಮಾಣಕ್ಕೆ ಎಷ್ಟುಮಾತ್ರಕ್ಕೂ ಸರಿಹೊಂದದ ಪ್ರಮಾಣದಲ್ಲಿ ಪ್ರಾತಿನಿಧ್ಯ ಕೊಡಲಾಯಿತು. ಗಾಂಧೀಜಿ ಸಿಮ್ಲಾದಲ್ಲಿ ವೈಸರಾಯ್ ಅವರನ್ನು ವಲ್ಲಭಭಾಯಿ ಪಟೇಲ್, ಪ್ರಭಾಶಂಕರ ಪಥಾನಿ ಮತ್ತು ಜವಾಹರಲಾಲ್ ನೆಹರೂ ಅವರೊಂದಿಗೆ ಭೇಟಿಯಾದರು. ಸೂರತ್ತಿನ ಕೆಲವು ಹಳ್ಳಿಗಳಲ್ಲಿ ಬಲಾತ್ಕಾರವಾಗಿ ಭೂಕಂದಾಯವನ್ನು ವಸೂಲುಮಾಡುತ್ತಿರುವ ಬಗ್ಗೆ ಸರಕಾರೀ ವಿಚಾರಣೆ ನಡೆಸುವುದಾಗಿ ಅವರಿಂದ ಭರವಸೆ ಪಡೆದರು. ಆದರೆ "ಕಾಂಗ್ರೆಸ್ ಅದುವರೆಗೂ ಎತ್ತಿದ್ದ ವಿಚಾರಗಳಿಗೆ" ಯಾವ ಭರವಸೆಯೂ ಬರಲಿಲ್ಲ. ವಿಚಾರಣೆ ನಡೆಸದೆ ಹೋದರೆ ಕಾಂಗ್ರೆಸ್ ಮತ್ತೆ ನೇರ ಕಾರ್ಯಾಚರಣೆಗೆ ಹಿಂದಿರುಗಬೇಕಾಗುತ್ತದೆ ಎಂದು ಒಂದು ಷರತ್ತನ್ನೂ ಹಾಕಿಬಂದರು. ಆದರೆ ಇದನ್ನು 1931 ರ ಆಗಸ್ಟ್ 15 ರಂದು ಗಾಂಧೀಜಿ ಲಂಡನ್ನಿಗೆ ಪ್ರಯಾಣಮಾಡಬೇಕಾಗಿದ್ದುದಕ್ಕೆ ಅನಿವಾರ್ಯವಾಗಿ, ಅವರದು ಹೇಗೆಂದರೆ ಹಾಗೆ ಬಗ್ಗುವ ಸ್ವಭಾವದ ಗುರುತೋ ಎಂಬಂತೆ ಅನ್ವಯಿಸಲಾಯಿತು.

ಇದೆಲ್ಲವೂ ಎರಡನೆಯ ದುಂಡುಮೇಜಿನ ಪರಿಷತ್ತಿನಲ್ಲಿ ಕಾಂಗ್ರೆಸ್ ವಿಫಲವಾಗುತ್ತದೆಂಬುದನ್ನು ಮೊದಲೇ ಸೂಚಿಸಿದುವು. ಪರಿಷತ್ತು 1931ರ ಸೆಪ್ಟಂಬರಿನಿಂದ ಡಿಸೆಂಬರ್‌ವರೆಗೆ ನಡೆಯಿತು. ಗಾಂಧೀಜಿ ಇತರ ಪ್ರತಿನಿಧಿಗಳಿಗಿಂತ

ತಡವಾಗಿ, ಪರಿಷತ್ತು ಆರಂಭವಾಗಬೇಕಿದ್ದುದಕ್ಕಿಂತ ಒಂದು ದಿನ ಮುಂಚೆ ಆಗಮಿಸಿದರು. ಇಂಗ್ಲೆಂಡಿನ ಕಾರ್ಮಿಕ ವರ್ಗವು ಅವರಿಗೆ ಹಾರ್ದಿಕ ಸ್ವಾಗತ ನೀಡಿತು. ಅವರು ಲಂಡನ್ನಿನ ಪೂರ್ವದ ಕೊನೆಯಲ್ಲಿ ಉಳಿದುಕೊಂಡು, ಲ್ಯಾಂಕಾಷೈರಿನಲ್ಲಿ ಪ್ರವಾಸ ಮಾಡಿದರು. ಬ್ರಿಟಿಷ್ ವಸ್ತ್ರಗಳನ್ನು ಕಾಂಗ್ರೆಸ್ ಬಹಿಷ್ಕರಿಸಿದುದರಿಂದಾಗಿ ಈ ಪ್ರದೇಶ ತೀವ್ರ ಆಘಾತ ಪಡೆದಿದ್ದರೂ ಭಾರತದ ಜನ ನಡೆಸುತ್ತಿರುವ ಸಾಮ್ರಾಜ್ಯಶಾಹೀ ವಿರೋಧೀ ಹೋರಾಟಕ್ಕೆ ಸಹಾನುಭೂತಿ ಅವರಲ್ಲಿ ವ್ಯಕ್ತವಾಯಿತು. ಆದರೆ ಬ್ರಿಟಿಷ್ ಮಂತ್ರಿಗಳೂ ಮತೀಯ ನಾಯಕರೂ ಆಗಲೇ ರಾಷ್ಟ್ರೀಯವಾದಿಗಳನ್ನು ಎದುರಿಟ್ಟುಕೊಳ್ಳುವ ವಿಧಾನವನ್ನು ಕಂಡುಕೊಂಡಿದ್ದರು. ಗಾಂಧೀ ಇನ್ನೂ ಪ್ರಾಮುಖ್ಯಕೊಟ್ಟಿದ್ದ ಸಾಂವಿಧಾನಿಕ ಸುಧಾರಣೆಯನ್ನು ಕುರಿತ ಒಪ್ಪಂದದ ಎದುರಾಗಿ ಮತೀಯ ಭಿನ್ನತೆಗಳ ವಿಚಾರವನ್ನು ಒಡ್ಡಲು ಅವರು ಇಚ್ಛಿಸಿದರು. ಈ ವಿಚಾರವಾಗಿ ಅಲ್ಪಸಂಖ್ಯಾತರ ಸಮಿತಿಯಲ್ಲಿ ಸ್ಥಗಿತತೆ ಕಂಡು ಬಂದಿತು. ಅದರ ಅಧ್ಯಕ್ಷರಾಗಿದ್ದವರು ಪ್ರಧಾನ ಮಂತ್ರಿಯೇ. ಎಲ್ಲ ಸದಸ್ಯರೂ ಜಂಟಿಯಾಗಿ ಸಹಿಹಾಕಿ ಮತೀಯ ಪ್ರಶ್ನೆಯನ್ನು ಪರಿಹರಿಸುವಂತೆ ತನ್ನನ್ನು ಕೇಳಿಕೊಳ್ಳಬೇಕೆಂದೂ ತನ್ನ ನಿರ್ಧಾರವನ್ನು ಒಪ್ಪಿಕೊಳ್ಳುವುದಾಗಿ ಎಲ್ಲರೂ ಪ್ರತಿಜ್ಞೆ ಮಾಡಬೇಕೆಂದೂ ಅವನು ಕೇಳಿದನು. ಎಲ್ಲರೂ ಒಪ್ಪಲಿಲ್ಲ. ಬೇರೆ ಬೇರೆ ಮತೀಯ ನಾಯಕರು ಒಬ್ಬರು ಇನ್ನೊಬ್ಬರಿಗೆ ತಡೆಯಾಗಿರುತ್ತಾರೆ ಎಂಬುದು ಬ್ರಿಟಿಷರಿಗೆ ಗೊತ್ತಿತ್ತು. "ನಮ್ಮ ನಡುವಣ ಭಿನ್ನಾಭಿಪ್ರಾಯಗಳು ತುಂಬ ಗಡುಸಾಗಿರುವುದರಿಂದ, ಅವು ವಿದೇಶೀ ಪ್ರಭುತ್ವದ ಕಾರಣದಿಂದಾಗಿ ಹುಟ್ಟದೆ ಹೋಗಿದ್ದ ಪಕ್ಷದಲ್ಲಿ, ಪರಿಹಾರವು ಸ್ವರಾಜ್ಯ ಸಂವಿಧಾನದ ಶಿಖರವಾಗುತ್ತಿತ್ತು, ತಳಹದಿಯಾಗುತ್ತಿರಲಿಲ್ಲ. ಮತೀಯ ಭಿನ್ನತೆಯ ಹಿಮಗಡ್ಡೆ ಸ್ವಾತಂತ್ರ್ಯ ಸೂರ್ಯನ ಉದಯದ ಉಷ್ಣತೆಯಲ್ಲಿ ಕರಗುತ್ತದೆ ಎಂಬುದರಲ್ಲಿ ನನಗೆ ಸಂದೇಹವೇ ಇಲ್ಲ" ಎಂದು ಗಾಂಧೀಜಿ ಸಮಿತಿಗೆ ಮನವಿ ಮಾಡಿಕೊಂಡರು.

ಆದರೆ ಸಮ್ಮೇಳನದಲ್ಲಿದ್ದ ಮುಸ್ಲಿಂ ಮತೀಯವಾದಿಗಳು, ಆಗಾಖಾನ್‌ರಂಥವರು ಪ್ರಗತಿವಿರೋಧಿಗಳ ಆಸಕ್ತಿಗಳನ್ನು ಹೊಂದಿದ್ದು, ಬ್ರಿಟಿಷ್ ಸಾಮ್ರಾಜ್ಯಶಾಹಿಯ ರಕ್ಷಣೆಯಲ್ಲೇ ತಮ್ಮನ್ನು ತಾವು ಪೋಷಿಸಿಕೊಳ್ಳಲು ಇಚ್ಛಿಸಿದರು. ಹಿಂದೂ ಮತ್ತು ಸಿಖ್ ಮತೀಯ ವಾದಿಗಳು ಅಷ್ಟೇಮಟ್ಟಿಗೆ ಪ್ರಭುತ್ವದ ಕೈಗೊಂಬೆಗಳಾಗಿರಲು ಇಚ್ಛಿಸಿದ್ದರು. ಅವರೆಲ್ಲರೂ ತಮ್ಮದೇ ಆದ ಬೇರೆ ಬೇರೆ ರೀತಿಯಲ್ಲಿ ಗಾಂಧೀಜಿಯವರು ಏಕೀಕೃತವಾದ ನಿಲುವನ್ನು ನೀಡಲು ಮಾಡಿದ ಪ್ರಯತ್ನಗಳನ್ನು ವಿಫಲಗೊಳಿಸಿದರು.

ಅಂತಿಮವಾಗಿ 1931 ರ ಡಿಸೆಂಬರಿನಲ್ಲಿ ಮ್ಯಾಕ್‌ಡೊನಾಲ್ಡನು 1930 ರ ಸೂಚಿಯ ಪ್ರಕಾರ ನಡೆಯಲು ಸೂಚನೆಯಿತ್ತನು. ವಿಲ್ಲಿಂಗ್‌ಡನ್ನನ ನೀತಿಯನ್ನು ಅನುಮೋದಿಸಿ ದನು, ಉದ್ದೇಶಿತ ಗವರ್ನಮೆಂಟ್ ಆಫ್ ಇಂಡಿಯಾ ಶಾಸನದ ರೂಪರೇಖೆಗಳನ್ನು ಹಾಕಿದನು. ಒಂದು ಸಮರ್ಥವಾದ ಫೆಡರಲ್ ಕೇಂದ್ರ ಸರಕಾರ, ಪ್ರಾಂತಗಳಿಗೆ ಮಿತವಾದ ಪ್ರಮಾಣದಲ್ಲಿ ಸ್ವಯಮಾಡಳಿತವಿರುವ ಸರಕಾರಗಳನ್ನು ಆ ಶಾಸನ ಸೂಚಿಸಿತ್ತು. ಹಣಕಾಸು, ವಿದೇಶಾಂಗ ಸಂಬಂಧಗಳು (ಯುದ್ಧವನ್ನು ನಡೆಸಲು

ನಿರ್ಧಾರವೂ ಕೂಡಿದಂತೆ) ರಾಷ್ಟ್ರರಕ್ಷಣೆ ಮುಂತಾದ ಫೆಡರಲ್ ಕ್ಷೇತ್ರಗಳು ವೆಸ್ಟ್‌ಮಿನ್‌ಸ್ಟರ್‌ನ ಪಾರ್ಲಿಮೆಂಟಿನ ಮತ್ತು ವೈಸರಾಯಿಯ ವಿಶೇಷಾಧಿಕಾರಗಳಾಗಿ ದ್ದುವು. ಬೇಸತ್ತು ಗಾಂಧೀಜಿ ಭಾರತಕ್ಕೆ ಹಿಂದಿರುಗಿದರು.

## *ಅಧಿಕಾರಿಗಳ ದಬ್ಬಾಳಿಕೆ ಮತ್ತೆ ಕಾಣಿಸಿಕೊಂಡಿತು*

ವಿಲ್ಲಿಂಗ್‌ಡನ್ ಸರಕಾರವು ಇಡೀ ರಾಷ್ಟ್ರೀಯ ಚಳುವಳಿಯನ್ನು ಅಡಗಿಸಲು 1930 ರಲ್ಲಿ ಇರ್ವಿನ್ ಸರಕಾರ ಕೈಗೊಂಡಿದ್ದ ದಮನ ಕ್ರಮಗಳಿಗಿಂತಲೂ ಹೆಚ್ಚು ಗಡುಸಾದ ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿತು. ಉತ್ತರ ಪ್ರದೇಶದ ಕಾಂಗ್ರೆಸ್ಸಿಗರು ರೈತರಿಗೆ ಸರಕಾರದೊಂದಿಗಿನ ವ್ಯವಹಾರ ಇತ್ಯರ್ಥವಾಗುವವರೆಗೆ ಗೇಣಿ ಕೊಡಬಾರದೆಂದು ಸಲಹೆ ಕೊಟ್ಟಾಗ ಅವರನ್ನು ಇಡೀ ಸಮೂಹ ಸಮೂಹವಾಗಿ ಸರಕಾರ ಸೆರೆಗೆ ನೂಕಿತು. ಗಾಂಧೀಜಿ ಲಂಡನ್ನಿನಿಂದ ಹಿಂತಿರುಗುವುದಕ್ಕೆ ಐದು ದಿನಗಳು ಮುಂಚೆಯೇ ಅವರ ನಾಯಕರಾಗಿದ್ದ ನೆಹರೂ, ಪುರುಷೋತ್ತಮ ದಾಸ್ ಟಂಡನ್ ಇವರನ್ನು ಬಂಧಿಸಿದರು. ವಾಯವ್ಯ ಗಡಿಪ್ರಾಂತದಲ್ಲಿ ಅಬ್ದುಲ್ ಗಫಾರ್‌ಖಾನ್, ಅವರ ಅಣ್ಣ ಡಾಕ್ಟರ್ ಖಾನ್ ಸಾಹಿಬ್ ಮತ್ತು ಇತರ ರಾಷ್ಟ್ರೀಯ ನಾಯಕರನ್ನು ಜೈಲಿಗೆ ಹಾಕಲಾಯಿತು. ಬಂಗಾಳದಲ್ಲಿ ಚಿತ್ತಗಾಂಗ್ ಪಟ್ಟಣವನ್ನು ಮೂರು ದಿನಗಳ ಕಾಲ ಅಧಿಕಾರಿಗಳಲ್ಲದ ಯೂರೋಪಿಯನರ ಕೈಗೆ ಒಪ್ಪಿಸಲಾಯಿತು. ಅವರು ದಾಳಿಕೋರರಂತೆ ಪೋಲೀಸರ ತಡೆ ಸ್ವಲ್ಪವೂ ಇಲ್ಲದೆ ರಾಷ್ಟ್ರೀಯವಾದಿಗಳ ಮನೆಗಳನ್ನು ಲೂಟಿಮಾಡಿದರು. ಕುಖ್ಯಾತವಾದ ಹಿಜಿಲ್ ಸೆರಮನೆಯಲ್ಲಿದ್ದ ಬಂದಿಗಳನ್ನು 1931 ರಲ್ಲಿ ಸೆರಮನೆಯ ಅಧಿಕಾರಿಗಳು ಹೊಡೆದು ಆಮೇಲೆ ಗುಂಡು ಕೂಡ ಹಾರಿಸಿದರು. ಅದರಿಂದಾಗಿ ಇಬ್ಬರು ಸತ್ತರು.

## *ವ್ಯಕ್ತಿಗತ ಸತ್ಯಾಗ್ರಹ ಚಳುವಳಿ*

ಹಿಂದಿರುಗಿದ ಮೇಲೆ ಗಾಂಧೀಜಿ ವಿಲ್ಲಿಂಗ್‌ಡನ್ನನಿಗೆ ಪ್ರತಿಭಟನೆ ಸಲ್ಲಿಸಿದಾಗ, ಅವರಿಗೆ ದೊರೆತದ್ದು ಒರಟು ಮನೋಭಾವದ ಉತ್ತರ. ಆದರೆ ಕಾಂಗ್ರೆಸ್ಸು ಇನ್ನೂ "ಸರಕಾರದೊಂದಿಗೆ ಸಹಕರಿಸಲು ಸಿದ್ಧವಾಗಿತ್ತು." ವೈಸರಾಯ್ ವಿಶೇಷಾಜ್ಞೆಗಳನ್ನು ತೆಗೆದು ಕಾಂಗ್ರೆಸ್ ಪೂರ್ಣ ಸ್ವರಾಜ್ಯ ಚಳುವಳಿಯ ಪ್ರಚಾರ ಮುಂದುವರಿಸಲು ಅನುಮತಿ ಕೊಟ್ಟಿದ್ದರೆ ಸಾಕಾಗಿತ್ತು ಅಷ್ಟೆ. ಇದು ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಕೈಗೊಂಡ ನಿಶ್ಚಯಕ್ಕೆ ತೀರಾ ದೂರವಾದ ಮನೋಧರ್ಮವಾಗಿತ್ತು. ಆದರೂ ಕಾಂಗ್ರೆಸ್ ಸತ್ಯಾಗ್ರಹದ ಬೆದರಿಕೆ ಹಾಕಿತು. ಸರಕಾರ ಅದನ್ನು ಲಕ್ಷಿಸಲಿಲ್ಲ. 1931 ರ ಜನವರಿ 4 ರಂದು ಗಾಂಧೀಜಿ ಮತ್ತು ಕಾಂಗ್ರೆಸ್ ಅಧ್ಯಕ್ಷ ವಲ್ಲಭಭಾಯಿ ಅವರೂ ಕೂಡಿದಂತೆ ಹೊಸ ತಂಡದ ಕಾಂಗ್ರೆಸ್ ನಾಯಕರನ್ನು ಸರಕಾರ ಬಂಧಿಸಿತು. ಸೆರಮನೆಯಲ್ಲಿ ರಾಜಕೀಯ ಬಂದಿಗಳನ್ನು ಹೊಡೆಯುವುದು ಮತ್ತು ಅವರನ್ನ ಸುಮಾನ್ಯ ಅಪರಾಧಿಗಳ ರೀತಿಯಲ್ಲೇ ನೋಡಿಕೊಳ್ಳುವುದು ಹಿಂದೆಂದಿಗಿಂತಲೂ ಅಧಿಕವಾಯಿತು. ಅಧಿಕಾರಿಗಳ ಈ ಭಯೋತ್ಪಾದನೆಗೆ ಎದುರಾಗಿ ಭಯೋತ್ಪಾದಕ ಹಿಂಸಾಕೃತ್ಯಗಳೂ 1932 ರಲ್ಲಿ ಶಿಖರ ಮುಟ್ಟಿದುವು. ಸತ್ಯಾಗ್ರಹವನ್ನು ಸಾಮೂಹಿಕ

ಮಟ್ಟದಲ್ಲಿ ನಡೆಸಬಾರದು, ಅದು ವೈಯಕ್ತಿಕವಾಗಿ ನಿರ್ದಿಷ್ಟ ಕಾರ್ಯಚಟುವಟಿಕೆಗಳ ಮೂಲಕ ನಡೆಯಬೇಕು ಎಂದು ಗಾಂಧೀಜಿ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಅಹಿಂಸಾತ್ಮಕ ವ್ಯಕ್ತಿಗಳ ಒಬ್ಬೊಬ್ಬರೇ ನಿಲ್ಲಲು ಧೈರ್ಯ ಪಡೆದಿರಬೇಕು ಎಂಬುದು ಅವರ ವಾದ. ಆದರೆ ಅವರಿಗೆ ನಿಜವಾಗಿ ಇದ್ದ ಭಯ ಬೇರೆ. ಸಾಮೂಹಿಕ ಕಾರ್ಯಾಚರಣೆ ಸರಕಾರದ ಪ್ರಚೋದನೆಯಿಂದ ಹಿಂಸೆಗೆ ತಿರುಗಿ, ಚಳುವಳಿ ವಿಫಲವಾದರೆ ಕ್ಷೋಭೆಯಲ್ಲಿ ಪರ್ಯವಸಾನವಾಗಬಹುದು ಎಂಬುದು. ವಾರ್ಷಿಕ ಕಾಂಗ್ರೆಸ್ ಅಧಿವೇಶನ ಏಪ್ರಿಲ್ 24 ರಂದು ದೆಹಲಿಯಲ್ಲಿ ಮದನಮೋಹನ ಮಾಲವೀಯ ಅವರ ಅಧ್ಯಕ್ಷತೆಯಲ್ಲಿ ಸೇರಬೇಕೆಂದು ತೀರ್ಮಾನವಾದಾಗ ಅನೇಕ ಮುಖ್ಯ ನಾಯಕರನ್ನು ವಿಶೇಷಾಜ್ಞೆಗಳ ಮೂಲಕ ಬಂಧಿಸಲಾಯಿತು. ಮಿಕ್ಕವರು ಚಾಂದ್ನಿ ಚೌಕದ ಗಡಿಯಾರ ಗೋಪುರದ ಬಳಿ ಸೇಟ್ ರಾಂಚೋದ್ದಾಸ್ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದರು. ಅವರನ್ನೂ ಬಂಧಿಸಿ ಮೇ 1 ನೆಯ ತಾರೀಖು ಬಿಡುಗಡೆ ಮಾಡಲಾಯಿತು.

## ಮತೀಯ ತೀರ್ಪು

ಸಾಮೂಹಿಕ ಚಳುವಳಿಗಳಿಂದ ದೂರವಾಗಿ ಕಂಡುಬಂದ ಇನ್ನೊಂದು ಬೆಳವಣಿಗೆ ಯೆಂದರೆ ಗಾಂಧೀಜಿ ಹರಿಜನರು, ನಿಮ್ನಜಾತಿ ಮತ್ತು ಬುಡಕಟ್ಟುಗಳ ಜನರಿಂದ ಬೆಂಬಲ ಪಡೆಯಲು ಮಾಡಿದ ಪ್ರಯತ್ನ. 1932 ರ ಪ್ರಾರಂಭದಲ್ಲಿಯೇ ರ್‍ಯಾಮ್ಸೇ ಮ್ಯಾಕ್‌ಡೊನಾಲ್ಡ್ ಘೋಷಿಸಿದ ಮತೀಯ ತೀರ್ಪಿನಲ್ಲಿ ವ್ಯಕ್ತವಾದ 'ಒಡೆದು ಆಳು' ಎಂಬ ಬ್ರಿಟಿಷ್ ನೀತಿಗೆ ಇದು ಅವರು ನೀಡಿದ ಉತ್ತರವಾಗಿತ್ತು. ತೀರ್ಪು ಬೇರೆ ಬೇರೆಯಾಗಿ ಹಿಂದೂ, 'ಅಸ್ಪೃಶ್ಯರು' ಮತ್ತು ಮುಸ್ಲಿಂ ಮತದಾರವರ್ಗಗಳಿಗೆ ಅವಕಾಶ ಮಾಡಿತ್ತು. ಹಿಂದೂಗಳು ಮತ್ತು ಹರಿಜನರು ಎರಡು ಬೇರೆ ಬೇರೆ ರಾಜಕೀಯ ಘಟಕಗಳು ಎಂಬಂತೆ ಅದರಲ್ಲಿ ಭಾವಿಸಿತ್ತು. ಗಾಂಧೀಜಿ ಇದನ್ನು ಒಂದು ಸವಾಲಾಗಿ ತೆಗೆದುಕೊಂಡರು. ಎಂ.ಸಿ. ರಾಜ ಮುಂತಾದ ಅನೇಕ ಅಸ್ಪೃಶ್ಯರ ಬೆಂಬಲ ಅವರಿಗೆ ದೊರಕಿತು. ಅವರು ಹಿಂದೂಗಳೊಂದಿಗೆ ಸಮಾನವಾದ ಮತದಾರ ವರ್ಗ ಬೇಕೆಂದೂ, ಅಸ್ಪೃಶ್ಯರಿಗೆ ಅದರಲ್ಲಿ ಸ್ಥಾನಗಳ ಮೀಸಲಿಡಿಕೆ ಬೇಕೆಂದೂ ಅಪೇಕ್ಷಿಸಿದರು. ಆದರೆ ಡಾ. ಅಂಬೇಡ್ಕರ್ ಅವರ ನೇತೃತ್ವದಲ್ಲಿ ಮತ್ತೆ ಕೆಲವರು 'ಅಸ್ಪೃಶ್ಯ' ಹಿಂದೂಗಳು ಎಂಬ ವ್ಯವಸ್ಥೆಯನ್ನೇ ಒಪ್ಪಿಕೊಳ್ಳಲು ನಿರಾಕರಿಸಿದರು. ಅಸ್ಪೃಶ್ಯತೆಯನ್ನೇ ತೊಡೆದುಹಾಕುವುದು ಅವರ ಉದ್ದೇಶವಾಗಿತ್ತು. ವಿಲ್ಲಿಂಗ್‌ಡನ್ನನು ಈ ಅವಕಾಶದ ಪೂರ್ಣ ಪ್ರಯೋಜನ ಮಾಡಿಕೊಂಡು ಮತೀಯ ತೀರ್ಪನ್ನು ಒಪ್ಪಿಕೊಳ್ಳಲೇಬೇಕು ಎಂದು ಒತ್ತಾಯ ಮಾಡಿದನು. ಆಗ ಯರವಾಡ ಜೈಲಿನಲ್ಲಿದ್ದ ಗಾಂಧೀಜಿ ಸೆಪ್ಟೆಂಬರ್ ತಿಂಗಳಲ್ಲಿ ಆಮರಣಾಂತ ಉಪವಾಸ ಪ್ರಾರಂಭಿಸಿದರು. ಅವರು ತೀರ್ಪನ್ನು ವಿರೋಧಿಸಿದರು. ಆದರೆ ಹಿಂದೂ ಮತದಾರ ವರ್ಗದಲ್ಲಿಯೇ ಅಸ್ಪೃಶ್ಯರಿಗೆ ತೀರ್ಪಿನಲ್ಲಿ ಕೊಟ್ಟಿದ್ದುದಕ್ಕಿಂತ ತುಂಬ ಹೆಚ್ಚು ಸಂಖ್ಯೆಯ ಸ್ಥಾನಗಳನ್ನು ಮೀಸಲಾಗಿಡಬೇಕು ಎಂದು ಕೇಳಿದರು. ಅಂಬೇಡ್ಕರ್ ಗಾಂಧೀಜಿಯ ನಿಲುವನ್ನು ಒಪ್ಪಿಕೊಂಡರು. ಪೂನಾ ಒಪ್ಪಂದವನ್ನು ಸರಕಾರವು ಮತೀಯ ತೀರ್ಪಿಗೆ

ತಿದ್ದುಪಡಿಯಾಗಿ ಒಪ್ಪಿಕೊಂಡಿತು. ಇದು ಅಖಿಲ ಭಾರತ ಅಸ್ಪೃಶ್ಯತಾ ಲೀಗ್, ಸರ್ವೆಂಟ್ಸ್ ಆಫ್ ಅನ್‌ಟಚ್‌ಬಲ್ಸ್ ಸೊಸೈಟಿ ಮುಂತಾದ ಸಂಘ ಸಂಸ್ಥೆಗಳ ಮೂಲಕ ಕಾಂಗ್ರೆಸ್ಸಿನ ಪ್ರಭಾವವನ್ನು ಹೆಚ್ಚುಮಾಡಿತು. ಮಾಜಿ ಮಿಷನರಿ ಆಗಿದ್ದ ಆಂಗ್ಲ ವೆರಿಯರ್ ಎಲ್ವಿನ್ ಮತ್ತು ಶಾಮರಾವ್ ಹಿವೇಲ್ ಮೊದಲಾದವರು ನಿಷ್ಠೆಯಿಂದ ಕೆಲಸಮಾಡುತ್ತಿದ್ದ ಮಧ್ಯಭಾರತ, ದಕ್ಷಿಣ ಬಿಹಾರ, ಒರಿಸ್ಸಾದ ಬೆಟ್ಟಪ್ರದೇಶಗಳು ಮುಂತಾದೆಡೆಗಳಲ್ಲಿ ಹಿಂದುಳಿದ ಬುಡಕಟ್ಟುಗಳಲ್ಲಿ ಕಾಂಗ್ರೆಸ್ ಮಾಡಿದ ಪ್ರಚಾರದಿಂದ ಇದುವರೆಗೂ ಭಾರತದ ರಾಷ್ಟ್ರೀಯತಾ ವಾದದ ಸೋಂಕು ತಗುಲಿಯೇ ಇರದ ಜನರಲ್ಲಿ ರಾಷ್ಟ್ರಪ್ರೇಮ ಮತ್ತು ಪ್ರಜಾಪ್ರಭುತ್ವದ ಭಾವನೆಗಳು ಹರಡಿದುವು. ಈ ಚಳುವಳಿಯಲ್ಲಿ ಮುಖ್ಯವಾಗಿದ್ದ ಇನ್ನೊಂದು ವಿಚಾರವೆಂದರೆ ಹರಿಜನರಿಗೆ ದೇವಾಲಯಗಳಿಗೆ ಪ್ರವೇಶ ನೀಡುವ ವಿಚಾರ. 1933 ರ ಜನವರಿ 8 ನೆಯ ತಾರೀಖು ದೇವಾಲಯ ಪ್ರವೇಶ ದಿನ ಎಂದು ಆಚರಿಸಲಾಯಿತು. ಭಾರತದ ಅನೇಕ ತೀರ್ಥ ಕ್ಷೇತ್ರಗಳಲ್ಲಿ ಹಿಂದೂಗಳ ಅನೇಕ ಜಾತಿ ಪಂಥ ಪ್ರದೇಶ ಭಾಷಾ ಜನಗಳು ಸೇರುತ್ತಿದ್ದ ಕಡೆ ಕೆಳವರ್ಗದ ಈ ಮೇಲೇರುವಿಕೆಯನ್ನು ರಾಷ್ಟ್ರೀಯತೆಯೊಂದಿಗೆ ಸಂಬಂಧ ಗೊಳಿಸಲಾಯಿತು; ಅದರ ಮನವಿಯನ್ನು ಬಲಪಡಿಸಿದಂತಾಯಿತು.

ಈ ಮಧ್ಯೆ ಎರಡನೆಯ ಅಸಹಕಾರ ಚಳುವಳಿ ಅಥವಾ ಸರಿಯಾದ ರೀತಿಯಲ್ಲಿ ಹೇಳಬೇಕಾದರೆ 'ವ್ಯಯಕ್ತಿಕ ಸತ್ಯಾಗ್ರಹ ಚಳುವಳಿ' ಜನತೆಯ ಮೇಲೆ ಒತ್ತಡ ಬೀರುವಲ್ಲಿ 1930 ರ ಚಳುವಳಿಗಿಂತ ದುರ್ಬಲವಾಗಿತ್ತು. ಆದರೆ ಕೃಷಿಕ ವರ್ಗದಲ್ಲಿ ಕಾಂಗ್ರೆಸ್ ಪ್ರಭಾವ ಪ್ರಮುಖವಾಗಿಯೇ ಉಳಿಯಿತು. ಕರ ನಿರಾಕರಣೆ ಗೇಣಿ ನಿರಾಕರಣೆಯ ಚಳುವಳಿಗಳು ಉತ್ತರ ಪ್ರದೇಶ ಮತ್ತು ವಾಯುವ್ಯ ಗಡಿ ಪ್ರಾಂತಗಳಲ್ಲಿ ಹಾಗೆಯೇ ಮುಂದುವರಿದುವು.

1932-33 ಪರಂಪರಾಗತ ಭಯೋತ್ಪಾದಕ ವಿನಾಶಕಾರೀ ಕೃತ್ಯಗಳ ಜ್ವಾಲೆ (ಅಹಿಂಸಾತ್ಮಕ ಅಸಹಕಾರ ಮತ್ತು ಸತ್ಯಾಗ್ರಹ ಚಳುವಳಿಗಳಿಗಿಂತ ಭಿನ್ನವಾಗಿ) ಮುಗಿಲುಮುಟ್ಟಿತು. ಬಹುಶಃ ಅಂತಹ ಸನ್ನಿವೇಶದ ಭಾರತದಲ್ಲಿ ಬ್ರಿಟಿಷ್ ಆಳಿಕೆಗೆ ಅದೇ ಕೊನೆಯ ವರ್ಷವೆಂದು ಕಾಣುತ್ತದೆ. ಆಮೇಲೆ ವಿಶೇಷವಾಗಿ ಬಂಗಾಳದಲ್ಲಿ ಈ ಹಿಂಸಾಕಾಂಡವನ್ನು ದಬ್ಬಾಳಿಕೆ ನಿರ್ಮೂಲನಗೊಳಿಸಿತು. ಅನೇಕ ಬಗೆಯ ವಿನಾಶ ಕೃತ್ಯಗಳು ನಡೆದುವು. ಜನ ವಿರೋಧಿಗಳಾಗಿದ್ದ ಎಷ್ಟೋ ಅಧಿಕಾರಿಗಳ ಕೊಲೆಯಾಯಿತು. ಅವರಲ್ಲಿ ಒಬ್ಬಿಬ್ಬರು ಭಾರತೀಯರೂ ಇದ್ದರು. ಕಲ್ಕತ್ತ ವಿಶ್ವವಿದ್ಯಾನಿಲಯದ ಘಟಕೋತ್ಸವ ಸಮಾರಂಭವೊಂದರಲ್ಲಿ ಬಂಗಾಳದ ನೂತನ ಗವರ್ನರ್ ಸರ್ ಸ್ಟಾನ್ಲಿ ಜಾಕ್‌ಸನ್ (Sir Stanley Jackson) ಅಧ್ಯಕ್ಷತೆ ವಹಿಸಿದ್ದಾಗ ಡಯೋಸಿಸಾನ್ ಮಹಿಳಾ ಕಾಲೇಜಿನ ಒಬ್ಬಳು ವಿದ್ಯಾರ್ಥಿನಿ ಬೀನಾದಾಸ್ ಎನ್ನುವವರು ಆತನ ಮೇಲೆ ಬಹಿರಂಗವಾಗಿ ಗುಂಡು ಹಾರಿಸಿದಳು. ಆದರೆ ಗುಂಡು ಆತನ ಜೇಬಿನಲ್ಲಿದ್ದ ಒಂದು ಟಿಪ್ಪಣಿ ಪುಸ್ತಕದೊಳಗ ಹೊಕ್ಕಿತಾಗಿ, ಅವನ ಪ್ರಾಣ ಉಳಿಯಿತು. ಬೀನಾದಾಸ್ ಆಜೀವ ಕಾರಾಗೃಹವಾಸ ಶಿಕ್ಷೆಗೆ ಒಳಗಾದಳು. ಸ್ವಾತಂತ್ರ್ಯ ಬಂದಾಗಲೇ ಆಕೆಗ ಬಿಡುಗಡೆಯಾದದ್ದು.

1932 ರ ಜೂನ್ ತಿಂಗಳಲ್ಲಿ ಸೈನ್ಯಗಳು ಚಿತ್ತಗಾಂಗ್ ಬಳಿಯ ಒಂದು ಹಳ್ಳಿಯನ್ನು

ಸುತ್ತುಗಟ್ಟಿದುವು. ಸೂರ್ಯಸೇನ್ ಮತ್ತು ಇತರ ನಾಲ್ವರು ಗೆರಿಲ್ಲಾಗಳು ಅಲ್ಲಿ ಒಂದು ಮನೆಯಲ್ಲಿ ಅಡಗಿಕೊಂಡಿದ್ದರು. ಮಾಳಿಗೆಯ ಮೇಲಿನಿಂದ ಗುಂಡು ಹಾರಿಸಿದಾಗ ಅವರ ನಾಯಕ ಕ್ಯಾಪ್ಟನ್ ಕ್ಯಾಮೆರಾನ್ (Capt. Cameron) ಮೃತನಾದನು. ದೊಂಬಿಯಲ್ಲಿ ಸೂರ್ಯಸೇನನು ಇಬ್ಬರು ಸ್ತ್ರೀ ಸಹವರ್ತಿಗಳಾಗಿದ್ದ ಪ್ರೀತಿಲತಾ ವಾಡೇದಾರ್ ಮತ್ತು ಕಲ್ಪನಾ ದತ್ ಇವರೊಂದಿಗೆ ಅಲ್ಲಿಂದ ತಪ್ಪಿಸಿಕೊಂಡನು. ಆಮೇಲೆ 1933 ರ ಪ್ರಾರಂಭದಲ್ಲಿ ಸೂರ್ಯಸೇನನನ್ನು ಕೊನೆಗೆ ಗೈರಾಲಾ ಎಂಬ ಹಳ್ಳಿಯಲ್ಲಿ ಹಿಡಿಯಲಾಯಿತು. ಅಲ್ಲಿಯೂ ಒಬ್ಬ ಹಳ್ಳಿಗನು ಗೂರ್ಖಾ ಪಡೆಗೆ ಅವನು ಅಡಗಿದ್ದ ಸ್ಥಳವನ್ನು ತೋರಿಸಿಕೊಟ್ಟುದುದರಿಂದ ಹಿಡಿಯಲು ಸಾಧ್ಯವಾಯಿತು. ಬಂಧಿಸಿದ ಮಿಲಿಟರಿ ಅಧಿಕಾರಿಗಳು ಅವನನ್ನು ಗೌರವದಿಂದ ಕಂಡರು.. ಕೊನೆಗೆ ಸೂರ್ಯಸೇನನನ್ನು ಢಾಕಾದಲ್ಲಿ ನೇಣುಹಾಕಲಾಯಿತು. ಇಂದಿಗೂ ಬಾಂಗ್ಲಾ ದೇಶದಲ್ಲಿ ನಾಯಕರು ಮತ್ತು ಜನಸಾಮಾನ್ಯರು ಸೂರ್ಯಸೇನನನ್ನು ಭಕ್ತಿಗೌರವಗಳಿಂದ ರಾಷ್ಟ್ರವೀರನೆಂದು ನೆನೆಯುತ್ತಾರೆ. ಈ ಚಳುವಳಿಯು ಕುಸಿದುದಕ್ಕೆ ಕಾರಣ ಭಯೋತ್ಪಾದಕ ಕ್ರಾಂತಿಕಾರರು ಚಲ್ಲಾಪಿಲ್ಲಿಯಾದದ್ದು. ಅವರಲ್ಲಿ ಬಹುಪಾಲು ಜನ ನಗರಗಳ ಶಾಲಾಕಾಲೇಜು ವಿದ್ಯಾರ್ಥಿಗಳು. ಅವರಿಗೆ ಹಳ್ಳಿಗಳ ರೈತರ ಸಮಸ್ಯೆಗಳಾಗಲಿ, ಅವರ ಆಗತ್ಯವಾಗಲಿ ಅರ್ಥವಾಗಿರಲಿಲ್ಲ. ಆದ್ದರಿಂದ ಉತ್ತರ ಪ್ರದೇಶ ಮೊದಲಾದ ಪ್ರದೇಶಗಳಲ್ಲಿ ಪ್ರಾರಂಭಿಸಿದ್ದ ತೀವ್ರಗಾಮೀ ಕೃಷಿಕ ಯೋಜನೆಗಳ ಅರಿವೂ ಇರಲಿಲ್ಲ.

1933 ರ ಸ್ವಾತಂತ್ರ್ಯ ದಿನಾಚರಣೆಯನ್ನು ಹಿಂದೆಂದೂ ಇದ್ದಿರದಷ್ಟು ಉತ್ಸಾಹದಿಂದ ಆಚರಿಸಲಾಯಿತು. ಬಂಗಾಳದ ಹೂಗ್ಲಿ ಜಿಲ್ಲೆಯ ಬದನ್‌ಗಂಜ್ ಎಂಬಲ್ಲಿ ಒಂದು ಮೆರವಣಿಗೆಯನ್ನು ಪೋಲೀಸು ಗುಂಡುಹಾರಿಸಿ ಚದುರಿಸಿದರು. ಫೆಬ್ರವರಿಯಲ್ಲಿ ಗುಜರಾತಿನ ಬೋರ್ಸಾದ್ ಎಂಬಲ್ಲಿ ಇನ್ನೊಂದು ಕಾಂಗ್ರೆಸ್ ಮೆರವಣಿಗೆಯನ್ನು ನಡೆಸುತ್ತಿದ್ದಾಗ ಕಸ್ತೂರ್ಬಾ ಗಾಂಧಿಯವರನ್ನು ಬಂಧಿಸಲಾಯಿತು. ಅವರಿಗೆ ಆರು ತಿಂಗಳ ಕಾರಾಗೃಹವಾಸದ ಶಿಕ್ಷೆ ವಿಧಿಸಿದರು. 1933 ರ ಮಾರ್ಚಿ ತಿಂಗಳಲ್ಲಿ ಕಲ್ಕತ್ತಾದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಅಧಿವೇಶನಕ್ಕೆ ಬರುವ ಮುಂಚೆಯೇ ಒಂದು ಸಾವಿರ ಪ್ರತಿನಿಧಿಗಳನ್ನು ಸೆರೆಹಿಡಿಯಲಾಯಿತು. ಬಂದ ಇನ್ನೊಂದು ಸಾವಿರ ಜನರ ಮೇಲೆ ಪೋಲೀಸರು ಲಾಠಿ ಹೊಡೆತ ನಡಸಿದರು, ಸಭೆಯನ್ನು ಒಡದು ಚದುರಿಸಲು ಅವರು ಪ್ರಯತ್ನಿಸುತ್ತಿದ್ದಾಗಲೇ, ಗುಂಪಿನ ಮಧ್ಯಭಾಗದಲ್ಲಿದ್ದ ಪ್ರತಿನಿಧಿಗಳು ಜೆ.ಎಂ. ಸೇನ್‌ಗುಪ್ತ ಅವರ ಅಧ್ಯಕ್ಷತೆಯಲ್ಲಿ ಆಗಿಂದಾಗಲೇ ಪೂರ್ಣಸ್ವರಾಜ್ಯದ ಗುರಿಯನ್ನು ಪುನರ್ ಸಮರ್ಥನೆ ಮಾಡಿಕೊಂಡರು. ಸತ್ಯಾಗ್ರಹ, ವಿದೇಶೀ ವಸ್ತ್ರ ಮತ್ತು ವಸ್ತುಗಳ ಬಹಿಷ್ಕಾರ ಇವು ಅದನ್ನು ಸಾಧಿಸುವ ವಿಧಾನಗಳೆಂದು ನಿರ್ಣಯಿಸಲಾಯಿತು.

ಈ ಅವಧಿಯಲ್ಲಿ ಬಹು ಸಂಖ್ಯೆಯ ಹೆಂಗಸರೂ ಮಕ್ಕಳೂ ಕೂಡಿದಂತ ಒಟ್ಟು ಸುಮಾರು 1,20,000 ಜನರನ್ನು ಬಂಧಿಸಿ ಸೆರೆಮನೆಗಳಲ್ಲಿಡಲಾಗಿತ್ತು. ಇದು ಸತ್ಯಾಗ್ರಹವನ್ನು ಮುಂದುವರಿಸಲು ಜನತೆಗೆ ಪೂರ್ಣ ಇಚ್ಛೆಯಿದೆ ಎಂಬುದನ್ನು ತೋರಿಸುತ್ತಿತ್ತು. ಆದರೆ ಗಾಂಧೀಜಿ ಕೇವಲ ಹರಿಜನ ಸಮಸ್ಯೆಯ ಮೇಲೆ ತಮ್ಮ

ಗಮನವನ್ನು ಕೇಂದ್ರೀಕರಿಸಿದ್ದರು. 1933 ರ ಮೇ ತಿಂಗಳಲ್ಲಿ ಅವರು ತಮ್ಮ ಹಾಗೂ ತಮ್ಮ ಸಹೋದ್ಯೋಗಿಗಳ ಹೃದಯಶುದ್ಧಿಗಾಗಿ ಮತ್ತು ಹರಿಜನರ ಮೇಲ್ಮೆಗಾಗಿ 21 ದಿನಗಳ ನಿರಶನ ವ್ರತ ಆರಂಭಿಸಿದರು. ಸರಕಾರವು ಅವರನ್ನು ಬಿಡುಗಡೆ ಮಾಡಿತು. ಆಮೇಲೆ ಕಾಂಗ್ರೆಸ್ಸು ಸತ್ಯಾಗ್ರಹ ಚಳುವಳಿಯನ್ನು ತಾತ್ಕಾಲಿಕವಾಗಿ ನಿಲ್ಲಿಸಬೇಕೆಂದು ಗಾಂಧೀಜಿ ಹೇಳಿಕೆ ನೀಡಿದರು. ಒಂದು ವರ್ಷವಾದಮೇಲೆ 1934 ರ ಏಪ್ರಿಲ್‌ನಲ್ಲಿ ಚಳುವಳಿಯನ್ನು ಸಂಪೂರ್ಣವಾಗಿ ನಿಲ್ಲಿಸಲಾಯಿತು.

ಈ ಮಧ್ಯೆ ಬ್ರಿಟಿಷ ಸರಕಾರವು 1932 ರ ನವೆಂಬರ್ ತಿಂಗಳಲ್ಲಿ ಮೂರನೆಯ ದುಂಡುಮೇಜಿನ ಪರಿಷತ್ತನ್ನು ಕರೆಯಿತು. ಸರಕಾರವು ತಳೆದಿರುವ ನಿಲುವಿನಿಂದಾಗಿ ಅದರಲ್ಲಿ ಭಾಗವಹಿಸುವುದರಿಂದ ಯಾವ ಪ್ರಯೋಜನವೂ ಆಗಲಾರದೆಂದು ಗೊತ್ತಿದ್ದುದರಿಂದ ಕಾಂಗ್ರೆಸ್ ಆಹ್ವಾನವನ್ನು ಒಪ್ಪಿಕೊಳ್ಳಲಾರದೆಂದು ನಿರ್ಧರಿಸಿತು, ಎಂದೇ ಪರಿಷತ್ತಿನಲ್ಲಿ ಕಾಂಗ್ರೆಸ್ ಪ್ರತಿನಿಧಿಸಲಿಲ್ಲ. ಪರಿಷತ್ತಿನಲ್ಲಿ ನಡೆದ ಚರ್ಚೆಗಳಿಂದಾಗಿ ಬ್ರಿಟಿಷ್ ಸರಕಾರವು 1935 ರ ಇಂಡಿಯಾ ಆಕ್ಟ್ ಜಾರಿಗೆ ತರಲು ನಿರ್ಧರಿಸಿತು. ಅದರಲ್ಲಿ ಇನ್ನೂ ಮುಂದಿನ ಕೆಲವು ಸುಧಾರಣೆಗಳನ್ನು ಸೇರಿಸಲಾಗಿತ್ತು. ಹೊಸ ಶಾಸನದ ಪ್ರಕಾರ ಕೇಂದ್ರದಲ್ಲಿ ಒಂದು ಫೆಡರಲ್ ಸರಕಾರವೂ ಹೆಚ್ಚು ಪ್ರಮಾಣದ ಸ್ವಾಯತ್ತತೆ ಇರುವ ಪ್ರಾಂತೀಯ ಸರಕಾರಗಳೂ ಇದ್ದುವು. ಮೊದಲನೆಯ ಬಾರಿಗೆ ಸಂಸ್ಥಾನಗಳನ್ನೂ ಈ ಕ್ಷೇತ್ರಕ್ಕೆ ಎಳೆಯಲಾಯಿತು. ಏಕೆಂದರೆ ಫೆಡರಲ್ ಒಕ್ಕೂಟವು ಬ್ರಿಟಿಷ್ ಇಂಡಿಯಾದ ಪ್ರಾಂತಗಳನ್ನು ರಾಜಾಡಳಿತವಿದ್ದ ಸಂಸ್ಥಾನಗಳನ್ನೂ ಒಳಗೊಳ್ಳಲಿತ್ತು. ಇದು ಭಾರತವು ಒಂದು ದೇಶ, ಭಾರತೀಯರು ಒಂದು ಜನ ಎಂಬ ತತ್ತ್ವಕ್ಕೆ ಅನುಸಾರವಾಗಿದ್ದಂತೆ ಕಂಡಿತು. ಆದರೆ ಬ್ರಿಟಿಷರ ನಿಜವಾದ ಉದ್ದೇಶವೇ ಬೇರೆಯಾಗಿತ್ತು. ಸಾಮ್ರಾಜ್ಯಶಾಹಿ ವಿರೋಧೀ ಶಕ್ತಿಗಳಿಗೆ ಮತ್ತು ರಾಷ್ಟ್ರೀಯ ಕಾರ್ಯಕ್ರಮಗಳ ಎದುರು ತಡೆಯಾಗಿ ಈ ರಾಜರುಗಳನ್ನು ಉಪಯೋಗಿಸಿಕೊಳ್ಳಬೇಕೆಂದು ಅವರು ಆಲೋಚಿಸಿದ್ದರು. ಆದ್ದರಿಂದಾಗಿ ಕೇಂದ್ರದ ದ್ವಿಸದನ ಫೆಡರಲ್ ಶಾಸನ ಸಭೆಯಲ್ಲಿ ಸಂಸ್ಥಾನಗಳಿಗೆ ಅಳತೆ ಪ್ರಮಾಣ ಯಾವುದೂ ಇಲ್ಲದೆ ಅತಿಯಾದ ಪ್ರಾಧಾನ್ಯ ಕೊಡಲಾಯಿತು. ಅಷ್ಟು ಮಾತ್ರವಲ್ಲ, ಸಂಸ್ಥಾನಗಳ ಪ್ರತಿನಿಧಿಗಳನ್ನು ಚುನಾಯಿಸುವಂತಿರಲಿಲ್ಲ, ಅವರನ್ನು ಆಳುಗರು ನಾಮಕರಣ ಮಾಡುತ್ತಿದ್ದರು. ದೇಶದ ಉಳಿದ ಭಾಗಗಳಲ್ಲಿಯೂ ಶೋಚನೀಯ ಪ್ರಮಾಣದಲ್ಲಿ ಮಿತಗೊಂಡಿತ್ತು. ಬ್ರಿಟಿಷ್ ಇಂಡಿಯಾದ ಜನಸಂಖ್ಯೆಯ ಶೇ. 14 ಕ್ಕಿಂತ ಹೆಚ್ಚು ಜನಕ್ಕೆ ಮತದಾನ ಅರ್ಹತೆ ಇರಲಿಲ್ಲ. ಇಷ್ಟು ಎಚ್ಚರಿಕೆಯಿಂದ ರೂಪಿತವಾದ ಶಾಸನಸಭೆಗಳಿಗೂ ಪೂರ್ಣಾಧಿಕಾರ ಇರಲಿಲ್ಲ. ರಕ್ಷಣೆ ಮತ್ತು ವಿದೇಶ ಸಂಬಂಧಗಳನ್ನು ಕುರಿತು ಅದಕ್ಕೆ ಹತೋಟಿಯಿರಲಿಲ್ಲ. ಅದರ ಕಾರ್ಯಕ್ಷೇತ್ರದೊಳಗೆ ಬರುವ ಇತರ ವಿಷಯಗಳಮೇಲೆ ಕೂಡ ಗವರ್ನರ್ ಜನರಲ್ ತನ್ನ ವಿಶೇಷ ಅಧಿಕಾರ ಇಟ್ಟುಕೊಂಡಿದ್ದನು. ಗವರ್ನರ್-ಜನರಲ್ಲನನ್ನೂ ಗವರ್ನರರುಗಳನ್ನೂ ಇನ್ನೂ ಬ್ರಿಟಿಷ್ ಸರಕಾರವೇ ನೇಮಿಸುತ್ತಿತ್ತು. ಅವರು ಅದಕ್ಕೇ ನೇರವಾಗಿ ಹೊಣೆಗಾರರಾಗಿದ್ದರು.

ಪ್ರಾಂತಗಳಲ್ಲಾದರೋ, ಕೊಟ್ಟಿದ್ದ ಸ್ವಾಯತ್ತತೆಯು ಗವರ್ನರರಿಗಿದ್ದ

ವಿಶೇಷಾಧಿಕಾರಗಳಿಂದ ಸತ್ವಹೀನವಾಗಿತ್ತು. ಅವರು ಚುನಾಯಿತ ಪ್ರತಿನಿಧಿಗಳು ಸೂಚಿಸಿದ ಶಾಸಕಾಂಗ ಕ್ರಮಗಳನ್ನು ಕುರಿತು ವೀಟೋ ಚಲಾಯಿಸುವುದು ಸಾಧ್ಯವಿತ್ತು ಮಾತ್ರವಲ್ಲ, ತಮಗೆ ತಾವೇ ಶಾಸನಗಳನ್ನು ಜಾರಿಗೆ ತರಲೂ, ಸುಗ್ರೀವಾಜ್ಞೆಗಳನ್ನು ಹೊರಡಿಸಲೂ ಅಧಿಕಾರ ಪಡೆದಿದ್ದರು. ಗವರ್ನರನು ಸಿವಿಲ್ ಸರ್ವಿಸ್ ಮತ್ತು ಪೋಲೀಸ್ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿದ್ದನು.

1935 ರ ಇಂಡಿಯಾ ಶಾಸನ ಯಾರಿಗೂ ತೃಪ್ತಿಯುಂಟುಮಾಡಲಿಲ್ಲ. ಕಾಂಗ್ರೆಸ್ಸಿಗೆ ಅದು "ಸಂಪೂರ್ಣ ನಿರಾಶಾದಾಯಕ"ವಾಗಿ ಕಂಡಿತು. ಇತರರಿಗೆ ಅದು ಬೇರೆ ಬೇರೆ ಪ್ರಮಾಣದಲ್ಲಿ ಅಸಮಗ್ರವಾಗಿ ಕಂಡಿತು. ಬ್ರಿಟಿಷ್ ಸರಕಾರವು ಭಾರತದ ಜನತೆಯ ಮೇಲೆ ಹೊಂದಿದ್ದ ರಾಜಕೀಯ ಮತ್ತು ಆರ್ಥಿಕ ಅಧಿಕಾರವನ್ನು ನಿಜವಾಗಿ ಬಿಟ್ಟುಕೊಟ್ಟಿರಲಿಲ್ಲ. ಸರಕಾರದ ರಚನೆಯಲ್ಲಿ ಎಲ್ಲೋ ಸ್ವಲ್ಪ ಬದಲಾವಣೆ ಯಾಗಿದ್ದಿತು ಅಷ್ಟೇ. ಭಾರತದ ಬ್ರಿಟಿಷ್ ಆಡಳಿತದೊಳಕ್ಕೆ ಚುನಾಯಿತರಾದ ಮಂತ್ರಿಗಳನ್ನು ಹೊಗಿಸಲಾಗಿತ್ತು, ಆದರೆ ಮುಂದುವರಿಯುತ್ತಿದ್ದದ್ದು ಮಾತ್ರ ವಿದೇಶೀಯ ಆಡಳಿತವೇ.

ಶಾಸನದ ಪ್ರಾಂತೀಯ ಭಾಗವನ್ನು ಮಾತ್ರ ತಕ್ಷಣವೇ ಕಾರ್ಯಗತ ಗೊಳಿಸಲಾಯಿತು. ಫೆಡರಲ್ ಭಾಗವನ್ನು ಕಾಲಕ್ರಮದಲ್ಲಿ ಜಾರಿಗೆ ತರುವುದಾಗಿತ್ತು. ಶಾಸನದ ಅವಕಾಶಗಳನ್ನು ಸಂಪೂರ್ಣವಾಗಿ ವಿರೋಧಿಸಿದ್ದರೂ ಕಾಂಗ್ರೆಸ್ಸು ಚುನಾವಣೆಗಳಲ್ಲಿ ಸ್ಪರ್ಧಿಸಬೇಕೆಂದು ತೀರ್ಮಾನಿಸಿತು. ಶಾಸನದ ಕಾರ್ಯಕ್ರಮದಲ್ಲಿ ಭಾಗವಹಿಸುವುದಕ್ಕಿಂತ ಮುಖ್ಯವಾಗಿ ರಾಷ್ಟ್ರದಲ್ಲಿ ತನಗೆ ಎಷ್ಟುಮಟ್ಟಿನ ಬೆಂಬಲವಿದೆ ಎಂಬುದನ್ನು ಬ್ರಿಟಿಷ್ ಸರಕಾರಕ್ಕೆ ತೋರಿಸಿಕೊಡುವ ಸಲುವಾಗಿ. ಈ ಉದ್ದೇಶ ಸಂಪೂರ್ಣವಾಗಿ ಕೈಗೂಡಿತು. ಬಹುಮಟ್ಟಿನ ಪ್ರಾಂತಗಳಲ್ಲಿ ಕಾಂಗ್ರೆಸ್ ಪ್ರಚಂಡ ವಿಜಯ ಗಳಿಸಿತು. ಭಾರತದ ಜನತೆಯ ಅಗಾಧ ಬಹುಮತದ ಬೆಂಬಲ ಕಾಂಗ್ರೆಸ್ಸಿಗೆ ಎಂಬುದರಲ್ಲಿ ಸಂದೇಹವಿರಲಿಲ್ಲ. ಚುನಾವಣೆಗಳಲ್ಲಿ ಗೆದ್ದೂ ಅಧಿಕಾರವನ್ನು ಒಪ್ಪಿಕೊಳ್ಳದಿರುವುದರಲ್ಲಿ ಅರ್ಥವಿಲ್ಲ ಎಂದು ಕೆಲವರು ವಾದಿಸಿದರು. ನೆಹರೂ ಮತ್ತು ವಾಮಪಂಥೀಯ ನಾಯಕರು ಅಧಿಕಾರ ಸ್ವೀಕಾರಕ್ಕೆ ವಿರೋಧಿಗಳಾಗಿದ್ದರು. 1937 ರ ಜುಲೈ ತಿಂಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಹನ್ನೊಂದರಲ್ಲಿ ಏಳು ಪ್ರಾಂತಗಳಲ್ಲಿ ಅಧಿಕಾರ ವಹಿಸಿಕೊಂಡುವು. ಸ್ವಲ್ಪ ಕಾಲವಾದ ಮೇಲೆ ಇನ್ನೂ ಎರಡು ಪ್ರಾಂತಗಳಲ್ಲಿ ಕಾಂಗ್ರೆಸ್ ಮಿಶ್ರ ಸರಕಾರವನ್ನು ಸ್ಥಾಪಿಸಿತು. ಬಂಗಾಳ ಮತ್ತು ಪಂಜಾಬ್ ಎರಡು ಕಡೆ ಮಾತ್ರ ಕಾಂಗ್ರೆಸ್ ಅಲ್ಲದ ಮಂತ್ರಿ ಮಂಡಲಗಳಿದ್ದುವು.

ಪ್ರಾಂತೀಯ ಸರಕಾರಗಳ ಮಿತವಾದ ಅಧಿಕಾರ, ಕಾಂಗ್ರೆಸ್ಸಿನ ಸಾಮಾಜಿಕ ಆಧಾರ, ಅದರಲ್ಲಿ ಕಾರ್ಮಿಕರು ಮತ್ತು ಕೃಷಿಕರಂತೆಯೇ ಬಂಡವಾಳಗಾರರು ಹಾಗೂ ಭೂಮಾಲೀಕರು ಇದ್ದದ್ದು, ಕಾಂಗ್ರೆಸ್ ನಾಯಕತ್ವದ ಪ್ರಮುಖ ಅಂಗಗಳಲ್ಲಿ ಕಂಡುಬರುತ್ತಿದ್ದ ಸಾಂಪ್ರದಾಯಿಕ ಲಕ್ಷಣ-ಇವುಗಳಿಂದಾಗಿ, ಕಾಂಗ್ರೆಸ್ ಮಂತ್ರಿ ಮಂಡಲಗಳು ಆಡಳಿತದ ಮೂಲ ಲಕ್ಷಣವನ್ನು ಬದಲಾಯಿಸಲು ಪ್ರಯತ್ನಿಸಲಿಲ್ಲ. ತುಂಬ ತೀವ್ರಗಾಮಿಯಾದ ಯಾವ ಬದಲಾವಣೆಯನ್ನೂ ಅವು ತರಲಿಲ್ಲ. ಆದರೆ

ಅವಕಾಶವಿದ್ದ ಕಿರಿದಾದ ಮಿತಿಯಲ್ಲಿಯೇ ಜನರ ಮಟ್ಟವನ್ನು ಉತ್ತಮಪಡಿಸಲು ಅವರು ಪ್ರಯತ್ನಿಸಿದರು. ಆಡಳಿತದ ಹೊಸ ವಿಧಾನಗಳನ್ನು ಜಾರಿಗೆ ತಂದು ಪ್ರಾಮಾಣಿಕತೆ, ಸೇವಾ ಭಾವನೆಗಳ ಉತ್ತಮ ಗುಣಮಟ್ಟವನ್ನು ರೂಢಿಸಿದರು. ಪ್ರಾಥಮಿಕ, ತಾಂತ್ರಿಕ ಮತ್ತು ಉನ್ನತ ವಿದ್ಯಾಭ್ಯಾಸವನ್ನೂ ಮತ್ತು ಸಾರ್ವಜನಿಕ ಆರೋಗ್ಯ ರಕ್ಷಣೆಯನ್ನೂ ಉತ್ತಮಪಡಿಸಲು ಹೆಚ್ಚಿನ ಗಮನ ಕೊಡಲಾಯಿತು. ಹೊಸ ಗೇಣಿ ಮತ್ತು ಸಾಲ ಪರಿಹಾರ ಕಾನೂನುಗಳನ್ನು ಜಾರಿಗೆ ತಂದು ಕೃಷಿಕರಿಗೆ ಸಹಾಯ ಮಾಡಲಾಯಿತು. ಅಂತಹ ಕಾನೂನುಗಳು ವಾಸ್ತವವಾಗಿ ಭೂಮಾಲೀಕರು ಮತ್ತು ಜಮೀನ್ದಾರರ ಒಪ್ಪಿಗೆಯಿಂದಲೇ ಜಾರಿಗೆ ಬಂದಿದ್ದುದರಿಂದ ಸಂಧಾನಾತ್ಮಕವಾಗಿದ್ದುವು. ಉತ್ತಮ ಕಾರ್ಯ ಸನ್ನಿವೇಶಗಳು, ಅಧಿಕ ವೇತನಗಳಿಗಾಗಿ ಟ್ರೇಡ್ ಯೂನಿಯನ್ನುಗಳು ಸಂಧಾನ ನಡೆಸಲು ಹೆಚ್ಚು ಹೆಚ್ಚು ಸ್ವಾತಂತ್ರ್ಯ ಪಡೆಸಿದುವು. ಕೆಲವು ಪ್ರಾಂತಗಳಲ್ಲಿ ಮಾತ್ರ ತುಂಬ ಕಟುವಾಗಿ ಅವು ಹೋರಾಡಬೇಕಾಗಿ ಬಂದಿತು. ಪೌರಸ್ವಾತಂತ್ರ್ಯಗಳ ಮೇಲಿನ ಹಿಡಿತ ಸಡಿಲ ಗೊಂಡಿತು. ಪತ್ರಿಕಾ ಸ್ವಾತಂತ್ರ್ಯ ವಿಸ್ತೃತವಾಯಿತು. ಪೋಲೀಸ್ ಮತ್ತು ಆಡಳಿತಾಧಿಕಾರಿಗಳ ಬಗೆಗ ಜನಸಾಮಾನ್ಯರ ಭೀತಿ, ಜುಗುಪ್ಸೆಗಳು ಮುಂದುವರಿದೇ ಇದ್ದುವಾದರೂ ಸ್ವಲ್ಪಮಟ್ಟಿನ ಸುಧಾರಣೆಗಳು ಕಂಡುಬಂದುವು.

ಆದರೆ ಅತ್ಯಂತ ಮುಖ್ಯವಾದ ಪ್ರಯೋಜನ ಮಾನಸಿಕವಾದುದಾಗಿತ್ತು. ಜನರು ಹೊಸತನವನ್ನು ಅನುಭವಿಸಿದರು. ತಮಗ ಪರಿಚಿತರಾಗಿ ಸರಮನೆಯಲ್ಲಿದ್ದ ನಾಯಕರು ಅಧಿಕಾರದಲ್ಲಿರುವುದನ್ನು ನೋಡಿದಾಗ ಅವರಲ್ಲಿ ವಿಜಯದ ಮನೋಭಾವ ಕಾಣಿಸಿಕೊಳ್ಳುತ್ತಿತ್ತು. ಆಶಾವಾದ ಮತ್ತು ಆತ್ಮವಿಶ್ವಾಸಗಳು ವಾತಾವರಣವನ್ನು ತುಂಬಿದ್ದುವು. ಕೊನೆಗೊಮ್ಮೆ ಸ್ವಾತಂತ್ರ್ಯದ ಮೊದಮೊದಲ ಸೂಚನೆಗಳು ಕಾಣಿಸಿಕೊಂಡಿವೆ ಎಂಬುದಾಗಿ ಜನ ಭಾವಿಸಿದರು.

# VI

# ಸ್ವಾತಂತ್ರ್ಯದ ಸಾಧನೆ

ಎರಡನೆಯ ಮಹಾಯುದ್ಧಕ್ಕೆ ಮುಂಚಿನ ಐದು ವರ್ಷಗಳು ಭಾರತದಲ್ಲಿ ಬೇಕಾದಷ್ಟು ನೂತನ ಆಲೋಚನೆಗಳು ತುಂಬಿದ್ದ ಕಾಲ. ರಾಷ್ಟ್ರೀಯ, ಸಾಮ್ರಾಜ್ಯಶಾಹಿ ವಿರೋಧೀ ವಿಚಾರಗಳಿಗೂ, ಸ್ವಾತಂತ್ರ್ಯ ಸಾಧನೆಯ ಅಂತಿಮ ಧ್ಯೇಯಕ್ಕೂ ಸಂಪೂರ್ಣವಾಗಿ ಬದ್ಧರಾಗಿದ್ದರೂ ಕೂಡ, ಎಲ್ಲರೂ ಕಾಂಗ್ರೆಸ್ಸಿನ ಕಾರ್ಯಕ್ರಮ ವನ್ನಾಗಲಿ ಕಾರ್ಯವಿಧಾನವನ್ನಾಗಲಿ ಒಪ್ಪಿರಲಿಲ್ಲ; ಆಲೋಚನೆಗಳಿಗೆ ಖಚಿತವಾದ ರೂಪವೂ ಬಂದಿರಲಿಲ್ಲ. ಕಾಂಗ್ರೆಸ್ಸೇತರ ನಾಯಕರು ಮತ್ತು ಪಂಗಡಗಳು ಬೇರೆ ಬೇರೆ ಆದರ್ಶಗಳನ್ನು ಬೇರೆ ಬೇರೆ ಕಾರ್ಯವಿಧಾನಗಳನ್ನು ಸಮರ್ಥಿಸುತ್ತಿದ್ದುದು ಮಾತ್ರವಲ್ಲ, ಕಾಂಗ್ರೆಸ್ಸಿನೊಳಗೆಯೇ ಎರಡು ಸಮಾನಾಂತರವಾದ ಬೇರೆ ಬೇರೆ ರಾಜಕೀಯ ಆಲೋಚನೆಯ ಪ್ರವಾಹಗಳು ಹರಿದಿದ್ದುವು, ಬಲವಾಗುತ್ತಿದ್ದುವು.

ಈ ಹೊಸ ಆಲೋಚನೆಯ ಮೊದಲನೆಯ ಫಲ ಒಂದು ಅರ್ಥದಲ್ಲಿ ನೇತ್ಯಾತ್ಮಕವಾಗಿತ್ತು. ಭಯೋತ್ಪಾದನಾವಾದವು ಒಂದು ಕ್ರಾಂತಿಶಕ್ತಿಯಾಗಿಯೇ ಮುಗಿದಿತ್ತು. ಅದಕ್ಕೆ ಬ್ರಿಟಿಷರನ್ನು ಕಾಲ್ತೆಗೆಸಲು ದೇಶದ ಜನರನ್ನು ಒಟ್ಟಾಗಿ ದಂಗೆಯೇಳುವಂತೆ ಮಾಡಲಾಗಲಿಲ್ಲ. ಗಲ್ಲು ಶಿಕ್ಷೆ, ಕಾರಾಗೃಹ ಶಿಕ್ಷೆಗಳ ಮೂಲಕವಾಗಿ ಹಾಗೂ ಕಮ್ಯೂನಿಸ್ಟ್ ಮತ್ತಿತರ ಚಳುವಳಿಗಳಲ್ಲಿ ಸೇರಿ ಹಚ್ಚಿನ ಭಯೋತ್ಪಾದಕ ವ್ಯಕ್ತಿಗಳು ಮರೆಯಾದುದರಿಂದಾಗಿ ಕ್ರಾಂತಿಕಾರೀ ಭಯೋತ್ಪಾದನ ವಾದವು ಅಡಗಿಹೋಯಿತು.

ಇತ್ಯಾತ್ಮಕ ಮುಖದಲ್ಲಾದರೋ ಸ್ಪಷ್ಟವಾಗಿ ಕಾಣುವ ಮೂರು ಮನೋಧರ್ಮಗಳಿದ್ದುವು. ಮೊದಲನಯದಾಗಿ, ಕಾಂಗ್ರೆಸ್ಸಿನ ಒಳಗೂ ಹೊರಗೂ ಸಮಾಜವಾದೀ ಭಾವನೆಗಳು ಪ್ರಚಾರವಾದುವು. ಎರಡನೆಯದಾಗಿ, ರಾಷ್ಟ್ರದ ಸ್ವಾತಂತ್ರ್ಯ ಚಳುವಳಿಗಿಂತ ಬೇರೆಯೇ ಆಗಿ ಟ್ರೇಡ್ ಯೂನಿಯನ್ ಚಳುವಳಿ ಬೆಳೆಯಿತು, ಆಗಾಗ ಅದರೊಂದಿಗ ಕೂಡಿಕೊಳ್ಳುವುದೂ ಇತ್ತು. ಕೊನೆಯದಾಗಿ, ಕೃಷಿಕ ಚಳುವಳಿ ಅಧಿಕವಾಗಿ ಬೆಳಯಿತು.

1929 ರಲ್ಲಿ ಸಂಯುಕ್ತ ಸಂಸ್ಥಾನಗಳಲ್ಲಿ ಭಾರೀ ಪ್ರಮಾಣದ ಆರ್ಥಿಕ ಕುಸಿತ ಉಂಟಾಯಿತು. ಈ ಕುಸಿತ ಅನಿವಾರ್ಯವಾಗಿ ಇತರ ಬಂಡವಾಳಗಾರ ರಾಷ್ಟ್ರಗಳಿಗೂ ಹರಡಿತು. ಉತ್ಪಾದನ ತೀವ್ರವಾಗಿ ಕುಗ್ಗಿತು, ವಿದೇಶ ವ್ಯಾಪಾರ ಗಾಬರಿಯಾಗುವ ಪ್ರಮಾಣದಲ್ಲಿ ಇಳಿಯಿತು. ಇದರ ಪರಿಣಾಮವಾಗಿ ತೀವ್ರವಾದ ಆರ್ಥಿಕ ನಿರಾಶೆ, ಮತ್ತು ಭಾರೀ ಪ್ರಮಾಣದ ನಿರುದ್ಯೋಗ ಕಂಡುಬಂದಿತು. ಇದಕ್ಕೆ

ವ್ಯತಿರಿಕ್ತವಾಗಿ ಸೋವಿಯತ್ ರಷ್ಯಾ ಪೋಷಕವಾದ ಚಿತ್ರವನ್ನು ಕೊಟ್ಟಿತು. ರಷ್ಯಾದಲ್ಲಿ ಕುಸಿತವೂ ಇರಲಿಲ್ಲ, ನಿರುದ್ಯೋಗವೂ ಇರಲಿಲ್ಲ. ಎರಡು ಪಂಚವಾರ್ಷಿಕ ಯೋಜನೆಗಳು ಮುಗಿಯುವ ವೇಳೆಗೆ ಉತ್ಪಾದನ ನಾಲ್ಕು ಪಟ್ಟು ಅಧಿಕವಾಗಿತ್ತು. ದೇಶಗಳ ನಡುವ ಇದ್ದ ಈ ವ್ಯತ್ಯಾಸ ಸ್ಪಷ್ಟವಾಗಿದ್ದು, ಕಮ್ಯೂನಿಸ್ಟ್ ಆದರ್ಶ, ಸಮಾಜವಾದ, ಆರ್ಥಿಕ ಯೋಜನೆಗಳ ಪ್ರಯೋಜನ ಇವುಗಳ ಕಡೆಗ ಗಮನವನ್ನು ಸೆಳಯಿತು.

ಹೊರ ಜಗತ್ತಿನಲ್ಲಾದ ಈ ಬೆಳವಣಿಗೆಗಳು ಭಾರತದಲ್ಲೂ ವ್ಯಾಪಕವಾಗಿ ಗಮನ ಸಳದುವು. ಪರಿಣಾಮವಾಗಿ, ನಾಯಕರಲ್ಲೂ ಜನರಲ್ಲೂ ಬೇಕಾದಷ್ಟು ಹೊಸ ಹೊಸ ಆಲೋಚನೆಗಳು ಮೂಡಲು ಸಮಾಜವಾದೀ ವಿಚಾರಗಳು ಕಾರಣ ವಾದುವು. ವಿಶೇಷವಾಗಿ, ಯುವಕರು, ಕಾರ್ಮಿಕರು ಮತ್ತು ಕೃಷಿಕರು ನೂತನ ಆದರ್ಶದ ಕಡಗೆ ಆಕರ್ಷಿತರಾದರು.

ಕಾಂಗ್ರೆಸ್ಸಿನಲ್ಲಾದರೋ ಈ ವಾಮ ಪ್ರವೃತ್ತಿಯ ಫಲವಾಗಿ, ಜವಾಹರಲಾಲ್ ನಹರೂ 1936 ಮತ್ತು 1937 ಎರಡು ವರ್ಷಗಳಲ್ಲೂ ಕಾಂಗ್ರೆಸ್ ಅಧ್ಯಕ್ಷರಾಗಿ ಚುನಾಯಿತರಾದರು. ಅವರಾದ ಮೇಲೆ ಸುಭಾಸ್ ಚಂದ್ರ ಬೋಸ್ ಅಧ್ಯಕ್ಷರಾದರು. ಅವರೂ ತೀವ್ರಗಾಮೀ ನೂತನ ಚಿಂತನಗ ಪ್ರಸಿದ್ಧರಾಗಿದ್ದವರು. 1938 ರಲ್ಲಿ, ಮತ್ತೆ 1939 ರಲ್ಲಿ, ಗಾಂಧೀಜಿ ಮತ್ತು ಅವರ ಅನೇಕ ಸಹವರ್ತಿಗಳು ವಿರುದ್ಧವಾಗಿದ್ದರೂ ಸುಭಾಷರು ಅಧ್ಯಕ್ಷರಾಗಿ ಚುನಾಯಿತರಾದರು. 1936 ರ ಲಕ್ನೋ ಕಾಂಗ್ರೆಸ್ ಅಧಿವೇಶನದಲ್ಲಿ ಕಾಂಗ್ರೆಸ್ಸಿನ ಧ್ಯೇಯವಾಗಿ ಸಮಾಜವಾದವನ್ನು ಒಪ್ಪಿಕೊಳ್ಳಬೇಕೆಂದು ನಹರೂ ಬಹಿರಂಗವಾಗಿಯೇ ಮನವಿಮಾಡಿಕೊಂಡಿದ್ದರು. ಪಕ್ಷವು ಕೃಷಿಕ ವರ್ಗಕ್ಕ ಹಾಗೂ ನಗರಗಳ ಕಾರ್ಮಿಕ ವರ್ಗಕ್ಕೆ ಹತ್ತಿರ ಬರಬೇಕು ಎಂಬುದಾಗಿ ಅವರು ಅಪೇಕ್ಷಿಸಿದ್ದರು. ಜನತೆಯು ಮತೀಯತಾ ಪ್ರಜ್ಞೆಯಿಂದ ದೂರ ಸರಿಯುವಂತೆ ಮಾಡಲು ಇದೇ ಅತ್ಯುತ್ತಮವಾದ ಮಾರ್ಗ ಎಂದು ಅವರು ತೋರಿಸಿಕೊಟ್ಟರು. ಅಧ್ಯಕ್ಷ ಭಾಷಣದಲ್ಲಿ ಅವರು ಹೇಳಿದರು:

"ಜಗತ್ತಿನ ಸಮಸ್ಯೆಗಳಿಗ ಹಾಗೂ ಭಾರತದ ಸಮಸ್ಯೆಗಳಿಗ ಪರಿಹಾರ ಮಾರ್ಗ ಇರುವುದು ಸಮಾಜವಾದದಲ್ಲಿ ಮಾತ್ರವೇ ಎಂದು ನನಗ ಮನವರಿಕೆಯಾಗಿದ. ಸಮಾಜವಾದ ಎಂಬ ಪದವನ್ನು ನಾನು ಉಪಯೋಗಿಸುವಾಗ ಅದನ್ನು ಅಸ್ಪಷ್ಟವಾದ ಕೇವಲ ಮಾನವೀಯವಾದ ಅರ್ಥದಲ್ಲಲ್ಲದ, ವೈಜ್ಞಾನಿಕವಾದ ಮತ್ತು ಆರ್ಥಿಕವಾದ ಅರ್ಥದಲ್ಲಿ ಉಪಯೋಗಿಸುತ್ತಿದ್ದೇನೆ. ಇದಕ್ಕ ನಮ್ಮ ರಾಜಕೀಯ ಮತ್ತು ಸಾಮಾಜಿಕ ರಚನಯಲ್ಲಿ ವ್ಯಾಪಕವೂ ಕ್ರಾಂತಿಕಾರಕವೂ ಆದ ಬದಲಾವಣಗಳು ಅಗತ್ಯ ವಾಗುತ್ತವ. ಭೂಪಂಜಿಕ ಮತ್ತು ಕೈಗಾರಿಕಯಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಕೊನಗೊಳ್ಳಬೇಕು. ಹಾಗಯೇ ಊಳಿಗಮಾನ್ಯ ಪದ್ಧತಿಯೂ ಭಾರತದಲ್ಲಿ ಈಗ ಇರುವ ನಿರಂಕುಶ ಸಂಸ್ಥಾನಗಳ ವ್ಯವಸ್ಥೆಯೂ ಹೋಗಬೇಕು. ಅಂದರ ಬಹಳ ಮಿತವಾದ ಅರ್ಥದಲ್ಲಿ ಹೊರತು, ಖಾಸಗಿ ಆಸ್ತಿಪಾಸ್ತಿ ಇರಬಾರದು. ಈಗಿರುವ ಲಾಭ ವ್ಯವಸ್ಥೆಯ ಸ್ಥಾನದಲ್ಲಿ ಸಹಕಾರಯುತ ಸೇವ ಎಂಬ ಉನ್ನತತರ ಆದರ್ಶ ಬರಬೇಕು. ಅಂದರ, ಅಂತಿಮವಾಗಿ ಪ್ರವೃತ್ತಿಗಳಲ್ಲಿ, ಅಭ್ಯಾಸಗಳಲ್ಲಿ, ಬಯ

ಅಪೇಕ್ಷೆಗಳಲ್ಲಿ ಒಂದು ಪರಿವರ್ತನ ಆಗಬೇಕು. ಚುಟುಕಾಗಿ ಹೇಳಬೇಕಾದರೆ, ಅದರ ಅರ್ಥ ಇಂದು ಕಾಣುತ್ತಿರುವ ಬಂಡವಾಳಶಾಹೀ ವ್ಯವಸ್ಥೆಗಿಂತ ಬೇರೆಯೇ ಆದ ಒಂದು ಹೊಸ ನಾಗರಿಕತೆ."

ಕಾಂಗ್ರೆಸ್ಸಿನ ಹೊರಗೂ ಬೇರ ಬೇರ ನಾಯಕರಲ್ಲಿ ಸಮಾಜವಾದೀ ಧೋರಣೆ ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಅದು ಕಮ್ಯೂನಿಸ್ಟ್ ಪಕ್ಷದ ಬೆಳವಣಿಗೆ ಮತ್ತು ಒಂದು ಕಾಂಗ್ರೆಸ್ ಸಮಾಜವಾದೀ ಪಕ್ಷದ ಸ್ಥಾಪನೆಗಳಿಗೆ ದಾರಿ ಮಾಡಿತು. ಮೊದಲ ದಿನಗಳಲ್ಲಿ ಕಮ್ಯೂನಿಸ್ಟ್ ಪಕ್ಷವು ಪಿ.ಸಿ. ಜೋಶಿ ಅವರ ನಾಯಕತ್ವದಲ್ಲಿ ಕೆಲಸ ಮಾಡುತ್ತಿತ್ತು. ಆಚಾರ್ಯ ನರೇಂದ್ರ ದೇವ್ ಮತ್ತು ಜಯಪ್ರಕಾಶ ನಾರಾಯಣ್ ಅವರು 1934 ರಲ್ಲಿ ಕಾಂಗ್ರೆಸ್ ಸಮಾಜವಾದೀ ಪಕ್ಷವನ್ನು ಸ್ಥಾಪಿಸಿದರು. ಅದಕ್ಕೆ ಒಂದು ಸಂಸ್ಥೆಯಿತ್ತು, ಒಂದು ಪತ್ರಿಕೆಯಿತ್ತು, ಹಾಗೆಯೇ ಖಚಿತವಾಗಿ ನಿರೂಪಿತವಾದ ಪೂರ್ಣ ಸ್ವರಾಜ್ಯದ ಗುರಿಗಳಿದ್ದುವು. ಕಾಂಗ್ರೆಸ್ಸು ಸಮಾಜವಾದೀ ತತ್ವಗಳನ್ನು ಅಂಗೀಕರಿಸುವಂತೆ ಮಾಡಲು ಅದು ಬದ್ಧಕಂಕಣವಾಗಿತ್ತು. ಕೇರಳ, ಆಂಧ್ರ, ತಮಿಳುನಾಡುಗಳಲ್ಲಿ ಕಾಂಗ್ರೆಸ್ ಸಮಾಜವಾದಿಗಳು, ಉತ್ತರ ಭಾರತದ ಪ್ರದೇಶಗಳಿಗಿಂತ ಹೆಚ್ಚಾಗಿ ಮಾರ್ಕ್ಸಿಸಂ ತತ್ವಗಳಿಗೆ ಹತ್ತಿರವಾಗಿದ್ದರು.

ದಬ್ಬಾಳಿಕೆಯಿಂದಾಗಿ ಟ್ರೇಡ್ ಯೂನಿಯನ್ ಚಳುವಳಿಯೂ ಮುರುಟಿ ಹೋಗಿತ್ತು. ಕಮ್ಯೂನಿಸ್ಟ್ ಪಕ್ಷದ ಮೇಲೆ ಬಹಿಷ್ಕಾರ ವಿಧಿಸಿದ ನಂತರ ಅದರ ಹಿಂದೆಯೇ ಸರಕಾರವು 1934 ರ ಉತ್ತರ ಭಾಗದಲ್ಲಿ ರೆಡ್ ಫ್ಲಾಗ್ ಟ್ರೇಡ್ ಯೂನಿಯನ್ ಮೇಲೆಯೂ ನಿಷೇಧಾಜ್ಞೆ ವಿಧಿಸಿತು. ಹೀಗಾಗಿ ಮೀರತ್ ವಿಚಾರಣೆಗಳಾದ ನಂತರ ಸೆರೆಯಿಂದ ಬಿಡುಗಡೆ ಹೊಂದಿದ ಕಮ್ಯೂನಿಸ್ಟರಿಗೆ, ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಸದಸ್ಯತ್ವವನ್ನು ಹೊಸದುಗೊಳಿಸಿಕೊಂಡು ಕೆಲಸ ಮಾಡುವುದಲ್ಲದೆ ಬೇರೆ ದಾರಿಯೇ ಉಳಿದಿರಲಿಲ್ಲ. ಕಾಂಗ್ರೆಸ್ಸಿನಲ್ಲೂ ರಾಯ್ ಅನುಯಾಯಿಗಳೇ ಪ್ರಧಾನರಾಗಿದ್ದ ಎ.ಐ.ಟಿ.ಯು.ಸಿ.ಯಲ್ಲೂ ಅವರದು ಅಲ್ಪ ಸಂಖ್ಯೆ. ಈ ಮಧ್ಯೆ ಜೋಶಿ, ಚಮನ್‌ಲಾಲ್ ಮತ್ತು ಮೃಣಾಳ್ ಕಾಂತಿ ಬೋಸ್ ಅವರ ನೇತೃತ್ವದ ಭಾರತ ರಾಷ್ಟ್ರೀಯ ಟ್ರೇಡ್ ಯೂನಿಯನ್ ಫೆಡರೇಷನ್, ವಿ.ವಿ. ಗಿರಿ ಅವರು ನಾಯಕರಾಗಿದ್ದ ಅಖಿಲ ಭಾರತ ರೈಲ್ವೆ ಕೆಲಸಗಾರರ ಫೆಡರೇಷನ್ನಿನೊಂದಿಗೆ ಸೇರಿಕೊಂಡಿತು. ಗಿರಿ ಮತ್ತು ಮೃಣಾಳ್ ಕಾಂತಿ ಬೋಸ್ ಅವರು ಆಗ ಕಾಂಗ್ರೆಸ್ ಸಂಸ್ಥೆಯಲ್ಲಿ ಪ್ರಚಲಿತವಾಗಿದ್ದ ರಾಷ್ಟ್ರೀಯತೆಗೆ ಹತ್ತಿರವಾದ ಮನೋಧರ್ಮವುಳ್ಳವರಾಗಿದ್ದರು. ಇವೆಲ್ಲವನ್ನೂ ಒಳಗೊಂಡ ಸಮಗ್ರವಾದ ಒಂದು ಸಂಸ್ಥೆಯನ್ನು ಈಗ ಸ್ಥಾಪಿಸಲಾಯಿತು. ಅದೇ ರಾಷ್ಟ್ರೀಯ ಟ್ರೇಡ್ ಯೂನಿಯನ್ ಫೆಡರೇಷನ್ (N.T.U.F.) ಕಮ್ಯೂನಿಸ್ಟರು ಅಥವಾ ಎಂ.ಎನ್. ರಾಯ್ ಹಾಗೂ ಅವರ ಅನುಯಾಯಿಗಳ ವರ್ಗ ಕಲಹದ ತತ್ವಗಳನ್ನು ಒಪ್ಪಿಕೊಳ್ಳದ ವಾಮಪಕ್ಷೀಯರೇ ಇದಕ್ಕೂ ಬೆಂಬಲವಾಗಿದ್ದವರು.

ರೆಡ್ ಫ್ಲಾಗ್ ಟ್ರೇಡ್ ಯೂನಿಯನ್ ಫೆಡರೇಷನ್ ಅನ್ನು ನಿಷೇಧಿಸುವುದಕ್ಕಿಂತ ಮುಂಚೆ, ಮೂರು ಕೂಟಗಳೂ ಒಂದಾಗಿ ಸೇರಿ 1934 ರ ಬೇಸಿಗೆಯಲ್ಲಿ

ಮುಂಬಯಿಯಿಂದ ಒಂದು ಮುಷ್ಕರವನ್ನು ಪ್ರವಸ್ಥಗೊಳಿಸಿದುವು. ಅದು ಭಾರತದ ಹತ್ತಿ ಗಿರಣಿಗಳ ಕಾರ್ಮಿಕರು ತಮ್ಮ ವೇತನದಲ್ಲಿ ಮಾಡಿದ ವಿಪರೀತ ಕಡಿತದ ವಿರುದ್ಧವಾಗಿ ನಡಸಿದ ಚಳುವಳಿ. ಸುಮಾರು 1,20,000 ಜನ ಕಾರ್ಮಿಕರು ಆ ಚಳುವಳಿಯಲ್ಲಿ ಭಾಗವಹಿಸಿದ್ದರು. ಪೋಲೀಸರ ದಬ್ಬಾಳಿಕ, ಬಲ ಪಕ್ಷದ ಟ್ರೇಡ್ ಯೂನಿಯನ್ ನಾಯಕರ ಒಲ್ಲದ ಮನಸ್ಸಿನ ಧೋರಣೆ, ಸ್ವಪಕ್ಷ ವಂಚಕರ ವರ್ತನೆ (ನಿರುದ್ಯೋಗಿಗಳಾಗಿದ್ದ ಕೂಲಿಕಾರರಿವರು. ಮುಂಬಯಿಯಲ್ಲೇ ಇಂಥವರು 90,000 ಜನ ಇದ್ದರು)-ಇವುಗಳಿಂದಾಗಿ ಮುಷ್ಕರ ಜೂನ್ ತಿಂಗಳಲ್ಲಿ ಕುಸಿದುಬಿತ್ತು.

ಈ ಯುಗದಲ್ಲಿ ತೀವ್ರವಾಗುತ್ತ ಹೋದ ಮೂರನಯ ಮನೋಧರ್ಮವೆಂದರೆ, ಆಗಿನ್ನೂ ಶೈಶವದಲ್ಲಿದ್ದ ಕಿಸಾನ್ ಅಥವಾ ಕೃಷಿಕ ಚಳುವಳಿಗ ಗಾಂಧೀವಾದ, ಕಾಂಗ್ರೆಸ್ ಸಮಾಜವಾದ ಮತ್ತು ಕಮ್ಯೂನಿಸಂ ವರಡಿದ್ದು. 1920 ರ ಸುಮಾರಿನಲ್ಲಿ ಕೃಷಿಕ ಪಕ್ಷಗಳು ಮತ್ತು 1921-31ರ ಕುಸಿತದ ಸಮಯದಲ್ಲಿ ಸ್ವಪ್ರೇರಣೆಯಿಂದ ಮೇಲೆದ್ದ ಕೃಷಿಕ ವರ್ಗದ ಪ್ರತಿಭಟನಾ ಚಳುವಳಿಗಳು ವಿಲ್ಲಿಂಗ್‌ಡನ್ನನ ದಮನಕ್ಕೆ ಸಿಕ್ಕಿ ಅಡಗಿಹೋಗಿದ್ದುವು. ಕಲವು ಜಿಲ್ಲೆಗಳಲ್ಲಿ ಈಗ ಮತ್ತೆ ರೈತ ನಾಯಕರು ಮೇಲೇಳತೊಡಗಿದರು, ತಮ್ಮ ಚಟುವಟಿಕಗಳನ್ನು ಮತ್ತ ಪ್ರಾರಂಭ ಮಾಡಿದರು.

ಬಿಹಾರದಲ್ಲಿ ಸಹಜಾನಂದ ಸರಸ್ವತಿ ಅವರು ಒಂದು ಬಲಿಷ್ಠವಾದ ಸ್ಥಳೀಯ ಕಿಸಾನ್ ಸಭಾವನ್ನು ಸ್ಥಾಪಿಸಿದರು. ಅದು ಮೊದಲು ಉತ್ತರ ಪ್ರದೇಶದಲ್ಲಿ ಜನಪ್ರಿಯವಾಗಿದ್ದ ವಾಮ ಕೃಷಿಕ ಯೋಜನಯನ್ನು ಧ್ಯೇಯವಾಗಿಟ್ಟುಕೊಂಡಿತು. ಮುಂದ ಬಿಹಾರದ ಹಿಂದುಳಿದ ಜಿಲ್ಲಗಳಲ್ಲಿ ತುಂಬ ಪ್ರಭಾವಶಾಲಿಯಾದ ಇನ್ನೊಬ್ಬ ಕೃಷಿಕ ನಾಯಕ ಕಾರ್ಯಾನಂದ ಶರ್ಮ. ವಾಯುವ್ಯ ಗಡಿ ಪ್ರಾಂತದಲ್ಲಿ ಖುದಿಖಿದ್ಮತ್‌ಗಾರರು, ದಕ್ಷಿಣ ಮಹಾರಾಷ್ಟ್ರದಲ್ಲಿ ರಾಯಿಸ್ಟರು (Royists) ಕೃಷಿಕ ಬೇಡಿಕಗಳನ್ನು ಮುತ್ತ ಮೇಲೆತ್ತಿದರು. ಹೈದರಾಬಾದು ಬಹಳ ದೊಡ್ಡ ದೇಶೀಯ ಸಂಸ್ಥಾನ. ಅಲ್ಲಿ ದಕ್ಷಿಣ ಮಹಾರಾಷ್ಟ್ರದ ನೆರಹೊರಯ ಜಿಲ್ಲೆಗಳಲ್ಲಿದ್ದ ಬಡ ಕೃಷಿಕರು ಅನುಭವಿಸುತ್ತಿದ್ದ ಸುಲಿಗಯನ್ನು ಸ್ವಾಮಿ ರಮಾನಂದತೀರ್ಥರು ಪ್ರತಿಭಟಿಸಿದರು. ಅವರು ಮಹಾರಾಷ್ಟ್ರದ ಒಂದು ಜಿಲ್ಲಯಲ್ಲಿ ಒಂದು ಗಾಂಧೀ ಶಾಲಯಲ್ಲಿ ಜೀವನವನ್ನು ಪ್ರಾರಂಭಿಸಿ, ಮುಂಬಯಿ ನಗರದ ಟ್ರೇಡ್ ಯೂನಿಯನ್ ಚಳುವಳಿಯ ಸುಧಾರಕ ಪಕ್ಷಕ್ಕ ಸೇರಿದರು. ಆಮೇಲ ಔರಂಗಾಬಾದಿನಲ್ಲಿ ಒಂದು ಗಾಂಧೀಗ್ರಾಮ ಯೋಗಕ್ಷೇಮ ಸಂಸ್ಥಯನ್ನು ತರವರು. ಮುಂದಿನ ವರ್ಷಗಳಲ್ಲಿ ರಮಾನಂದತೀರ್ಥರ ಪ್ರಯತ್ನಗಳು ಹೈದರಾಬಾದ್ ಸ್ಟೇಟ್ ಪೀಪಲ್ಸ್ ಕಾಂಗ್ರೆಸ್ ಸಂಸ್ಥಗ ಭಾರಿ ಕೃಷಿಕ ತಳಹದಿಯನ್ನು ನಿರ್ಮಿಸಿಕೊಟ್ಟಿತು. ಈ ಸಂಸ್ಥಯೇ 1947 ರ ನಂತರ ಹೈದರಾಬಾದನ್ನು ಭಾರತ ಒಕ್ಕೂಟಕ್ಕ ಸೇರಿಸುವುದಕ್ಕಾಗಿ ನಡಸಿದ ಹೋರಾಟಕ್ಕ ದಾರಿಮಾಡಿತು. ದಕ್ಷಿಣ ಭಾರತದಲ್ಲಿ, ಉತ್ತರ ತಮಿಳು ನಾಡಿನಲ್ಲಿ ಸಂಖ್ಯಯಲ್ಲಿ ಪ್ರಧಾನವಾಗಿದ್ದ ನಿಮ್ನ ವರ್ಗಗಳಾದ ವಣ್ಣಿಯಾರರ ಸಂಘಗಳು, ದಕ್ಷಿಣ ತಮಿಳು ನಾಡಿನಲ್ಲಿ ಸಂಖ್ಯಯಲ್ಲಿ ಪ್ರಧಾನರಾಗಿದ್ದ ತೇವಾರರು, ನಾಡಾರರು, ಹಾಗಯೇ ಕೇರಳದಲ್ಲಿ ಈಳವರು ಮುನಿಸಿಪಲ್ ಆಡಳಿತ ಹಾಗೂ ಪ್ರಜಾಸತ್ತಾತ್ಮಕ ಸ್ವಯಮಾಡಳಿತದಲ್ಲಿ ಹಚ್ಚಿನ ಪಾಲು ತಮಗ ಬೇಕಂದು ಒತ್ತಾಯ

ಮಾಡತೊಡಗಿದರು. ನೈಋತ್ಯ ಬಂಗಾಳದ ಮಾನ್‌ಭೂಮ್ ಮತ್ತು ಪುರೂಲಿಯಾ ಜಿಲ್ಲೆಗಳಲ್ಲಿ, ಬಿಹಾರದ ರಾಂಚಿ ಮತ್ತು ಸಿಂಗ್‌ಭೂಮ್ ಜಿಲ್ಲೆಗಳಲ್ಲಿ ಗಾಂಧೀವಾದಿಗಳಾಗಿದ್ದ ಕಾರ್ಯಕರ್ತರು ಹಿಂದುಳಿದ ರೈತ ವರ್ಗದಲ್ಲಿ ರಾಷ್ಟ್ರೀಯತಾ ಪ್ರಜ್ಞೆಯನ್ನೂ ಗಾಂಧೀಜಿಯವರ ಆದರ್ಶಗಳನ್ನೂ ಹರಡಲು ಮೊದಲು ಮಾಡಿದ್ದರು. ಈ ವಿಚಾರಗಳು ಎಷ್ಟೋ ವೇಳೆ ಸೌಲಭ್ಯಗಳನ್ನೇ ಕಾಣದಿದ್ದ ಆದಿವಾಸಿ ಬುಡಕಟ್ಟು ಜನರಿಗೂ ತಲುಪುತ್ತಿದ್ದುವು. ಛೋಟಾನಾಗಪುರದಲ್ಲಿ ತಾನಾಭಗತ್ ಬುಡಕಟ್ಟು ಪ್ರತಿಭಟನಾ ಚಳುವಳಿಯು ಆಮೇಲೆ ಗಾಂಧೀಮಹರಾಜ್ ಪಂಥವನ್ನೇ ನಿರ್ಮಿಸಿತು. (ಅಸ್ಸಾಂ ನರಯು) ನಾಗಾಲ್ಯಾಂಡಿನಲ್ಲಿ ಬ್ರಿಟಿಷ್ ಆಳಿಕಗ ವಿರುದ್ಧವಾಗಿ ಕೆಲವರು ನಾಗಾಗಳು ಉಗ್ರರೂಪದ ದಂಗೆಯುಬ್ಬಿಸಿದರು. ಅವರ ಪೂಜಾರಿಗಳಲ್ಲಿ ಒಬ್ಬನು ಗಿಡಾಲೋ ಎಂಬ ಒಬ್ಬ ಹುಡುಗಿಯನ್ನು ಅವರ ರಾಣಿ ಎಂದು ಘೋಷಿಸಿದನು. ಅವಳಿಗೆ ದೈವೀಶಕ್ತಿಗಳಿವೆ ಎಂದು ನಂಬಲಾಗಿತ್ತು. ರಾಣಿ ಗಿಡಾಲೋ ರಾಷ್ಟ್ರೀಯತಾ ಚಳುವಳಿಗೆ ಬೆಂಬಲ ಘೋಷಿಸಿದಳು. 1930 ರ ಕೊನೆಯ ವರ್ಷಗಳಲ್ಲಿ ಒಬ್ಬ ಮುಸ್ಲಿಂ ಧಾರ್ಮಿಕ ಪಂಡಿತ ಮೌಲಾನಾ ಅಬ್ದುಲ್ ಹಮೀದ್ ಖಾನ್ ಭಷಾನಿ, ದಕ್ಷಿಣ ಅಸ್ಸಾಮಿನ ಸಿಲ್ಹಟ್ ಜಿಲ್ಲೆಯಲ್ಲಿ ಒಂದು ಪ್ರಬಲವಾದ ಕೃಷಿಕ ಚಳುವಳಿಯನ್ನು ವ್ಯವಸ್ಥೆಗೊಳಿಸಿದನು. ಆಮೇಲೆ ಅದು ಪಕ್ಕದ ಪೂರ್ವ ಬಂಗಾಳದ ಮೈಮನ್‌ಸಿಂಗ್ ಜಿಲ್ಲೆಗೂ ವ್ಯಾಪಿಸಿತು.

ಈ ಚಳುವಳಿಗಳಲ್ಲಿ ಐಕ್ಯತೆಯಿರಲಿಲ್ಲ, ಅವಲ್ಲವೂ ಕಾಂಗ್ರೆಸ್ಸಿನ ಹತೋಟಿಯಲ್ಲೂ ಇರಲಿಲ್ಲ. ಅನೇಕ ಕಿಸಾನ್ ಸಭೆಗಳನ್ನು ಕಾಂಗ್ರೆಸ್ ಸಮಾಜವಾದಿಗಳು ನಾಯಕತ್ವ ವಹಿಸಿಕೊಂಡು ನಡೆಸುತ್ತಿದ್ದರು. ಆಗೀಗ ಕೆಲವು ಕೃಷಿಕ ಚಳುವಳಿಗಳು, ಉದಾಹರಣೆಗೆ ಬಂಗಾಳದ ತಾರಕೇಶ್ವರ ಸತ್ಯಾಗ್ರಹ, ತಿರುವಾಂಕೂರು ಸಂಸ್ಥಾನದ ವಯಲಾರ್ ಸತ್ಯಾಗ್ರಹ ಇವು ಸ್ಥಳೀಯ ಕಮ್ಯೂನಿಸ್ಟ್ ನಾಯಕರಿಂದ ಸ್ಫೂರ್ತಿ ಪಡೆದು ಅವರ ನಾಯಕತ್ವದಲ್ಲೇ ನಡೆದಿದ್ದುವು. ಕಾಂಗ್ರೆಸ್ಸಿನ ಸೃಷ್ಟ್ಯಾತ್ಮಕ ಕಾರ್ಯಕರ್ತರು ಮುಂದಾಳುಗಳಾಗಿದ್ದ ಕಡೆ ರೈತರಲ್ಲಿ ಮೂಡಿದ್ದ ಜಾಗೃತಿಯಲ್ಲಿ ಒಟ್ಟು ಸುಧಾರಣಾ ಮನೋಧರ್ಮ, ರಾಷ್ಟ್ರೀಯತೆಯ ಬಣ್ಣ ಇರುತ್ತಿದ್ದುವು. ಬೇರೆ ಕಡೆಗಳಲ್ಲಿ ರೈತರಿಗೆ ಬೇಕಾಗಿದ್ದದ್ದು ಸ್ಥಳೀಯವಾದ ವರ್ಗ ಸಮಸ್ಯೆಗಳು; ಬಹಳ ಗೌಣವಾದುದೆಂಬಂತೆ, ರಾಷ್ಟ್ರೀಯತಾ ಚಳುವಳಿಯ ಭಾವನೆ. ಇಂತಹ ಕೆಲವು ಚಳುವಳಿಗಳಲ್ಲಿ ಧಾರ್ಮಿಕ ನಾಯಕತ್ವ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಹಿಂದುಳಿದ ಪ್ರದೇಶಗಳಲ್ಲಿ ರೈತವರ್ಗವು ಕೆಲವು ವೇಳೆ ತಮ್ಮ ಮೂಲ ನೈತಿಕತಾ ಭಾವನೆಗಳಿಂದ ಬೇಗ ಉದ್ವಿಗ್ನವಾಗುತ್ತದೆ. ಅವರಲ್ಲಿ ಈ ನೈತಿಕತಾ ಭಾವನೆಯನ್ನು ಪ್ರಚೋದಿಸುತ್ತಿದ್ದವರು ಸ್ಥಳೀಯ ಧಾರ್ಮಿಕ ಅಥವಾ ಜಾತೀಯ ಅಥವಾ ಆದಿವಾಸಿ ಉಪದೇಶಕರು ಮತ್ತು ಬೋಧಕರು. ಅಂತಹ ಧಾರ್ಮಿಕ ಪ್ರಚೋದನ ಸುಲಿಗೆಯ ಬಗೆಗೆ ಪರೋಕ್ಷವಾದ ಪ್ರತಿಭಟನೆಯ ಸ್ವರೂಪದ್ದು. ಅನೇಕ ರಾಷ್ಟ್ರಗಳ ಸ್ವಾತಂತ್ರ್ಯ ಹೋರಾಟಗಳಲ್ಲಿ ಕೃಷಿಕರು ಈ ಪ್ರಚೋದನೆಯನ್ನು ಹೊಂದಿದ್ದುದು ಕಂಡುಬರುತ್ತದೆ.

ಅದೇ ಸಮಯದಲ್ಲಿ, ಗ್ರಾಮೀಣ ರೈತವರ್ಗದ ಶಿಕ್ಷಣ ಮತ್ತು ಸಂಘಟನೆಗಳಲ್ಲಿ

ತೊಡಗಿದ್ದ ಅನೇಕ ರಾಜಕೀಯ ಕಾರ್ಯಕರ್ತರು, ಕಮ್ಯೂನಿಸ್ಟರು ಹಾಗೂ ಕಾಂಗ್ರೆಸ್ ಸಮಾಜವಾದಿಗಳು ಮಂಡಿಸುತ್ತಿದ್ದ ಮಾರ್ಕ್ಸಿಸ್ಟ್ ಭಾವನೆಗಳಿಂದ ಪ್ರಬಲವಾಗಿ ಪ್ರಭಾವಿತರಾಗುತ್ತಿದ್ದರು. ಜಂಟಿ ಸ್ವರೂಪದ ರಾಜಕೀಯ ಪ್ರದರ್ಶನಗಳು ಅವರಿಗೆ ಒಟ್ಟು ಸೇರಲು ಕ್ಷೇತ್ರವಾಗುತ್ತಿದ್ದುವು. ಹಾಗೆಯೇ ಭಾರೀ ಸಂಖ್ಯೆಯಲ್ಲಿ ರಾಜಕೀಯ ಸೆರೆಯಾಳುಗಳನ್ನು ಒಂದು ಕಡೆ ಬಂಧನದಲ್ಲಿಟ್ಟಾಗಲೂ ಅವರಲ್ಲಿ ಪರಸ್ಪರ ಸಂಪರ್ಕಗಳು ಏರ್ಪಡುತ್ತಿದ್ದುವು. ಉದಾಹರಣೆಗೆ ಡಿಜಲೀ ಮತ್ತು ಬಕ್ಸರ್ ಅಂತಹ ಸ್ಥಾನಬದ್ಧತಾ ಶಿಬಿರಗಳಲ್ಲಿ ಹಾಗೂ ಮಾಂಡಲೇ ಮತ್ತು ಅಂಡಮಾನ್‌ಗಳಲ್ಲಿದ್ದ ಕಾರಾಗೃಹಗಳಲ್ಲಿ ಹೀಗಾಗುತ್ತಿದ್ದಿತು. ಅನೇಕ ಗಾಂಧೀವಾದಿಗಳು ಮತ್ತು ಭಯೋತ್ಪಾದಕರು ತಮ್ಮ ಸೆರೆವಾಸದ ಅವಧಿಯಲ್ಲಿ ಅನೇಕ ಪುಸ್ತಕಗಳನ್ನು ಕರಪತ್ರಗಳನ್ನು ಓದುತ್ತಿದ್ದರು. ಅವು ಅವರನ್ನು ಅಹಿಂಸೆಯ ಪಂಥದಿಂದ ಅಥವಾ ಬಾಂಬ್ ಪಂಥ ಮತ್ತು ಗುಂಪು ವೀರ ವರ್ತನೆಗಳಿಂದ ಮಾರ್ಕ್ಸಿಸ್ಟ್ ಕಲ್ಪನೆಯ ವರ್ಗ ಹೋರಾಟದ ಕಡೆಗೆ ಪರಿವರ್ತಿಸುತ್ತಿದ್ದುವು. 1935 ರ ಮೇ ದಿನದಂದು ಅಂಡಮಾನ್ ಜೈಲಿನಲ್ಲಿದ್ದ 31 ಜನ ಸೆರೆಯಾಳುಗಳೂ, ಭಗತ್‌ಸಿಂಗನ ಉಳಿದಿದ್ದ ಮಿತ್ರರೆಲ್ಲರೂ ಸೇರಿದಂತೆ, ಒಂದಾಗಿ ಸೇರಿ ಕಮ್ಯೂನಿಸ್ಟ್ ಸಂಘಟನೆಯೊಂದನ್ನು ರೂಪಿಸಿಕೊಂಡರು. ಆಮೇಲೆ ಅಂಡಮಾನಿನಲ್ಲಿದ್ದ ಚಿತ್ತಗಾಂಗ್ ಗುಂಪಿನ ಕೆಲವು ಸದಸ್ಯರೂ ಕಮ್ಯೂನಿಸಂನತ್ತ ಪರಿವರ್ತಿತರಾದರು. ಆದರೆ, ಗಾಂಧೀಜಿಯವರ ಸರ್ವೋದಯ ಭಾವನೆಗಳ ಪ್ರವರ್ತಕರಾಗಿದ್ದ ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯತತ್ಪರರಾಗಿದ್ದ ಕಾಂಗ್ರೆಸ್ಸಿನ ರಾಜಕೀಯ ಕಾರ್ಯಕರ್ತರ ಸಂಖ್ಯೆ ಅವರದಕ್ಕಿಂತ ಬಹುವಾಗಿ ಹೆಚ್ಚಾಗಿತ್ತು.

ಈ ಸಾಮಾನ್ಯ ಪ್ರವೃತ್ತಿಗಳ ಹಿನ್ನೆಲೆಯಲ್ಲೇ ಸ್ವಾತಂತ್ರ್ಯ ಹೋರಾಟದ ನೂತನ ನಿಲುವುಗಳು ವಿಕಾಸಗೊಂಡದ್ದು.

## *ರಾಷ್ಟ್ರೀಯ ಹೋರಾಟದಲ್ಲಿ ಸಂಸ್ಥಾನಗಳ ಜನರ ಚಳುವಳಿಗಳು*

ಬ್ರಿಟಿಷ್ ಇಂಡಿಯಾವನ್ನು ನೇರವಾಗಿ ಆಳುತ್ತಿದ್ದವನು ವೈಸರಾಯಿ. ದೇಶದ ಉಳಿದ ಭಾಗದಲ್ಲಿ ಬೇಕಾದಷ್ಟು ರಾಜರು ಸಂಸ್ಥಾನಗಳಿದ್ದುವು. ಬ್ರಿಟಿಷರು ಇವುಗಳನ್ನು ದೇಶೀಯ ಸಂಸ್ಥಾನಗಳೆಂದು ಕರೆಯುತ್ತಿದ್ದರು. ಪ್ರದೇಶ ವಿಸ್ತಾರ, ಜನಸಂಖ್ಯೆಗಳಲ್ಲಿ ಅತಿ ದೊಡ್ಡದರಿಂದ ಅತಿ ಚಿಕ್ಕದವರೆಗೆ ವ್ಯತ್ಯಾಸ ಹೊಂದಿ ದೇಶಾದ್ಯಂತ ಇವು ಹರಡಿದ್ದುವು. ಮಧ್ಯೆ ಮಧ್ಯೆ ಬ್ರಿಟಿಷ್ ಇಂಡಿಯ ಪ್ರದೇಶಗಳೊಂದಿಗೆ ಅವು ಸೇರಿಕೊಂಡಿರುತ್ತಿದ್ದುವು. ಅಲ್ಲಿ ಬ್ರಿಟಿಷರು ಪರೋಕ್ಷವಾಗಿ ರಾಜರು ಅಥವಾ ನಾಯಕರ ಮೂಲಕವಾಗಿಯೇ ಆಳುತ್ತಿದ್ದರು.

ಈ ರಾಜರು ತಮ್ಮ ಸಂಸ್ಥಾನಗಳನ್ನು ತಮಗೆ ಇಚ್ಛೆ ಬಂದಂತೆ ಆಳುತ್ತಿದ್ದರು. ಅವರಲ್ಲಿ ಅನೇಕರು ಬ್ರಿಟಿಷ್ ಆಳುಗರೊಂದಿಗ ತಮ್ಮ ಸಂಬಂಧಗಳು ಸಾಕಷ್ಟು ವಿನಯಶೀಲವಾಗಿರುವಂತೆ ಎಚ್ಚರಿಕೆಯಿಂದ ನೋಡಿಕೊಂಡಿದ್ದರು. ಕೆಲವರು ಹೀಗೆ ಮಾಡಲಿಲ್ಲ. ಬ್ರಿಟಿಷ್ ಅಧಿಕಾರಿಗಳಿಗೆ ಇದರಿಂದ ಅಸಮಾಧಾನವಾಗಿತ್ತು. ಅದರ ಪರಿಣಾಮವನ್ನು ಆ ಅರಸರು ಅನುಭವಿಸುತ್ತಿದ್ದರು, ಸಂಸ್ಥಾನದ ಮೇಲ ಅವರ

ನಿಯಂತ್ರಣ ತಪ್ಪುತ್ತಿತ್ತು. ಆದರೆ ಇಲ್ಲಿ ಗಮನಿಸಬೇಕಾದ ಬಹಳ ಮುಖ್ಯವಾದ ವಿಚಾರವೆಂದರೆ, ಭಾರತದಲ್ಲಿನ ಬ್ರಿಟಿಷ್ ಆಳಿಕೆ ಮತ್ತು ಪ್ರಭಾವಗಳು ಅನೇಕ ಸಂಸ್ಥಾನಗಳಲ್ಲಿ ಪ್ರಗತಿ ವಿರೋಧೀ ನಿರಂಕುಶ ವರ್ತನೆ ಉಳಿದುಬರಲು, ಮುಂದುವರಿಯಲು ಕಾರಣವಾಗಿದ್ದುವೆಂಬುದು. ಒಟ್ಟಿನಲ್ಲಿ ಪ್ರಜಾಸತ್ತಾತ್ಮಕ ಸರಕಾರ ಇದ್ದದ್ದು ಬಹಳ ಸ್ವಲ್ಪ. ರಾಜರು ಮತ್ತು ಅವರ ಆಸ್ಥಾನಿಕ ವರ್ಗ ಜೀವಿಸುತ್ತಿದ್ದ ಆದ್ದೂರಿಯ ಸುಖ ವೈಭವಗಳಿಗೆ ಹೋಲಿಸಿದರೆ ಅಲ್ಲಿನ ಜನರ ಜೀವನ ಮಟ್ಟ ವಿಪರೀತವಾಗಿ ಕೆಳಮಟ್ಟದ್ದಾಗಿತ್ತು. ಕೆಲವು ಕಡೆಗಳಲ್ಲಂತೂ ದಬ್ಬಾಳಿಕೆ ಅಧಿಕವಾಗಿತ್ತು. ಸಾಮಾನ್ಯ ಸಂದರ್ಭಗಳಲ್ಲಿ ಒಬ್ಬ ಭ್ರಷ್ಟಾಚಾರದಲ್ಲಿ ತೊಡಗಿದ್ದ ಅಥವಾ ನಿರಂಕುಶನಾದ ಪ್ರಭುವನ್ನು ಒಳದಂಗೆಯ ಮೂಲಕವೋ ಹೊರಗಿನ ಆಕ್ರಮಣದ ಮೂಲಕವೋ ಕಿತ್ತುಹಾಕಲಾಗುತ್ತಿತ್ತು. ಭಾರತೀಯ ಸಂಸ್ಥಾನಗಳ ವಿಷಯದಲ್ಲಿ ಈ ಎರಡೂ ಅಸಾಧ್ಯವಾಗುವಂತ ಮಾಡಿದ್ದಿತು ಬ್ರಿಟಿಷ್-ಪ್ರಭುತ್ವ. ರಾಜರುಗಳು ತಮ್ಮ ಅರಸೊತ್ತಿಗೆಯಲ್ಲಿ ಭದ್ರತೆಯ ಭಾವನೆ ತಳೆದಿದ್ದರು.

ಸಂಸ್ಥಾನಗಳಲ್ಲಿದ್ದ ಈ ಅತೃಪ್ತಿಕರವೂ ಅನೇಕ ವೇಳೆ ಪರಸ್ಪರ ವಿರುದ್ಧವೂ ಆದ ಪರಿಸ್ಥಿತಿಗಳು ಜನತೆಯ ಚಡಪಡಿಸುವಿಕೆಯನ್ನು ಪ್ರತಿಬಿಂಬಿಸುವ ಸ್ಥಳೀಯ ಸಂಸ್ಥೆಗಳ ಉದಯಕ್ಕೆ ಕಾರಣವಾದುವು. ಅವುಗಳನ್ನು ಪ್ರಜಾಮಂಡಲ ಎಂದೋ ರಾಜ್ಯ ಜನತಾ ಪರಿಷತ್ತು ಎಂದೋ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ಮೈಸೂರಿನಲ್ಲಿ ಒಂದು ರಾಜ್ಯ ಕಾಂಗ್ರೆಸ್ ಇತ್ತು. ಇವೆಲ್ಲವೂ ಸ್ಥಳೀಯವಾಗಿದ್ದು ಆಯಾ ಸಂಸ್ಥಾನದ ವ್ಯವಹಾರಗಳಿಗೆ ಮಾತ್ರ ಸೀಮಿತವಾಗಿದ್ದುವು. ಮೊದಲನೆಯ ಮಹಾಯುದ್ಧಕ್ಕೆ ಈ ಸಂಸ್ಥಾನಗಳಿಗೆ ಸೇರಿದ್ದ ಸೇನಾ ತುಕಡಿಗಳನ್ನು ಕಳುಹಿಸಲಾಗಿದ್ದಿತಷ್ಟೆ. ಆ ಸೈನಿಕರು ಹಿಂದಿರುಗಿ ಬಂದಾಗ ಆಯಾ ಸಂಸ್ಥಾನಗಳಲ್ಲಿ ಪ್ರಜಾಪ್ರಭುತ್ವ ತತ್ವಗಳನ್ನು ಹರಡತೊಡಗಿದರು. ಅಲ್ಲದೆ ಅಸಹಕಾರ ಚಳುವಳಿಯೂ ಆಳವಾದ ಪ್ರಭಾವವನ್ನು ಬೀರಲು ತೊಡಗಿತ್ತು.

1920 ರಲ್ಲಿ ನಾಗಪುರದಲ್ಲಿ ಸೇರಿದ ವಾರ್ಷಿಕ ಕಾಂಗ್ರೆಸ್ ಅಧಿವೇಶನವು ಮೊದಲನೆಯ ಬಾರಿ ಮಹಾರಾಜರುಗಳಿಗೆ ಅವರು ತಕ್ಷಣವೇ ತಮ್ಮ ತಮ್ಮ ಸಂಸ್ಥಾನಗಳಲ್ಲಿ ಜವಾಬ್ದಾರಿ ಆಡಳಿತವನ್ನು ಸಂಪೂರ್ಣ ಪ್ರಮಾಣದಲ್ಲಿ ಜಾರಿಗೆ ತರಬೇಕು ಎಂದು ಕರೆ ಕೊಟ್ಟಿತು. ಆದರೆ ಕಾಂಗ್ರೆಸ್ ನಿರ್ಣಯಗಳೇ ಇದೂ ಒಂದು ನಿಯಮವನ್ನು ಹಾಕಿದ್ದುವು: ಸಂಸ್ಥಾನಗಳಲ್ಲಿನ ಜನರು (ಸಂಸ್ಥಾನಿಕ ಪ್ರಜೆಗಳು) ಕಾಂಗ್ರೆಸ್ಸಿಗೆ ವೈಯಕ್ತಿಕವಾಗಿ ಸದಸ್ಯರಾಗಬಹುದೇ ಹೊರತು ಆ ಸದಸ್ಯತ್ವವನ್ನು ಉಪಯೋಗಿಸಿಕೊಂಡು ಸಂಸ್ಥಾನದ ಆಂತರಿಕ ವ್ಯವಹಾರಗಳಲ್ಲಿ ಕೈ ಹಾಕುವಂತಿಲ್ಲ ಎಂದು ಹೇಳಿದ್ದುವು. ಹಾಗೆ ಮಾಡುವುದೇ ಆದರೂ ಅದು ಅವರವರ ಖಾಸಗೀ ನಿಲುವಿನಿಂದಲೇ ಹೊರತು ಭಾರತ ರಾಷ್ಟ್ರೀಯ ಕಾಂಗ್ರೆಸ್ ಹೆಸರಿನಲ್ಲಲ್ಲ. ಇದೇ ನಿಯಮ ಬ್ರಿಟಿಷ್ ಇಂಡಿಯದ ಕಾಂಗ್ರೆಸ್ ಸದಸ್ಯರಿಗೂ ಅನ್ವಯವಾಗುತ್ತಿತ್ತು. ಸ್ಥೂಲವಾಗಿ ಹೇಳುವುದಾದರೆ ಕಾಂಗ್ರೆಸ್ ಭಾವಿಸಿದ್ದುದು, ಪ್ರತಿಯೊಂದೂ ಸಂಸ್ಥಾನದ ರಾಜಕೀಯ ಚಟುವಟಿಕೆಗಳನ್ನು ಸ್ಥಳೀಯ ಪ್ರಜಾಮಂಡಲ ಅಥವಾ ರಾಜ್ಯ ಪ್ರಜಾ ಪರಿಷತ್ತು ವ್ಯವಸ್ಥೆಗೊಳಿಸಬೇಕು, ನಿಯಂತ್ರಿಸಬೇಕು ಎಂಬುದಾಗಿ.

ಬ್ರಿಟಿಷ್ ಸರಕಾರವು ಎಲ್ಲ ರಾಜರುಗಳಿಗೂ ಕೇವಲ ಸಲಹೆ ಸೂಚನೆ ಕೊಡುವಂತಹ ಒಂದು ಸಲಹಾ ಮಂಡಲಿಯನ್ನು ರೂಪಿಸಿತ್ತು. ಚೇಂಬರ್ ಆಫ್ ಪ್ರಿನ್ಸಸ್ (Chamber of Princes) ಅಥವಾ ನರೇಂದ್ರ ಮಂಡಲ ಎಂದು ಅದರ ಹೆಸರು. ತಮ್ಮ ನಡುವಣ ಬಾಂಧವ್ಯಗಳನ್ನು ಒಂದು ಮಟ್ಟದಲ್ಲಿರಿಸಿಕೊಳ್ಳಲು ಇದು ಸಹಾಯ ಮಾಡುತ್ತಿತ್ತು. ಈ ಮಂಡಲಿಯಲ್ಲಿಯೇ ವಿವಿಧ ರಾಜ ಮಹಾರಾಜರುಗಳ ಬೇರೆ ಬೇರೆ ಸ್ಥಾನಮಾನ ಗೌರವಗಳು ಕಾರಣವಾಗಿ ಜಗಳಗಳುಂಟಾಗಿ ಅದು ವಿಭಾಗವಾಗಿತ್ತು. ಸೈಮನ್ ಕಮೀಷನನ್ನು ನೇಮಕ ಮಾಡಿದ ವರ್ಷ, ಬ್ರಿಟಿಷ್ ಸರಕಾರವು ಹರ್‌ಕೋರ್ಟ್ ಬಟ್ಲರ್ ಇಂಡಿಯನ್ ಸ್ಟೇಟ್ಸ್ ಕಮಿಟಿ (Harcourt Butler Indian States Committee) ಎಂಬ ಸಮಿತಿಯನ್ನೂ ನೇಮಿಸಿತು. ಸಂಸ್ಥಾನಗಳಿಗೂ ಕೇಂದ್ರಕ್ಕೂ ನಡುವೆ ಉತ್ತಮತರ ಸಂಬಂಧಗಳನ್ನು ಸ್ಥಾಪಿಸಲು ತಕ್ಕ ಕ್ರಮಗಳನ್ನು ಶಿಫಾರಸುಮಾಡುವುದೇ ಅದರ ಉದ್ದೇಶ. ಸರಕಾರದ ಈ ಕ್ರಮಕ್ಕೆ ಪ್ರತಿಕ್ರಿಯಾರೂಪವಾಗಿ ಸಂಸ್ಥಾನಗಳ ಜನತೆಯಲ್ಲಿನ ರಾಷ್ಟ್ರೀಯವಾದಿಗಳೂ ಒಂದು ಹೆಜ್ಜೆ ಮುಂದಿಟ್ಟರು. ಕಾಥಿಯವಾಡದ ಬಲವಂತರಾಯ್ ಮೆಹ್ತಾ, ಮಣಿಲಾಲ್ ಕೊಠಾರಿ, ಡಕ್ಕನಿನ ಜಿ. ಆರ್. ಅಭ್ಯಂಕರ್ ಮುಂತಾದ ನಾಯಕರು 1927 ರ ಡಿಸೆಂಬರಿನಲ್ಲಿ ಒಂದು ಅಖಿಲ ಭಾರತ ಸಾಂಸ್ಥಾನಿಕ ಪ್ರಜಾಪರಿಷತ್ತಿನ ಅಧಿವೇಶನ (All-India States' Peoples Conference) ನಡೆಸಿದರು. ಇದಕ್ಕೆ ಆಧಾರವಾಗಿದ್ದದ್ದು ಪಶ್ಚಿಮ ಭಾರತದ ಪ್ರಚೋದನೆಯಾದರೂ, ಭಾರತದ ಎಲ್ಲ ಕಡೆಗಳಿಂದಲೂ ಬಂದ 700 ಜನ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದರು. ಈ ಸಮ್ಮೇಳನದ (A.I.S.P.C.) ಧ್ಯೇಯ ಇದು: "ಸಂಸ್ಥಾನದ ಜನತೆಯ ಒಟ್ಟು ಅಭಿಪ್ರಾಯವನ್ನು ತೆಗೆದುಕೊಂಡು ಅದರ ಬಲದಿಂದ ಅದರ ಪ್ರಕಾರವಾಗಿ ಆಡಳಿತದಲ್ಲಿ ಅಗತ್ಯವಾದ ಸುಧಾರಣೆಗಳನ್ನು ತರಬೇಕೆಂದು" ಸಂಸ್ಥಾನಗಳಲ್ಲಿನ ಸರಕಾರವನ್ನು ಒತ್ತಾಯಮಾಡುವುದು ಮತ್ತು ಎಲ್ಲ ಸಂಸ್ಥಾನಗಳಲ್ಲೂ ಜನತಾ ಪ್ರಾತಿನಿಧ್ಯವನ್ನೂ ಚುನಾವಣಾ ತತ್ವಗಳನ್ನೂ ಆಧರಿಸಿದ ಸ್ವಯಮಾಡಳಿತವನ್ನು ಒತ್ತಿ ಹೇಳುವುದು. ಹಾಗೆಯೇ ಅರಸನ ಖಾಸಗಿ ವರಮಾನವನ್ನೂ, ಅಲ್ಲಿನ ರಾಜ್ಯ ವರಮಾನವನ್ನೂ ಬೇರೆ ಬೇರೆಯಾಗಿ ಕರಾರುವಾಕ್ಕಾಗಿ ಹೇಳಬೇಕೆಂದೂ ಸಮ್ಮೇಳನ ಅಪೇಕ್ಷಿಸಿತು. ವೈಯಕ್ತಿಕ ವೆಚ್ಚಗಳಿಗಾಗಿ ಸಾರ್ವಜನಿಕ ಸಂಪತ್ತನ್ನು ಸುಲಿಗೆ ಮಾಡದಿರಲು ಇದು ಅಗತ್ಯವಾಗಿತ್ತು. ನ್ಯಾಯಾಂಗವು ಕಾರ್ಯಾಂಗದಿಂದ ಬೇರ ಬೇರೆಯಾಗಿ ಆಳರಸರ ನಿರಂಕುಶವರ್ತನ ತೊಡೆದುಹೋಗಬೇಕು ಎಂಬುದೂ ಆ ಸಮ್ಮೇಳನದ ಧ್ಯೇಯವಾಗಿತ್ತು. ಕೊನೆಯದಾಗಿ, ಎ.ಐ.ಎಸ್.ಪಿ.ಸಿ. ಸಮ್ಮೇಳನವು ಬ್ರಿಟಿಷ್ ಇಂಡಿಯಾಕ್ಕೂ ಭಾರತದ ಸಂಸ್ಥಾನಗಳಿಗೂ ನಡುವೆ ಸಾಂವಿಧಾನಿಕ ಸಂಬಂಧಗಳನ್ನು ಸ್ಥಾಪಿಸಬೇಕು, ಈ ಸಂಬಂಧದಲ್ಲಿ ಆಯಾ ಸಂಸ್ಥಾನದ ಜನತೆಯ ದನಿ ಪರಿಣಾಮಕಾರಕವಾದ ರೀತಿಯಲ್ಲಿ ಸೇರಿರಬೇಕು ಎಂದು ಒತ್ತಾಯಮಾಡಿತು. ಇದರಿಂದ ಇಡೀ ಭಾರತದ ಸ್ವರಾಜ್ಯ ಸಾಧನ ಕ್ಷಿಪ್ರವಾಗುತ್ತದೆ ಎಂದು ಭಾವಿಸಲಾಯಿತು.

1927 ರ ಡಿಸೆಂಬರಿನಲ್ಲಿ ಮೊದಲನೆಯ ಅಧಿವೇಶನವು ನೆರೆದಾಗಿನಿಂದ ಅಖಿಲ ಭಾರತ ಸಾಂಸ್ಥಾನಿಕ ಪ್ರಜಾ ಪರಿಷತ್ತು (A.I.S.P.C.) ಒಂದು ಖಾಯಂ ಆದ

ನಿರಂತರವಾಗಿ ಮುಂದುವರಿದ ರಾಜಕೀಯ ಸಂಸ್ಥೆಯಾಗಿ ಪರಿಣಮಿಸಿತು. ಅದು ಉದ್ದಕ್ಕೂ ಊಳಿಗಮಾನ್ಯ ಪದ್ಧತಿಗೆ ವಿರೋಧವಾಗಿಯೇ ಇತ್ತು. ಆದರೆ ಕಾಂಗ್ರೆಸ್ಸಿನಷ್ಟು ಮಟ್ಟಿಗೆ ಸಾಮ್ರಾಜ್ಯಶಾಹೀ ವಿರೋಧಿಯಲ್ಲ. ಸಂಸ್ಥಾನಗಳ ಜನತೆಗ ಸಂಬಂಧಪಟ್ಟಂತೆ ಹೇಳುವುದಾದರೆ ಊಳಿಗಮಾನ್ಯ ಪದ್ಧತಿಯೇ ನೇರವಾಗಿ ಅವರನ್ನು ಸುಲಿಗೆಮಾಡುತ್ತಿದ್ದ ಅಂಶವಾಗಿತ್ತು ಎಂಬುದರಿಂದ ಇದನ್ನು ವರ್ಣಿಸಬಹುದು.

ಎ.ಐ.ಎಸ್.ಪಿ.ಸಿ.ಯನ್ನು ಸ್ಥಾಪಿಸಿದುದರಿಂದ ಉಂಟಾದ ತತ್‌ಕ್ಷಣದ ಪರಿಣಾಮಗಳಲ್ಲಿ ಒಂದು, ಬೇರೆ ಬೇರೆ ಸಂಸ್ಥಾನಗಳ ಜನರು ನಡೆಸಿದ ಹೋರಾಟಗಳು ತಮ್ಮ ತಮ್ಮಷ್ಟಕ್ಕೇ ಬೇರೆಯಾದ ಸ್ಥಳೀಯ ಘಟನೆಗಳಾಗದೆ, ಅಖಿಲ ಭಾರತ ಮನ್ನಣೆ ವ್ಯಾಪ್ತಿಗಳನ್ನು ಪಡೆದದ್ದು. ಹೀಗಾಗಿ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಅಧ್ಯಕ್ಷ ಭಾಷಣ ಮಾಡುತ್ತಾ ಪೂರ್ಣ ಸ್ವರಾಜ್ಯವನ್ನು ಕುರಿತು ಹೇಳುವಾಗ ಜವಾಹರಲಾಲ್ ನೆಹರೂ ಅಧಿಕೃತವಾಗಿ ಹೀಗೆ ಘೋಷಿಸುವುದು ಸಾಧ್ಯವಾಯಿತು:

> "ಭಾರತೀಯ ಸಂಸ್ಥಾನಗಳು ಭಾರತದ ಇತರ ಭಾಗಗಳಿಂದ ಬೇರೆಯಾಗಿ ಬದುಕುವುದು ಸಾಧ್ಯವಿಲ್ಲ. ... ಸಂಸ್ಥಾನಗಳ ಭವಿಷ್ಯವನ್ನು ಹೀಗಿರಬೇಕೆಂದು ನಿರ್ಧರಿಸುವ ಹಕ್ಕು ಅಲ್ಲಿಯ ಜನರಿಗೆ ಮಾತ್ರ ಇದೆ."

1929 ರ ಕಾಂಗ್ರೆಸ್ ಅಧಿವೇಶನವು ಎ.ಐ.ಎಸ್.ಪಿ.ಸಿ. ಬೇಡಿಕೆಗಳನ್ನು ಅನುಮೋದಿಸುವ ನಿರ್ಣಯವನ್ನೂ ಅಂಗೀಕರಿಸಿತು.

ಸಂಸ್ಥಾನಗಳನ್ನು ಇಡೀ ಭಾರತದ ಅಂತರ್ಗತ ಅಂಗಗಳೆಂದು ಭಾವಿಸಬೇಕೆಂಬ ತಮ್ಮ ನಿಲುವಿನ ನೇರ ಪರಿಣಾಮವಾಗಿ ಎ.ಐ.ಎಸ್.ಪಿ.ಸಿ.ಯು ಮೊದಲನೆಯ ದುಂಡುಮೇಜಿನ ಪರಿಷತ್ತಿನಲ್ಲಿ ಸಂಸ್ಥಾನಗಳ ಪ್ರಜೆಗಳೂ ಪ್ರಾತಿನಿಧ್ಯ ಕಳುಹಿಸಲು ಒಪ್ಪಬೇಕು ಎಂದು ಬ್ರಿಟಿಷ್ ಸರಕಾರವನ್ನು ಕೇಳಿಕೊಂಡಿತು. ಆದರೆ ಪ್ರಾರ್ಥನೆ ಸ್ವೀಕೃತವಾಗಲಿಲ್ಲ. ಆಮೇಲೆ ಎ.ಐ.ಎಸ್.ಪಿ.ಸಿ.ಯು ಕಾಂಗ್ರೆಸ್ಸಿಗೆ ಒಂದು ಮನವಿ ಸಲ್ಲಿಸಿತು. ಒಂದು ಅಖಿಲ ಭಾರತ ಫೆಡರೇಷನ್ ರಚನೆಯಾಗಬೇಕೆಂದೂ, ಕರಾಚಿ ಕಾಂಗ್ರೆಸ್ ಅಧಿವೇಶನವು ಬ್ರಿಟಿಷ್ ಇಂಡಿಯದ ಪ್ರಜೆಗಳಿಗೆ ಸಂಬಂಧಿಸಿದಂತೆ ಹೇಳಿದ್ದ ಎಲ್ಲ ಮೂಲಭೂತ ಹಕ್ಕುಗಳೂ ಸೌಲಭ್ಯಗಳೂ ಸಂಸ್ಥಾನಗಳ ಪ್ರಜೆಗಳಿಗೂ ಹಾಗೆಯೇ ಅನ್ವಯವಾಗಬೇಕೆಂದೂ ಕೇಳಿಕೊಂಡಿತು. ಹೀಗೆ ಊಳಿಗಮಾನ್ಯ ವಿರೋಧಿ ಚಳುವಳಿಯು ಕ್ರಮೇಣ ಪ್ರಜಾಸತ್ತಾತ್ಮಕವಾಗಿ ಪರಿಣಮಿಸಿ ರಾಷ್ಟ್ರೀಯ ಚಳುವಳಿಯ ಸಾಲಿಗೆ ಬಂದು ಸೇರಿಕೊಂಡಿತು.

ಆದರೆ ಗಾಂಧೀಜಿ 1920 ರ ಮಧ್ಯಪ್ರವೇಶ ರಾಹಿತ್ಯದ ನಿಲುವನ್ನೇ ಮತ್ತೆ ಸಮರ್ಥಿಸಿದರು. ಹೊರಗಿನಿಂದ ಪ್ರಾರಂಭಿಸಿದ ಚಳುವಳಿ ಯಶಸ್ವಿಯಾಗಲಾರದು, ಸಂಸ್ಥಾನಗಳ ಜನತೆ ಆತ್ಮಾವಲಂಬನೆಯನ್ನು ಕಲಿತುಕೊಳ್ಳಬೇಕು ಎಂದು ಅವರು ವಾದಿಸಿದರು. ಆದರೂ ರಾಜರುಗಳು ತಮ್ಮ ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ನೀಡಬೇಕು ಎಂದು ಹೇಳಿದ ಕಾಂಗ್ರೆಸ್ ನಿರ್ಣಯವನ್ನು ಅವರು ಪ್ರೋತ್ಸಾಹಿಸಿದರು.

1935 ರ ಇಂಡಿಯಾ ಆಕ್ಟ್‌ನಲ್ಲಿ ಒಕ್ಕೂಟ ತತ್ವವನ್ನು ಮಾನ್ಯ ಮಾಡಲಾಗಿತ್ತು.

ಆದರೆ ಸೂಚನೆಗಳು ಎಂತಹ ಪರಿಸ್ಥಿತಿಯನ್ನು ಉಂಟುಮಾಡಿದುವೆಂದರೆ, ಸಂಸ್ಥಾನಗಳು ರಾಷ್ಟ್ರೀಯತೆಯ ಬೇಡಿಕೆಗಳಿಗೆ ತಡೆಯುಂಟುಮಾಡುವಂತಾಯಿತು. ಶಾಸನವು ಮೇಲುಮನೆಯ ಸ್ಥಾನಗಳಲ್ಲಿ ಐದನೆಯ ಎರಡರಷ್ಟನ್ನು, ಕೆಳಮನೆಯ ಸ್ಥಾನಗಳಲ್ಲಿ ಮೂರನೆಯ ಎರಡರಷ್ಟನ್ನು ಸಂಸ್ಥಾನಗಳಿಗೆ ಮೀಸಲಿಟ್ಟಿತು. ಆದರೆ ಇದು ಪ್ರಮಾಣಾನುಸಾರಿ ಪ್ರಾತಿನಿಧ್ಯದ ಅಂಗೀಕೃತ ಮಾದರಿಯ ಪ್ರಕಾರವಾಗಿರಲಿಲ್ಲ. ಅಷ್ಟೇ ಅಲ್ಲ, ಸಂಸ್ಥಾನಗಳಿಂದ ಬಂದ ಪ್ರತಿನಿಧಿಗಳು ನಿಜವಾಗಿ ಅಲ್ಲಿಯ ಜನತೆಯನ್ನು ಪ್ರತಿನಿಧಿಸುತ್ತಲೂ ಇರಲಿಲ್ಲ, ಆಳರಸರು ನಾಮಕರಣ ಮಾಡಿದ್ದ ಜನರಾಗಿದ್ದರು.

ಅನೇಕ ಸಂಸ್ಥಾನಗಳಲ್ಲಿ, ವಿಶೇಷವಾಗಿ ರಾಜಕೋಟೆ, ಜಯಪುರ, ಕಾಶ್ಮೀರ, ಹೈದರಾಬಾದು ಮತ್ತು ತಿರುವಾಂಕೂರು ಸಂಸ್ಥಾನಗಳಲ್ಲಿ ಪ್ರಜಾಸತ್ತಾತ್ಮಕ ತತ್ತ್ವಗಳನ್ನು ಜಾರಿಗೆ ತರಬೇಕೆಂದೂ ಸರಕಾರೀ ಆಡಳಿತವನ್ನು ಪುನರ್ ವ್ಯವಸ್ಥೆಗೊಳಿಸಬೇಕೆಂದೂ ಒತ್ತಾಯಮಾಡುವ ಮಹತ್ವಪೂರ್ಣವಾದ ಚಳುವಳಿಗಳು ನಡೆದುವು. ರಾಜರು ಅವುಗಳನ್ನು ಅಡಗಿಸುವುದರ ಮೂಲಕ ಒರಟು ಉತ್ತರವಿತ್ತರು. ಈ ಜನತಾ ಕ್ರಾಂತಿಗಳ ಮಧ್ಯೆ ಮತೀಯ ಭಾವಾವೇಶಗಳನ್ನು ಉರಿಯೆಬ್ಬಿಸುವುದರ ಮೂಲಕ ಅವುಗಳನ್ನು ಅಡಗಿಸಲು ಕೆಲವರು ಪ್ರಯತ್ನಿಸಿದರು. ಉದಾಹರಣೆಗೆ, ಹೈದರಾಬಾದಿನ ನಿಜಾಮನು ಜನತಾ ಚಳುವಳಿಯನ್ನು ಮುಸ್ಲಿಂ ವಿರೋಧಿ ದಂಗೆ ಎಂದು ಸಾರಲು ಯತ್ನಿಸಿದನು; ಕಾಶ್ಮೀರದ ಮಹಾರಾಜನು ಈ ಚಳುವಳಿಗಳು ಹಿಂದೂ ವಿರೋಧಿಯಾದವು ಎಂದು ಹೇಳಿದನು; ತಿರುವಾಂಕೂರಿನಲ್ಲಾದರೋ ಕ್ರಿಶ್ಚಿಯನರು ಮತ್ತು ಅವರ ಚರ್ಚು ಚಳುವಳಿಗಳ ಹಿಂದೆ ಇದ್ದಾರೆಂದೂ ಅವರ ಉದ್ದೇಶ ಹಿಂದೂ ಮಹಾರಾಜನನ್ನು ಉರುಳಿಸುವುದೇ ಆಗಿದೆ ಎಂದೂ ಹೇಳಲಾಯಿತು.

ಭಾರತ ರಾಷ್ಟ್ರೀಯ ಕಾಂಗ್ರೆಸ್ ಈಗ ಸಂಸ್ಥಾನಗಳ ಜನರಿಗೆ ಅವರ ಸ್ವಾತಂತ್ರ್ಯ ಹೋರಾಟದಲ್ಲಿ ಬೆಂಬಲಕೊಡಲು ತೊಡಗಿತ್ತು. ಪ್ರಜಾಸತ್ತಾತ್ಮಕ ಸರಕಾರ ಸ್ಥಾಪನೆ ಮತ್ತು ಜನರಿಗೆ ಪೌರ ಸ್ವಾತಂತ್ರ್ಯಗಳನ್ನು ಒತ್ತಾಯ ಮಾಡುತ್ತಿತ್ತು. ಸ್ವಾತಂತ್ರ್ಯ ಎಂದಾಗ ಅದು ಭಾರತದ ಎಲ್ಲ ಜನರ ಸ್ವಾತಂತ್ರ್ಯ ಎಂಬುದನ್ನು ಸ್ಪಷ್ಟಪಡಿಸಿತ್ತು. ಅದರಲ್ಲಿ ಸಂಸ್ಥಾನಗಳ ಜನರೂ ಸೇರಿದ್ದರು. ಅದೇ ಅಂತಿಮ ಧ್ಯೇಯವಾಗಿತ್ತು. 1938 ರ ತ್ರಿಪುರ ಕಾಂಗ್ರೆಸ್ ಅಧಿವೇಶನದಲ್ಲಿ ಸಂಸ್ಥೆಯು ಸಂಸ್ಥಾನಗಳಲ್ಲಿ ನಡೆಯುತ್ತಿರುವ ಚಳುವಳಿಗಳೊಂದಿಗೆ ಇನ್ನೂ ಹೆಚ್ಚು ನಿಕಟವಾಗಿ ಸಂಪರ್ಕ ಪಡೆದುಕೊಳ್ಳಬೇಕು ಎಂದು ನಿರ್ಧರಿಸಲಾಯಿತು. ಭಾರತದ ಸಮಸ್ತ ಜನತೆಯ ಸಮಾನ ಆಶೋತ್ತರಗಳನ್ನು ಒತ್ತಿ ಹೇಳುವುದಕ್ಕಾಗಿ ಅಖಿಲ ಭಾರತ ಸಂಸ್ಥಾನಗಳ ಪ್ರಜೆಗಳ ಸಮ್ಮೇಳನವು 1939 ರಲ್ಲಿ ಜವಾಹರಲಾಲ್ ನೆಹರೂ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿತು. ಸಂಸ್ಥಾನಗಳಲ್ಲಿ ನಡೆದ ಚಳುವಳಿಗಳು ಕೇವಲ ಸಂಸ್ಥಾನಗಳಲ್ಲಿನ ಜನರ ರಾಜಕೀಯ ಪ್ರಜ್ಞೆಯನ್ನು ಕೆರಳಿಸಿದುದಲ್ಲದೆ ಭಾರತದ ಐಕ್ಯತೆಯ ಕಲ್ಪನೆಗೆ ಹೊಸತೊಂದು ಮುಖವನ್ನು ತಂದುಕೊಡಲು ಕಾರಣವಾಯಿತು.

## ವಿಶ್ವದ ಆಗುಹೋಗುಗಳಲ್ಲಿ ಆಸಕ್ತಿ

ಭಾರತದ ರಾಷ್ಟ್ರೀಯ ಚಳುವಳಿಯೂ ವಿಶೇಷವಾಗಿ ಕಾಂಗ್ರೆಸ್ ನಾಯಕತ್ವವೂ ಹೆಚ್ಚು ಹೆಚ್ಚು ಪ್ರಜ್ಞಾಪೂರ್ವಕವಾಗಿ ಜಗತ್ತಿನ ಆಗುಹೋಗುಗಳಲ್ಲಿ ಆಸಕ್ತಿವಹಿಸತೊಡಗಿ, ಹೊರದೇಶಗಳಲ್ಲಿ ನಡೆದ ಘಟನೆಗಳು ಅವುಗಳ ಪ್ರಭಾವ ಭಾರತದ ಜನತೆಯ ಮೇಲೆ ಹೇಗಾಗಿದ ಎಂಬುದನ್ನು ಗಮನಿಸಿ ಸಂಬಂಧ ಕಲ್ಪಿಸಲು ಮೊದಲಿಟ್ಟಿದ್ದು 1930 ರ ವರ್ಷಗಳ ಉತ್ತರಾರ್ಧದಲ್ಲಿಯೇ. ಬಹಳ ಮೊದಲಿನಿಂದಲೂ ಭಾರತೀಯ ನಾಯಕರು, ಬ್ರಿಟಿಷ್ ಚಕ್ರಾಧಿಪತ್ಯವು ಅನ್ಯದೇಶಗಳಲ್ಲಿ, ವಿಶೇಷವಾಗಿ ಆಫ್ರಿಕಾ ಮತ್ತು ಏಷ್ಯಾಗಳಲ್ಲಿ, ತನ್ನ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಭಾರತೀಯ ಸೈನ್ಯ, ಭಾರತೀಯ ಸಂಪನ್ಮೂಲಗಳನ್ನು ಬಳಸುವುದನ್ನು ಆಕ್ಷೇಪಿಸುತ್ತಲೇ ಬಂದಿದ್ದರು. ಈ ಪ್ರತಿಭಟನೆಯು 1885 ರಲ್ಲಿ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಖಚಿತವಾಗಿ ರೂಪುಗೊಂಡು ಕಾಂಗ್ರೆಸ್ಸಿನ ಒಂದು ನೀತಿಯೇ ಆಗಿತ್ತು. ಇದರ ನೇರ ಫಲಿತಾಂಶವಾಗಿಯೇ ಕಾಂಗ್ರೆಸ್, ಭಾರತಕ್ಕೆ ಒಂದು ವಿದೇಶಾಂಗ ನೀತಿಯನ್ನು ರೂಪಿಸತೊಡಗಿತ್ತು. ಆ ನೀತಿ ಭಾರತದ ಆಸಕ್ತಿಗಳನ್ನು ಪೋಷಿಸುವುದಾಗಿತ್ತೇ ಹೊರತು ಬ್ರಿಟನ್ನಿನದನ್ನಲ್ಲ. ಈ ನೀತಿ ಸಾಮಾನ್ಯವಾಗಿ ಸಾಮ್ರಾಜ್ಯಶಾಹಿಯ ಎಲ್ಲ ರೂಪಗಳನ್ನೂ ವಿರೋಧಿಸುತ್ತಿತ್ತು. 1927 ರ ಫೆಬ್ರವರಿಯಲ್ಲಿ ಜವಾಹರಲಾಲ್ ನೆಹರೂ ಬ್ರುಸೆಲ್ಸ್ (Brussels) ನಲ್ಲಿ ತುಳಿತಕ್ಕೆ ಸಿಕ್ಕಿದ ಜನಾಂಗಗಳ ಸಮ್ಮೇಳನಕ್ಕೆ ಹೋದರು. ಏಷ್ಯಾ, ಆಫ್ರಿಕಾ, ಲ್ಯಾಟಿನ್ ಅಮೆರಿಕಾ ದೇಶಗಳ ರಾಜಕೀಯ ದೇಶ ಭ್ರಷ್ಟರು ಮತ್ತು ಕ್ರಾಂತಿಕಾರರು ಏರ್ಪಡಿಸಿದ್ದ ಸಮ್ಮೇಳನ ಅದು. ಅವರವರ ದೇಶಗಳ ಜನ ಸಾಮ್ರಾಜ್ಯಶಾಹಿಯು ನಡೆಸುತ್ತಿದ್ದ ಆರ್ಥಿಕ ಮತ್ತು ರಾಜಕೀಯ ಸುಲಿಗೆಗೆ ಸಿಕ್ಕಿ ಬವಣಪಡುತ್ತಿದ್ದರು. ಬ್ರುಸೆಲ್ಸ್ ಸಮ್ಮೇಳನವು ಎಲ್ಲರನ್ನೂ ಸಂಘಟಿಸಿ, ಸಾಮ್ರಾಜ್ಯಶಾಹಿಯ ವಿರುದ್ಧ ಒಂದು ಏಕೀಕೃತ ಹೋರಾಟವನ್ನು ಯೋಜಿಸಲು ಅಪೇಕ್ಷಿಸಿತು. ನೆಹರೂ ಭಾರತ ರಾಷ್ಟ್ರೀಯ ಕಾಂಗ್ರೆಸ್ಸನ್ನು ಪ್ರತಿನಿಧಿಸಿದ್ದರು. ಸಮ್ಮೇಳನವನ್ನು ಕುರಿತು ಭಾಷಣದಲ್ಲಿ ನೆಹರೂ ಹೀಗ ನುಡಿದರು:

> "ಬೇರ ಬೇರ ಅಧೀನರೂ ಅರ-ಅಧೀನರೂ ಆದ ಹಾಗೂ ತುಳಿತಕ್ಕೆ ಸಿಕ್ಕಿದ ಜನರು ಇಂದು ನಡಸುತ್ತಿರುವ ಹೋರಾಟದಲ್ಲಿ ಸಮಾನವಾಗಿರುವ ಅಂಶ ಬೇಕಾದಷ್ಟಿದ ಎಂಬುದನ್ನು ನಾವಿಂದು ಅರ್ಥಮಾಡಿಕೊಂಡಿದ್ದೇವ. ಅನೇಕ ವೇಳ ಅವರ ವಿರೋಧಿಗಳು, ಕೆಲವೊಮ್ಮ ಬೇರೆ ಬೇರ ವೇಷಾಂತರಗಳಲ್ಲಿ ಕಾಣಿಸಿಕೊಂಡರೂ ಒಬ್ಬರೇ ಆಗಿದ್ದಾರೆ. ಅವರನ್ನು ಅಧೀನರನ್ನಾಗಿಡಲು ಉಪಯೋಗಿಸುತ್ತಿರುವ ವಿಧಾನಷ್ಟೂ ಅನೇಕ ವೇಳ ಒಂದೇ ಬಗಯದಾಗಿದ."

ಈ ಬ್ರುಸೆಲ್ಸ್ ಸಮ್ಮೇಳನದಲ್ಲಿಯೇ ಸಾಮ್ರಾಜ್ಯಶಾಹಿಯ ವಿರುದ್ಧ ಒಂದು ಲೀಗ್ ಸ್ಥಾಪಿತವಾಯಿತು. ಲೀಗಿನ ಕಾರ್ಯಕಾರೀ ಸಮಿತಿಯ ಸದಸ್ಯರಲ್ಲೊಬ್ಬರಾಗಿ ನೆಹರೂ ಚುನಾಯಿತರಾದರು. ಅದೇ ವರ್ಷದ ಕೊನೆಯ ಭಾಗದಲ್ಲಿ ಮದರಾಸಿನಲ್ಲಿ ನಡದ ಕಾಂಗ್ರೆಸ್ ಅಧಿವೇಶನದಲ್ಲಿ ಬೇಕಾದಷ್ಟು ಉದ್ವೇಗಪೂರಿತವಾದ ಚರ್ಚೆಯಾದ ಮೇಲ

ಸರಕಾರಕ್ಕೆ ಖಚಿತವಾದ ಮಾತುಗಳಲ್ಲಿ ಎಚ್ಚರಿಕೆ ಕೊಡಲಾಯಿತು. ಬ್ರಿಟನ್ನು ತನ್ನ ಸಾಮ್ರಾಜ್ಯಶಾಹೀ ಉದ್ದೇಶಗಳನ್ನು ಪೋಷಿಸುವ ಅಥವಾ ರಕ್ಷಿಸಿಕೊಳ್ಳುವ ಉದ್ದೇಶದಿಂದ ನಡೆಸುವ ಯಾವುದೇ ಯುದ್ಧವನ್ನು ಅಥವಾ ಯುದ್ಧದಂತಹ ಚಟುವಟಿಕೆಯನ್ನು ಬೆಂಬಲಿಸಲು ಭಾರತವು ಸಿದ್ಧವಾಗಿಲ್ಲ ಎಂದು ಸಾರಿ ಹೇಳಲಾಯಿತು.

1930 ರ ವರ್ಷಗಳಲ್ಲಿ ಕಾಂಗ್ರೆಸ್ಸು ಜಗತ್ತಿನ ಯಾವುದೇ ಭಾಗದಲ್ಲಾಗಲಿ ಸಾಮ್ರಾಜ್ಯಶಾಹಿಯ ವಿರುದ್ಧವಾಗಿ ಹೆಚ್ಚು ಹೆಚ್ಚು ಸ್ಥಿರವಾದ ನಿಲುವನ್ನು ತಳೆಯಿತು. ಏಷ್ಯಾ ಮತ್ತು ಆಫ್ರಿಕಾಗಳಲ್ಲಿನ ದೇಶಗಳ ರಾಷ್ಟ್ರೀಯ ಚಳುವಳಿಗಳಿಗೆ ಕಾಂಗ್ರೆಸ್ ಬಹಿರಂಗವಾಗಿ ಬೆಂಬಲ ನೀಡಿತು. ಈ ವೇಳೆಗೆ ಇಟಲಿ, ಜರ್ಮನಿ ಮತ್ತು ಜಪಾನ್‌ಗಳಲ್ಲಿ ಪ್ರಜಾಪ್ರಭುತ್ವಕ್ಕೆ ಹೊಸತೊಂದು ಗಂಡಾಂತರವಾಗಿ ಫ್ಯಾಸಿಸಂ (Fascism) ರೂಪುಗೊಳ್ಳುತ್ತಿತ್ತು. ತನ್ನದೇ ಆದ ಕುರುಡು ಶ್ರದ್ಧೆಯ ವಿಧಾನದಿಂದ ಫ್ಯಾಸಿಸಂ ಕೂಡ ಸಾಮ್ರಾಜ್ಯಶಾಹಿಯ ಇನ್ನೊಂದು ರೂಪವೇ ಆಗಿತ್ತು, ಅದೂ ಕಲ್ಪನೆಯಲ್ಲಿ ಜನಾಂಗಿಕವಾಗಿತ್ತು. ಹಾಗಾಗಿ ಕಾಂಗ್ರೆಸ್ ಇಥಿಯೋಪಿಯಾ, ಸ್ಪೆಯಿನ್, ಜೆಕೊಸ್ಲೋವೇಕಿಯಾಗಳಲ್ಲಿ ನಡೆಯುತ್ತಿದ್ದ ಫ್ಯಾಸಿಸ್ಟ್ ವಿರೋಧಿ ಚಳುವಳಿಗಳಿಗೆ ತನ್ನ ಪೂರ್ಣ ಬೆಂಬಲ ನೀಡಿತು. 1937 ರಲ್ಲಿ ಜಪಾನು ಚೀನಾವನ್ನು ಮುತ್ತಿತು. ಇದು ಸಾಮ್ರಾಜ್ಯಶಾಹೀ ಆಕ್ರಮಣ ಎಂದು ಸಾರಿ ಕಾಂಗ್ರೆಸ್ "ಚೀನದ ಜನತೆಗೆ ಸಹಾನುಭೂತಿ ಸೂಚಿಸುವ ಉದ್ದೇಶದಿಂದ, ಜಪಾನೀ ವಸ್ತುಗಳ ಉಪಯೋಗವನ್ನು ಬಹಿಷ್ಕರಿಸಬೇಕು" ಎಂದು ಭಾರತದ ಜನತೆಗೆ ಕರೆ ಕೊಟ್ಟಿತು. ಮುಂದಿನ ವರ್ಷ, 1938 ರಲ್ಲಿ ಡಾ॥ ಎಂ. ಅತಲ್ ಅವರ ನಾಯಕತ್ವದಲ್ಲಿ ಡಾ॥ ಕೊಟ್ನಿಸ್ ಅವರೂ ಸೇರಿದ್ದ ಒಂದು ವೈದ್ಯಕೀಯ ನಿಯೋಗವನ್ನು ಚೀನಾ ಸೈನ್ಯದೊಂದಿಗೆ ಕೆಲಸ ಮಾಡಲು ಕಳುಹಿಸಿಕೊಡಲಾಯಿತು.

ಏಷ್ಯಾ ಮತ್ತು ಆಫ್ರಿಕಾ ಖಂಡಗಳ ದೇಶಗಳ ಭವಿಷ್ಯ ಪರಸ್ಪರ ಹೆಣೆದುಕೊಂಡಿದೆ, ಫ್ಯಾಸಿಸಂ ಮತ್ತು ಸ್ವಾತಂತ್ರ್ಯ ಸಮಾಜವಾದ ಪ್ರಜಾಸತ್ತೆ ಮುಂತಾದ ತತ್ವಗಳಿಗೂ ನಡೆಯಲಿರುವ ಹೋರಾಟ ಭಾರತದ ಮೇಲೆ ತೀವ್ರವಾದ ಪರಿಣಾಮ ಮಾಡುತ್ತದೆ ಎಂಬೀ ಅಂಶಗಳನ್ನು ಮನವರಿಕೆ ಮಾಡಿಕೊಂಡದ್ದರ ಫಲವೇ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಈ ನೀತಿಗೆ ಕಾರಣ. ಭಾರತೀಯ ನಾಯಕರಲ್ಲಿ ಬಹುಮಟ್ಟಿನ ಜನ ಈ ವಿಚಾರಗಳನ್ನು ಒಪ್ಪಿಕೊಂಡಿದ್ದರೂ, ವಿದೇಶಾಂಗ ವ್ಯವಹಾರಗಳಲ್ಲಿ ಅವರ ಪ್ರಧಾನ ವಕ್ತಾರರಾಗಿದ್ದವರು ಜವಾಹರಲಾಲ್ ನೆಹರೂ, ಈ ವಿಚಾರದಲ್ಲಿ ಅವರು ಕಾಂಗ್ರೆಸ್ಸನ್ನು ಮಾತ್ರ ಉದ್ದೇಶಿಸಿ ಮಾತನಾಡುತ್ತಿರಲಿಲ್ಲ, ಇಡೀ ದೇಶವನ್ನು ಉದ್ದೇಶಿಸಿ ಹೇಳುತ್ತಿದ್ದರು. ನಮ್ಮ ರಾಷ್ಟ್ರದ ವಿಕಾಸದಲ್ಲಿ ಜಗತ್ತಿನ ಘಟನಾವಳಿಗಳ ಮಹತ್ವ ಹೆಚ್ಚಿದೆ ಎಂಬುದನ್ನು ಮೊತ್ತಮೊದಲು ಕಂಡುಕೊಂಡ ನಾಯಕರು ಅವರು. ಈ ವಿಷಯವಾಗಿ ಪದೇ ಪದೇ ತಮ್ಮ ದೃಷ್ಟಿಕೋನಗಳನ್ನು ನಿರೂಪಿಸಿದರು. 1936 ರ ಲಕ್ನೋ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷೀಯ ಭಾಷಣದಲ್ಲಿ ಅವರು ಹೀಗೆ ನುಡಿದರು:

"ನಮ್ಮ ಹೋರಾಟ ಇನ್ನೂ ವಿಸ್ತಾರವಾದ ಸ್ವಾತಂತ್ರ್ಯ ಹೋರಾಟದ ಒಂದು

ಭಾಗ ಮಾತ್ರ. ಯಾವ ಶಕ್ತಿಗಳು ನಮ್ಮ ಹೋರಾಟಗಳಿಗೆ ಪ್ರೇರಕವಾದುವೋ ಅವೇ ಶಕ್ತಿಗಳು ವಿಶ್ವಾದ್ಯಂತ ಕೋಟ್ಯಾಂತರ ಜನರನ್ನು ಪ್ರೇರಿಸಿ ಅವರನ್ನು ಕಾರ್ಯಪ್ರವೃತ್ತರಾಗುವಂತೆ ಮಾಡುತ್ತಿವೆ. ಬಂಡವಾಳಶಾಹಿಯು ತನ್ನ ಕಷ್ಟದ ಸಮಯದಲ್ಲಿ ಫ್ಯಾಸಿಸಂ ಆಗಿ ಪರಿಣಮಿಸಿದೆ. .... ಅದು ತನ್ನ ಕೆಲವು ಮೂಲ ನೆಲೆಗಳಲ್ಲಿಯೇ, ತನ್ನ ಪ್ರತಿರೂಪವಾದ ಸಾಮ್ರಾಜ್ಯಶಾಹಿಯು ವಸಾಹತು ದೇಶಗಳಲ್ಲಿ ಇದ್ದ ರೂಪವನ್ನೇ ಪಡೆದಿದೆ. ಹೀಗೆ ಫ್ಯಾಸಿಸಂ ಮತ್ತು ಇಂಪೀರಿಯಲಿಸಂಗಳ ಮಿಶ್ರಣವನ್ನು ಅವು ವಿರೋಧಿಸುತ್ತಿವೆ."

ಸಾಮ್ರಾಜ್ಯಶಾಹೀ ಶಕ್ತಿಗಳ ನಡುವೆ ನಡೆಯುವ ಯಾವುದೇ ಯುದ್ಧದಲ್ಲೂ ಭಾರತವು ಭಾಗವಹಿಸುವುದಿಲ್ಲ ಎಂದು ನೆಹರೂ ಒತ್ತಿ ಹೇಳಿದರು. ಭಾರತವು ಪೂರ್ಣ ಹೃದಯದಿಂದ "ಜಗತ್ತಿನ ಪ್ರಗತಿಪರ ಶಕ್ತಿಗಳಿಗೆ, ಯಾರು ಸ್ವಾತಂತ್ರ್ಯಕ್ಕಾಗಿ ನಿಂತಿದ್ದಾರೋ, ಸಾಮಾಜಿಕ ಹಾಗೂ ರಾಜಕೀಯ ಬಂಧನಗಳನ್ನು ಪರಿದೆಸಯಲು ನಿಂತಿದ್ದಾರೋ ಅವರಿಗೆ" ತನ್ನ ಬೆಂಬಲವನ್ನು ನೀಡುತ್ತದೆ. ಏಕೆಂದರೆ, "ಸಾಮ್ರಾಜ್ಯಶಾಹಿ ಮತ್ತು ಫ್ಯಾಸಿಸ್ಟ್ ಪ್ರಗತಿ ವಿರೋಧಿ ನಿಲುವುಗಳ ವಿರುದ್ಧ ಅವರು ನಡೆಸುವ ಹೋರಾಟದಲ್ಲಿ, ನಮ್ಮ ಹೋರಾಟದಲ್ಲಿರುವ ಅಂಶಗಳೇ ಇವೆ ಎಂಬುದನ್ನು ನಾವು ಅರ್ಥಮಾಡಿಕೊಂಡಿದ್ದೇವೆ."

## ಮತೀಯತೆಯ ಬೆಳವಣಿಗೆ

1935 ರ ಶಾಸನವು ನೀಡಿದ ಮಿತವಾದ ಪ್ರಜಾಪ್ರಭುತ್ವ ಮತ್ತೊಮ್ಮೆ ಪ್ರಾಂತೀಯತ ಮತೀಯತೆಗಳ ಕಿಡಿಗಳನ್ನು ಕದರಿತು. ಸರಕಾರದ "ಒಡದು ಆಳು" ನೀತಿ ಅವರಡನ್ನೂ ಚೆನ್ನಾಗಿ ಪೋಷಿಸಿತು. ಹಾಗೆಯೇ ದೇಶಾದ್ಯಂತ ಇದ್ದ ಅರೆ ಊಳಿಗಮಾನ್ಯ ಜಮೀನುದಾರರು, ಭೂಮಾಲೀಕರು ಮುಂತಾದವರೂ ಅದನ್ನು ಪೋಷಿಸಿದರು. ಒಂದು ಬಗಯ ಉಗ್ರವಾದ ಧಾರ್ಮಿಕ ಮತಭ್ರಾಂತಿ ಕಾಣಿಸಿಕೊಂಡಿತು. ಮುಸ್ಲಿಮರಿಗೆಂದೇ ಮೀಸಲಾಗಿದ್ದ 58 ಸ್ಥಾನಗಳಲ್ಲಿ ಕಾಂಗ್ರೆಸ್ ಕೇವಲ 26 ಸ್ಥಾನಗಳನ್ನು ಗದ್ದಿತು. ಆ 26 ಸ್ಥಾನಗಳಲ್ಲೂ 15 ಸ್ಥಾನಗಳನ್ನು ಗೆದ್ದದ್ದು ವಾಯುವ್ಯ ಗಡಿ ಪ್ರಾಂತದಲ್ಲಿ ಖಾನ್ ಅಬ್ದುಲ್ ಗಫಾರ್‌ಖಾನ್ ಮತ್ತು ಅವರ ಖುದಿ ಖಿದ್ಮತ್‌ಗಾರರ ಬಲವಾದ ಪ್ರಭಾವದಿಂದ. ಮುಸ್ಲಿಮರಿಗೆಂದೇ ಮೀಸಲಾಗಿದ್ದ ಸ್ಥಾನಗಳಲ್ಲಿ ಮುಸ್ಲಿಂ ಲೀಗು ಹೆಚ್ಚೇನೂ ಸ್ಥಾನಗಳನ್ನು ಗಳಿಸಲಾಗಲಿಲ್ಲ. ಉದ್ದೇಶಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ ತಾನು ತಳೆದ ಸಮಗ್ರ ರಾಷ್ಟ್ರವನ್ನು ಒಳಗೊಂಡ ನಿಲುವು, ತನ್ನ ನಾಯಕತ್ವದ ಮುಂಚೂಣಿಯಲ್ಲಿಯೇ ರಾಷ್ಟ್ರೀಯ ವಾದಿಗಳಾಗಿದ್ದ ಮುಸ್ಲಿಮರು ಇದ್ದುದು-ಈ ಎರಡು ಮುಖ್ಯವಾದ ಅಂಶಗಳಿದ್ದರೂ, ಕಾಂಗ್ರೆಸ್ಸು ಮುಸ್ಲಿಂ ಜನಸಾಮಾನ್ಯರನ್ನು ಇನ್ನೂ ಒಲಿಸಿಕೊಳ್ಳಬೇಕಾದುದು ಬಾಕಿಯಿತ್ತು. ಆದ್ದರಿಂದ ಪಕ್ಷವು ತಾನು ಗದ್ದ ಸ್ಥಾನಗಳನ್ನು ಹಿಡಿದು ಭದ್ರಪಡಿಸಿಕೊಳ್ಳುತ್ತಾ, ಜನತಾ ಸಂಪರ್ಕ ಯೋಜನೆಯನ್ನು ವ್ಯವಸ್ಥಗೊಳಿಸುವ ಅಗತ್ಯದ ಬಗಗ ತೀವ್ರ ಗಮನ ಹರಿಸುತ್ತಾ ಮುನ್ನಡೆಯಿತು.

ಮುಸ್ಲಿಂ ಲೀಗು ಕಾಂಗ್ರೆಸ್ಸಿನ ಮೇಲೆ ಭಾರೀ ಆರೋಪ ಹೊರಿಸಿ ಬಹಳ ಕಟುವಾದ

ಆಕ್ರಮಣ ಮಾಡಿತು. ಮುಸ್ಲಿಂ ಅಲ್ಪಸಂಖ್ಯಾತರ ಪ್ರತ್ಯೇಕತೆ ಮತ್ತು ಅವರ ಸಮಗ್ರತೆಗಳನ್ನು ವಂಚಿಸುತ್ತಿದ್ದಾರೆಂಬುದೇ ಕಾಂಗ್ರೆಸ್ಸಿನ ಮೇಲೆ ಅದು ಹೊರಿಸಿದ ದೂರು. ವಾಸ್ತವವಾಗಿ ಹಿಂದೂಗಳೂ ಮುಸ್ಲಿಮರೂ ಬೇರೆ ಬೇರೆ ರಾಷ್ಟ್ರಗಳು ಎಂಬ ತತ್ವವನ್ನು ಮುಸ್ಲಿಂ ಲೀಗ್ ಸಾರತೊಡಗಿತು.

ಹಿಂದೂಗಳಲ್ಲಿಯೂ ತೋರಿಕೆಗೆ ಪ್ರಜಾಸತ್ತಾತ್ಮಕ ಘೋಷಣೆಗಳನ್ನು ಒಳಗೊಂಡ ಆದರೆ ಜಾತಿ ಆಧಾರವಾಗಿದ್ದ ಹಲವು ಸಂಘಗಳು ಈಗ ತಲೆಯೆತ್ತಿದುವು. ಇವುಗಳಲ್ಲಿ ಮುಖ್ಯವಾದವು ಇವು: ಮುಂಬಯಿಯಲ್ಲಿ ಡಾ॥ ಅಂಬೇಡ್ಕರರ ಇಂಡಿಪೆಂಡೆಂಟ್ ವರ್ಕರ್ಸ್ ಪಾರ್ಟಿ ಮುಖ್ಯವಾಗಿ ನಿಮ್ನವರ್ಗದ ಕಾರ್ಮಿಕರಿಂದ ಕೂಡಿತ್ತು, ಎನ್.ಟಿ.ಯು.ಎಫ್. ಮುಖಂಡರ ಬೆಂಬಲ ಇದಕ್ಕಿತ್ತು. ಮದರಾಸಿನಲ್ಲಿ ಜಸ್ಟಿಸ್ ಪಾರ್ಟಿ ಮತ್ತೆ ಮೇಲೆದ್ದಿತ್ತು. ಬ್ರಾಹ್ಮಣರಿಗೆ ಪ್ರಾಧಾನ್ಯವಿದೆಯೆಂದು ಆರೋಪಿಸಲಾದ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಇದು ನಿಂತಿತ್ತು. ಇಂಥವೇ ಸಂಸ್ಥೆಗಳು ದೇಶದ ಬೇರೆ ಬೇರೆ ಕಡೆಗಳಲ್ಲಿಯೂ ತಲೆಯೆತ್ತಿದ್ದುವು. ಆಗಲೇ ಹಿಂದೂ ಮಹಾಸಭಾ ಅಸ್ತಿತ್ವಕ್ಕೆ ಬಂದಿತ್ತು. 1935 ರ ಮೊದಲಲ್ಲಿಯೇ ರಾಷ್ಟ್ರೀಯ ಸ್ವಯಂಸೇವಕ ಸಂಘ ಹುಟ್ಟಿಕೊಂಡಿತು. ಹಿಂದೂ ಮತೀಯವಾದಿಗಳು ಹಿಂದೂ-ಮುಸ್ಲಿಂ ಸಂಬಂಧಗಳನ್ನು ಬರುವ ವರ್ಷಗಳಲ್ಲಿ ಹೆಚ್ಚು ಹೆಚ್ಚು ಕಹಿಗೊಳಿಸಿದರು. ಮುಸ್ಲಿಮರು ಹೇಳುತ್ತಿದ್ದ ಎರಡು ರಾಷ್ಟ್ರಗಳೆಂಬ ಮತೀಯ ತತ್ವಕ್ಕೆ ಎದುರಾಗಿ ಅವರು ಅಷ್ಟೇ ಮಟ್ಟಿಗೆ ಅವೈಜ್ಞಾನಿಕವಾಗಿದ್ದ ಇನ್ನೊಂದು ತತ್ವವನ್ನು ಎತ್ತಿಹಿಡಿದರು. ಭಾರತ ರಾಷ್ಟ್ರ ಹಿಂದೂಗಳದ್ದು, ಮಿಕ್ಕ ಧರ್ಮಗಳಿಗೆ ಸೇರಿದವರೆಲ್ಲ "ವಿದೇಶೀಯರು" ಎಂಬುದೇ ಅದು. ಈ ಎರಡೂ ಮತೀಯ ತತ್ವಗಳ ಪರಿಣಾಮ, ಭಾರತದ ಜನತೆಯನ್ನು ಒಡೆದು ವಿದೇಶೀ ಆಳಿಕೆಯ ವಿರುದ್ಧ ಹೋರಾಟವನ್ನು ದುರ್ಬಲಗೊಳಿಸುವುದು. ಅಲ್ಲದೆ ಈ ಹಿಂದೂ ಮುಸ್ಲಿಂ ಮತೀಯ ಸಂಘಗಳು ತಮ್ಮ ಅನುಯಾಯಿಗಳಿಗೆ ಕಾಂಗ್ರೆಸ್ಸಿನ ವಿರುದ್ಧವಾಗಿ ಹೋರಾಡುವಂತೆ ಕಲಿಸುತ್ತಿದ್ದುವು. ವಿದೇಶೀ ಸಾಮ್ರಾಜ್ಯಶಾಹಿವಾದಿಗಳ ಬಗೆಗೆ ಒಂದು ಬಗೆಯ ವಿಧೇಯತೆ ಮತ್ತು ಸಹಕಾರದ ಮನೋಭಾವವನ್ನು ಈ ಜನ ತಳೆದಿದ್ದರು. ಬ್ರಿಟಿಷ್ ಸರಕಾರವು ಕಾಂಗ್ರಸ್ ಸಂಸ್ಥೆಯ, ಇತರ ರಾಷ್ಟ್ರೀಯ ಸಂಸ್ಥೆಗಳ ಮೇಲೆ ಆಕ್ರಮಣ ಮಾಡಿದಾಗಲೆಲ್ಲ ಈ ಎರಡೂ ಮತೀಯ ಪಂಗಡಗಳು ಅಧಿಕಾರಿಗಳೊಂದಿಗೆ ಸಹಕರಿಸುತ್ತಿದ್ದರು.

1939ರ ನಂತರ ಮತೀಯ ಬಿಕ್ಕಟ್ಟು ಹೆಚ್ಚಾಯಿತು. ಅಧಿಕವಾದ ಈ ಮತೀಯ ಬಿಕ್ಕಟ್ಟಿನ ಮೂಲ ಕಾಂಗ್ರೆಸ್ ಹಟವಾದಿತ್ವವಲ್ಲ; ಬ್ರಿಟಿಷ್ ಸಾಮ್ರಾಜ್ಯಶಾಹೀ ನೀತಿಗೂ ಭಾರತದ ಮತೀಯತೆ ಮತ್ತು ಪ್ರಾಂತೀಯತೆಗಳಿಗೂ ನಡುವೆ ಇದ್ದಂತಹ ಕ್ರಿಯೆ ಪ್ರತಿಕ್ರಿಯೆಗಳು. ಪ್ರಾತಿನಿಧಿಕ ಸರಕಾರದ ಪ್ರಮಾಣವನ್ನು ಹೆಚ್ಚಿಸುತ್ತೇವ ಎಂದು ತೋರಿಸುಕೊಳ್ಳುತ್ತಾ, ನಗರಗಳ ಆಸ್ತಿಪಾಸ್ತಿಗಳಿದ್ದ ಜನರ ಅಥವಾ ಶ್ರೀಮಂತ ಕೃಷಿಕ ವರ್ಗದವರ ಅಧಿಕಾರ ದಾಹವನ್ನು ಪ್ರೋತ್ಸಾಹಿಸಲು ಹಾಗೂ ಜನತೆಯ ಕೆಲವು ವರ್ಗಗಳು ಇನ್ನೂ ಅನುಸರಿಸುತ್ತಲೇ ಬಂದಿದ್ದ ಪರಂಪರಾಗತ, ಪ್ರಜಾಪ್ರಭುತ್ವ ವಿರೋಧೀ ಸಂಪ್ರದಾಯಗಳನ್ನು ಪ್ರೋತ್ಸಾಹಿಸಲು ಪ್ರಯತ್ನಿಸುತ್ತಿತ್ತು ಬ್ರಿಟಿಷ್ ನೀತಿ.

ಈ ವರ್ಗಗಳೂ ಹಿಂದೂ ಮತ್ತು ಮುಸ್ಲಿಂ ಪ್ರಾಂತೀಯ ಹಾಗೂ ಜಾತೀಯ ಪಕ್ಷ ಸಂಗಡಗಳಿಂದ ನೆರವು ಪಡೆಯಲು ಪ್ರಯತ್ನಿಸುತ್ತಿದ್ದರು. ಅವರು ಸರಕಾರದ 'ಒಡೆದು ಆಳು' ನೀತಿಯ ತಾಳಕ್ಕೆ ತಕ್ಕಂತೆ ಕುಣಿಯುತ್ತಿದ್ದರು.

ಕಾಂಗ್ರೆಸ್ ಮಂತ್ರಿ ಮಂಡಲಗಳು ಅಧಿಕಾರಕ್ಕೆ ಬಂದ ಪ್ರಾಂತಗಳಲ್ಲಿ ಅನೇಕ ಸುಧಾರಣೆಗಳು ಆಡಳಿತದಲ್ಲಿ ಜಾರಿಗೆ ಬಂದುವು. ಕಾರ್ಮಿಕ ವಿವಾದಗಳ ಪರಿಹಾರ, ಹರಿಜನರ ಪರಿಸ್ಥಿತಿಗಳ ಸುಧಾರಣೆ, ಪ್ರಾಥಮಿಕ ಶಿಕ್ಷಣ ಪ್ರಸಾರ, ನಗರಗಳ ಕೈಗಾರಿಕಾ ಪ್ರದೇಶಗಳ ಸಮೀಪದಲ್ಲಿ ಅಗ್ಗದ ಮಾದಕ ಪಾನೀಯಗಳು ದೊರಕುವ ಸಮಸ್ಯೆಯನ್ನು ಎದುರಿಸುವಿಕೆ ಮುಂತಾದುವು ಅಂತಹ ಕೆಲವು. ಮದರಾಸಿನಲ್ಲಿ ಕಾಂಗ್ರೆಸ್ ಮಂತ್ರಿ ಮಂಡಲವು ಮದ್ಯಪಾನ ನಿರೋಧವನ್ನು ಜಾರಿಗೆ ತಂದಿತು. ಪಾನ ನಿರೋಧವು ಮುಂದಿನ ಕಾಂಗ್ರೆಸ್ ಕಾರ್ಯಕ್ರಮಗಳಲ್ಲಿ ಮುಖ್ಯವಾದ ಒಂದು ಗುರಿಯಾಗುವುದಕ್ಕೆ ಎಡೆಮಾಡಿತು. ಕಾರ್ಮಿಕ ವಿವಾದಗಳಲ್ಲಿ ಪರಿಹಾರಕ್ಕಾಗಿ ತ್ರಿಪಕ್ಷ ಪರಿಹಾರ ಸೂತ್ರವೊಂದನ್ನು ಕೂಡ ಮದರಾಸು ಸರಕಾರ ಜಾರಿಗೆ ತಂದಿತು. ಇದು ಟ್ರೇಡ್ ಯೂನಿಯನ್, ಮಾಲೀಕರು ಇಬ್ಬರಿಗೂ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿಕೊಳ್ಳಲು ಒಂದು ರಾಜೀ ವ್ಯವಸ್ಥೆಯನ್ನು ಒದಗಿಸಿತು. ಮುಂದೆ ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿಯೂ ಕಾರ್ಮಿಕ ಸಂಬಂಧಗಳಲ್ಲಿ ಈ ವ್ಯವಸ್ಥೆ ತುಂಬ ಮುಖ್ಯವಾದ ಒಂದು ಅಂಶವಾಯಿತು. ಜಂಟಿ ಒಪ್ಪಂದ ವಿಧಾನದಿಂದ ಕಾರ್ಮಿಕ ವಿವಾದಗಳನ್ನು ಪರಿಹರಿಸುವ ಒಂದು ಉದಾರ ಪ್ರಯತ್ನವನ್ನು ಅದು ಪ್ರತಿನಿಧಿಸಿತು. ಅದು ಟ್ರೇಡ್ ಯೂನಿಯನ್ನುಗಳ ರಾಜಕೀಯ ಸಾಮರ್ಥ್ಯವನ್ನು ಹಚ್ಚಿಸಿತು. ಆದರೆ ಔದ್ಯೋಗಿಕ ಸಾಮರಸ್ಯದ ಮನವಿಗಳಿಗೆ ಅವು ಹೆಚ್ಚು ಹೆಚ್ಚಾಗಿ ಮನವೊಲಿಯುವಂತೆಯೂ ಮಾಡಿತು. ವಾಮಪಕ್ಷದ ಟ್ರೇಡ್ ಯೂನಿಯನ್ನುಗಳು, ಅದು ಕಾರ್ಮಿಕರು ಮತ್ತು ಬಂಡವಾಳಗಾರರ ನಡುವ ವರ್ಗ ಸಹಕಾರಕ್ಕೆ ದಾರಿ ಮಾಡುತ್ತಿದೆ; ಆದರಿಂದಾಗಿ ಬಂಡವಾಳಶಾಹಿ ಮುಂದುವರಿಯುವಂತೆ ಮಾಡುತ್ತಿದೆ ಎಂದು ಆಕ್ಷೇಪಿಸಿದುವು. ಒಟ್ಟಿನಲ್ಲಿ ಹೇಳುವುದಾದರೆ, 1937 ರಿಂದ 1939 ರವರೆಗ ಕಾಂಗ್ರೆಸ್ ಮಂತ್ರಿ ಮಂಡಲಗಳು ಕೈಗೊಂಡ ಇತ್ಯಾತ್ಮಕವಾದ ಕಾರ್ಯಕ್ರಮಗಳು, ಬಲಪಕ್ಷದ ಮತ್ತು ಮಿತಗಾಮಿಗಳಾಗಿದ್ದ ರಾಷ್ಟ್ರೀಯ ನಾಯಕರು ಗಾಂಧೀಜಿಯವರ ವಿಚಾರಗಳನ್ನು ಕಾರ್ಯಗತಗೊಳಿಸಲು ಮಾಡಿದ ಪ್ರಯತ್ನಗಳನ್ನು ನಿರೂಪಿಸುತ್ತವೆ. ಸ್ವಾತಂತ್ರ್ಯ ಬಂದನಂತರ ಮೊದಲ ವರ್ಷಗಳಲ್ಲಿ ಭಾರತ ಸರಕಾರದ ಅಧಿಕೃತ ನಿಲುವಾಗಿ ಈ ಕಾರ್ಯಕ್ರಮಗಳು ಪರಿಣಮಿಸಿದುವು.

1935 ರಲ್ಲಿ ಪಾಕಿಸ್ತಾನದ ಬೇಡಿಕೆಯಿದ್ದದ್ದು ವಾಯುವ್ಯ ಗಡಿ ಪ್ರಾಂತ, ಪಂಜಾಬ್, ಸಿಂಧ್, ಬಂಗಾಳ ಮತ್ತು ಅಸ್ಸಾಂ ಪ್ರಾಂತಗಳನ್ನು ಒಳಗೊಂಡಂತೆ. ಆದರೆ ಚುನಾವಣೆಗಳಲ್ಲಿ ಮುಸ್ಲಿಂ ಲೀಗು ಈ ಪ್ರಾಂತಗಳಲ್ಲಿ ಸ್ವಲ್ಪವೂ ಉತ್ತಮ ಸ್ಥಿತಿ ಗಳಿಸಿರಲಿಲ್ಲ. ಮುಸ್ಲಿಮರು ಅಲ್ಪಸಂಖ್ಯಾತರಾಗಿದ್ದ ಉತ್ತರ ಪ್ರದೇಶ ಮೊದಲಾದ ಕಡೆ ಮಾತ್ರ ಪರಿಸ್ಥಿತಿ ಉತ್ತಮವಾಗಿತ್ತು. 1937 ರ ಚುನಾವಣೆಗಳ ಫಲಿತಾಂಶಗಳನ್ನು ಕಾಂಗ್ರೆಸ್ಸು ಸರಿಯಾದ ರೀತಿಯಲ್ಲಿ ವಿವೇಚನೆ ಮಾಡಿದ್ದಿದ್ದರ ಈ ಅಂಶ ಹೊರಪಡುತ್ತಿತ್ತು. ಅನೇಕ ಮುಸ್ಲಿಮರು ಅದಕ್ಕೆ ಮತ ನೀಡದೆ ಇದ್ದುದಕ್ಕೆ ಕಾರಣ

ಪ್ರಾಂತೀಯ ಧಾರ್ಮಿಕ ಅಲ್ಪಸಂಖ್ಯಾತರ ಭಯ. ಧಾರ್ಮಿಕವಾಗಿ ಬಹುಸಂಖ್ಯಾತರಾದ ಹಿಂದೂಗಳು ಪ್ರಾಂತೀಯ ಸರಕಾರಗಳಲ್ಲಿ ತಮ್ಮ ಮೇಲುಗೈಯನ್ನು ತಮ್ಮ ವಿನಾಶಕ್ಕಾಗಿ ಉಪಯೋಗಿಸಿಕೊಳ್ಳಬಹುದು ಎಂಬ ಭಯ. ಇಂತಹ ಹೆದರಿಕೆ ಯಾವುದೇ ದೇಶದಲ್ಲಿ ಅಲ್ಪಸಂಖ್ಯಾತರಾಗಿರುವವರಿಗೆ ಬಂದೇ ಬರುತ್ತದೆ, ಅದು ಸಹಜ ಎಂಬುದನ್ನು ಕಾಂಗ್ರೆಸ್ ಅರ್ಥಮಾಡಿಕೊಳ್ಳಲಿಲ್ಲ. ಕಾಂಗ್ರೆಸ್ಸಿನ ಒಳಗೂ ಹೊರಗೂ ವಿಶೇಷವಾಗಿ ಎದ್ದ ಮತೀಯ ಆಲೋಚನೆಗಳು ಅಲ್ಪಸಂಖ್ಯಾತರ ಈ ಭೀತಿಗಳನ್ನು ಹೆಚ್ಚು ಮಾಡುತ್ತಿದ್ದುವು. ಅನೇಕ ಕಾಂಗ್ರೆಸ್ ನಾಯಕರು ಆಲೋಚಿಸಿದರು: ತಮ್ಮೊಳಗೇ ಮತೀಯ ಭಾವನೆಗಳ ವಿರುದ್ಧ ದೃಢ ಹೋರಾಟ ನಡೆಸುವುದು, ಸಾಮ್ರಾಜ್ಯಶಾಹಿ ವಿರೋಧೀ ಸ್ವತಂತ್ರ ಮುಸ್ಲಿಮರಿಗೆ ತಿಳುವಳಿಕೆ ಕೊಟ್ಟು ಅವರನ್ನು ಒಲಿಸಿಕೊಳ್ಳುವುದು, ಅವರ ಬಗೆಗೆ ಸ್ನೇಹಪೂರ್ವಕವಾದ, ಅರ್ಥಮಾಡಿಕೊಂಡ ನಡವಳಿಕೆ ಇಟ್ಟುಕೊಳ್ಳುವುದು, ಎಲ್ಲ ಬಗೆಯ ಊಳಿಗಮಾನ್ಯ ಅಂಶಗಳ ವಿರುದ್ಧವಾಗಿ ಕೃಷಿಕವರ್ಗವನ್ನು ಸಂಘಟಿಸುವುದು- ಇವೇ ಆಗಿನ ಪರಿಸ್ಥಿತಿಯಲ್ಲಿ ತಕ್ಕ ಪರಿಹಾರ ಎಂಬುದಾಗಿ.

1937 ರ ಮಾರ್ಚಿಯಲ್ಲಿ ಮುಸ್ಲಿಮರೊಂದಿಗೆ ಭಾರೀ ಪ್ರಮಾಣದ ಸಂಪರ್ಕ ಉಂಟು ಮಾಡುವ ಸಲುವಾಗಿ ಒಂದು ಕಾಂಗ್ರೆಸ್ ವಿಭಾಗವನ್ನು ರೂಪಿಸಿದರು. ಮುಸ್ಲಿಮರಿಗೆ ಸಾಮ್ರಾಜ್ಯಶಾಹೀ ವಿರೋಧೀ ಹೋರಾಟವನ್ನು ತಿಳಿಯಪಡಿಸುವುದು ಅದರ ಧ್ಯೇಯ. ಇದರಿಂದ ಮಜ್ಲಿ-ಇ-ಅಹ್ರಾರ್ (Majhs-ı-Ahrar) ಮತ್ತು ಜಮೀತ್ ಉಲಾಮಾ-ಇ-ಹಿಂದ್ (Jamıt Ulama-i-Hınd) ಮುಂತಾದ ಉತ್ತರ ಭಾರತೀಯ ಮುಸ್ಲಿಂ ಧಾರ್ಮಿಕ ಪಂಗಡಗಳು ಕಾಂಗ್ರೆಸ್ಸಿನೊಂದಿಗೆ ಕೂಡಿಕೊಂಡುವು. ಆದರೆ ಈ ವ್ಯಾಪಕ ಸಂಪರ್ಕ ಕಾರ್ಯಕ್ರಮ ಪೂರ್ತಿಯಾಗಿ ಯಶಸ್ಸು ಗಳಿಸಲಿಲ್ಲ. ಏಕೆಂದರೆ ಕಾಂಗ್ರೆಸ್ ನಾಯಕರು ಸುಲಿಗೆಗೊಳಗಾದ ಜನಸಮಸ್ತರನ್ನೂ ಒಗ್ಗೂಡಿಸಲು ಸಮರ್ಥರಾಗಲಿಲ್ಲ.

ಆದರೆ ಈ ಬೃಹತ್ ಸಂಪರ್ಕ ಯೋಜನೆಯು ಪಶ್ಚಿಮ ಉತ್ತರ ಪ್ರದೇಶದ ಶ್ರೀಮಂತ ಭೂಮಾಲೀಕ ಲಿಯಾಖತ್ ಆಲಿಖಾನ್ ಮುಂತಾದ ಲೀಗಿನ ಮುಖ್ಯ ವ್ಯಕ್ತಿಗಳ ಭಯವನ್ನು ಹೆಚ್ಚುಮಾಡಿತು. ಆತನು ಈಗ ಸ್ಪಷ್ಟವಾಗಿ ಹಿಂದೂ ವಿರೋಧಿ ನಿಲುವನ್ನು ತಳೆದು ಜಿನ್ನಾಗೆ ಬೆಂಬಲವಾದನು. ಕಾಂಗ್ರೆಸ್ಸು ಅಧಿಕಾಧಿಕವಾಗಿ ಕೈಗೊಳ್ಳುತ್ತಿದ್ದ ತೀವ್ರಗಾಮಿ ರೀತಿಯ ಕೃಷಿಕ ಯೋಜನೆಗಳು ತಮ್ಮ ಅರೆ ಊಳಿಗಮಾನ್ಯ ಸ್ಥಾನಮಾನವನ್ನು ಬುಡಮೇಲು ಮಾಡುತ್ತವೆಂಬುದಾಗಿ ಅವರು ಈಗ ಹೆದರಿದರು. ಮುಸ್ಲಿಮರಲ್ಲಿ ಸಾಮ್ರಾಜ್ಯಶಾಹೀ ವಿರೋಧೀ ಭಾವನೆಗಳು ಬೆಳೆಯುವುದರಿಂದ ಮತೀಯ ನಾಯಕರ ನಾಯಕತ್ವಕ್ಕೆ ಧಕ್ಕೆಯುಂಟಾಗುವುದೆಂಬುದೂ ಅವರ ಹೆದರಿಕೆಯಾಗಿತ್ತು.

ಆದರೆ ಮತೀಯ ಭಾವನೆಯುಳ್ಳ ವ್ಯಕ್ತಿಗಳು ಇವುಗಳನ್ನು ಕಾಂಗ್ರೆಸನ್ನು ಕುರಿತ ತಮ್ಮ ವಿರೋಧಕ್ಕೆ ಕಾರಣವಾಗಿ ಕೊಡುವುದು ಸಾಧ್ಯವಿರಲಿಲ್ಲ. ಬದಲಾಗಿ, ಕಾಂಗ್ರೆಸ್ಸು ಬಂಗಾಳದಲ್ಲಿ ಪರಾಭವಗೊಂಡುದನ್ನು ಉಪಯೋಗಿಸಿಕೊಂಡರು. ಕಾಂಗ್ರೆಸ್ ಬಲಪಕ್ಷವು ಭೂಮಾಲೀಕರ ಪರವಾದ ನೀತಿಯನ್ನು ಅನುಸರಿಸುತ್ತಿದೆ ಎಂದು

ಪಳಿದರು. ಉತ್ತರ ಪ್ರದೇಶದಲ್ಲಿ ಕಾಂಗ್ರೆಸ್ಸಿನ ಬೃಹತ್ ಸಂಪರ್ಕ ನೀತಿ ಸೂತ್ರದ್ವನ್ನು ದುರುಪಯೋಗಪಡಿಸಿಕೊಂಡರು. ಅದೇ ಸಮಯದಲ್ಲಿ ಮುಸ್ಲಿಂ ಮೇಲು ವರ್ಗವನ್ನು ದುರ್ಬಲಗೊಳಿಸಿತು ಎಂಬುದಾಗಿ ಕಾಂಗ್ರೆಸ್ಸನ್ನು ಆಪಾದಿಸಿದರು. 1937 ರಲ್ಲಿ ಲೀಗಿನ ಲಕ್ನೋ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡುತ್ತಾ ಜಿನ್ನಾ ಅವರು, ಕಾಂಗ್ರೆಸ್ ಮಂತ್ರಿ ಮಂಡಲಗಳು ಮುಸ್ಲಿಮರ ಬಗಗ ಅನ್ಯಾಯಯುತವಾಗಿ ನಡದುಕೊಳ್ಳುತ್ತಿವೆ, ಅವರನ್ನು ದಮನಮಾಡುತ್ತಿವ ಎಂಬುದಾಗಿ ಘೋಷಿಸಿದರು.

ಮುಸ್ಲಿಂ ಲೀಗ್ ರಾಜಕೀಯ ಅಭಿವ್ಯಕ್ತಿಯ ಚುರುಕಾದ ಕಾರ್ಯಕ್ರಮವನ್ನು ಪ್ರಾರಂಭಿಸಿತು. 1938 ರ ವೇಳಗ ಲೀಗಿನ 170 ಹೊಸ ಶಾಖಗಳನ್ನು ಸ್ಥಾಪಿಸಲಾಗಿತ್ತು. ಅವುಗಳಲ್ಲಿ 90 ಉತ್ತರ ಪ್ರದೇಶದಲ್ಲಿ ಮತ್ತು 40 ಪಂಜಾಬಿನಲ್ಲಿದ್ದುವು. ಉತ್ತರ ಪ್ರದೇಶವೊಂದರಲ್ಲೇ ಒಂದು ಲಕ್ಷ ಜನ ಸದಸ್ಯರನ್ನು ಸೇರಿಸಿಕೊಳ್ಳಲಾಯಿತು. ಬಾಂಗ್ಲಾ ದೇಶದ ಇತಿಹಾಸಕಾರರಲ್ಲೊಬ್ಬರಾದ ಪ್ರೊ. ಎ.ಎಫ್. ಸಲಾಹುದ್ದೀನ್ ಅಹಮದ್ ಅವರು ಮುಸ್ಲಿಂ ಲೀಗ್ ರಾಜಕೀಯದ ಈ ಹಂತವನ್ನು ಬಹಳ ನಿಷ್ಪಕ್ಷವಾಗಿ ಬಲೆ ಕಟ್ಟಿದ್ದಾರ. ಅದರಲ್ಲೂ 1940 ರಲ್ಲಿ ಅದು ಪಾಕೀಸ್ತಾನದ ಬೇಡಿಕೆಯನ್ನು ಮುಂದೂಡ್ಡಿದ ಸಂದರ್ಭವನ್ನು ಇಟ್ಟುಕೊಂಡು ವಿವೇಚಿಸಿದ್ದಾರೆ. 1972 ರ ಏಪ್ರಿಲ್‌ನಲ್ಲಿ ಬಾಂಗ್ಲಾ ದೇಶವನ್ನು ಕುರಿತು ವಿಶ್ವವಿದ್ಯಾನಿಲಯ ಧನ ಆಯೋಗವು (U.G.C.) ಒಂದು ವಿಚಾರ ಸಂಕಿರಣ ನಡೆಸಿತು. ಅದರಲ್ಲಿ ಓದಿದ ಲೇಖನದಲ್ಲಿ ಪ್ರೊ. ಸಲಾಹುದ್ದೀನ್ ಹೇಳುತ್ತಾರೆ:

"ಪಾಕೀಸ್ತಾನದ ಸೃಷ್ಟಿಗ ಕಾರಣವಾದ ಚಳುವಳಿ ಧಾರ್ಮಿಕವಾದುದಲ್ಲ.... (ಮುಸ್ಲಿಂ) ಜನಾಂಗದ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಆಸಕ್ತಿಗಳ ಮೇಲೆ ದುಷ್ಪರಿಣಾಮ ಬೀರಬಹುದು ಎಂದು ಹದರಲಾದ ಹಿಂದೂ ರಾಜಕೀಯ ಪ್ರಾಧಾನ್ಯ ಆ ಚಳುವಳಿಯ ಮೇಲ ಪ್ರಭಾವ ಬೀರಿದ ಮುಖ್ಯವಾದ ಒಂದು ಅಂಶ ಎನ್ನಿಸುತ್ತದೆ. ಪರಂಪರಾಗತ ಇಸ್ಲಾಮಿನಲ್ಲಿ ರಾಜಕೀಯ ಮತ್ತು ಧರ್ಮ ಎರಡೂ ಅವಿಭಾಜ್ಯವಾದರೂ, ಸಮಕಾಲಿಕ ಮುಸ್ಲಿಂ ಸಮಾಜದಲ್ಲಿ ಪರಿಸ್ಥಿತಿ ಹಾಗಿಲ್ಲ. ಚಳುವಳಿಯ ನಾಯಕರಲ್ಲಿ ಯಾರೂ ಪರಂಪರಾಗತ ಇಸ್ಲಾಮಿನೊಂದಿಗೆ ವ್ಯಯಕ್ತಿಕವಾದ ನಂಟು ಹೊಂದಿದವರಲ್ಲ. ಈ ಕಾರಣದಿಂದಾಗಿಯೇ ಮೇರಿಟ್ - ಇ - ಅಹ್ರಾರ್, ಮೇಯತ್ - ಅಲ್ - ಹಿಂದ್ ಮೊದಲಾದ ಸಂಸ್ಥಗಳು ಪ್ರತಿನಿಧಿಸಿದ ಸಾಂಪ್ರದಾಯಿಕ ಮುಸ್ಲಿಮರು ಲೀಗಿಗ ಬೆಂಬಲ ಕೊಡಲಿಲ್ಲ. ಅದರ ನಾಯಕರು ಸಂಪೂರ್ಣವಾಗಿ ಇಸ್ಲಾಮಿಕ್ ಆಗಿರಲಿಲ್ಲ ಎಂಬುದೇ ಅವರ ನಿಲುವಾಗಿತ್ತು. ಈ ಸಾಂಪ್ರದಾಯಿಕ ಮುಸ್ಲಿಂ ಧಾರ್ಮಿಕ ವ್ಯಕ್ತಿಗಳು (ಎಲ್ಲ ಮುಸ್ಲಿಂ ಧಾರ್ಮಿಕ ವ್ಯಕ್ತಿಗಳೂ ಲೀಗಿಗ ವಿರುದ್ಧವಾಗಿರಲಿಲ್ಲವೆಂಬುದನ್ನು ನನಪಿನಲ್ಲಿಡಬೇಕು.) ಈ ರೀತಿ ವಿರೋಧ ವ್ಯಕ್ತಪಡಿಸುತ್ತಿದ್ದರೂ ಲೀಗು ಮುಸ್ಲಿಂ ಮಧ್ಯಮ ವರ್ಗದ ಬಂಬಲ ಪಡಯಿತು, ಆ ಮೂಲಕ ಮುಸ್ಲಿಂ ಜನಸಾಮಾನ್ಯರನ್ನು ಒಲಿಸಿಕೊಂಡಿತು. ಅವರಿಗ ಪಾಕೀಸ್ತಾನವು ಯಾವುದೇ ಸ್ಪರ್ಧೆಯ ಭಯವೂ ಇಲ್ಲದ ಹಲವು ಮುಖ್ಯವಾದ ಬೆಳವಣಿಗೆಗ ಅವಕಾಶ ನೀಡಿತ್ತು."

## ಎರಡನೆಯ ಮಹಾಯುದ್ಧ

1939 ರ ಸೆಪ್ಟೆಂಬರಿನಲ್ಲಿ ಎರಡನೆಯ ಮಹಾಯುದ್ಧವು ಪ್ರಾರಂಭವಾದಾಗ ಭಾರತೀಯ ನಾಯಕರಿಗೆ ಬಹಳ ಸಂದಿಗ್ಧವಾದ ಪರಿಸ್ಥಿತಿ ಪ್ರಾಪ್ತವಾಯಿತು. ಜನಾಂಗಿಕ ಅಂಧಾಭಿಮಾನದ ಅಂಶವನ್ನು ಒಳಗೊಂಡಿದ್ದ ನಿರ್ದಯ ನಿರಂಕುಶತೆಯ ರೂಪದಲ್ಲಿದ್ದುದರಿಂದ ಫ್ಯಾಸಿಸ್ಟ್ ತತ್ತ್ವವನ್ನು ಅವರು ಸಂಪೂರ್ಣವಾಗಿ ವಿರೋಧಿಸುತ್ತಿದ್ದರು. 1939 ಕ್ಕಿಂತ ಮುಂಚೆಯೇ ಫ್ಯಾಸಿಸಂ ಒಂದು ರಾಜಕೀಯ ತತ್ತ್ವವಾಗಿ ತನ್ನ ಆಕ್ರಮಣಗಳನ್ನು ವಿಸ್ತರಿಸುತ್ತಾ ಮೇಲೆದ್ದಾಗಲೇ ಜವಾಹರಲಾಲ್ ನೆಹರೂ ಅಂತಹ ಭಾರತೀಯ ನಾಯಕರು ಯೂರೋಪಿನಲ್ಲಿ ಸಂಭವಿಸುತ್ತಿದ್ದ ಬೆಳವಣಿಗೆಗಳ ಬಗೆಗೆ ಕ್ಷುಬ್ಧರಾಗಿದ್ದರು. ಕಾಂಗ್ರೆಸ್ಸು ನಿಸ್ಸಂದಿಗ್ಧವಾದ ಮಾತುಗಳಲ್ಲಿ ಫ್ಯಾಸಿಸಂ ಅನ್ನು ತಿರಸ್ಕರಿಸಿ, ಸ್ಪೆಯಿನ್, ಇಥಿಯೋಪಿಯ ಮತ್ತು ಜೆಕೊಸ್ಲೋವೇಕಿಯಗಳಲ್ಲಿನ, ನರಳುತ್ತಿದ್ದ ಜನತೆಯ ಬಗೆಗೆ ತನ್ನ ಬೆಂಬಲವನ್ನು ಬಹಿರಂಗವಾಗಿಯೇ ಘೋಷಿಸಿತ್ತು. ಜಪಾನಿನ ಫ್ಯಾಸಿಸ್ಟ್ ಧೋರಣೆಯ ಬಗೆಗೂ ಕಾಂಗ್ರೆಸ್ ಅದೇ ನಿಲುವನ್ನು ತಳೆದಿದ್ದು, ಜಪಾನು ಚೈನಾವನ್ನು ಮುತ್ತಿದಾಗ ತರ್ಕಯುತವಾಗಿ, ಜಪಾನನ್ನು ಆಕ್ರಮಣಕೋರ ರಾಷ್ಟ್ರವೆಂದು ಸಾರಿ ಚೀನಾಕ್ಕೆ ತನ್ನ ಬೆಂಬಲ ವ್ಯಕ್ತಪಡಿಸಿತು. ಆದರೆ ಅವರು ಅಷ್ಟೇಮಟ್ಟಿಗೆ ಸಾಮ್ರಾಜ್ಯಶಾಹಿಗೆ ಅಷ್ಟೇ ತೀವ್ರವಾಗಿ ವಿರೋಧಿಗಳಾಗಿದ್ದರು. ಆದ್ದರಿಂದ ಯುದ್ಧದ ಬಗೆಗೆ ಅವರ ನಿಲುವು ಅದರ ಧ್ಯೇಯೋದ್ದೇಶಗಳ ಮೇಲೆ ಅವಲಂಬಿಸಿದ್ದಿತು. ಅದು ಏಷ್ಯಾ ಮತ್ತು ಆಫ್ರಿಕಾ ಖಂಡಗಳ ಹಲವು ರಾಷ್ಟ್ರಗಳ ಮೇಲೆ ತಮ್ಮ ವಸಾಹತು ಪ್ರಭುತ್ವಶಕ್ತಿಯನ್ನು ಉಳಿಸಿಕೊಳ್ಳಲು ಬಯಸುತ್ತಿದ್ದ ಹಳೆಯ ಸಾಮ್ರಾಜ್ಯಶಾಹೀ ಶಕ್ತಿಗಳಿಗೂ, ವಸಾಹತುಶಾಹಿಯ ಉಳಿಕೆಪಳಿಕೆಯಲ್ಲಿ ತಮ್ಮದೇ ಪಾಲು ಬೇಕೆಂದು ಅಪೇಕ್ಷಿಸುತ್ತಿದ್ದ ಹೊಸ ಸಾಮ್ರಾಜ್ಯಶಾಹೀ ವಾದಿಗಳಿಗೂ ನಡುವೆ ನಡೆಯುವ ಯುದ್ಧವಾದ ಪಕ್ಷದಲ್ಲಿ ಭಾರತಕ್ಕೆ ಅದರಲ್ಲಿ ಏನೂ ಸಂಬಂಧವಿರಲಿಲ್ಲ. ಆದರೆ ಮಿತ್ರರಾಷ್ಟ್ರಗಳು ನಿಜವಾಗಿಯೂ ತಮ್ಮ ಮಾರ್ಗವನ್ನು ಬದಲಾಯಿಸಿ, "ಜಗತ್ತನ್ನು ಪ್ರಜಾಪ್ರಭುತ್ವಕ್ಕೆ ಉಳಿಸುವುದಕ್ಕಾಗಿ" ಫ್ಯಾಸಿಸ್ಟರೊಂದಿಗೆ ನಿಜವಾಗಿಯೂ ಹೋರಾಡುವುದೇ ಆದ ಪಕ್ಷದಲ್ಲಿ ಭಾರತವು ತನಗೆ ಎಷ್ಟು ಸಾಧ್ಯವೋ ಅಷ್ಟುಮಟ್ಟಿಗೆ ಮಿತ್ರರಾಷ್ಟ್ರಗಳಿಗೆ ಬೆಂಬಲಕೊಡಲಿತ್ತು. ಆದರೆ ಮಿತ್ರರಾಷ್ಟ್ರಗಳು ತಾವು ಏನನ್ನು ಹೇಳಿಕೊಳ್ಳು ತ್ತಿದ್ದರೋ ನಿಜಕ್ಕೂ ಅದೇ ಉದ್ದೇಶವನ್ನೇ ಹೊಂದಿರುವರೆಂಬುದಕ್ಕೆ ತಕ್ಕ ಆಧಾರವನ್ನು ತೋರಿಸಬೇಕಾಗಿತ್ತು. ನಿರ್ದಿಷ್ಟವಾಗಿ ಹೇಳಬೇಕೆಂದರೆ ಬ್ರಿಟನ್ನು ತಕ್ಷಣವೇ ಭಾರತದ ಮೇಲಿನ ತನ್ನ ಸಾಮ್ರಾಜ್ಯಶಾಹೀ ವಸಾಹತುಶಾಹೀ ಆಡಳಿತ ವನ್ನು ಕೊನೆಗೊಳಿಸಿ ಭಾರತೀಯರಿಂದಲೇ ನಡೆಸಲ್ಪಡುವ ಸ್ವಯಮಾಡಳಿತಕ್ಕೆ ತಕ್ಕ ಏರ್ಪಾಟು ಮಾಡಬೇಕಾಗಿತ್ತು.

ಆದರೆ ಭಾರತೀಯ ನಾಯಕರ ಮತ್ತು ಜನರ ಈ ಭಾವನೆಗಳಿಗೆ ಮನ್ನಣೆ ಸಿಕ್ಕಲಿಲ್ಲ, ಅದನ್ನು ಪರಿಶೀಲನೆಗೂ ತೆಗೆದುಕೊಳ್ಳಲಿಲ್ಲ. 1939 ರ ಸೆಪ್ಟೆಂಬರ್ 3ನೆಯ ತಾರೀಖಿನಂದು ಯುದ್ಧವನ್ನು ಘೋಷಿಸಲಾಯಿತು. ಇದರಿಂದ ತನಗೆ ತಾನೆ ಭಾರತ ಯುದ್ಧ ಸ್ಥಿತಿಗೆ ಬದ್ಧವಾದಂತಾಯಿತು. 1935 ರ ಇಂಡಿಯಾ ಆಕ್ಟ್‌ನ ಒಕ್ಕೂಟಕ್ಕೆ

ಸಂಬಂಧಿಸಿದ ಭಾಗವು ಇನ್ನೂ ಜಾರಿಗೆ ಬಂದಿರಲಿಲ್ಲವಾಗಿ, ಶುದ್ಧಾಂಗವಾಗಿ ಸಾಂವಿಧಾನಿಕ ದೃಷ್ಟಿಕೋನದಿಂದ ವೈಸರಾಯ್ ಕೈಗೊಂಡ ಕ್ರಮ ನ್ಯಾಯಬದ್ಧವು ಸಮಂಜಸವೂ ಆಗುತ್ತಿತ್ತು. ಆದರೆ ಅದು ಭಾರತೀಯ ಭಾವನೆಗಳನ್ನು ಒಲಿಸುವಂಥದಾಗಿರಲಿಲ್ಲ. ಕೇಂದ್ರ ಶಾಸನ ಸಭೆ ಇತ್ತು. ಪ್ರಾಂತಗಳಲ್ಲಿ ಜನತಾ ಸರಕಾರಗಳಿದ್ದುವು. ದೇಶದಲ್ಲಿ ಸುವ್ಯವಸ್ಥಿತವಾದ, ಸಂಪೂರ್ಣವಾಗಿ ಮನ್ನಣೆ ಪಡೆದ ರಾಜಕೀಯ ಪಕ್ಷಗಳಿದ್ದುವು. ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡು ಹಿಡಿಯುವುದಕ್ಕಾಗಿ ಯಾರೊಂದಿಗೆ ಸರಕಾರ ಚರ್ಚೆ ಮಾತುಕತೆ ನಡೆಸಬಹುದೋ ಅಂತಹ ಭಾರತೀಯ ನಾಯಕರೇ ಅನೇಕ ಜನ ಇದ್ದರು. ಆದರೆ ಯಾರನ್ನೂ ಸರಕಾರ ಸಲಹೆ ಕೇಳಲಿಲ್ಲ. ಇದು ನಿಜಕ್ಕೂ ಆಘಾತವಾಗಿತ್ತು. ಏಕೆಂದರೆ ಬರಲಿರುವ ಯುದ್ಧವನ್ನು ಕುರಿತು ಭಾರತೀಯ ನಾಯಕರ ನಿಲುವು ಏನು ಎಂಬುದರ ಸೂಚನೆ ಮೊದಲೇ ಸರಕಾರಕ್ಕೆ ಇದ್ದಿತ್ತು. 1939ರ ಬೇಸಿಗೆಯಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಕಾಂಗ್ರೆಸ್ ಪಕ್ಷವು, ಭಾರತೀಯ ಸೈನ್ಯವನ್ನು ಮಲಯಾ ಮತ್ತು ದೂರ ಪ್ರಾಚ್ಯಗಳಿಗೆ ಮುನ್ನೆಚ್ಚರಿಕೆಯ ಕ್ರಮವಾಗಿ ಕಳುಹಿಸಿಕೊಡುವುದರ ವಿರುದ್ಧ ಪ್ರತಿಭಟಿಸಿ ಅಧಿವೇಶನದಿಂದ ಹೊರಗೆ ಉಳಿದಿತ್ತು.

ಆದರೆ ನಾಯಕರಲ್ಲಿ ಫ್ಯಾಸಿಸ್ಟ್-ವಿರೋಧೀ ಭಾವನೆಗಳು ಬಹಳ ತೀವ್ರವಾಗಿ ಇದ್ದುದರಿಂದಾಗಿ, ಯುದ್ಧಘೋಷಣೆಯ ಬಗೆಗೆ ಕಾಂಗ್ರೆಸ್ಸಿನ ತಕ್ಷಣದ ಪ್ರತಿಕ್ರಿಯೆ ಹೊಂದಾಣಿಕೆಯದೇ ಆಗಿತ್ತು. 1939ರ ಸೆಪ್ಟೆಂಬರ್ 14 ರಂದು ಕಾಂಗ್ರೆಸ್ ಒಂದು ಹೇಳಿಕೆಯನ್ನು ಹೊರಡಿಸಿ, ಪಕ್ಷದ ಅಭಿಪ್ರಾಯಗಳನ್ನು ಸ್ಪಷ್ಟವಾದ ಮಾತುಗಳಲ್ಲಿ ವಿವರಿಸಿತು:

"ಯುದ್ಧವು ಈಗಿರುವ ಸ್ಥಿತಿಯನ್ನೇ, ಸಾಮ್ರಾಜ್ಯಶಾಹೀ ಆಕ್ರಮಣಗಳು, ವಸಾಹತುಗಳು, ಪಟ್ಟಭದ್ರಹಿತಗಳು, ಸೌಲಭ್ಯಗಳು ಇತ್ಯಾದಿಗಳನ್ನೇ ಸಮರ್ಥಿಸಿ ಕೊಳ್ಳುವುದಕ್ಕಾಗಿ ಎಂದಾದರೆ, ಆಗ ಭಾರತಕ್ಕೆ ಅಲ್ಲಿ ಏನೂ ಕೆಲಸವಿಲ್ಲ. ಆದರೆ ಇಲ್ಲಿಯ ಪ್ರಶ್ನೆ ಪ್ರಜಾಪ್ರಭುತ್ವವಾದರೆ, ಪ್ರಜಾಸತ್ತೆಯ ಮೇಲೆ ನಿಂತ ಒಂದು ವಿಶ್ವವ್ಯವಸ್ಥೆಯಾದರೆ ಆಗ ಭಾರತವು ಯುದ್ಧದಲ್ಲಿ ಉತ್ಕಟವಾದ ಆಸಕ್ತಿಯನ್ನು ಹೊಂದಿರುತ್ತದೆ.... ಸ್ವತಂತ್ರ ಹಾಗೂ ಪ್ರಜಾಸತ್ತಾತ್ಮಕ ಭಾರತವು ಇತರ ರಾಷ್ಟ್ರಗಳೊಂದಿಗೆ ಆಕ್ರಮಣಗಳ ವಿರುದ್ಧ ಪರಸ್ಪರ ರಕ್ಷಣೆಗಾಗಿಯೂ ಆರ್ಥಿಕ ಸಹಕಾರಕ್ಕಾಗಿಯೂ ಸಂತೋಷವಾಗಿ ಕೂಡಿಕೊಳ್ಳುತ್ತದೆ... (ಆದರೆ) ಸಹಕಾರ ಸಮಾನರ ನಡುವೆ ಇರಬೇಕು, ಪರಸ್ಪರ ಸಮ್ಮತಿಯಿಂದ ಆಗಬೇಕು. ಆದ್ದರಿಂದ ಬ್ರಿಟಿಷ್ ಸರಕಾರವು ಸಂದೇಹಕ್ಕೆಡೆಯಿಲ್ಲದ ಮಾತುಗಳಲ್ಲಿ ಪ್ರಜಾಸತ್ತೆ, ಸಾಮ್ರಾಜ್ಯಶಾಹಿಗಳಿಗೆ ಸಂಬಂಧಿಸಿದಂತೆ ತಮ್ಮ ಯುದ್ಧೋದ್ದೇಶಗಳು ಏನೆಂಬು ದನ್ನೂ ಕಲ್ಪಿಸಿಕೊಂಡಿರುವ ಮುಂದಿನ ವ್ಯವಸ್ಥೆ ಏನೆಂಬುದನ್ನೂ ವಿಶೇಷವಾಗಿ, ಆ ಉದ್ದೇಶಗಳು ಯಾವ ರೀತಿಯಲ್ಲಿ ಭಾರತಕ್ಕೆ ಅನ್ವಯಿಸುತ್ತವೆ ಮತ್ತು ಹೇಗೆ ಅವುಗಳನ್ನು ಈಗ ಜಾರಿಗೆ ಕೊಡಲಾಗುತ್ತದೆ ಎಂಬುದನ್ನೂ ಘೋಷಿಸಬೇಕೆಂದು ಕಾರ್ಯಕಾರೀ ಸಮಿತಿಯು ಕರೆಕೊಡುತ್ತದೆ... ಯಾವುದೇ ಘೋಷಣೆಯ ನಿಜವಾದ ಒರೆಗಲ್ಲು ಅದನ್ನು ಇಂದಿನ ಪರಿಸ್ಥಿತಿಗೆ ಅನ್ವಯಿಸುವುದರಲ್ಲಿದೆ."

ಇದಕ್ಕೆ ವೈಸರಾಯ್ ಕೊಟ್ಟ ಉತ್ತರ ಭಾರತೀಯ ದೃಷ್ಟಿಯಿಂದ ಸ್ವಲ್ಪವೂ ತೃಪ್ತಿಕರವಾಗಿರಲಿಲ್ಲ. ಉತ್ತರ ಕೊಡಲು ಒಂದು ತಿಂಗಳಿಗಿಂತಲೂ ಹೆಚ್ಚು ವಿಳಂಬಮಾಡಿ ಆಮೇಲೆ 1939 ರ ಅಕ್ಟೋಬರ್ 17 ರಂದು, ಬ್ರಿಟನ್ನಿನ ಪ್ರಧಾನಮಂತ್ರಿಯು ಯಾವ ರೀತಿ ಹೇಳಿದ್ದಾರೆಯೋ ಅದಕ್ಕಿಂತ ಹೆಚ್ಚಾಗಿ ತಾನು ಯುದ್ಧೋದ್ದೇಶಗಳನ್ನು ವಿಸ್ತರಿಸಲು ಸಾಧ್ಯವಿಲ್ಲ ಎಂದು ವೈಸರಾಯ್ ವಿಷಾದ ವ್ಯಕ್ತಪಡಿಸಿದನು. ತಕ್ಷಣಕ್ಕೆ ಬೇಕಾದರೆ ಎಕ್ಸಿಕ್ಯೂಟಿವ್ ಕೌನ್ಸಿಲಿಗೆ ಹೆಚ್ಚು ಜನ ಭಾರತೀಯರನ್ನು ಸೇರಿಸಿಕೊಳ್ಳಲು ಅವನು ಸಿದ್ಧನಾಗಿದ್ದನು. ಮೂಲಭೂತವಾಗಿ ಅಧಿಕಾರವನ್ನು ಭಾರತೀಯರಿಗೆ ವರ್ಗಾಯಿಸುವುದು ಯುದ್ಧಸಮಯದಲ್ಲಿ ಕಾರ್ಯಸಾಧುವಲ್ಲ ಎಂದು ಭಾವಿಸಲಾಯಿತು. ಅತಿ ಕ್ರೂರವಾದ ನಿರಾಶೆಯಿಂದ ಬಳಲಿದ್ದ ಭಾರತಕ್ಕೆ ಅದು ಸ್ವಲ್ಪಮಟ್ಟಿನ ಸಮಾಧಾನ ತರುತ್ತದೆ ಎಂದು ಭಾವಿಸಲಾಯಿತು - ಕ್ಷೇಮಕರವಾದಷ್ಟು ದೂರದಲ್ಲಿ ಒಂದು ಮೂಲಂಗಿಯನ್ನು ಕಟ್ಟಿದರು ಎಂಬಂತೆ. ಯುದ್ಧ ಮುಗಿದ ಮೇಲೆ ಎಲ್ಲ ವರ್ಗಗಳನ್ನೂ ಪಂಗಡಗಳನ್ನೂ ಸಲಹೆ ಕೇಳಿ ಮಾತುಕತೆ ನಡೆಸಿ "ಭಾರತವು ಮಹಾ ಡೊಮೀನಿಯನ್ನುಗಳ ಮಧ್ಯೆ ತನಗೆ ಉಚಿತವಾದ ಸ್ಥಾನವನ್ನು ಪಡೆಯುವಂತ ಮಾಡಲು" 1935 ರ ಶಾಸನದಲ್ಲಿ ಏನೇನು ಸುಧಾರಣೆಗಳಾಗಬೇಕೆಂಬುದನ್ನು ತೀರ್ಮಾನಿಸಲು ಬ್ರಿಟನ್ ಸಿದ್ಧ ಎಂದು ಹೇಳಲಾಯಿತು.

ಅಧಿಕಾರವನ್ನು ಬಿಟ್ಟುಕೊಡಲು ಬ್ರಿಟನ್ನಿಗೆ ಅಪೇಕ್ಷೆಯಿದ ಎಂಬುದಕ್ಕೆ ತಕ್ಷಣದ ಸೂಚನೆಗಳು ಇರಲಿಲ್ಲ. ಅದಿರಲಿ, ಮುಂದೆಯೂ ಭಾರತದ ಸಾಮ್ರಾಜ್ಯದೊಳಗಿನ ಡೊಮಿನಿಯನ್ ಸ್ಥಾನಮಾನ ಪಡೆಯಬೇಕೇ ವಿನಾ ಸಂಪೂರ್ಣ ಸಮಗ್ರ ಸ್ವಾತಂತ್ರ್ಯವನ್ನಲ್ಲ ಎಂಬುದು ಅದರ ಅರ್ಥ. ಹೇಳಿಕೆ ಕಾಂಗ್ರೆಸ್ಸಿಗೆ ಸ್ವಲ್ಪವೂ ಒಪ್ಪಿಗೆಯಾಗಲಿಲ್ಲ. ಆದ್ದರಿಂದ ಕಾರ್ಯಕಾರೀ ಸಮಿತಿಯು ವೈಸರಾಯ್ ಸಲಹೆಯನ್ನು ತಿರಸ್ಕರಿಸಿತು. ಅಕ್ಟೋಬರ್ ಮುಗಿಯುವ ಮುಂಚೆ ಕಾಂಗ್ರೆಸ್ ಮಂತ್ರಿಮಂಡಲಗಳೆಲ್ಲವೂ ರಾಜೀನಾಮೆ ಕೊಡಬೇಕೆಂದು ಕರೆಕೊಟ್ಟಿತು.

ಆದರೆ ಬಾಗಿಲು ಸ್ವಲ್ಪವೇ ತೆರೆದಿತ್ತು. ಬ್ರಿಟನ್ನಿನ ಧೋರಣೆಯಲ್ಲಿ ನೀತಿಯಲ್ಲಿ ಬದಲಾವಣೆ ಉಂಟಾಗುವುದೇ ಆದಲ್ಲಿ, ಸಹಕಾರಕ್ಕೆ ಅವಕಾಶ ಮಾಡಿಕೊಡಬಹುದು ಎಂದು ಹೇಳಿಕೆಯಲ್ಲಿ ಸೂಚಿಸಿತ್ತು. ಆದರೆ "ಈಗಿನ ಪರಿಸ್ಥಿತಿಯಲ್ಲಿ ಸಮಿತಿಯು ಗ್ರೇಟ್ ಬ್ರಿಟನ್ನಿಗೆ ಯಾವುದೇ ಬಗೆಯ ಬೆಂಬಲ ಕೊಡುವುದು ಸಾಧ್ಯವಿಲ್ಲವಾಗಿದೆ. ಏಕೆಂದರೆ ಅದರಿಂದ ಸಾಮ್ರಾಜ್ಯಶಾಹಿ ನೀತಿಯನ್ನು ಅನುಮೋದಿಸಿದಂತಾಗುತ್ತದೆ." ಇದರರ್ಥ, ಭಾರತದ ಬಗೆಗೆ ಬ್ರಿಟಿಷ್ ಧೋರಣೆ ಬದಲಾಯಿಸಿದರ ಸಹಕಾರ ಎಂಬ ಷರತ್ತಿನಿಂದ ಕೂಡಿದ ನೀಡಿಕೆ.

ಒಂದು ವರ್ಷವಾದ ಮೇಲೂ, 1940 ರ ಅಕ್ಟೋಬರಿನಲ್ಲಿ ಗಾಂಧೀಜಿ ಹೊಸ ಸತ್ಯಾಗ್ರಹ ಚಳುವಳಿಯೊಂದನ್ನು ರೂಪಿಸಲು ಯೋಚಿಸಿದಾಗಲೂ, ಆ ಚಳುವಳಿ ಕೇವಲ ಕೆಲವೇ ಆರಿಸಿದ ವ್ಯಕ್ತಿಗಳಿಗೆ ಮೀಸಲಾಗಿರತಕ್ಕದ್ದೆಂದು ನಿರ್ಧರಿಸಲಾಯಿತು. ಇದು ಏಕೆಂದರೆ, ಬ್ರಿಟನ್ನು ವಿರೋಧ ಭಾವನೆಯನ್ನೇ ತಳೆದಿದ್ದರೂ, ಕಾಂಗ್ರೆಸ್ಸಿಗಾಗಲಿ ಗಾಂಧೀಜಿಯವರಿಗಾಗಲಿ, ಸಾಮೂಹಿಕ ಚಳುವಳಿಯಿಂದಾಗಿ ಯುದ್ಧ ಪ್ರಯತ್ನಕ್ಕೆ

ತೊಂದರೆಯುಂಟಾಗುವುದು ಇಷ್ಟವಾಗಿರಲಿಲ್ಲ. ವಾಸ್ತವವಾಗಿ ಸತ್ಯಾಗ್ರಹದ ಉದ್ದೇಶ, ಭಾರತವು ಮನಃಪೂರ್ವಕವಾಗಿ ಯುದ್ಧಪ್ರಯತ್ನಕ್ಕೆ ಸಹಾಯ ಮಾಡುತ್ತಿದೆ ಎಂಬ ಬ್ರಿಟಿಷ್ ಹೇಳಿಕೆಯನ್ನು ಸುಳ್ಳೆಂದು ತೋರಿಸಿಕೊಡುವುದೇ ಆಗಿತ್ತು. ವೈಸರಾಯಿಗೆ ಬರೆದ ಒಂದು ಪತ್ರದಲ್ಲಿ ಗಾಂಧೀಜಿ ವ್ಯಕ್ತಿಗತ ಸತ್ಯಾಗ್ರಹದ ಗುರಿಯನ್ನು ವಿವರಿಸಿದರು:

> "... ನಾಜಿಸಂ ಬಗೆಗೆ ಯಾವನೇ ಬ್ರಿಟಿಷ್ ಪ್ರಜೆ ಎಷ್ಟು ಹಗೆತನ ತೋರುತ್ತಾನೋ, ಕಾಂಗ್ರೆಸ್ಸೂ ಅಷ್ಟೇ ಮಟ್ಟಿಗೆ ಹಗೆಯಾಗಿದೆ. ಆದರೆ ಅವರ ಉದ್ದೇಶವನ್ನು, ಯುದ್ಧದಲ್ಲಿ ಅವರು ಪಾಲುಗೊಳ್ಳುವುದು ಎಂಬಷ್ಟು ದೂರಕ್ಕೆ ಒಯ್ಯುವುದು ಸಾಧ್ಯವಿಲ್ಲ. ನೀವು ಮತ್ತು ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಇಬ್ಬರೂ ಭಾರತವು ಯುದ್ಧ ಪ್ರಯತ್ನಕ್ಕೆ ಸ್ವಇಚ್ಛೆಯಿಂದ ಸಹಾಯ ಮಾಡುತ್ತಿದೆ ಎಂದು ಘೋಷಿಸಿರುವುದರಿಂದ, ಭಾರತದ ಅಗಾಧ ಜನತೆಯು ಯುದ್ಧದಲ್ಲಿ ಯಾವ ಆಸಕ್ತಿಯನ್ನೂ ಹೊಂದಿಲ್ಲ ಎಂದು ಸ್ಪಷ್ಟಪಡಿಸುವುದು ಅಗತ್ಯವಾಗುತ್ತದೆ. ಅವರ ದೃಷ್ಟಿಯಲ್ಲಿ ನಾಜಿಸಂಗೂ, ಭಾರತವನ್ನು ಆಳುತ್ತಿರುವ ಇಮ್ಮಡಿ ನಿರಂಕುಶಾಡಳಿತಕ್ಕೂ ಯಾವ ವ್ಯತ್ಯಾಸವೂ ಇಲ್ಲ."

ವೈಯಕ್ತಿಕ ಸತ್ಯಾಗ್ರಹ ಚಳುವಳಿಯನ್ನು 1940 ರ ಅಕ್ಟೋಬರಿನಲ್ಲಿ ಪ್ರಾರಂಭಿಸಲಾಯಿತು. ಗಾಂಧೀಜಿಯು ಸತ್ಯಾಗ್ರಹವನ್ನಾಚರಿಸಲು ಪ್ರಥಮ ನಾಯಕರನ್ನಾಗಿ ವಿನೋಬಾ ಭಾವೆಯವರನ್ನು ಆರಿಸಿದರು.

### ಕ್ರಿಪ್ಸ್ ಆಯೋಗ

1941 ರ ವೇಳೆಗೆ ಯೂರೋಪಿನಲ್ಲಿ ಯುದ್ಧವು ಶಿಖರಕ್ಕೇರಿತು. ಪೋಲೆಂಡ್, ಬೆಲ್ಜಿಯಂ, ಹಾಲೆಂಡ್, ನಾರ್ವೆ ಮತ್ತು ಫ್ರಾನ್ಸ್‌ಗಳನ್ನು ಗೆದ್ದು, ಬ್ರಿಟನ್ ಕದನದಲ್ಲಿ ಪರಾಭವಗೊಂಡರೂ ಹೆಚ್ಚು ಕಡಿಮೆ ಪೂರ್ವ ಯೂರೋಪೆಲ್ಲವನ್ನೂ ಆವರಿಸಿಕೊಂಡ ಜರ್ಮನಿ 1941 ರ ಜೂನ್ ತಿಂಗಳಲ್ಲಿ ರಷ್ಯದ ಮೇಲೆ ಮುತ್ತಿಗೆ ಹಾಕಿತು. ಡಿಸೆಂಬರಿನಲ್ಲಿ ಅನಿರೀಕ್ಷಿತವಾಗಿ ಪರ್ಲ್ ಹಾರ್ಬರಿನ ಮೇಲೆ ದಾಳಿಯಿಟ್ಟು ಜಪಾನ್ ಯುದ್ಧವನ್ನು ಪ್ರವೇಶಿಸಿತು. ಹೀಗೆ 1941 ರ ಕೊನೆಗೆ ಯುದ್ಧವು ಜಗತ್ತಿನ ವಿಳಯ ಎನ್ನಬಹುದಾದ ಪ್ರಮಾಣವನ್ನು ತಲುಪಿತ್ತು. ಸಂಯುಕ್ತ ಸಂಸ್ಥಾನಗಳು ಮತ್ತು ಸೋವಿಯತ್ ಯೂನಿಯನ್ ಯುದ್ಧದಲ್ಲಿ ಪೂರ್ಣ ಮಗ್ನವಾಗಿ ಮಿತ್ರರಾಷ್ಟ್ರಗಳ ಪರವಾಗಿ ಹೋರಾಡುತ್ತಿದ್ದುವು. ಆದರೆ ಇದು ವಿಜಯದ ಭವಿಷ್ಯವನ್ನೇನೂ ಸೂಚಿಸುತ್ತಿರಲಿಲ್ಲ. ಬದಲಾಗಿ, ಏಷ್ಯಾದಲ್ಲಿ ವಿಜಯಗಳೆಲ್ಲವೂ ಜಪಾನಿನ ಪಾಲಾಗಿದ್ದುವು. ಫಿಲಿಪೈನ್ಸ್, ಇಂಡೋಚೈನಾ, ಇಂಡೋನೇಷಿಯಾ, ಮಲಯಾ ಮತ್ತು ಬರ್ಮಗಳನ್ನು ಬೇಗ ಬೇಗ ಗೆದ್ದುಕೊಳ್ಳಲಾಯಿತು. ಜಪಾನೀ ಸೈನ್ಯಗಳು 1942 ರ ಮಾರ್ಚಿ ತಿಂಗಳಲ್ಲಿ ರಂಗೂನನ್ನು ಹಿಡಿದಾಗ ಭಾರತದ ಗಡಿಗಳಿಗೇ ಗಂಡಾಂತರ ಬಂದಂತಾಯಿತು.

ಈಗ ಬ್ರಿಟನ್ನು ಜಪಾನೀಯರು ಮುಂದೆ ಬಾರದಂತೆ ತಡೆಯುವುದಕ್ಕೂ, ಇಡೀ ಯುದ್ಧೋದ್ಯಮದಲ್ಲಿ ಬೆಂಬಲಕ್ಕೂ ಭಾರತದ ಸಂಪೂರ್ಣ ಸಕ್ರಿಯ ಸಹಕಾರವನ್ನು

ಪಡೆಯಲು ಅತಿ ಕಾತರಗೊಂಡಿತು. ಈ ಸಹಕಾರವನ್ನು ಪಡೆಯಲು ಭಾರತಕ್ಕೆ ಸ್ವಲ್ಪವಾದರೂ ಗಟ್ಟಿಯಾದ, ಸ್ಥಿರವಾದ ಭರವಸೆಗಳನ್ನು, ಈಗ ತತ್ಕಾಲಕ್ಕೆ ಪೂರ್ಣ ಪ್ರಮಾಣದ ಸ್ವಯಮಾಡಳಿತವನ್ನು ಕೊಡಬೇಕಾಗಿತ್ತು. ಇದಕ್ಕಾಗಿ ಬ್ರಿಟಿಷ್ ಸರಕಾರವು ಭಾರತಕ್ಕೆ ಸರ್ ಸ್ಟಾಫರ್ಡ್ ಕ್ರಿಪ್ಸ್ (Sir Stafford Cripps) ಎಂಬ ಯುದ್ಧ ಮಂಡಳಿಯ ಸದಸ್ಯನನ್ನು ಒಂದು ಕರಡು ಘೋಷಣೆಯೊಂದಿಗೆ ಕಳುಹಿಸಿತು. ಉಜ್ವಲ ಪ್ರತಿಭೆಯ ವಕೀಲನೂ, ಉತ್ಕಟ ಸಮಾಜವಾದಿಯೂ ಆಗಿದ್ದ ಕ್ರಿಪ್ಸ್ ಭಾರತದ ಪ್ರಶ್ನೆಯನ್ನು ಬಹಳ ಕಾಲದಿಂದ ಅಧ್ಯಯನ ಮಾಡಿದ್ದನು, ಭಾರತದ ಆಕಾಂಕ್ಷೆಗಳ ಪರವಾದ ನಿಲುವು ತಳೆದವನೆಂದು ಪ್ರಸಿದ್ಧನಾಗಿದ್ದನು. ನೆಹರೂ ಅವರಿಗೆ ಕ್ರಿಪ್ಸ್ ವ್ಯಕ್ತಿಕವಾಗಿ ಪರಿಚಿತ. ಆದರೆ ಆತ ತಂದಿದ್ದ ಕರಡು ಘೋಷಣೆ ಇದನ್ನು ಶಿಫಾರಸುಮಾಡುವ ಹಾಗಿರಲಿಲ್ಲ. ಅದು ಯುದ್ಧ ಮುಗಿದೊಡನೆ ಭಾರತಕ್ಕೆ ಡೊಮಿನಿಯನ್ ಸ್ಥಾನಮಾನವನ್ನು ನೀಡಲಿತ್ತು. ಭಾರತಕ್ಕೆ ಬೇರೆಯಾಗುವ ಹಕ್ಕನ್ನೂ ಅದು ಕೊಟ್ಟಿತು. ಈ ಸೂಚನೆಯನ್ನು ಕಾರ್ಯಗತಗೊಳಿಸಲು ಯುದ್ಧಸ್ಥಿತಿ ಕಳೆದೊಡನೆಯೇ ಒಂದು ರಾಜ್ಯ ವ್ಯವಸ್ಥಾ ಸಭೆಯನ್ನು ಸ್ಥಾಪಿಸಲಿತ್ತು. ಸಭೆಯ ಸದಸ್ಯರನ್ನು ಬ್ರಿಟಿಷ್ ಇಂಡಿಯದಿಂದಲೂ, ದೇಶೀಯ ಸಂಸ್ಥಾನಗಳಿಂದಲೂ ತೆಗೆದುಕೊಳ್ಳುವುದಿತ್ತು. ಬ್ರಿಟಿಷ್ ಇಂಡಿಯದ ಸದಸ್ಯರನ್ನು ಪ್ರಾಂತೀಯ ಶಾಸನ ಸಭೆಗಳ ಕೆಳಮನೆಗಳಿಂದ ಚುನಾಯಿಸಬಹುದು. ಸಂಸ್ಥಾನಗಳ ಪ್ರತಿನಿಧಿಗಳನ್ನು ಅಲ್ಲಿಯ ರಾಜರೇ ನಾಮಕರಣಮಾಡುವರು. ಸಭಯು ರಚಿಸಿದ ಸಂವಿಧಾನವನ್ನು ಒಪ್ಪಿಕೊಳ್ಳಲು ಬ್ರಿಟಿಷ್ ಸರಕಾರ ಸಿದ್ಧ. ಹಾಗಯೇ ಭಾರತದೊಂದಿಗೆ ಒಂದು ಕರಾರು ಮಾಡಿಕೊಳ್ಳಲೂ ಸಿದ್ಧ. ಆದರೆ ಯಾವುದೇ ಪ್ರಾಂತವು ಅಪೇಕ್ಷಿಸಿದರೆ ಭಾರತ ಒಕ್ಕೂಟದಿಂದ ಹೊರಗುಳಿದು ಬ್ರಿಟನ್ನಿನೊಂದಿಗೆ ನೇರವಾಗಿ ವ್ಯವಹರಿಸಬಹುದು ಎಂಬ ಅವಕಾಶವೂ ಆ ಕರಡು ಘೋಷಣೆಯಲ್ಲಿತ್ತು. ಯುದ್ಧದ ಅವಧಿಯಲ್ಲಿ ಯಾವುದೇ ಸಾಂವಿಧಾನಿಕ ಬದಲಾವಣೆಗಳು ಆಗುವಂತಿರಲಿಲ್ಲ. ಆದರೆ 'ರಾಷ್ಟ್ರೀಯ ಸರಕಾರ'ವೊಂದನ್ನು ರೂಪಿಸಲು, ಕಾರ್ಯಪ್ರವೃತ್ತವಾಗುವಂತೆ ಮಾಡಲು ಭಾರತದ ಪಕ್ಷಗಳು ಮತ್ತು ನಾಯಕರು ಒಪ್ಪುತ್ತಾರೆ ಎಂದು ಆಸೆ ವ್ಯಕ್ತಪಡಿಸಲಾಗಿತ್ತು. ರಕ್ಷಣಾ ವ್ಯವಸ್ಥೆಯ ವಾಸ್ತವ ಮಿಲಿಟರಿ ಅಂಶಗಳನ್ನು ಬ್ರಿಟಿಷ್ ಕಮಾಂಡರ್-ಇನ್-ಚೀಫ್ ಅವರೇ ನೋಡಿಕೊಳ್ಳುತ್ತಾರೆ, ಆದರೆ ರಕ್ಷಣಾ ಸದಸ್ಯನಾಗಿ ಒಬ್ಬ ಭಾರತೀಯ ಇರುತ್ತಾರೆ ಎಂದು ಅವಕಾಶ ಕಲ್ಪಿಸಲಾಗಿತ್ತು.

ಈ ಘೋಷಣೆಯನ್ನು ಹೆಚ್ಚು ಕಡಿಮೆ ಎಲ್ಲ ಪಕ್ಷಗಳೂ ತಿರಸ್ಕರಿಸಿದುವು; ಬೇರೆ ಬೇರೆಯಾದ ಅನೇಕ ವೇಳೆ ಪರಸ್ಪರ ವಿರುದ್ಧವಾದ ಕಾರಣಗಳಿಗಾಗಿ ತಿರಸ್ಕರಿಸಿದುವು. ಯಾವುದೇ ಪ್ರಾಂತವು ಒಕ್ಕೂಟಕ್ಕೆ ಸೇರಿಕೊಳ್ಳದೆ ಇರಬಹುದು ಎಂಬ ತತ್ವವನ್ನು ಕಾಂಗ್ರೆಸ್ ಸ್ವಾಗತಿಸಲಿಲ್ಲ. ಆದರೆ ಸ್ವಯಂನಿರ್ಧಾರವಾದ ಪ್ರಜಾಪ್ರಭುತ್ವ ತತ್ವವನ್ನು ಅದು ಒಪ್ಪಿಕೊಂಡಿತು. ಆದ್ದರಿಂದ ಕಾರ್ಯಕಾರೀ ಸಮಿತಿಯ ನಿರ್ಣಯ ಹೀಗೆ ಹೇಳಿತು: "ಯಾವುದೇ ಪ್ರದೇಶದ ಜನರು ತಮ್ಮ ಅಂಗೀಕೃತವಾದ ಮತ್ತು ಸ್ವಂತದ ಇಚ್ಛೆಗೆ ವಿರುದ್ಧವಾಗಿ ಒಕ್ಕೂಟದಲ್ಲಿ ಉಳಿಯಬೇಕೆಂದು ಒತ್ತಾಯ ಮಾಡುವುದನ್ನು ಸಮಿತಿ ಒಪ್ಪುವುದಿಲ್ಲ." ರಾಜ್ಯವ್ಯವಸ್ಥಾ ಸಭೆಯಲ್ಲಿ "ಪ್ರಾತಿನಿಧಿಕರಲ್ಲದ ಸದಸ್ಯರು

ಇರುವುದನ್ನೂ" ಸಮಿತಿ ಒಪ್ಪಲಿಲ್ಲ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಅದು ಭವಿಷ್ಯತ್ತಿನ ಭರವಸೆಗಳ ಮೇಲೆ ಭಾರಹಾಕಿ ಸುಮ್ಮನಿರಲು ಇಷ್ಟಪಡಲಿಲ್ಲ. ರಾಜಕೀಯ ಅಧಿಕಾರದಲ್ಲಿ ಸೂಕ್ತ ಪಾಲು ಈಗ, ವರ್ತಮಾನ ಸ್ಥಿತಿಯಲ್ಲಿಯೇ ಆಗಬೇಕು ಎಂದು ಅಪೇಕ್ಷಿಸಿತು. ಇತರ ನಾಡುಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವುದಕ್ಕೆ ಮುಂಚೆ ಅದು ಯಾವುದಾದರೂ ರೂಪದ ಸ್ವಯಮಾಡಳಿತ ಈ ದೇಶದಲ್ಲಿ ಇದೀಗ ಇರಬೇಕು ಎಂದು ಹೇಳಿತು. ಮುಸ್ಲಿಂ ಲೀಗ್ ಆದರೋ, ಪ್ರಾಂತಗಳು ಒಕ್ಕೂಟದಿಂದ ಹೊರಗುಳಿಯುವ ಸಾಧ್ಯತೆಯನ್ನು ಸ್ವಾಗತಿಸಿತು. ಮುಸ್ಲಿಂ ಬಹುಮತವುಳ್ಳ ಪ್ರಾಂತಗಳು, ಪ್ರದೇಶಗಳು, ಹಾಗೆಂದು ಅಪೇಕ್ಷಪಟ್ಟರೆ, ತಮ್ಮದೇ ಆದ ಒಂದು ಒಕ್ಕೂಟವನ್ನು ರಚಿಸಿಕೊಳ್ಳಲು ಸಾಧ್ಯವಿದೆ ಎಂಬ ಸೂಚನೆಯನ್ನು ಅದು ಘೋಷಣೆಯಲ್ಲಿ ಕಂಡಿತು. ಆದರೆ ಸಂವಿಧಾನವನ್ನು ತಯಾರಿಸಲು ವಿಧಿಸಿದ ವಿಧಾನ ಅಸ್ಪಷ್ಟವಾಗಿದೆ, ಯಾವುದೇ ಬದಲಾವಣೆಗಳಿಗೆ ಅವಕಾಶವಿಲ್ಲದಂತೆ ಕಟ್ಟುನಿಟ್ಟಾಗಿದೆ ಎಂಬ ಕಾರಣದಿಂದ ಲೀಗ್ ಘೋಷಣೆಯನ್ನು ತಿರಸ್ಕರಿಸಿತು. ಹಿಂದೂ ಮಹಾಸಭೆಯು ರಾಷ್ಟ್ರ ವಿಭಜನೆಯ ಭೀತಿಯನ್ನು ಮನಗಂಡು ಘೋಷಣೆಯನ್ನು ತಿರಸ್ಕರಿಸಿತು. ಸಿಖ್ಖ ಮತೀಯವಾದಿಗಳಿಗೆ ಮುಸ್ಲಿಂ ಬಹುಮತವಿರುವ ಪಂಜಾಬು ಒಕ್ಕೂಟದಿಂದ ಹೊರಗುಳಿದುಬಿಡಬಹುದೆಂಬ ಭೀತಿಯುಂಟಾಯಿತು. ಅಂಬೇಡ್ಕರ್ ಮತ್ತು ಎಂ.ಸಿ. ರಾಜಾ ಇವರೂ ಸೂಚನೆಗಳನ್ನು ತಿರಸ್ಕರಿಸಿದರು. "ಹರಿಜನ"ರು ಹಿಂದೂಗಳ ಜಾತಿ ಪಕ್ಷಪಾತಕ್ಕೆ ತುತ್ತಾಗುತ್ತಾರೆಂದು ಅವರು ಹೆದರಿದ್ದರು. ಹೀಗಾಗಿ ತತ್ಕಾಲಕ್ಕೆ ಕೊಟ್ಟ ಸೂಚನೆಗಳು ಅಸ್ಪಷ್ಟವೂ ಅತೃಪ್ತಿಕರವೂ ಆಗಿವೆ ಎಂದು ಭಾವಿಸಿದರು. ಆಡಳಿತದ ಮೇಲೆ ಭಾರತೀಯ ಹತೋಟಿ ಎನ್ನುವುದನ್ನು ಸ್ಪಷ್ಟವಾಗಿ ಹೇಳಿರದುದನ್ನು ಎಲ್ಲರೂ ಮನಗಂಡರು. 'ರಾಷ್ಟ್ರೀಯ ಸರಕಾರ'ದ ಬಗೆಗೆ ಮತ್ತು ಒಂದು 'ಮಂತ್ರಿಮಂಡಲ'ದ ಬಗೆಗೆ ಮಾತುಕತೆಗಳ ಮೊದಲಲ್ಲಿ ಹೇಳಿದ್ದ ಕ್ರಿಪ್ಸ್ ಇದ್ದಕ್ಕಿದ್ದಂತೆ ಅದರರ್ಥ, ವೈಸರಾಯರ ಎಕ್ಸಿಕ್ಯೂಟಿವ್ ಕೌನ್ಸಿಲಿನ ವಿಸ್ತರಣೆ ಮಾತ್ರ ಎಂದು ಹೇಳತೊಡಗಿದಾಗ ಸ್ವಯಮಾಡಳಿತದ ದಿಕ್ಕಿನಲ್ಲಿ ಅವನ ಸೂಚನೆಗಳು ಯಾವ ಸುಧಾರಣೆಯನ್ನೂ ತಂದಿರಲಿಲ್ಲವೆಂಬುದು ಎಲ್ಲರಿಗೂ ಸ್ಪಷ್ಟವಾಯಿತು. ಅಂತಿಮವಾಗಿ ಸೂಚನೆಗಳನ್ನು ತಿರಸ್ಕರಿಸಲಾಯಿತು, ಕ್ರಿಪ್ಸ್ ಆಯೋಗ ಬಿಕ್ಕಟ್ಟನ್ನು ಪರಿಹರಿಸುವಲ್ಲಿ ವಿಫಲವಾಗಿತ್ತು.

### *1942ರ ದಂಗೆ*

ಕ್ರಿಪ್ಸ್ ಆಯೋಗದ ವಿಫಲತೆ ದೇಶವನ್ನು ನಿರಾಶೆ ಮತ್ತು ಕ್ರೋಧಗಳಿಗೆ ತಳ್ಳಿತು. ಅನೇಕ ವಲಯಗಳಲ್ಲಿ ಕ್ಷೋಭೆ ಕಂಡುಬಂದಿತು. ಇದಕ್ಕೆ ಅಪವಾದವಾಗಿದ್ದವರೆಂದರೆ ಮುಸ್ಲಿಂ ಲೀಗ್ ಹಾಗೂ ಯುದ್ಧವು ಒದಗಿಸಿದ ಉದ್ಯೋಗಾವಕಾಶಗಳು ಮತ್ತು ಕಾಂಟ್ರಾಕ್ಟುಗಳಿಂದ ಲಾಭ ಪಡೆದ ವ್ಯಕ್ತಿಗಳು ಮಾತ್ರ. ಪ್ರಶ್ನೆ ಮುಂದಿನ ಹೆಜ್ಜೆ ಏನು ಎಂಬುದು. ಸ್ಥಿತಿಯೆ ಅಸಹನೀಯವಾಗಿತ್ತು.

ಕ್ರಿಪ್ಸ್ ನೀಡಿಕೆಯಲ್ಲಿ ಗಾಂಧೀಜಿ ಅಷ್ಟಾಗಿ ಆಸಕ್ತಿ ತೋರಿಸಿರಲಿಲ್ಲ, ಆದರೆ ಆಯೋಗವು ವಿಫಲವಾದುದರಿಂದ ಅವರಿಗೆ ಬಹುವಾಗಿ ನಿರಾಶೆಯುಂಟಾಗಿತ್ತು.

ಆಗ್ನೇಯ ಏಷ್ಯಾದಲ್ಲಿನ ಬೆಳವಣಿಗೆಗಳಿಂದಲೂ ಅವರಿಗೆ ತುಂಬ ಮನಃಕ್ಷೋಭೆಯುಂಟಾಗಿತ್ತು. ಮಲಯಾ, ಸಿಂಗಪುರ ಮತ್ತು ಬರ್ಮಾಗಳಿಂದ ಬ್ರಿಟಿಷರು ಕಾಲ್ತೆಗೆದುದರ ಹಿಂದೆಯೇ ಸ್ಥಳೀಯ ಪ್ರತಿಭಟನೆ ಕುಸಿದು, ಜಪಾನೀಯರಿಗೆ ಆ ರಾಜ್ಯಗಳು ಸಂಪೂರ್ಣವಾಗಿ ಬೇಷರತ್ತಾಗಿ ಶರಣಾಗತವಾದುವು. ಫಿಲಿಪೈನ್ಸ್ ಮತ್ತು ಇಂಡೋನೇಷಿಯಾಗಳಿಗೂ ಇದೇ ಗಂಡಾಂತರ ಪ್ರಾಪ್ತವಾಯಿತು. ಬಂಗಾಳದಲ್ಲಿ ಸಾವಿರಾರು ಚಿಕ್ಕ ದೋಣಿಗಳನ್ನು ನಾಶಮಾಡಲಾಯಿತು. ಪೂರ್ವದ ಗಡಿಯಿಂದ ಒಂದು ವೇಳೆ ಆಕ್ರಮಣ ಬಂದದ್ದೇ ಆದರೆ ಅವರು ಶತ್ರುಗಳ ಕೈಗೆ ಬೀಳದ ಹಾಗೆ ಮಾಡಲು ಈ ಕ್ರಮ ಕೈಗೊಳ್ಳಲಾಯಿತು. ಈ ಗಂಡಾಂತರದಿಂದ ಭಾರತಕ್ಕೆ ಮುಂದೆ ಯಾವ ಸ್ಥಿತಿ ಕಾದಿದೆ ಎಂಬುದು ಸೂಚಿತವಾಗುತ್ತಿತ್ತು. ಬಂಗಾಳದ ಅರ್ಥವ್ಯವಸ್ಥೆಗೆ ತೀವ್ರ ಅಪಾಯ ಬಂದದ್ದು ಮಾತ್ರವಲ್ಲ, ಆಹಾರ ವಸ್ತುಗಳ ಹಂಚಿಕೆಯಲ್ಲಿ ಭಾರೀ ಬಿಕ್ಕಟ್ಟು ಉಂಟಾಯಿತು. ಮಲಯಾ ಮತ್ತು ಬರ್ಮಾಗಳಲ್ಲಿ ಏನು ನಡೆಯಿತೋ ಅದೇ ಭಾರತದಲ್ಲೂ ಪುನರುಕ್ತವಾಗಬಾರದೆಂದು ಗಾಂಧೀಜಿ ಮತ್ತು ಕಾಂಗ್ರೆಸ್ ನಾಯಕರು ಕಾತರತೆಯಿಂದ ಆಶಿಸುತ್ತಿದ್ದರು. ಮಿಲಿಟರಿ ಆಕ್ರಮಣವನ್ನು ಕಂಡಾಗ ಜನ ಅತಿಯಾದ ಭೀತಿಯನ್ನು ವ್ಯಕ್ತಪಡಿಸಿದರು. ಬಿಕ್ಕಟ್ಟನ್ನು ದೃಢವಾದ ಪ್ರತಿಭಟನೆಯಿಂದ ಅವರು ಎದುರಿಸಲಿಲ್ಲ. ಇದೂ ಭಾರತದಲ್ಲಿ ಆಗಬಾರದು. ಗಾಂಧೀಜಿ ನಿರ್ಧರಿಸಿದರು. ಭಾರತದ ಜನ ಭೀತಿಯನ್ನು ಕಳೆದುಕೊಂಡು ಆಕ್ರಮಣಕಾರರೆದುರಾಗಿ ಹೋರಾಡುವ ಶಕ್ತಿ ಪಡೆಯುವಂತೆ ಮಾಡಬೇಕಾದರೆ, ಇರುವ ಒಂದೇ ಒಂದು ಮಾರ್ಗ, ತಮಗೆ ತಾವೇ ಯಜಮಾನರು ಎಂದು ಮಾತ್ರವಲ್ಲದೆ, ದೇಶದ ರಕ್ಷಣೆ ಅವರ ಕರ್ತವ್ಯ, ರಕ್ಷಣೆ ಬ್ರಿಟಿಷರ ಹೊಣೆಗಾರಿಕೆ ಎಂದು ತಮ್ಮ ಜವಾಬ್ದಾರಿ ಕಳೆದುಕೊಳ್ಳುವುದು ಸಲ್ಲದು ಎಂಬ ಅರಿವು ಅವರಲ್ಲಿ ಮೂಡುವಂತೆ ಮಾಡುವುದು. ಆದ್ದರಿಂದ ಬ್ರಿಟಿಷರು ಅಧಿಕಾರವನ್ನು ಭಾರತೀಯರ ಕೈಗೊಪ್ಪಿಸಿ ತೆರಳಬೇಕು ಎಂದು ಕರೆಕೊಡುವ ಒಂದು ಚಳುವಳಿಯನ್ನು ಹೂಡಲು ಗಾಂಧೀಜಿ ನಿರ್ಧರಿಸಿದರು. ಅವರು ವಿವರಿಸಿದರು: "ವಿಚಾರದ ಹೊಸತನ, ಅದರಲ್ಲೂ ಇಂಥದೊಂದು ಸಂದಿಗ್ಧ ಸಮಯದಲ್ಲಿ, ಅನೇಕ ಜನರಿಗೆ ಆಘಾತ ಉಂಟುಮಾಡುತ್ತದೆ ಎಂಬುದು ನನಗೆ ಗೊತ್ತು. ನನ್ನನ್ನು ಜನ ಹುಚ್ಚನೆಂದು ಕರೆಯಲೂಬಹುದು. ಆದರೂ ನಾನು ನನ್ನೊಳಗಿನ ನಿಜಕ್ಕೆ ತಕ್ಕಂತೆ ವರ್ತಿಸಬೇಕಾಗಿದ್ದರೆ, ಸತ್ಯವನ್ನು ಹೇಳಲೇಬೇಕು. ಅದನ್ನು ನಾನು ಯುದ್ಧಕ್ಕೆ, ಭಾರತವನ್ನು ಗಂಡಾಂತರದಿಂದ ಪಾರುಮಾಡುವುದಕ್ಕೆ ನನ್ನ ಕಡೆಯಿಂದ ಬಂದ ದೊಡ್ಡ ಕಾಣಿಕೆ ಎಂದು ಪರಿಗಣಿಸುತ್ತೇನೆ."

ಅಂಥದೊಂದು ತೀವ್ರವಾದ ಬೇಡಿಕೆಯನ್ನು ಮುಂದಿಡಲು ಸಮಯ ತಕ್ಕುದಾಗಿರಲಿಲ್ಲ ಎಂದು ಅನೇಕ ನಾಯಕರು ಭಾವಿಸಿದರು. ಒಂದು ಕಡೆ ತೀವ್ರ ಗಾಬರಿ ಮತ್ತು ಅನಾಯಕತೆಗಳ ಪರಿಣಾಮವುಂಟಾಗಬಹುದು ಎಂದೂ, ಇನ್ನೊಂದು ಕಡೆ, ಜನರು ಜಪಾನಿನಂತಹ ನಿರ್ದಯ ಶತ್ರುವಿಗೆ ನಿಸ್ಸಹಾಯಕರಾಗಿ ಅಧೀನರಾಗುವ ಭೀತಿ ಇವುಗಳಿಗೆ ಅವರು ಹೆದರಿದ್ದರು. ನೆಹರೂ ಅವರ ಆಲೋಚನೆಗಳೇ ಬೇರೆಯಾಗಿದ್ದುವು. ಕ್ರಿಪ್ಸ್ ಆಯೋಗವು ವಿಫಲವಾದದ್ದರಿಂದ

ನಾಯಕರಿಗೆ ರಾಷ್ಟ್ರದ ರಕ್ಷಣೆಯಲ್ಲಿ ಪೂರ್ಣ ಪ್ರಮಾಣದಲ್ಲಿ ಸಹಕಾರ ನೀಡುವ ಅವಕಾಶ ತಪ್ಪಿತು. ಮಿತ್ರ ರಾಷ್ಟ್ರಗಳು ನಡೆಸುತ್ತಿದ್ದ ಫ್ಯಾಸಿಸ್ಟ್-ವಿರೋಧೀ ಪ್ರಯತ್ನಗಳ ವಿಫಲತೆಯಲ್ಲಿ ಪರ್ಯವಸಾನವಾಗುವಂತೆ ಬೃಹತ್ ಚಳುವಳಿಗೆ ರಾಷ್ಟ್ರ ಈಗ ಧುಮುಕಬೇಕೆ ? ಭಾರತದ ಮೇಲೆ ಬ್ರಿಟನ್ನಿನ ಸಾಮ್ರಾಜ್ಯಶಾಹೀ ಆಡಳಿತದ ವಿರುದ್ಧವಾದ ಹೋರಾಟ, ವಿರೋಧ ಶಕ್ತಿಗಳ ಮೇಲೆ ಯುದ್ಧಮಾಡುತ್ತಿರುವ ರಷ್ಯಾ ಮತ್ತು ಚೀನಾಗಳನ್ನು ಕೈಬಿಡುವುದು ಈ ಎರಡರಲ್ಲಿ ಒಂದನ್ನು ಆರಿಸಿಕೊಳ್ಳ ಬೇಕಾಗಿದ್ದುದರತ್ತ ಅವರು ವಿಶೇಷವಾಗಿ ಗಮನ ಹರಿಸಿದ್ದರು.

ಬಹು ದೀರ್ಘವಾದ, ಕಟುವಾದ ವಾದಗಳು ಚರ್ಚೆಗಳು ನಡೆದುವು. ಗಾಂಧೀಜಿ ದೃಢವಾಗಿದ್ದರು, ಆದರೆ ಬಹಳಷ್ಟು ಮಟ್ಟಿಗೆ ಒಲಿಸಬಲ್ಲವರಾಗಿದ್ದರು. ಬ್ರಿಟಿಷ್ ಸೈನ್ಯಗಳು ಬೇಕಾದರೆ ಭಾರತದಲ್ಲಿ ಉಳಿದುಕೊಳ್ಳಬಹುದು ಎಂದು ಅವರು ಒಪ್ಪಿದರು. ಇಲ್ಲಿ ನಿಂತು ಯುದ್ಧಮಾಡಲು ನೆಲೆಗಳನ್ನು ಬೇಕಾದರೂ ಅವರು ಮಾಡಿಕೊಳ್ಳಬಹುದು. ಇದು ರಾಜಕೀಯ ಅಧಿಕಾರವನ್ನು ತತ್‌ಕ್ಷಣವೇ ಭಾರತಕ್ಕೆ ವರ್ಗಾಯಿಸಬೇಕೆಂಬ ಷರತ್ತಿನ ಮೇಲೆ ಮಾತ್ರ. ಇದು ಒಪ್ಪಿಗೆಯಾಗದಿದ್ದರೆ ತಾವು ಕಾಂಗ್ರೆಸ್ಸನ್ನೇ ತ್ಯಜಿಸುವುದಾಗಿಯೂ "ಭಾರತದ ನೆಲದಿಂದ ಹೊರಗೆ ಕಾಂಗ್ರೆಸ್ಸಿಗಿಂತಲೂ ಬೃಹತ್ತಾದ ಚಳುವಳಿಯನ್ನು ರೂಪಿಸುವುದಾಗಿಯೂ" ಗಾಂಧೀಜಿ ಹೇಳಿದರು.

ಜುಲೈ ಮೊದಲ ಭಾಗದಲ್ಲಿ ಕಾರ್ಯಕಾರೀ ಸಮಿತಿಯು ವಾರ್ಧಾದಲ್ಲಿ ಸಭೆ ಸೇರಿ "ರಾಷ್ಟ್ರೀಯ ಬೇಡಿಕೆ"ಯನ್ನು ರೂಪಿಸಿತು. ಭಾರತೀಯರಿಗೆ ತಕ್ಷಣವೇ ಅಧಿಕಾರ ವನ್ನು ವರ್ಗಾಯಿಸಬೇಕೆಂದೂ "ಭಾರತವನ್ನು ಬಿಟ್ಟು ತೊಲಗಿ"ರೆಂದೂ (Quit India) ಬ್ರಿಟನ್ನಿಗೆ ಕರೆಕೊಟ್ಟಿತು. ಈ ಸೂಚನೆಯನ್ನು ತಿರಸ್ಕರಿಸಿದ್ದೇ ಆದರೆ, "ಕಾಂಗ್ರೆಸ್ಸು ತನಗಿಷ್ಟವಿಲ್ಲದಿದ್ದರೂ 1920 ರಿಂದಲೂ ತಾನು ಸಂಚಯಗೊಳಿಸಿ ಕೊಂಡಿರುವ ಸಮಸ್ತ ಅಹಿಂಸಾತ್ಮಕ ಶಕ್ತಿಯನ್ನೂ ಉಪಯೋಗಿಸಲೇಬೇಕಾಗುತ್ತದೆ" ಎಂದು ಹೇಳಿತು. ಹಾಗೆ ಉಪಯೋಗಿಸಿ ನೇರ ಕ್ರಿಯೆಯ ಚಳುವಳಿ ಹೂಡಬೇಕಾಗುತ್ತದೆ ಎಂದಿತು. ಈ ನೀತಿಯ ನಿರ್ಧಾರವನ್ನು ಅನುಮೋದಿಸಲು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ (A.I.C.C.) ಅಧಿವೇಶನವು ಆಗಸ್ಟ್ 7 ನೆಯ ತಾರೀಖು ಮುಂಬಯಿಯಲ್ಲಿ ಸೇರತಕ್ಕದ್ದೆಂದು ತೀರ್ಮಾನವಾಯಿತು.

ಈ ಮಧ್ಯೆ ಚೈನಾದ ಜನರಲ್ ಚಿಯಾಂಗ್ ಕೈಷೇಕ್ ಮತ್ತು ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ರೂಸ್‌ವೆಲ್ಟ್, ಬಿಕ್ಕಟ್ಟನ್ನು ಪರಿಹರಿಸಿಕೊಂಡು ಭಾರತದೊಂದಿಗೆ ಸಂಧಾನಕ್ಕೆ ಬರಬೇಕೆಂದು ಬ್ರಿಟನ್ನಿನ ಮನವೊಲಿಸಲು ಪ್ರಯತ್ನಿಸಿದರು. ಆದರೆ ಚರ್ಚಿಲ್ (Churchill) ಸಂಧಾನ ಮನೋಭಾವವುಳ್ಳವರಾಗಿರಲಿಲ್ಲ. ಅವರು ಬಹಿರಂಗವಾಗಿ ಘೋಷಿಸಿದರು: ತಾವು "ಚಕ್ರವರ್ತಿಯ ಪ್ರಧಾನಮಂತ್ರಿಯಾಗಿರು ವುದು ಬ್ರಿಟಿಷ್ ಸಾಮ್ರಾಜ್ಯವನ್ನು ದಿವಾಳಿಯೆಬ್ಬಿಸುವುದಕ್ಕಲ್ಲ" ಎಂಬುದಾಗಿ.

ಮುಂಬಯಿಯಲ್ಲಿ ನಡೆದ 1942 ರ ಆಗಸ್ಟ್ ತಿಂಗಳ ಎ.ಐ.ಸಿ.ಸಿ. ಅಧಿವೇಶನ ಇತಿಹಾಸ ಪ್ರಸಿದ್ಧವಾಗಿದೆ. ಅದು ಪ್ರಸಿದ್ಧವಾದ 'ಭಾರತದಿಂದ ತೊಲಗಿ' (ಕ್ವಿಟ್

ಇಂಡಿಯಾ) ನಿರ್ಣಯವನ್ನು ಅಂಗೀಕರಿಸಿತು. ಆದರೆ ಅದೇನೂ ನೀರಸವಾದ, ಸಂಧಾನಕ್ಕೆಡೆಯೇ ಇಲ್ಲದ ಬೇಡಿಕೆಯಾಗಿರಲಿಲ್ಲ. ಯುದ್ಧಪ್ರಯತ್ನಕ್ಕೆ ಸಹಕಾರ ನೀಡುವ ಒಂದು ಸೂಚನೆಯೂ ಅದರಲ್ಲಿತ್ತು. ಅದು ಸರಕಾರವನ್ನು ಯಾವುದಾದರೂ ಒಂದು ತೀರ್ಮಾನಕ್ಕೆ ಬರುವಂತೆ ತಕ್ಷಣವೇ ಕಾರ್ಯತತ್ಪರವಾಗುವಂತೆ ಸವಾಲು ಹಾಕಿತು. "ಭಾರತದ ಸ್ವಾತಂತ್ರ್ಯವನ್ನು ಘೋಷಿಸಿದೊಡನೆಯೇ ತಾತ್ಕಾಲಿಕ ಸರಕಾರವನ್ನು ರಚಿಸಲಾಗುವುದು, ಮತ್ತು ಸ್ವತಂತ್ರ ಭಾರತವು ಸಂಯುಕ್ತ ರಾಷ್ಟ್ರಗಳ ಮಿತ್ರರಾಷ್ಟ್ರವಾಗುವುದು; ಮುಸ್ಲಿಂ ಲೀಗಿಗೆ "ಒಕ್ಕೂಟದಲ್ಲಿ ಅಂತರ್ಗತವಾಗುವ ಘಟಕಗಳಿಗೆ ಆತ್ಯಧಿಕ ಪ್ರಮಾಣದ ಸ್ವಾಯಮಾಡಳಿತ, ಈ ಘಟಕಗಳಿಗೆ ಉಳಿದ ಅಧಿಕಾರಗಳ ಭರವಸೆ" ಇವುಗಳನ್ನೊಳಗೊಂಡ ಸಂವಿಧಾನವನ್ನು ಒದಗಿಸುವುದಾಗಿ ಮಾತು ಕೊಡಲಾಯಿತು. ಮುಕ್ತಾಯ ಮಾಡುತ್ತಾ ನಿರ್ಣಯ ಹೇಳಿತು: "ಸಾಮ್ರಾಜ್ಯಶಾಹೀ, ದಬ್ಬಾಳಿಕೆಯ ಅಧಿಕಾರದ ವಿರುದ್ಧವಾಗಿ ತನ್ನ ಸ್ಥಾನವನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನದಲ್ಲಿ ರಾಷ್ಟ್ರವನ್ನು ಇನ್ನು ತಡೆಯುವುದರಲ್ಲಿ ಅರ್ಥವಿಲ್ಲ... ಆದ್ದರಿಂದ ಅಹಿಂಸಾಮಾರ್ಗದಲ್ಲಿ ಸಾರ್ವತ್ರಿಕ ಹೋರಾಟವನ್ನು ಪ್ರಾರಂಭಿಸುವುದಕ್ಕೆ ಸಮಿತಿಯು ಅನುಮತಿ ಕೊಡುತ್ತದೆ. ಎಷ್ಟು ಸಾಧ್ಯವೋ ಅಷ್ಟು ವ್ಯಾಪಕವಾದ ಪ್ರಮಾಣದಲ್ಲಿ ನಡೆಯುವ ಆ ಹೋರಾಟ... "ಕಡ್ಡಾಯವಾಗಿ ಗಾಂಧೀಜಿಯವರ ನೇತೃತ್ವದಲ್ಲಿಯೇ ನಡೆಯತಕ್ಕದ್ದು."

ನಿರ್ಣಯವನ್ನು ಅಂಗೀಕರಿಸಿದ ಮೇಲೆ ಗಾಂಧೀಜಿ ಅಲ್ಲಿ ನೆರೆದ ಪ್ರತಿನಿಧಿಗಳನ್ನು ಉದ್ದೇಶಿಸಿ ಮಾತನಾಡಿದರು. ಭಾಷಣದ ನಡುವೆ ಅವರು ಹೇಳಿದರು: "ವಾಸ್ತವವಾದ ಹೋರಾಟ ಈ ಕ್ಷಣದಿಂದಲೇ ಪ್ರಾರಂಭವಾಗುವುದಿಲ್ಲ. ನೀವು ಕೆಲವು ಅಧಿಕಾರಗಳನ್ನು ಈಗ ನನ್ನ ಕೈಯಲ್ಲಿ ಇಟ್ಟಿದ್ದೀರಿ ಅಷ್ಟೆ. ನನ್ನ ಮೊದಲನೆಯ ಕೆಲಸ, ಸನ್ಮಾನ್ಯ ವೈಸರಾಯ್ ಅವರನ್ನು ಕಂಡು ಕಾಂಗ್ರೆಸ್ ಬೇಡಿಕೆಯನ್ನು ಒಪ್ಪಿಕೊಳ್ಳಿರೆಂದು ಅವರಿಗೆ ಮನವಿ ಮಾಡಿಕೊಳ್ಳುವುದು. ಇದಕ್ಕೆ ಎರಡು ಮೂರು ವಾರಗಳು ಬೇಕಾಗಬಹುದು. ಈ ಮಧ್ಯೆ ನೀವು ಏನು ಮಾಡುತ್ತೀರಿ? ಚರಕವೇನೋ ಇದೆ. ಆದರೆ ನೀವು ಮಾಡಬೇಕಾದ ಇನ್ನೂ ಹೆಚ್ಚಿನ ಇನ್ನೊಂದು ಕೆಲಸವಿದೆ. ನಿಮ್ಮಲ್ಲಿ ಪ್ರತಿಯೊಬ್ಬನೂ ಈ ಕ್ಷಣದಿಂದ ಮುಂದಕ್ಕೆ ತಾನು ಸ್ವತಂತ್ರ ಗಂಡಸು ಅಥವಾ ಹೆಂಗಸು ಎಂದು ತಿಳಿದುಕೊಳ್ಳಬೇಕು. ಈ ಸಾಮ್ರಾಜ್ಯಶಾಹಿಯ ಕಾಲ ಕೆಳಗೆ ಸಿಕ್ಕಿರದ ಸ್ವತಂತ್ರ ವ್ಯಕ್ತಿಯೆಂಬಂತೆ ವರ್ತಿಸಲೂ ಬೇಕು...."

ಆದರೆ ಸರಕಾರ ಗಾಂಧೀಜಿಯವರು ವೈಸರಾಯ್ ಅವರನ್ನು ಸಂಧಿಸುವವರೆಗೆ ಕಾಯಲಿಲ್ಲ. ಅಧಿಕಾರಿ ಪಡೆ ಸಿದ್ಧವಾಗಿಯೇ ಇತ್ತು, ಮಿಂಚಿನ ವೇಗದಲ್ಲಿ ಪೈಶಾಚಿಕ ಆವೇಶದಿಂದ ಕೆಲಸಮಾಡಿತು. ಎ.ಐ.ಸಿ.ಸಿ. ಅಧಿವೇಶನವಾದ ಕೆಲವೇ ಗಂಟೆಗಳಲ್ಲಿ ಆಗಸ್ಟ್ 8ರಂದು ರಾತ್ರಿ ಬಹಳ ಹೊತ್ತಿನ ಮೇಲೆ ಗಾಂಧೀಜಿಯವರನ್ನೂ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಇತರ ಸದಸ್ಯರನ್ನೂ ಬಂಧಿಸಿ ಒಂದು ವಿಶೇಷ ರೈಲಿನಲ್ಲಿ ಬೊಂಬಾಯಿಸಿಂದ ಆಚೆಗೆ ಕರೆದುಕೊಂಡು ಹೋದರು. ಗಾಂಧೀಜಿಯನ್ನು ಪೂನಾದ ಆಗಾಖಾನ್ ಅರಮನೆಯಲ್ಲಿಟ್ಟರು. ಮಿಕ್ಕವರನ್ನು ಅಹಮದ್ ನಗರ ಕೋಟೆಗೆ ಕಳುಹಿಸಿದರು.

ಕ್ವಿಟ್ ಇಂಡಿಯಾ ನಿರ್ಣಯ, ನಾಯಕರ ಬಂಧನ-ಎರಡು ಸುದ್ದಿಗಳೂ ಜನರಿಗೆ ಒಟ್ಟಿಗೆ ಒಂದೇ ಸಾರಿ ಆಗಸ್ಟ್ 9 ರಂದು ತಲುಪಿತು. ಜನ ಗಾಬರಿಗೊಂಡರು. ಅವರ ಪ್ರತಿಕ್ರಿಯೆ ತಕ್ಷಣವೇ ವ್ಯಕ್ತವಾಯಿತು, ಸ್ವಪ್ರೇರಣೆಯಿಂದ ಮೂಡಿಬಂದಿತು. ಜೀವನವೇ ಸ್ಥಗಿತವಾದಂತೆ ಕಂಡಿತು. ಎಲ್ಲ ವ್ಯವಹಾರಗಳನ್ನೂ ನಿಲ್ಲಿಸಲಾಯಿತು. ಪ್ರತಿಯೊಂದು ನಗರವೂ ಪಟ್ಟಣವೂ ಹರತಾಳ ಆಚರಿಸಿತು. ಪ್ರದರ್ಶನಗಳು ಮೆರವಣಿಗೆಗಳು ಎಲ್ಲೆಲ್ಲೂ ನಡೆದುವು. ನಾಯಕರನ್ನು ಬಿಡುಗಡೆ ಮಾಡಬೇಕೆಂಬ ಘೋಷಣೆಗಳು, ರಾಷ್ಟ್ರಗೀತೆಗಳು ಗಗನವನ್ನು ತುಂಬಿದುವು. ಆದರೂ ಎಲ್ಲೂ ಹಿಂಸೆ ನಡೆಯಲಿಲ್ಲ. ಅವರು ಕ್ಷುಬ್ಧರಾಗಿದ್ದರೂ ಉದ್ವಿಗ್ನರಾಗಿದ್ದರೂ ಒಟ್ಟಿನಲ್ಲಿ ಜನ ಸಮೂಹವು ಶಾಂತಿಯಿಂದಿತ್ತು. ಆದರೆ ಎಲ್ಲೆಲ್ಲೂ ಬಿಕ್ಕಟ್ಟು ಪರಿಸ್ಥಿತಿ. ಜನಸಮೂಹದ ಅಗಾಧ ಗಾತ್ರವೇ ಸರಕಾರದ ಮೈ ನಡುಗಿಸುತ್ತಿತ್ತು. ಜನಜಂಗುಳಿಯು ಎಚ್ಚರಿಕೆಗಳಿಗೆ ಮಣಿಯದೆ ಚದುರಲು ನಿರಾಕರಿಸಿದಾಗ ಪೊಲೀಸರು ಅನಿವಾರ್ಯವಾಗಿ ಗೋಲೀಬಾರು ಮಾಡಬೇಕಾಯಿತು. ದೆಹಲಿ ಯೊಂದರಲ್ಲೇ ಎರಡು ದಿನಗಳಲ್ಲಿ (ಆಗಸ್ಟ್ 11 ಮತ್ತು 12) ನಲವತ್ತೇಳು ಬೇರೆ ಬೇರೆ ಸಂಧರ್ಭಗಳಲ್ಲಿ ಪೊಲೀಸರು ನಿರಾಯುಧರಾಗಿದ್ದ ಜನಸಮೂಹದ ಮೇಲೆ ಗುಂಡು ಹಾರಿಸಿದರು. ಎಪ್ಪತ್ತಾರು ಜನ ಸತ್ತು ನೂರ ಹದಿನಾಲ್ಕು ಜನ ತೀವ್ರವಾಗಿ ಗಾಯಗೊಂಡರು. ಎಲ್ಲ ಕಡೆಯೂ ನಡೆದದ್ದು ಇಷ್ಟ-ಬಹಿರಂಗ ಪ್ರತಿಭಟನಾ ಪ್ರದರ್ಶನಗಳು, ಪೊಲೀಸರ ಹಿಂಸೆ ಮತ್ತು ಗುಂಡೆಸೆತ, ಬಂಧನಗಳು.

ಪರಿಸ್ಥಿತಿ ಬಹುಬೇಗ ಹತೋಟಿ ತಪ್ಪಿತು. ಜನರಿಗೆ ಸೂಕ್ತ ನಿರ್ದೇಶನವಿರಲಿಲ್ಲ. ನಾಯಕರಲ್ಲಿ ಬಹುಮಂದಿ ಸೆರೆಮನೆಗಳಲ್ಲಿದ್ದರು. ಮತ್ತೆ ಕೆಲವರು ಭೂಗತರಾಗಿದ್ದರು. ಉದ್ವೇಗಗಳೋ ಮುಗಿಲುಮುಟ್ಟುತ್ತಿದ್ದುವು. ವ್ಯಕ್ತಿಗಳು, ಗುಂಪುಗಳು ಪರಿಸ್ಥಿತಿಯನ್ನು ತಮ್ಮ ತಮ್ಮ ಅಳವಿಗೆ ತಕ್ಕಂತೆ ವ್ಯಾಖ್ಯಾನಿಸುತ್ತಿದ್ದರು. ನಿರಂತರವಾದ ಪೊಲೀಸ್ ದಬ್ಬಾಳಿಕೆ ಮತ್ತು "ಸುಗ್ರೀವಾಜ್ಞೆಗಳ ಸರಕಾರ" ಜನರ ಭಾವನೆಗಳಿಗೆ ಬೆಂಕಿಯಿಟ್ಟು ಇನ್ನೂ ಕೆರಳಿಸಿತು. ನಾಗರಿಕ ಅಸಹಕಾರ ನಡೆಯಬೇಕೆಂದು ಕಾಂಗ್ರೆಸ್ ಕರೆ ಕೊಟ್ಟಿರಲಿಲ್ಲ. ಆದ್ದರಿಂದ ವೈಯಕ್ತಿಕ ಕ್ರೋಧಚರ್ಯೆಯಾಗಿ ಪ್ರಾರಂಭವಾದದ್ದು ಬೇಗನೆ ಒಂದು ಚಳುವಳಿಯಾಗಿ, ಅದು ಒಂದು ದಂಗೆಯಾಗಿ ಭುಗಿಲೆದ್ದಿತು.

ಈ ದಂಗೆಯಲ್ಲಿ ಮುನ್ನುಗ್ಗಿದವರು ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ಕೃಷಿಕರು. ಫ್ಯಾಕ್ಟರಿಗಳಲ್ಲಿ, ಶಾಲಾಕಾಲೇಜುಗಳಲ್ಲಿ ಮುಷ್ಕರಗಳಾದುವು. ಬ್ರಿಟಿಷ್ ಅಧಿಕಾರದ ಸಂಕೇತಗಳೆಂದು ಭಾವಿಸಲಾಗಿದ್ದ ಅಂಚೆಕಚೇರಿಗಳು ಮತ್ತು ರೈಲು ನಿಲ್ದಾಣಗಳನ್ನು ಸುಡುವ ಇಲ್ಲವೇ ನಾಶಮಾಡುವ ಕೃತ್ಯಗಳು ನಡೆದುವು. ಆಮೇಲೆ ಅಲ್ಲಲ್ಲಿ ಆಸ್ತಿ ಹಾನಿಯ ಕೃತ್ಯಗಳೂ ಸಂಭವಿಸಿದುವು. ಟೆಲಿಫೋನ್ ತಂತಿಗಳನ್ನು ಕಿತ್ತರು. ರೈಲುಗಳನ್ನು ಕಂಬಿ ತಪ್ಪಿಸಿ ಉರುಳಿಸುವ ಪ್ರಯತ್ನಗಳನ್ನು ಮಾಡಿದರು. ರೈತರನ್ನು ಕಂದಾಯವನ್ನು ಕೊಡಕೂಡದೆಂದು ಒಂದೇ ಸಮನೆ ಒತ್ತಾಯ ಪಡಿಸುತ್ತಲೇ ಹೋದರು. ಅನೇಕ ಕಡೆ ಸರಕಾರದ ಘಟಕವು ದಿನಗಟ್ಟಲೆ ವಾರಗಟ್ಟಲೆ ಕೆಲಸಮಾಡದೆ ಹೋದಾಗ ರೈತರು ಬದಲಿ ಅಧಿಕಾರಗಳನ್ನು ಸ್ಥಾಪಿಸಿಕೊಂಡರು.

ಬೇಲಿಯಾ (Belia) ದಲ್ಲಿ ಸ್ಥಳೀಯ ನಾಯಕರು ನಗರವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಅವರನ್ನು ಬಿಡಿಸಲು ಸಶಸ್ತ್ರ ಸೈನ್ಯದಳ ಬರಬೇಕಾಯಿತು. ಸುತಾಹತಾ (Sutahata) ದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿಕವರ್ಗವು ಬ್ರಿಟಿಷ್ ಆಳಿಕೆಗೆದುರಾಗಿ ಭೂಗತ ಗೆರಿಲ್ಲಾ ಹೋರಾಟವನ್ನು ಪ್ರಾರಂಭಿಸಿತು. ಇದು 1944 ರ ವರೆಗೂ ಮುಂದುವರಿಯಿತು. ಈ ಭೂಗತ ಚಳುವಳಿಯ ನಾಯಕರಲ್ಲಿ ಮುಖ್ಯರಾಗಿದ್ದವರು ಜಯಪ್ರಕಾಶ್ ನಾರಾಯಣ್, ರಾಮಮನೋಹರ ಲೋಹಿಯಾ ಮತ್ತು ಅರುಣಾ ಆಸಫ್ ಆಲಿ. ಕ್ರಾಂತಿಕಾರಕ ಹಿಂಸಾಕಾಂಡ ಬೃಹತ್ ಪ್ರಮಾಣದಲ್ಲಿ ಎಲ್ಲೆಲ್ಲೂ ಕಂಡುಬಂದಿತು. ಇದು ಬ್ರಿಟಿಷ್ ಇಂಡಿಯಕ್ಕೆ ಮಾತ್ರವೇ ಮೀಸಲಾಗಿರಲಿಲ್ಲ. ಅನೇಕ ದೇಶೀಯ ಸಂಸ್ಥಾನಗಳಲ್ಲೂ ಜನರು ಇದೇ ಪ್ರತಿಕ್ರಿಯೆ ತೋರಿಸಿದ್ದರು. ಸರಕಾರ ತಕ್ಷಣವೇ ಪ್ರತಿಕ್ರಿಯೆ ತೋರಿಸಿತು. ಲಾಠಿ ಹೊಡೆತಗಳು, ಗೋಳೀಬಾರುಗಳು, ಸಾಮೂಹಿಕ ಬಂಧನಗಳು ದೇಶಾದ್ಯಂತ ಎಷ್ಟು ಸಾಮಾನ್ಯವಾದುವೆಂದರೆ ದೇಶವು ಒಂದು ಪೋಲೀಸ್ ರಾಜ್ಯವಾಗಿ ಪರಿವರ್ತಿತ ವಾಗಿತ್ತು. ನಿರಾಯುಧ ಜನತೆಯ ಗುಂಪಿನ ಮೇಲೆ ಮೆಷಿನ್‌ಗನ್ನುಗಳಿಂದ ಗುಂಡು ಹಾರಿಸಿದ ಸಂದರ್ಭಗಳು ಹಲವಾರು. ಪೋಲೀಸ್ ಕ್ರೌರ್ಯಗಳು ದಿನನಿತ್ಯದ ಘಟನೆಗಳಾದುವು. ಜುಲ್ಮಾನೆಗಳು ತಪ್ಪುದಂಡಗಳು, ಕ್ಷಿಪ್ರ ವಿಚಾರಣೆ ಶಿಕ್ಷೆಗಳು ಬಹುಸಾಮಾನ್ಯವಾದುವು. ಕ್ರಾಂತಿ ಸಜೀವವಾಗಿದ್ದದ್ದು ಸ್ವಲ್ಪ ಕಾಲ, ಆದರೆ ಅದರ ಉತ್ಕಟತೆ ಮಾತ್ರ ಅಪಾರವಾಗಿತ್ತು. ಕೊನೆಗೂ ಸರಕಾರ ಅದನ್ನು ಅಡಗಿಸಿತ್ತು. ಆದರೆ ಪೋಲೀಸ್ ಮತ್ತು ಮಿಲಿಟರಿ ಗೋಳೀಬಾರುಗಳಿಂದ ಹತ್ತುಸಾವಿರಕ್ಕೂ ಹೆಚ್ಚು ಜನ ಸತ್ತ ಮೇಲೆ, ಅಷ್ಟು ವ್ಯಾಪಕವಾದ, ಉತ್ಕಟವಾದ ದಬ್ಬಾಳಿಕೆ ದೇಶದಲ್ಲಿ 1857 ರ ಕ್ರಾಂತಿಯಿಂದ ಈಚೆಗೆ ಕಂಡುಬಂದಿರಲಿಲ್ಲ.

1942 ರ ಕ್ರಾಂತಿ ವಿಫಲವಾದದ್ದಕ್ಕೆ ಕಾರಣ, ನಾಯಕರಿಲ್ಲದ ಸೂಕ್ತ ವ್ಯವಸ್ಥೆಯಿಲ್ಲದ ನಿರಾಯುಧ ಜನತೆ ಅಧಿಕಾರದಲ್ಲಿರುವ ಬಲಿಷ್ಠ ಸಾಮ್ರಾಜ್ಯಶಾಹೀ ಶಕ್ತಿಯೆದುರು ಗೆಲ್ಲಲಾಗದುದು. ಆದರೆ ಕ್ರಾಂತಿ ಎರಡು ಅಂಶಗಳನ್ನು ಸಾಧಿಸಿತು. ಸಾಮ್ರಾಜ್ಯಶಾಹಿಗೆದುರಾಗಿ ಭಾರತದ ಕ್ರೋಧವನ್ನೂ, ಕಣ್ಣಿಗೆ ಕಾಣುವಂತೆ ಸಂದೇಹಕ್ಕೆಡೆಯಿಲ್ಲದಂತೆ ಸ್ವತಂತ್ರವಾಗಬೇಕೆಂಬ ಅದರ ನಿರ್ಧಾರವನ್ನೂ ಅದು ತೋರಿಸಿಕೊಟ್ಟಿತು. ಮತ್ತು ಅದು ಅತ್ಯಂತ ಉತ್ಕಟವಾದ ರಾಷ್ಟ್ರಪ್ರೇಮದ ಭಾವನೆಗಳಿಗೆ ಜೀವಂತ ಸಾಕ್ಷಿಯಾಗಿದ್ದು, ಸ್ವತಂತ್ರರಾಗಿರಲು ತಮಗಿರುವ ಹಕ್ಕನ್ನು ಚಲಾಯಿಸುವುದರಲ್ಲಿ ಜನ ಎಷ್ಟುಮಟ್ಟಿಗೆ ಕಷ್ಟ ಅನುಭವಿಸಲು, ತ್ಯಾಗಮಾಡಲು ಸಿದ್ಧರಾಗಿದ್ದಾರೆ ಎನ್ನುವುದನ್ನು ತೋರಿಸಿಕೊಟ್ಟಿತು. ಎರಡನೆಯದಾಗಿ, 1942 ರ ಕ್ರಾಂತಿಯಾದ ಮೇಲೆ ಬ್ರಿಟಿಷರ ಮನಸ್ಸಿನಲ್ಲಿ ಇನ್ನು ಭಾರತದ ಮೇಲೆ ತಮ್ಮ ಪ್ರಭುತ್ವದ ದಿನಗಳು ಎಣಿಸಬಹುದಾದಷ್ಟು ಮಾತ್ರ ಇವೆ ಎಂದು ನಿಚ್ಚಳವಾಗಿ ಮನವರಿಕೆಯಾಯಿತು.

ಒಂದು ಅರ್ಥದಲ್ಲಿ 1942 ರ ಕ್ರಾಂತಿಯು ಭಾರತದ ಸ್ವಾತಂತ್ರ್ಯ ಹೋರಾಟದ ಶಿಖರವಾಯಿತು. 1942 ರ ಆಗಸ್ಟ್‌ನಲ್ಲಿ ದಂಗೆಯಾದ ಮೇಲೆ ಉಳಿದುದೇನಿದ್ದರೂ ಅಧಿಕಾರ ವರ್ಗಾವಣೆಯ ವಾಸ್ತವ ವ್ಯವಸ್ಥೆಯ ಕಾಲ ಮತ್ತು ರಚನೆಯನ್ನು

ನಿರ್ಧರಿಸುವುದು ಮಾತ್ರ. ಹಾಗೆಯೇ ಸ್ವತಂತ್ರವಾದ ಮೇಲೆ ಭಾರತ ಯಾವ ಬಗೆಯ ಸರಕಾರವನ್ನು ಹೊಂದಿರಬೇಕೆಂದು ನಿರ್ಧರಿಸುವುದು ಮಾತ್ರ. 1942 ರ ಕ್ರಾಂತಿಗೂ 1947 ರಲ್ಲಿ ವಾಸ್ತವವಾಗಿ ಸ್ವಾತಂತ್ರ್ಯ ಬಂದದ್ದಕ್ಕೂ ನಡುವೆ ಎಷ್ಟೋ ರಾಜಕೀಯ ಬೆಳವಣಿಗೆಗಳಾದುವು, ಸಂಧಾನಗಳಾದುವು ನಿಜ. ಆದರೆ ಸ್ವಾತಂತ್ರ್ಯ ಹೋರಾಟ ಈಗ ವಿಜಯದ ಅಂಚಿನಲ್ಲಿತ್ತು ಎಂಬುದರಲ್ಲಿ ಸಂದೇಹ ಉಳಿದಿರಲಿಲ್ಲ.

## ಸಿಮ್ಲಾ ಸಮ್ಮೇಳನ

1945 ರ ವಸಂತಋತುವಿನ ವೇಳೆಗೆ ಯೂರೋಪಿನಲ್ಲಿ ಯುದ್ಧವು ಕೊನೆ ಮುಟ್ಟುತ್ತಿತ್ತು. ಭಾರತದಲ್ಲಿ ಲಿನ್‌ಲಿತ್‌ಗೋ ನಂತರ ವೇವೆಲ್ (Wavell)ವೈಸರಾಯ್ ಆಗಿದ್ದಾಗ ಅವನು ಭಾರತದ ಕಮಾಂಡರ್-ಇನ್-ಚೀಫ್ ಆಗಿದ್ದನು. ಆ ಕಾಲದ ಮಿಲಿಟರಿ ತಜ್ಞರ ಅಭಿಪ್ರಾಯದಲ್ಲಿ, ಜಪಾನಿನೊಂದಿಗೆ ಯುದ್ಧ ಇನ್ನೂ ಕೆಲವು ವರ್ಷ-ಕೊನೆಯ ಪಕ್ಷ ಒಂದು ವರ್ಷ-ಮುಂದುವರಿಯಲಿತ್ತು. ಈ ದೃಷ್ಟಿಯನ್ನು ವೇವೆಲ್, ತಾನೇ ಒಬ್ಬ ಮಿಲಿಟರಿ ವ್ಯಕ್ತಿಯಾಗಿ, ಒಪ್ಪಿದ್ದನು. (1945 ರ ಆಗಸ್ಟಿನಲ್ಲಿ ಅಣ್ವಸ್ತ್ರಗಳ ಪ್ರಯೋಗದಿಂದ ಏಷ್ಯಾದಲ್ಲಿ ಯುದ್ಧವು ತಟಕ್ಕನೆ, ನಾಟಕೀಯವಾಗಿ ನಿಂತುಹೋಗುತ್ತದೆಂಬುದಕ್ಕೆ ಆಗ ಇನ್ನೂ ಸೂಚನೆ ಇರಲಿಲ್ಲ.) ವರ್ಷದಲ್ಲಿ ಯುದ್ಧದ ಮುಂದುವರಿಕೆ ಎಂದರೆ, ಭಾರತದಲ್ಲಿನ ಯುದ್ಧ ನೆಲೆಗಳನ್ನು ಹಾಗೂ ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚಾಗಿ ಪೂರ್ಣ ಪ್ರಮಾಣದಲ್ಲಿ ಉಪಯೋಗಿಸುವುದು. ರಾಷ್ಟ್ರದಲ್ಲಿ ಆಗ ಇದ್ದ ಪರಿಸ್ಥಿತಿಯಲ್ಲಿ, ಬಿಕ್ಕಟ್ಟನ್ನು ಮುರಿದು ಭಾರತೀಯ ಜನರನ್ನು ಯುದ್ಧದಲ್ಲಿ ತೊಡಗಿಸುವುದಕ್ಕೆ ದಾರಿ ಕಂಡುಹಿಡಿಯುವುದು ಅತ್ಯವಶ್ಯ ಎಂದು ವೇವೆಲ್ ಭಾವಿಸಿದನು.

1945 ರ ಏಪ್ರಿಲ್‌ನಲ್ಲಿ ಯೂರೋಪಿನಲ್ಲಿ ಯುದ್ಧವು ಕೊನೆಗೊಂಡಿತು. ಚರ್ಚಿಲ್ ರಾಜೀನಾಮೆ ಕೊಟ್ಟನು. ಹೊಸ ಚುನಾವಣೆಗಳು ನಡೆಯಲಿದ್ದುವು. ಜೂನ್ 14 ರಂದು ಭಾರತದಲ್ಲಿ ನೂತನ ಸಾಂವಿಧಾನಿಕ ಬದಲಾವಣೆಗಳನ್ನು "1935 ರ ಗವರ್ನಮೆಂಟ್ ಆಫ್ ಇಂಡಿಯಾ ಆಕ್ಟ್‌ನ ಚೌಕಟ್ಟಿನೊಳಗೆಯೇ" ಏರ್ಪಡಿಸುವ ಸೂಚನೆಯನ್ನು ಘೋಷಿಸಲಾಯಿತು. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯರೆಲ್ಲರನ್ನೂ ಬಿಡುಗಡೆ ಮಾಡಿದರು. ಗಾಂಧೀಜಿಯವರ ಮೇಲೆ ಇದ್ದ ಸ್ಥಾನಬದ್ಧತಾ ಆಜ್ಞೆಯನ್ನು ಮೊದಲೇ ತೆಗೆಯಲಾಗಿತ್ತು. ಪ್ರಾತಿನಿಧಿಕ ರಾಜಕೀಯ ನಾಯಕರ ಸಮ್ಮೇಳನವೊಂದನ್ನು ಕರೆಯಲಾಯಿತು. ಜೂನ್ 25 ರಿಂದ ಸಮ್ಮೇಳನ ಸಿಮ್ಲಾದಲ್ಲಿ ನಡೆಯಲಿತ್ತು.

ಸೂಚನಗಳೇನೋ ಸ್ವಲ್ಪಮಟ್ಟಿಗೆ ಹೊಂದಾಣಿಕೆಯುಳ್ಳವಾಗಿದ್ದವು. ಆದರೆ ಒಂದು ವಿಚಾರದಲ್ಲಿ ಅತೃಪ್ತಿಕರವೂ ಪ್ರಚೋದಕವೂ ಆಗಿದ್ದುವು. ವೈಸರಾಯ್ ಅವರ ಎಕ್ಸಿಕ್ಯೂಟಿವ್ ಕೌನ್ಸಿಲಿನಲ್ಲಿ ಆತನನ್ನೂ, ಕಮಾಂಡರ್-ಇನ್-ಚೀಫ್‌ನನ್ನೂ ಬಿಟ್ಟರೆ ಮಿಕ್ಕೆಲ್ಲರೂ ಭಾರತೀಯರೇ ಆಗಿರುತ್ತಿದ್ದರು. ವೈಸರಾಯಿಗಿದ್ದ ವಿಶೇಷ ಅಧಿಕಾರಿಗಳು ಅಧಿಕೃತವಾಗಿ ಕಳೆದುಹೋಗಲಿಲ್ಲ, ಆದರೆ ಆತನು 'ಸಕಾರಣವಾಗಿಯಲ್ಲದೆ' ಅವುಗಳನ್ನು ಉಪಯೋಗಿಸುವುದಿಲ್ಲವೆಂಬ ಭರವಸೆ ಬಂದಿತು. ಇಲ್ಲಿಯವರಗೆ

ಅಲ್ಪಮಟ್ಟಿನ ಪ್ರಗತಿಯನ್ನು ಸೂಚಿಸುವಂತಾಗಿತ್ತು. ಆಮೇಲೆ ಕಾಣಿಸಿಕೊಂಡಿತು ವಿಭಾಜಕ ಲಕ್ಷಣ. "ಕೌನ್ಸಿಲಿನಲ್ಲಿ ಹಿಂದೂ ಮತ್ತು ಮುಸ್ಲಿಮರ ಪ್ರಾತಿನಿಧ್ಯ ಸಮಪ್ರಮಾಣದಲ್ಲಿರುತ್ತದೆ" ಎನ್ನಲಾಯಿತು. ಇದರಿಂದ ಮುಸ್ಲಿಂ ಲೀಗ್ ಹಿಡಿದಿದ್ದ ಹಟವನ್ನು ಬ್ರಿಟಿಷ್ ನೀತಿಯು ಅಧಿಕೃತವಾಗಿ ಮೊತ್ತಮೊದಲು ಅನುಮೋದಿಸಿ ದಂತಾಯಿತು. ಆದರೆ ಸೂಚನೆಗಳು "ಸಾಂವಿಧಾನಿಕ ಪರಿಹಾರವೊಂದನ್ನು ಪಡೆಯಲು ಅಥವಾ ಹೇರಲು ಮಾಡಿದ ಪ್ರಯತ್ನವಲ್ಲ. ಅವುಗಳನ್ನು ಸಿಮ್ಲಾ ಸಮ್ಮೇಳನದಲ್ಲಿ ಚರ್ಚಿಸಲಾಗುವುದು" ಎಂದು ಹೇಳಲಾಯಿತು.

ಸಮ್ಮೇಳನ ಪ್ರಾರಂಭವಾದಾಗ ಆಸೆ, ನಿರೀಕ್ಷೆಗಳ ಭಾವನೆ ಇತ್ತು. ಆದರೆ ಬಹು ಬೇಗ, ಜಿನ್ನಾರ ಹಟಮಾರಿತನ ಮತ್ತು ಸಾಮ್ರಾಜ್ಯಶಾಹಿಗಳ ಓನ್ನಡೆಯ ವರ್ತನೆಗಳಿಂದ ಅದು ಯಶಸ್ವಿಯಾಗಲು ಸಾಧ್ಯವೇ ಇಲ್ಲ ಎಂದು ಕಂಡುಬಂದಿತು. ಎಕ್ಸಿಕ್ಯೂಟಿವ್ ಕೌನ್ಸಿಲಿನ ಎಲ್ಲ ಮುಸ್ಲಿಂ ಸದಸ್ಯರನ್ನೂ ಮುಸ್ಲಿಂ ಲೀಗ್ ನಾಮಕರಣ ಮಾಡಬೇಕು ಎಂದು ಜಿನ್ನಾ ಪಟಹಿಡಿದ ಕಾರಣ, ಸಂಧಾನ ಮುರಿದುಬಿತ್ತು. ಮುಸ್ಲಿಂ ಲೀಗ್ ಒಂದು ಪಕ್ಷವಾಗಿರದ ಯಾವುದೋ ಒಂದು ಒಪ್ಪಂದಕ್ಕೆ ಕಾಂಗ್ರೆಸ್ಸಿನೊಂದಿಗೆ ಸಹಿ ಹಾಕಲು ಬ್ರಿಟಿಷರೂ ಇಷ್ಟಪಡಲಿಲ್ಲ. "ಒಡೆದು ಆಳು" ನೀತಿ ಶಿಖರವನ್ನು ಮುಟ್ಟಿತ್ತು.

## ಆಜಾದ್ ಹಿಂದ್ ಸೈನ್ಯ *(The Indian National Army)*

1942 ರ ಕ್ರಾಂತಿಯನ್ನು ಮಟ್ಟಿ ಅಡಗಿಸಿದ ಮೇಲ 1945ರಲ್ಲಿ ಯುದ್ಧವು ಕೊನೆಗೊಳ್ಳುವವರೆಗೂ ದೇಶದಲ್ಲಿ ಯಾವುದೇ ರಾಜಕೀಯ ಚಟುವಟಿಕೆ ನಡೆಯಲಿಲ್ಲ. ಪ್ರಸಿದ್ಧ ನಾಯಕರೆಲ್ಲರೂ ಕಾರಾಗೃಹದಲ್ಲಿದ್ದರು, ಆ ಪರಿಸ್ಥಿತಿಯಲ್ಲಿ ಹೊಸ ನಾಯಕರು ಮೇಲೆ ಬರುವ ಹಾಗಿರಲಿಲ್ಲ. ಒಳಗೆ ಪ್ರಖರವಾದ ಬೆಂಕಿ ಉರಿಯುತ್ತಿದ್ದರೂ, ಮೇಲೆ ಸಾಮಾನ್ಯವಾದ ಒಂದು ಜುಗುಪ್ಸೆ ಎಲ್ಲ ಕಡೆಯೂ ಕಂಡುಬಂದಿತು. ಯುದ್ಧ ಎಳೆದೇ ಇತ್ತು, ಸ್ವಾತಂತ್ರ್ಯ ಚಳುವಳಿ ಮಾತ್ರ ಸ್ಥಗಿತವಾಗಿತ್ತು.

1941ರ ಮಾರ್ಚ್ ತಿಂಗಳಲ್ಲಿ ಸುಭಾಷ್ ಚಂದ್ರ ಬೋಸರು ಭಾರತವನ್ನು ಬಿಟ್ಟು ಸೋವಿಯತ್ ಯೂನಿಯನ್ನಿಗೆ, ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ನೆರವು ಪಡೆಯಲು ಹೋದರು. ಆದರೆ 1941 ರ ಜೂನ್‌ನಲ್ಲಿ ಜರ್ಮನಿಯು ಸೋವಿಯತ್ ಯೂನಿಯನ್ನನ್ನು ಆಕ್ರಮಿಸಿದುದರಿಂದ ಅದು ಮಿತ್ರ ರಾಷ್ಟ್ರಗಳೊಡನೆ ಸೇರಿಕೊಂಡಿತ್ತು. ಆದ್ದರಿಂದ ಬೋಸ್ ಜರ್ಮನಿಗೆ ಹೋದರು, ಅಲ್ಲಿಂದಲಾದರೂ ಸಹಾಯವನ್ನು ಪಡೆಯುವ ಉದ್ದೇಶದಿಂದ. ಜರ್ಮನರಿಂದ ಸ್ವಲ್ಪ ಮಟ್ಟಿನ ಭರವಸೆಯನ್ನು ಪಡೆದು ಅವರು ಜಪಾನಿಗೆ ಹೋದರು. ಜಪಾನೀಯರ ಸಹಾಯದಿಂದ ಅಲ್ಲಿ ಭಾರತದ ವಿಮೋಚನೆಯನ್ನು ವ್ಯವಸ್ಥೆಗೊಳಿಸುವ ಉದ್ದೇಶ ಅವರದು. ಈ ಮಧ್ಯೆ ಮಲಯಾ ಬರ್ಮಾಗಳಿಂದ ಬ್ರಿಟಿಷರು ಕಾಲ್ತೆಗೆದ ಮೇಲೆ ಅಲ್ಲಿ ಉಳಿದಿದ್ದ ಭಾರತೀಯ ಸೈನಿಕರ ಮತ್ತು ಅಧಿಕಾರಿಗಳ ನೆರವಿನಿಂದ 'ಆಜಾದ್ ಹಿಂದ್ ಸೈನ್ಯ' (ಇಂಡಿಯನ್ ನ್ಯಾಷನಲ್ ಆರ್ಮಿ) ವನ್ನು ಕಟ್ಟಲು ಜಪಾನ್

ಪ್ರಯತ್ನಿಸಿತು. ಉಳಿದವರು ಸೆರೆಯಾಳುಗಳು - ಮಲಯಾ ಒಂದರಲ್ಲೇ ಅಂತಹ 60,000 ಜನರಿದ್ದರು-ಮತ್ತು ಆಗ್ನೇಯ ಏಷ್ಯನ್ ರಾಷ್ಟ್ರಗಳಲ್ಲಿ ವಾಸವಾಗಿದ್ದ ಭಾರತೀಯ ಪೌರರು. ತಮ್ಮ ಮಾತೃಭೂಮಿಗೆ ಹಿಂತಿರುಗಲಾಗದೆ ದಿಕ್ಕಿಲ್ಲದೆ ನಿಂತಿದ್ದ ಅವರೆಲ್ಲ ಒಟ್ಟುಗೂಡಿದರು. ಸುಭಾಷ್ ಬೋಸ್ ಈ ಸೇನೆಯ ನಾಯಕತ್ವ ವಹಿಸಿಕೊಂಡರು. ಸೇನೆ ಜಪಾನೀ ಸೇನೆಯೊಂದಿಗೆ ಕೂಡಿಕೊಂಡು ಭಾರತದತ್ತ ನಡೆಯತೊಡಗಿತು. ಐ.ಎನ್.ಎ.ಗೆ ಸೇರಿದ ಜನರೂ ಅಧಿಕಾರಿಗಳೂ ರಾಷ್ಟ್ರಪ್ರೇಮದ ಭಾವನೆಯಿಂದ ಉದ್ದೀಪ್ತರಾಗಿದ್ದರು. ತಾವು ಭಾರತದ ವಿಮೋಚಕರಾಗಿ ಭಾರತ ವನ್ನು ಪ್ರವೇಶಿಸಬೇಕೆಂದು ಇಚ್ಛಿಸಿದ್ದರು. ಸುಭಾಷ್ ಬೋಸ್ ಸ್ವತಂತ್ರ ಭಾರತದ ತಾತ್ಕಾಲಿಕ ನಾಯಕರಾಗಲಿದ್ದರು.

ಆದರೆ ಜಪಾನ್ ಸೋತುದರಿಂದ ಐ.ಎನ್.ಎ. ಯೋಜನೆಗಳೆಲ್ಲ ಕುಸಿದುಬಿದ್ದುವು. ಸುಭಾಷ್ ಬೋಸ್ ಟೋಕಿಯೋಗೆ ಹೋಗುತ್ತಿದ್ದಾಗ ದಾರಿಯಲ್ಲಿ ವಿಮಾನಾಪಘಾತವೊಂದರಲ್ಲಿ ಮೃತರಾದರು. ಜಪಾನಿನಂತಹ ಒಂದು ರಾಷ್ಟ್ರದ ಮತ್ತು ಅದರ ಫ್ಯಾಸಿಸ್ಟ್ ಮಿತ್ರ ದೇಶಗಳ ನೆರವಿನಿಂದ ಭಾರತವು ತನ್ನ ಸ್ವಾತಂತ್ರ್ಯ ಗಳಿಸುವುದು ಅನೇಕ ನಾಯಕರಿಗೆ ಇಷ್ಟವಿರಲಿಲ್ಲ ನಿಜ. ಆದರೆ ಯುದ್ಧ ಮುಗಿಯುತ್ತಿದ್ದ ವರ್ಷಗಳಲ್ಲಿ ರಾಷ್ಟ್ರೀಯತಾವಾದಿ ಭಾರತೀಯರು ಅಸಹಾಯಕರಾಗಿ ಕ್ಷುಬ್ಧರಾಗಿದ್ದಾಗ ಅವರ ಜಗುಳಿ ಹೋಗುತ್ತಿದ್ದ ಸ್ಥೈರ್ಯ ಸತ್ವವನ್ನು ಮತ್ತೆ ಎತ್ತಿ ಹಿಡಿದದ್ದು ಸುಭಾಷ್ ಬೋಸ್ ಮತ್ತು ಅವರ ಐ.ಎನ್.ಎ. ಸೇನೆ. ಅವರು ಭಾರತದ ಜನತೆಯ ಎಲ್ಲ ವರ್ಗಗಳಿಗೂ ಸೇನೆಯಲ್ಲಿ ಕೆಲಸ ಮಾಡುತ್ತಿದ್ದವರೂ ಕೂಡಿದಂತೆ, ಧೈರ್ಯ ಮತ್ತು ರಾಷ್ಟ್ರಪ್ರೇಮಗಳ ಮಾದರಿಯನ್ನು ಮುಂದೆ ಹಿಡಿದರು. ಅದು ಸ್ಫೂರ್ತಿದಾಯಕವಾಗಿತ್ತು, ಉದಾತ್ತವಾಗಿತ್ತು.

ಆದ್ದರಿಂದ ಕೆಲವು ಐ.ಎನ್.ಎ. ಅಧಿಕಾರಿಗಳನ್ನು ರಾಜದ್ರೋಹದ ಅಪರಾಧಕ್ಕಾಗಿ ಶಿಕ್ಷಿಸುವುದಾಗಿ ಸರಕಾರವು ನಿರ್ಧರಿಸಿದಾಗ, ರಾಷ್ಟ್ರೀಯ ಮಟ್ಟದಲ್ಲಿ ಪ್ರತಿಭಟನೆ ವ್ಯಕ್ತವಾಯಿತು. ದೇಶಾದ್ಯಂತ ಬೃಹತ್ ಪ್ರತಿಭಟನಾ ಪ್ರದರ್ಶನಗಳಾದುವು. ಅಧಿಕಾರಿಗಳನ್ನು ಬಿಡುಗಡೆಮಾಡಬೇಕೆಂದು ಒಂದೇ ಸಮನೆ ಒತ್ತಾಯ ಮಾಡಲಾಯಿತು. ಕಾಂಗ್ರೆಸ್ ಮಾತ್ರವಲ್ಲ, ಹೆಚ್ಚು ಕಡಮೆ ದೇಶದ ಇಡೀ ರಾಜಕೀಯ ಮುಖಂಡತ್ವವೇ ವಿಚಾರಣೆಗಳನ್ನು ವಿರೋಧಿಸಿತು; ಐ.ಎನ್.ಎ. ಅಧಿಕಾರಿಗಳ ಬಿಡುಗಡೆಯ ಪರವಾಗಿ ತನ್ನ ನಿಲುವನ್ನು ವ್ಯಕ್ತಪಡಿಸಿತು. ಭುಲ್ಲಾಭಾಯಿ ದೇಸಾಯಿ, ತೇಜಬಹದ್ದೂರ್ ಸಪ್ರು, ಕೈಲಾಸನಾಥ ಕಾಟ್ಜು ಮತ್ತು ಅಸಫ್ ಅಲಿ ಮುಂತಾದ ಸಮರ್ಥ ವಕೀಲರನ್ನೊಳಗೊಂಡ ಐ.ಎನ್.ಎ. ರಕ್ಷಣಾ ಸಮಿತಿಯೊಂದನ್ನು ಕಾಂಗ್ರೆಸ್ ರಚಿಸಿತು. ದೆಹಲಿಯ ಕೆಂಪು ಕೋಟೆಯ ಐತಿಹಾಸಿಕ ಭವನದಲ್ಲಿ ಈ ರಾಷ್ಟ್ರೀಯ ನಾಯಕರು ಐ.ಎನ್.ಎ. ಅಧಿಕಾರಿಗಳನ್ನು ಸಮರ್ಥಿಸಲು ಎದ್ದು ನಿಂತಾಗ ಇಡೀ ದೇಶವನ್ನೇ ಒಂದು ಬಗೆಯ ಉತ್ಕಟ ಗಾಂಭೀರ್ಯ ಮುಸುಕಿತು. ವಿಚಾರಣೆಯಲ್ಲಿ ಆಪಾದಿತರೆಲ್ಲರನ್ನೂ ಅಪರಾಧಿಗಳೆಂದು ಪ್ರತಿಪಾದಿಸಿ ಅವರನ್ನು ಕಾರಾಗೃಹ ಶಿಕ್ಷೆಗೊಳಪಡಿಸಲಾಯಿತು. ಆದರೆ ಈ ಬಗ್ಗೆ ಸಾರ್ವಜನಿಕ ಅಭಿಪ್ರಾಯ ಎಷ್ಟುಮಟ್ಟಿಗೆ ತೀವ್ರವಾಯಿತೆಂದರೆ ಸರಕಾರ ಅದಕ್ಕೆ ಮಣಿಯಲೇಬೇಕಾಯಿತು.

ಶಿಕ್ಷೆಗಳನ್ನು ರದ್ದುಪಡಿಸಿ ಐ.ಎನ್.ಎ. ಅಧಿಕಾರಿಗಳನ್ನು ಬಿಡುಗಡೆ ಮಾಡಲಾಯಿತು.

## ಹೋರಾಟದ ಕೊನೆ

ಯುದ್ಧ ಮುಗಿದಮೇಲೆ ಭಾರತದ ಸ್ವಾತಂತ್ರ್ಯವನ್ನು ಇನ್ನು ಎಷ್ಟು ಮಾತ್ರಕ್ಕೂ ತಡಮಾಡುವಂತಿಲ್ಲ ಎಂಬುದು ಮನವರಿಕೆಯಾಯಿತು. ಬ್ರಿಟನ್ನನ್ನು ಇದಕ್ಕೆ ಒಪ್ಪಿಸಲು ದೇಶ ವಿದೇಶಗಳಲ್ಲಿ ನಡೆದ ಅನೇಕಾನೇಕ ಬೆಳವಣಿಗೆಗಳು ಕಾರಣವಾದುವು. ಯುದ್ಧವು ವಿಶ್ವದಲ್ಲಿ ಬ್ರಿಟನ್ನಿನ ಶಕ್ತಿ ಹಾಗೂ ಸ್ಥಾನಮಾನಗಳನ್ನು ಸಂಪೂರ್ಣವಾಗಿ ಬದಲಾಯಿಸಿತ್ತು. ಸೋವಿಯತ್ ಯೂನಿಯನ್ ಹಾಗೂ ಸಂಯುಕ್ತಸಂಸ್ಥಾನಗಳು ವಿಶ್ವದಲ್ಲಿ ಬಲಿಷ್ಠ ಶಕ್ತಿಗಳಾಗಿ ಉದಿಸಿದ್ದುವು, ಎರಡೂ ರಾಷ್ಟ್ರಗಳು ಭಾರತದ ಸ್ವಾತಂತ್ರ್ಯದ ಪರವಾಗಿ ಅಭಿಮತ ತಳೆದಿದ್ದುವು. ಬ್ರಿಟನ್ನು ಯುದ್ಧದಲ್ಲಿ ಜಯಶಾಲಿಯಾದರೂ ಅದರ ಅರ್ಥವ್ಯವಸ್ಥೆ ಹಾಗೂ ಮಿಲಿಟರಿ ಬಲಗಳಿಗೆ ಅಪಾರವಾದ ಹಾನಿಯುಂಟಾಗಿತ್ತು, ಪುನರ್ ರಚನೆ ಮತ್ತು ಪೂರ್ವಸ್ಥಿತಿ ಸಾಧನೆಗಳಿಗೆ ತುಂಬ ಸಮಯಬೇಕಾಗಿತ್ತು. ಅಲ್ಲಿಯ ಜನತೆಗೆ, ವಿಶೇಷವಾಗಿ ರಕ್ಷಣಾ ವಿಭಾಗದ ಜನರಿಗೆ ಯುದ್ಧದಲ್ಲಿ ಜುಗುಪ್ಸೆಯುಂಟಾಗಿತ್ತು. ಸಾಮ್ರಾಜ್ಯ ರಕ್ಷಣೆಗಾಗಿ ಹೋರಾಡಲು ಇನ್ನು ಅವರು ಸಿದ್ಧರಾಗಿರಲಿಲ್ಲ. ಚುನಾವಣೆಗಳಲ್ಲಿ ಕನ್ಸರ್ವೇಟಿವ್ ಪಂಗಡ ಸೋತು, ಲೇಬರ್ ಪಕ್ಷವು ಅಧಿಕಾರಕ್ಕೆ ಬಂದಿತು. ಲೇಬರ್ ಪಕ್ಷವು ಭಾರತದ ಬೇಡಿಕೆಗಳನ್ನು ಪೂರೈಸುವುದರ ಪರವಾಗಿದ್ದಿತು. ಎಲ್ಲಕ್ಕಿಂತ ಮುಖ್ಯವಾಗಿದ್ದ ಅಂಶ ಇದು: ಭಾರತದಲ್ಲಿನ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಯಿಸಿದ್ದು ಬ್ರಿಟಿಷರು ಇನ್ನು ಮುಂದೆ ಅಧಿಕಾರದಲ್ಲಿ ಮುಂದುವರಿಯುವುದು ಸಾಧ್ಯವೇ ಇರಲಿಲ್ಲ. ಐ.ಎನ್.ಎ. ವಿಚಾರಣೆಗಳಿಂದಲೇ, ದೇಶವು ಇನ್ನು ಮುಂದೆ ದಬ್ಬಾಳಿಕೆಯನ್ನು ಎಷ್ಟುಮಾತ್ರಕ್ಕೂ ಸಹಿಸಿಕೊಳ್ಳುವ ಸ್ಥಿತಿಯಲ್ಲಿಲ್ಲವೆಂಬುದೂ ಅಸ್ಪಷ್ಟ ಭರವಸೆಗಳಷ್ಟರಿಂದಲೇ ತೃಪ್ತವಾಗುವುದಿಲ್ಲವೆಂಬುದೂ ನಿಚ್ಚಳವಾಗಿ ವ್ಯಕ್ತವಾಯಿತು. ಭಾರತದ ಹೋರಾಟ ಸತ್ವ ಕೆರಳಿತ್ತು. ರಾಷ್ಟ್ರೀಯ ಬೇಡಿಕೆಗಳನ್ನು ಸಾಕಷ್ಟು ಮಟ್ಟಿಗೆ ಪೂರೈಸದೆ ಹೋದರೆ ಪರಿಸ್ಥಿತಿ ಸ್ಫೋಟಕವಾಗಿಬಿಡುತ್ತಿತ್ತು. ಈ ತೀರ್ಮಾನಕ್ಕೆ ಬರಲು ಹಲವಾರು ಕಾರಣಗಳಿದ್ದುವು. ಭಾರತೀಯ ನೌಕಾದಳದ ವಿವಿಧ ದರ್ಜೆಯ ಅಧಿಕಾರಿಗಳ ದಂಗೆ 1946 ರ ಫೆಬ್ರವರಿಯಲ್ಲಿ ಮುಂಬಯಿಯಲ್ಲಿ ನಡೆಯಿತು, ಅತೃಪ್ತಿಯನ್ನು ವ್ಯಾಪಕವಾಗಿ ಹರಡಿತು. ಭಾರತೀಯ ವಾಯುದಳದಲ್ಲಿ ಮುಷ್ಕರ ನಡೆಯಿತು. ಭಾರತೀಯ ಸಿಗ್ನಲ್ ಕೋರ್ ಜಬಲ್‌ಪುರದಲ್ಲಿ ಮುಷ್ಕರ ನಡೆಸಿತು- ಇವೆಲ್ಲವೂ ಮೇಲ್ಕಂಡ ಅಂಶವನ್ನು ಸಂದೇಹಕ್ಕೆಡೆಯಿಲ್ಲದಂತೆ ಸಮರ್ಥಿಸಿದುವು. ಪೋಲೀಸ್ ವರ್ಗವೂ ಅಧಿಕಾರಿ ವರ್ಗವೂ ರಾಷ್ಟ್ರೀಯತೆಯತ್ತ ಒಲವು ತೋರಲು ಪ್ರಾರಂಭಿಸಿದ್ದುವು. ಇನ್ನು ಮುಂದೆ ರಾಷ್ಟ್ರೀಯತಾ ಚಳುವಳಿಯನ್ನು ಅಡಗಿಸಲು ಅವರನ್ನು ಉಪಯೋಗಿಸಿಕೊಳ್ಳುವುದು ಕ್ಷೇಮಕರವಾಗಿರಲಿಲ್ಲ. ಸಾಲದ್ದಕ್ಕೆ ಬ್ರಿಟಿಷ್ ಇಂಡಿಯದ ಆದ್ಯಂತ ಹೆಚ್ಚು ಹೆಚ್ಚು ಮುಷ್ಕರಗಳು, ಹರತಾಳಗಳು, ಪ್ರತಿಭಟನಾ ಪ್ರದರ್ಶನಗಳು ನಡೆಯುತ್ತಿದ್ದು ಈಗ ಸಂಸ್ಥಾನಗಳಿಗೂ ಹರಡತೊಡಗಿದ್ದುವು.

ಆದ್ದರಿಂದ ಭಾರತಕ್ಕೆ ಅಧಿಕಾರವನ್ನು ವರ್ಗಾಯಿಸಲು ಬ್ರಿಟನ್ ನಿರ್ಧರಿಸಿತು.

ದೀರ್ಘಾವಧಿಯ ಹಾಗೂ ಅಲ್ಪಾವಧಿಯ ವಿವರಗಳನ್ನು ರೂಪಿಸಲು ಒಂದು ಕ್ಯಾಬಿನೆಟ್ ನಿಯೋಗವನ್ನು ಭಾರತಕ್ಕೆ ಕಳುಹಿಸಿತು. ಎಲ್ಲ ಪಕ್ಷಗಳು, ಸಂಸ್ಥೆಗಳನ್ನು ಪ್ರತಿನಿಧಿಸುತ್ತಿದ್ದ ನಾಯಕರೊಂದಿಗೆ ವಿಸ್ತಾರವಾದ ಚರ್ಚೆ ಸಮಾಲೋಚನೆಗಳನ್ನು ನಿಯೋಗ ನಡೆಸಿತು. ಆಮೇಲೆ ಕ್ಯಾಬಿನೆಟ್ ನಿಯೋಗ ತನ್ನ ಯೋಜನೆಯನ್ನು ಪ್ರಕಟಿಸಿತು. ಅದನ್ನು ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಎರಡೂ ಒಪ್ಪಿಕೊಂಡುವು. ಆದರೆ ಯೋಜನೆಯನ್ನು ವ್ಯಾಖ್ಯಾನಮಾಡುವಾಗ ಮುಂದೆ ಭಿನ್ನಾಭಿಪ್ರಾಯಗಳೂ ತಲೆದೋರಿದುವು. ಆದರೆ ಒಂದು ಮಧ್ಯಂತರ ಸರಕಾರ ಆದಷ್ಟು ಬೇಗ ಸ್ಥಾಪನೆಯಾಗಬೇಕೆಂದು ವೇವೆಲ್ (Wavell) ಇಷ್ಟಪಟ್ಟನು. ಕೊನೆಗೆ 1946 ರ ಸೆಪ್ಟೆಂಬರಿನಲ್ಲಿ ಕಾಂಗ್ರೆಸ್ ಅಂಥದೊಂದು ಸರಕಾರವನ್ನು ರೂಪಿಸಿತು. ಜವಾಹರಲಾಲ್ ನೆಹರೂ ಮಂತ್ರಿಮಂಡಲದ ನಾಯಕರಾದರು. ಅಕ್ಟೋಬರಿನಲ್ಲಿ ಮುಸ್ಲಿಂ ಲೀಗ್ ಕೂಡ ಕ್ಯಾಬಿನೆಟ್ ಸೇರಿಕೊಂಡಿತು. ಆದರೆ ಸಂವಿಧಾನ ರಚನೆಯಲ್ಲಿ ತಾವು ಭಾಗವಹಿಸುವುದಿಲ್ಲವೆಂದು ಅವರು ನಿರ್ಧರಿಸಿದ್ದರು. ಬ್ರಿಟಿಷ್ ಪ್ರಧಾನ ಮಂತ್ರಿ ಕ್ಲೆಮೆಂಟ್ ಆಟ್ಲೀ (Clement Atlee)ಅವರು 1947ರ ಫೆಬ್ರವರಿ 20 ರಂದು, ಬ್ರಿಟಿಷರು 1948 ರ ಜೂನ್ ತಿಂಗಳ ಒಳಗಾಗಿ ಭಾರತಕ್ಕೆ ಅಧಿಕಾರ ವರ್ಗಾವಣೆ ಮಾಡುತ್ತಾರೆ ಎಂದು ಘೋಷಿಸಿದರು.

ಅಧಿಕಾರ ವರ್ಗಾವಣೆಗೆ ಏರ್ಪಾಟುಮಾಡಲು ವೈಸರಾಯ್ ಆಗಿ ಲಾರ್ಡ್ ಲೂಯಿಸ್ ಮೌಂಟ್‌ಬೇಟನ್ (Lord Louis Mountbatten) ಅವರನ್ನು ಕಳುಹಿಸಲಾಯಿತು. ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಬಹು ತೀವ್ರವಾದ ಭಿನ್ನಾಭಿಪ್ರಾಯಗಳು ಉಂಟಾಗಿದ್ದರೂ ಕೂಡ ಲಾರ್ಡ್ ಮೌಂಟ್‌ಬೇಟನ್ ಒಂದು ಸಂಧಾನಾತ್ಮಕವಾದ ಯೋಜನೆಯನ್ನು ರೂಪಿಸಿದನು. ಅಧಿಕಾರ ವರ್ಗಾವಣೆಯ ದಿನವನ್ನು ಒಂದು ವರ್ಷ ಹಿಂದಕ್ಕೆ ತಂದನು. 1947ರ ಆಗಸ್ಟ್ 15ರಂದು ಭಾರತ ಸ್ವತಂತ್ರವಾಗಲಿತ್ತು. ಆದರೆ ದೇಶ ಒಡೆದುಹೋಗಲಿತ್ತು. ಪಂಜಾಬಿನ ಪಶ್ಚಿಮ ಪ್ರದೇಶಗಳು, ವಾಯುವ್ಯ ಗಡಿ ಪ್ರಾಂತ, ಸಿಂಧ್ ಮತ್ತು ಬಲೂಚಿಸ್ತಾನ - ಇವಿಷ್ಟೂ ಪಶ್ಚಿಮದಲ್ಲಿಯೂ ಬಂಗಾಳದ ಪೂರ್ವಾರ್ಧ ಮತ್ತು ಅಸ್ಸಾಮಿನ ಸಿಲ್ಹಟ್ ಜಿಲ್ಲೆ - ಪೂರ್ವದಲ್ಲಿಯೂ ಸೇರಿ ಸ್ವತಂತ್ರ ಪಾಕಿಸ್ತಾನ ಎಂಬ ಹೊಸ ದೇಶವಾಗಲಿದ್ದಿತು. ಅದೂ ಸ್ವತಂತ್ರ ಭಾರತದ ಜೊತೆಗೇ ಉದ್ಘಾಟನೆಯಾಗಲಿದ್ದಿತು. ಆದರೆ ಮುಂದೆ ವಾಯುವ್ಯ ಗಡಿ ಪ್ರಾಂತದಲ್ಲೂ, ಸಿಲ್ಹಟ್ ಜಿಲ್ಲೆಯಲ್ಲೂ ಜನರ ಅಪೇಕ್ಷೆಯನ್ನು ತಿಳಿಯಲು ಪ್ರಜಾಭಿಪ್ರಾಯ ಸಂಗ್ರಹಣೆ ನಡೆಯಲಿತ್ತು.

ಸ್ವಾತಂತ್ರ್ಯವನ್ನು ಸಂಪಾದಿಸಿದ ಸಂತೋಷ, ಅಭಿಮಾನಗಳು ರಾಷ್ಟ್ರ ವಿಭಜನೆಯ ಮತ್ತು ಅದರ ಪರಿಣಾಮದ ನೋವು, ಹಾಗೂ ಸಂಕಟಗಳಿಂದ ನುಚ್ಚುನೂರಾದವು. ಆದರೆ ರಾಷ್ಟ್ರ ಹತಾಶವಾಗಲಿಲ್ಲ. ಸ್ವಾತಂತ್ರ್ಯ ಕೇವಲ ಮೊದಲ ಹೆಜ್ಜೆಯಾಗಿದ್ದಿತು ಅಷ್ಟೆ. ಆತ್ಮವಿಶ್ವಾಸ, ಶ್ರದ್ಧೆ ಮತ್ತು ಅಭೀಪ್ಸೆಗಳಿಂದ ಭಾರತವು ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಹಾಗೂ ಸಾಮಾಜಿಕ ನ್ಯಾಯಗಳ ಸವಾಲನ್ನು ಎದುರಿಸಲು ದೃಢವಾದ ಹೆಜ್ಜೆಗಳನ್ನಿಟ್ಟು ಮುನ್ನಡೆಯತೊಡಗಿತು.